೬) **ರೂಢಿಃ**-ಪ್ರಯೋಗ ಮಾತ್ರ ಬಾಹುಲ್ಯವು. ಅಥವಾ ಸಮುದಾಯ ಶಕ್ತಿಯು. [ಪ್ರಕೃತಿ ಪ್ರತ್ಯಯ ಸಮುದಾಯ ಶಕ್ತಿಯು] ರೂಢಿಯಿಂದ ಅರ್ಥ ಪ್ರತಿಪಾದನೆ ಮಾಡ-ತಕ್ಕ ಶಬ್ದಗಳು, ರೂಢ ಶಬ್ದಗಳು. ಉದಾ :- ಘಟಪಟಾದಿಗಳು, [ಇವುಗಳಲ್ಲಿ ಪ್ರಯೋಗ ಬಾಹುಲ್ಯತೆ ಉಂಟು. ಪ್ರಕೃತಿ ಪ್ರತ್ಯಯ ಸಮುದಾಯೂ ಶಕ್ತಿಯೂ ಉಂಟು]

೭) **ಯೋಗಃ**-ಅವಯವ ಶಕ್ತಿಯು [ಈ ಯೋಗದಿಂದ ಅರ್ಥಪ್ರತಿಪಾದನೆ ಮಾಡ-ತಕ್ಕ ಪದಗಳು ಯೌಗಿಕಗಳು, ಉದಾ :- ಪಾಚಕ, ಪಾಠಕ, ದಂಡೀ, ಕುಂಡಲೀ ಇ-ತ್ಯಾದಿ ಶಬ್ದಗಳು [ಪಚತೀತಿ ಪಾಚಕಃ, ಎಂಬುವದೇ ಆ ಪದಗಳ ಅವಯವಗಳು, ಅವು-ಗಳಲ್ಲಿ ಶಕ್ತಿಯು, ಪಾಚಕ ಅಂದರೆ ಪಾಕಮಾಡುವವನು, ಅಡಿಗೆಯವನು ಎಂದರ್ಥವಾ-ಗುತ್ತದೆ.]

೮) **ಯೋಗರೂಢಿ** :- ಅವಯವಾರ್ಥ ಅಪೇಕ್ಷಿಸಿ ಬರುವ ಸಮುದಾಯ ಶಕ್ತಿಯು. ಈ ಯೋಗರೂಢಿಯಿಂದ ಅರ್ಥ ಪ್ರತಿಪಾದನೆ ಮಾಡತಕ್ಕ ಶಬ್ದಗಳು ಯೋಗರೂಢಗಳು. ಉದಾ :- ಪಂಕಜಾದಿ ಶಬ್ದಗಳು [ಪಂಕೇ ಜಾಯತ ಇತಿ ಪಂಕಜಃ ಎಂಬ ಅವಯವಾ-ರ್ಥವನ್ನು ಅಪೇಕ್ಷಿಸಿ, ಪ್ರಕೃತಿ ಪ್ರತ್ಯಯ ಸಮುದಾಯ ಶಕ್ತಿಯು ಕಮಲದಲ್ಲಿ ಉಂಟು. ಕಾರಣ ಪಂಕಜ ಶಬ್ದವು ಯೋಗರೂಢವು.]

೯) **ಲಕ್ಷಣಾ** :- ಮುಖ್ಯಾರ್ಥ ಸಂಬಂಧವನ್ನು ನಿಮಿತ್ತೀಕರಿಸಿದ ವೃತ್ತಿಯು. ಇದು ಎರಡು ಪ್ರಕಾರ ೧) ಜಹಲ್ಲಕ್ಷಣಾ ೨) ಅಜಹಲ್ಲಕ್ಷಣಾ.

೧೦) **ಜಹಲ್ಲಕ್ಷಣಾ** :- ಲಕ್ಷ್ಯದಲ್ಲಿದ್ದ ಅಸಾಧಾರಣ ಧರ್ಮದಿಂದ ಲಕ್ಷ್ಯವನ್ನು ಮಾತ್ರ ತಿಳಿಸುವದೇ ಪ್ರಯೋಜನ ಉಳ್ಳದ್ದು. ಉದಾ:- ಗಂಗಾ ಪ್ರವಾಹದಲ್ಲಿ ಹಳ್ಳಿಯು [ಗಂಗಾಯಾಂ ಘೋಷಃ] ಎಂಬ ಗಂಗಾಶಬ್ದಕ್ಕೆ ಲಕ್ಷ್ಯವು ತೀರವು. ಈ ತೀರತ್ವಧರ್ಮದಿಂದ ತೀರವನ್ನು ಮಾತ್ರ ತಿಳಿಸುವ ಪ್ರಯೋಜನವುಳ್ಳದಾಗಿದೆ. ತಥಾಚ ಗಂಗಾತೀರದಲ್ಲಿ ಹಳ್ಳಿಯು ಎಂದು ಅರ್ಥವಾಗುವದು. ಇದೇ ಜಹಲ್ಲಕ್ಷಣಾ.

೧೧) **ಅಜಹಲ್ಲಕ್ಷಣಾ** :- ಲಕ್ಷ್ಯದಲ್ಲಿದ್ದ ಅಸಾಧಾರಣ ಧರ್ಮದಿಂದ ಲಕ್ಷ್ಯ ಹಾಗೂ ಶಕ್ಯ ಎರಡನ್ನು ಬೋಧಿಸುವ ಪ್ರಯೋಜನವುಳ್ಳದ್ದು ಉದಾ :- "ಕಾಕೇಭ್ಯೋ ದಧಿ ರಕ್ಷತಾಂ" ಕಾಗೆಗಳಿಂದ ಮೊಸರನ್ನು ರಕ್ಷಿಸಬೇಕು ಎಂಬಲ್ಲಿ ದಧಿಯನ್ನು ನಾಶ ಮಾಡತ-ತಕ್ಕ ಎಲ್ಲ ಪ್ರಾಣಿಗಳಿಂದ, [ದಧ್ಯುಪಘಾತಕ ದ್ರವ್ಯಗಳಿಂದ] ಮೊಸರನ್ನು ರಕ್ಷಿಸಬೇಕೆಂದು ಅರ್ಥವು. [ತಥಾಚ ಮೊಸರು ನಾಶಕವಾದ ಲಕ್ಷ್ಯವಾದ ಬೆಕ್ಕುಗಳಿಂದ, ಶಕ್ಯವಾದ ಕಾಗೆಗಳಿಂದ, ಮೊಸರನ್ನು ರಕ್ಷಿಸಬೇಕೆಂದು ಅರ್ಥವು]

೧೨) **ರೂಢಲಕ್ಷಣಾ**:-ಶಕ್ಯಾರ್ಥ ಸಂಬಂಧದಲ್ಲಿ ಪ್ರಯೋಗ ಬಾಹುಲ್ಯವು ಉದಾ:- "ಗ್ರಾಮೋ ಗಚ್ಛತಿ" ಗ್ರಾಮವು ಹೋಗುತ್ತದೆ. ಇಲ್ಲಿ ಗ್ರಾಮಸ್ಥರು [ಗ್ರಾಮದಲ್ಲಿ ಇದ್ದವರು] ಹೋಗುತ್ತಾರೆ ಎಂದು ಅರ್ಥವು

೧೩) **ಉಪಚಾರಃ**:-ಮುಖ್ಯಾರ್ಥದಿಂದಕೂಡಿದ ಅರ್ಥಾಂತರದಲ್ಲಿ ಶಕ್ತಿಯು. ಉದಾ:- [ಸಿಂಹೋ ದೇವದತ್ತಃ] "ಸಿಂಹನು ದೇವದತ್ತನು" ಎಂಬಲ್ಲಿ ಸಿಂಹಸದೃಶನು ದೇವದತ್ತನು ಎಂದು ಅರ್ಥವು. ಮುಖ್ಯಾರ್ಥ,ಸಿಂಹರೂಪ ಅರ್ಥ. ಮುಖ್ಯಾರ್ಥ ಗುಣಗಳು ಗಾಂಭೀರ್ಯಾ ದಿಗಳು ಈ ಗುಣದಿಂದ ಕೂಡಿದ ದೇವದತ್ತನು ಇವನಲ್ಲಿ ಶಕ್ತಿಯು ಎಂದು ಅರ್ಥವು.

೧೪) ರೂಢೋಪಚಾರ ಃ– ಮುಖ್ಯಾರ್ಥಯುಕ್ತ ಅರ್ಥಾಂತರದಲ್ಲಿ ಪ್ರಯೋಗ ಬಾಹುಲ್ಯವು. ಉದಾಃ- ಚಿತ್ರಲಿಖಿತವಾದ ಸಿಂಹದಲ್ಲಿ "ಅಯಂ ಸಿಂಹಃ" ಇದು ಸಿಂಹವು ಎಂಬ ಪ್ರಯೋಗವು. [ಚಿತ್ರಲಿಖಿತ ಸಿಂಹವು ನಿಜವಾದ ಸಿಂಹವಲ್ಲ. ಆದರೂ ಇದು ಸಿಂಹವೆಂಬ ಪ್ರಯೋಗ ಬಾಹುಲ್ಯವಿದೆ. ಈ ಕಾರಣದಿಂದ ಇದು ಸಿಂಹವೆಂಬುದು ರೂಢೋಪಚಾರವು. ಇಲ್ಲಿ ಮುಖ್ಯಾರ್ಥ ಸಿಂಹರೂಪ ಅರ್ಥ. ಇದರಿಂದ ಕೂಡಿದ ಅರ್ಥಾಂತರ 'ಲಿಖಿತಸಿಂಹ' ಇಲ್ಲಿ ಇದು ಸಿಂಹವೆಂದು ಪ್ರಯೋಗಬಾಹುಲ್ಯವಿದೆ]

೧೫] ಮಹಾರೂಢಿ :– ಪ್ರಯೋಗಬಾಹುಲ್ಯದಿಂದ ಕೂಡಿದ ನಿರವಧಿಕ ನಿಮಿತ್ತ ಸಾಪೇಕ್ಷವೃತ್ತಿಯು ಈ ವೃತ್ತಿಯಿಂದ ಅರ್ಥ ಪ್ರತಿಪಾದನ ಮಾಡತಕ್ಕ ಶಬ್ದಗಳು ಮಹಾ ರೂಢಗಳು. ಉದಾಃ– ನಾರಾಯಣಾದಿ ಶಬ್ದಗಳು [ನಾರಾಯಣಾದಿ ಶಬ್ದಗಳಲ್ಲಿ ವಿದ್ವಜ್ಜನರ ಪ್ರಯೋಗಬಾಹುಲ್ಯ ಉಂಟು. ನಿರವಧಿಕ ನಿಮಿತ್ತ [ಗುಣಪೂರ್ವತ್ವ] ಅಪೇಕ್ಷಿಸಿ ವೃತ್ತಿಯೂ ಇದೆ. ಕಾರಣ ನಾರಾಯಣಾದಿ ಶಬ್ದಗಳು ಮಹಾರೂಢಗಳು.

೧೬) ಮಹಾಯೋಗ:- ಪ್ರಯೋಗ ಬಾಹುಲ್ಯವಿಲ್ಲದೇ ನಿರವಧಿಕ ಪ್ರವೃತ್ತಿ ಸಾಪೇಕ್ಷ ವೃತ್ತಿಯು. ಈ ವೃತ್ತಿಯಿಂದ ಅರ್ಥಪ್ರತಿಪಾದನ ಮಾಡತಕ್ಕ ಶಬ್ದಗಳು ಮಹಾಯೌಗಿಕಗಳು. ಉದಾಃ– ಇಂದ್ರಾದಿ ಶಬ್ದಗಳು. [ಇಂದ್ರ ಶಬ್ದವು ತನ್ನ ಪ್ರವೃತ್ತಿ ನಿಮಿತ್ತವಾದ ಐಶ್ವರ್ಯದಿಂದ[ಸ್ವರ್ಗಾಧಿಪತಿ] ಇಂದ್ರನನ್ನು ಬೋಧಿಸುತ್ತದೆ. ಹಾಗೂ ನಿರವಧಿಕ ಪ್ರವೃತ್ತಿ ನಿಮಿತ್ತದಿಂದ [ಮಹಾಐಶ್ವರ್ಯದಿಂದ] ನಾರಾಯಣನನ್ನು ಬೋಧಿಸುತ್ತದೆ. ಕಾರಣ ಈ ಇಂದ್ರ ಶಬ್ದವು ಮಹಾ ಯೌಗಿಕವು.

೧೭) ಅರ್ಥಾಪತ್ತಿ:– ಅನುಪಪದ್ಯಮಾನ ಯಥಾರ್ಥಜ್ಞಾನದಿಂದ ಜನ್ಯವಾದ ಉಪಪಾದಕ ಯಥಾರ್ಥಜ್ಞಾನವು. ಉದಾ:–[ಜೀವನ್ ಚೈತ್ರಃ ಗೃಹೇ ನಾಸ್ತೀತಿಜ್ಞಾನೇ ಬಹಿಃ ಸತ್ವಜ್ಞಾನಂ] 'ಜೀವದಿಂದಿದ್ದ ಚೈತ್ರನು ಗೃಹದಲ್ಲಿ ಇಲ್ಲ ಎಂಬ ಜ್ಞಾನವಾಗುತ್ತಿರಲು, ಹೊರಗೆ ಇದ್ದಾನೆ ಎಂಬ ಜ್ಞಾನವು, ಇಲ್ಲಿ ಲಕ್ಷಣಸಮನ್ವಯ ಹೇಗೆಂದರೆ ಅನುಪಪದ್ಯಮಾನ ಯಥಾರ್ಥಜ್ಞಾನವೆಂದರೆ ಜೀವದಿಂದ ಕೂಡಿದ ಚೈತ್ರನು ಮನೆಯಲ್ಲಿ ಇಲ್ಲವೆಂಬ ಜ್ಞಾನವು, ಈ ಜ್ಞಾನದಿಂದ ಹುಟ್ಟಿದ ಉಪಪಾದಕ ಯಥಾರ್ಥಜ್ಞಾನವೆಂದರೆ ಜೀವದಿಂದ ಇದ್ದಾನೆ ಮನೆಯಲ್ಲಿ ಇಲ್ಲ ಎಂದ ಮೇಲೆ, ಹೊರಗೆ ಇದ್ದಾನೆ ಎಂಬ ಜ್ಞಾನ, ಈ ಜ್ಞಾನದಲ್ಲಿ ಲಕ್ಷಣ ಸಮನ್ವಯವಾಗುತ್ತದೆ.

೧೮) ಉಪಮಾನ:– ಸಾದೃಶ್ಯಜ್ಞಾನಕ್ಕೆ ಸಾಧನವಾದದ್ದು. ಉದಾಃ– ಪಟ್ಟಣದಲ್ಲಿ ಗೋವನ್ನು ನೋಡಿ, ಅಡವಿಗೆ ಹೋದಾಗ ಅಲ್ಲಿಯ ಕಾಡು ಆಕಳಿನಲ್ಲಿ ಗೋಸ್ಮರಣೆಯಿಂದ ಗೋಸದೃಶವು ಗವಯವು ಎಂಬ ಜ್ಞಾನ ಬರುತ್ತದೆ. ಈ ಜ್ಞಾನವೇ [ಗವಯದಲ್ಲಿ] ಗೋಸದೃಶವು] ಉಪಮಿತಿಯು ಇದಕ್ಕೆ ಸಾಧನವಾದ್ದು ಉಪಮಾನವು.

೧೯) ಅನುಪಲಬ್ಧಿ :- ಅಭಾವ ಜ್ಞಾನಕ್ಕೆ ಕಾರಣವಾದದ್ದು. ಉದಾ ಃ– ಇಲ್ಲಿ ಘಟವಿಲ್ಲ. ಆ ಘಟದ ಅನುಪಲಬ್ಧಿ ಇರುವದರಿಂದ, ಈ ಅನುಮಾನದಿಂದ ಅಭಾವಜ್ಞಾನವಾಗುತ್ತದೆ. ಈ ಅಭಾವಜ್ಞಾನಕ್ಕೆ ಕಾರಣವಾದ ಲಿಂಗಜ್ಞಾನವೇ ಅನುಪಲಬ್ಧಿಯು.

೨೦] **ಪರಿಶೇಷಃ**- ಪ್ರಸಕ್ತವಾದ ಎರಡು ಪದಾರ್ಥಗಳಲ್ಲಿ ಒಂದನ್ನು ನಿಷೇಧ ಮಾಡಿದಲ್ಲಿ ಉಳಿದ ವಸ್ತುವಿನಲ್ಲಿ ಬುದ್ಧಿಯು ಉದಾ:-ಯಜ್ಞದತ್ತ ದೇವದತ್ತರಲ್ಲಿಇವನು ಯಜ್ಞದತ್ತನಲ್ಲ ಎಂದು ನಿಷೇಧ ಮಾಡಿದಲ್ಲಿ ಉಳಿದವನು ದೇವದತ್ತನು ಎಂಬ ನಿಶ್ಚಯವು.

ಇತಿ ಆಗಮ ಪರಿಚ್ಛೇದವು ಸಮಾಪ್ತ.



ಶ್ರೀಬಾದರಾಯಣ ಪ್ರಸೀದ

# ಪ್ರಸ್ತಾವನೆ

ಮಹಾಶಯರೇ !

ಪ್ರಮಾಣಸಂಗ್ರಹಣದ ಪ್ರಥಮ ಮುದ್ರಣ [೫೦೦] ಪ್ರತಿಗಳು ಮುಗಿದು ಬಹುಜನರ ಬೇಡಿಕೆಯ ಮೇರೆಗೆ ದ್ವಿತೀಯ ಮುದ್ರಣ ಪ್ರಾರಂಭಿಸಲು ನಿಶ್ಚಯಿಸಲಾಯಿತು. ಆದರೆ ಪ್ರಥಮ ಪುಸ್ತಕದಂತೆ ಸಂಸ್ಕೃತ ಭಾಷೆಯಲ್ಲಿಯೇ ಮುದ್ರಿಸಿದರೆ ಸಜ್ಜನ ಸಾಮಾನ್ಯರಿಗೆ ಉಪಯೋಗವಾಗುವದಿಲ್ಲ. ಅವರಿಗೂ ಉಪಯೋಗವಾಗಬೇಕೆಂಬ ಕೆಲವರ ಅಪೇಕ್ಷೆ ಮೇರೆಗೆ ಕನ್ನಡ ಅನುವಾದ ಮಾಡಿ ಈ ಗ್ರಂಥ ಬಿಡುಗಡೆ ಮಾಡಲಾಗಿದೆ.

ಈ ಪ್ರಮಾಣ ಸಂಗ್ರಹವನ್ನು ಭಾಷೆಯ ದೃಷ್ಟಿಯಿಂದ ನೋಡದಲೇ ಅರ್ಥದ ಕಡೆ ದೃಷ್ಟಿಕೋನ ಇಟ್ಟು ನೋಡಬೇಕು. ಕಾವ್ಯ ಗ್ರಂಥದಲ್ಲಿ ಭಾಷೆಗೆ ಹೆಚ್ಚು ಪ್ರಾಶಸ್ತ್ಯವಿರುತ್ತದೆ. ಪ್ರಕೃತ ಇದು ಶಾಸ್ತ್ರ ಗ್ರಂಥವಾದುದರಿಂದ, ಆ ದೃಷ್ಟಿಕೋನ ಇಟ್ಟುಕೊಂಡೇ ಶಾಸ್ತ್ರಭಾಷೆಯನ್ನು ಬಳಿಸಲಾಗಿದೆ.

ಪ್ರಮಾಣ ಸಂಗ್ರಹವು ಶಾಸ್ತ್ರ ಗ್ರಂಥವಾಗಿರುತ್ತದೆ ಅದರಲ್ಲಿ ಪಾರಿಭಾಷಿಕ ಶಬ್ದಗಳ ಸರಿಯಾದ ಅರ್ಥವು ಕನ್ನಡದಲ್ಲಿ ಸಿಗುವದು ಕಠಿಣ, ಆದರೂ ಪಾರಿಭಾಷಿಕ ಶಬ್ದಾರ್ಥ ಜ್ಞಾನವಾಗಬೇಕೆಂಬ ಉದ್ದೇಶದಿಂದ, ಪ್ರಥಮದಲ್ಲಿಯೇ "ಪ್ರಮಾಣ ಸಂಗ್ರಹಕೋಶ" ವನ್ನು ಸೋದಾಹರಣ ಸಹಿತವಾಗಿ ಕೊಡಲಾಗಿದೆ ಪ್ರಥಮ ಅಭ್ಯಾಸಿಗಳು ಆ ಕೋಶವನ್ನು ಅಧ್ಯಯನ ಮಾಡಿ ಗ್ರಂಥ ನೋಡಿದಲ್ಲಿ ಸ್ವಲ್ಪ ಅನುಕೂಲವಾಗುತ್ತದೆ.

ಪ್ರಮಾಣ ಸಂಗ್ರಹವನ್ನು ಕನ್ನಡ ಭಾಷೆಯಿಂದ ಅನುವಾದ ಮಾಡಿದರೂ ಶಾಸ್ತ್ರ ಪರಿಚಯವಿಲ್ಲದವರಿಗೆ ಈ ಗ್ರಂಥ ಬಲದಿಂದಲೇ ಶಾಸ್ತ್ರಜ್ಞಾನ ಸಂಪಾದಿಸಬಹುದೆಂಬ ಆಶೆಯು ಫಲಿಸಲಿಕ್ಕಿಲ್ಲ.

ಗುರುಮುಖದಿಂದ ಒಂದು ಸಲ ಅಧ್ಯಯನ ಮಾಡಿದವರಿಗೆ ಈ ಗ್ರಂಥವು ಸ್ಮಾರಕವಾಗುತ್ತದೆ ಎಂಬ ವಿಷಯದಲ್ಲಿ ಸಂಶಯ ಲೇಶವೂ ಇಲ್ಲ. ವಿದ್ಯಾರ್ಥಿಗಳಿಗೆ ಈ ಗ್ರಂಥ ಬಹು ಉಪಕಾರಕವಾಗುತ್ತದೆ. ಕಿಂಚಿತ್ ಶಾಸ್ತ್ರ ಪರಿಚಯವಿದ್ದವರಿಗೂ ಈ ಪ್ರಮಾಣ ಸಂಗ್ರಹವು ಪ್ರಯೋಜನಕಾರಿಯಾಗುತ್ತದೆ.

ಇದರಲ್ಲಿ ಏನಾದರೂ ಲೋಪದೋಷಗಳಿದ್ದರೆ ಹಂಸಕ್ಷೀರನ್ಯಾಯದಿಂದ ಗುಣಗ್ರಹಿಸಿ ದೋಷವನ್ನು ಸರಿಪಡಿಸಿಕೊಳ್ಳಬೇಕು. ಹಾಗೂ ಅವುಗಳನ್ನು ಸೂಚಿಸಿದಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುತ್ತದೆ ಎಂದು ವಿದ್ವಜ್ಜನರಲ್ಲಿ ಪ್ರಾರ್ಥಿಸುತ್ತೇನೆ.

ಕನ್ನಡ ಅನುವಾದ ಮಾಡುವ ವಿಷಯದಲ್ಲಿ ಸಹಕರಿಸಿದ, ನಮ್ಮಲ್ಲಿ ಅಧ್ಯಯನ ಮಾಡಿದ ಶ್ರೀಮಾನ್ ಪಿ.ಪಿ. ಶೆಟ್ಟಿ, ಎಂ.ಎ. ಬಿ.ಎಡ್ ಕಾಲೇಜ ಪ್ರಿನ್ಸಿಪಾಲರಿಗೆ ಆಯುರಾರೋಗ್ಯಾದಿಗಳನ್ನು ಕೋರುವೆ.

ಪ್ರಮಾಣ ಸಂಗ್ರಹ ಕೋಶದಲ್ಲಿ ಅನೇಕ ಶಬ್ದಗಳ ವಿವರಣೆ, ಕೆಲವೊಂದು ಅಡಚಣೆಗಳ ಮೂಲಕ ಕೈಬಿಡಲಾಗಿದೆ. ಅವುಗಳ ವಿವರಣೆ ಗ್ರಂಥದಲ್ಲಿ ಇರುವದರಿಂದ ಅಲ್ಲಿಯೇ ನೋಡಬೇಕು. ಶುದ್ಧಾ-ಶುದ್ಧ ಪತ್ರಿಕೆ ಕೊಡಲಾಗಿದೆ ಅದನ್ನು ನೋಡಬೇಕು.

ಈ ಪ್ರಮಾಣ ಸಂಗ್ರಹ ಗ್ರಂಥ ಬಿಡುಗಡೆಗೆ ಆರ್ಥಿಕ ಸಹಾಯ ಮಾಡಿದ ಅನೇಕ ಸಜ್ಜನವೃಂದಕ್ಕೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಪ್ರಮಾಣ ಸಂಗ್ರಹ ಗ್ರಂಥ ಪ್ರಕಾಶಪಡಿಸಿದ ಶ್ರೀರಾಯರಆರಾಧನಾ ಸಮಿತಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ವಿದ್ವಜ್ಜನವಿಧೇಯ
ವಾದಿರಾಜಾಚಾರ್ಯ ಅಗ್ನಿಹೋತ್ರಿ
ಬ್ರಹ್ಮಪೂರ ಗುಲಬರ್ಗಾ-೩

॥ ಓಂ ಶ್ರೀ ರಾಘವೇಂದ್ರಾಯ ನಮಃ ॥

## ಪ್ರಕಾಶಕರ ನುಡಿ

ಶ್ರೀರಾಯರ ಆರಾಧನಾ ಸಮಿತಿಯ ದ್ವಾರಾ ದ್ವಿತೀಯ ಪುಷ್ಪವಾಗಿ ಪ್ರಕಟಗೊಳ್ಳು-ತ್ತಿರುವ "ಪ್ರಮಾಣ ಸಂಗ್ರಹ" ಎಂಬ ಗ್ರಂಥವನ್ನು ವಾಚಕರ ಕೈಯಲ್ಲಿರಿಸಲು ನಮಗೆ ಅತ್ಯಂತ ಸಂತೋಷವೆನಿಸುತ್ತದೆ.

ಈ ಗ್ರಂಥವನ್ನು ಪ್ರಕಾಂಡ ಪಂಡಿತರೂ, ಕಾವ್ಯಶಾಸ್ತ್ರ ಪರಿಣಿತರೂ, ಪಾಠ ಪ್ರವಚನ ನಿರತರೂ, ನಮ್ಮ ಕಲಬುರ್ಗಿ ನಗರಕ್ಕೆ ಕಲಶಪ್ರಾಯದಂತಿರುವ ಶ್ರೀ ವಾದಿರಾಜಾಚಾರ್ಯ ಅಗ್ನಿಹೋತ್ರಿಯವರು ರಚಿಸಿದ್ದಾರೆ.

"ಪ್ರಮಾಣ ಸಂಗ್ರಹ" ಗ್ರಂಥವನ್ನು ಶ್ರೀ ವಾದಿರಾಜಾಚಾರ್ಯರು ಮೊದಲು ಸಂಸ್ಕೃತದಲ್ಲಿ ಪ್ರಕಟಿಸಿದರು. ಈ ಗ್ರಂಥದ ಉಪಯೋಗ ಕನ್ನಡಿಗರೆಲ್ಲರಿಗೂ ಆಗಬೇ-ಕೆಂಬ ಮಹೋದ್ದೇಶದಿಂದ, ತಾವೇ ಸ್ವತಃ ತಿಳಿಯಾದ, ಸುಲಭವಾದ, ಪ್ರಸಾದಿಕಶೈಲಿಯಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ಶ್ರೀ ವಾದಿರಾಜಾಚಾರ್ಯ ಅಗ್ನಿಹೋತ್ರಿಯವರು ತಮ್ಮ "ಪ್ರಮಾಣ ಸಂಗ್ರಹ" ವೆಂಬ ಮೌಲಿಕ ಗ್ರಂಥವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯನ್ನಿತ್ತಿದ್ದಕ್ಕೆ ಕಲಬುರ್ಗಿಯ ಶ್ರೀರಾಯರ ಆರಾಧನಾ ಸಮಿತಿಯು ಅವರಿಗೆ ಅತ್ಯಂತ ಉಪಕೃತವಾಗಿದೆ. ಅವರ ಈ ಗ್ರಂಥವನ್ನು ಪ್ರಕಟಿಸಲು ನಮಗೆ ಹೆಮ್ಮೆಯೆನಿಸುತ್ತದೆ.

ನಮ್ಮ ಮಾಲೆಯ ಪ್ರಥಮ ಪುಷ್ಪವಾಗಿ ಹೊರ ಬಂದ "ಶ್ರೀ ರಾಘವೇಂದ್ರಸ್ಮರಣೆ" ಯನ್ನು ಸಹರ್ಷ ಸ್ವಾಗತಿಸಿದಂತೆ, ನಮ್ಮ ದ್ವಿತೀಯ ಪುಷ್ಪವಾದ "ಪ್ರಮಾಣ ಸಂಗ್ರಹ" ವನ್ನು ಸಹೃದಯರು ಮೆಚ್ಚುವರೆಂದು ನಂಬಿದ್ದೇವೆ.

ಪ್ರಕಾಶಕರು
ಶ್ರೀರಾಯರ ಆರಾಧನಾ ಸಮಿತಿ
ಕಲಬುರ್ಗಿ

ಸೂಚನಾ :

ವಿ. ವಿವರಣೆ

———— ಹೀಗೆ ಕೆಲವು ಕಡೆ ಗೆರೆ ಹೊಡೆದಿದೆ, ಅದು ಪೇಜಿನಲ್ಲಿ ಸಾಲು ಸರಿ ಮಾಡಿಕೊಳ್ಳಲು ಇರುತ್ತದೆ ಹೊರತು ವಿಷಯ ಸಮಾಪ್ತಿಯಲ್ಲಿ ಅಲ್ಲ.

श्रीलक्ष्मीहयग्रीवाय नमः ।

श्रीवेदव्यासाय नमः । श्रीलक्ष्मीनृसिंहाय नमः ।

# प्रमाणसंग्रहः

मङ्गलाचरणम् ।

श्रीनृसिंहपदांभोजं प्रणम्येष्टार्थदं सदा
प्रमाणसंग्रहं वक्ष्ये, टीकाद्युक्त्यनुसारतः ।। १ ।।
श्रीमदानंदतीर्थार्यान् जयतीर्थमुनीनपि ।
वंदे ग्रंथार्थविज्ञप्त्यै रघूत्तमपदार्चकान् ।। २ ।।
समस्तमानैः सकलेशविष्णोः सर्वोत्तमत्वं प्रकटीचकार ।
निरस्य दुर्वादिमतं समस्तं तं ध्यानतीर्थाख्ययतिं प्रपद्ये ।। ३ ।।
श्रीमदानंदतीर्थार्यशास्त्रगूढार्थसंततिः
प्रदर्शिता येन सम्यक् तं प्रमोदयतिं भजे ।। ४ ।।
द्वैतद्युमणिकर्तारं दुर्मतध्वांतभास्करम् ।
श्रीनाथार्यं नमस्कृत्य याचेऽहं तत्कृपाबलम् ।। ५ ।।
सुधाप्रवचनासक्तं सत्यध्यानपदार्चकं ।
हुलगीत्युपनामानं हुच्चाचार्यं गुरुं भजे ।। ६ ।।
येनाहं शुकवत्सम्यक् शिक्षितोऽस्मि कृपालुना ।
हुच्चाचार्यं च तं वन्दे विष्णुभक्ति परायणम् ।। ७ ।।

|| ಶ್ರೀ ಲಕ್ಷ್ಮೀನರಸಿಂಹ ಪ್ರಸೀದ ||

# ಪ್ರಮಾಣ ಸಂಗ್ರಹ

**ಗ್ರಂಥ ಶೀರ್ಷಿಕೆಯ ಔಚಿತ್ಯ–** ಪ್ರಮಾಣಗಳ ಸಂಗ್ರಹವು ಯಾವ ಗ್ರಂಥದಲ್ಲಿದೆಯೋ ಅದು ಎಂದು ಸಪ್ತಮೀ ಬಹುವ್ರೀಹಿ ಸಮಾಸ ಮಾಡಿದಲ್ಲಿ ಪ್ರತ್ಯಕ್ಷಾದಿ ಪ್ರಮಾಣಗಳ ಉದ್ದೇಶ, ಲಕ್ಷಣ, ವಿಭಾಗ ಹಾಗೂ ಪರೀಕ್ಷೆಗಳ ನಿರೂಪಣೆ ಎಲ್ಲಿ ಮಾಡಿದಿಯೋ ಆ ಗ್ರಂಥ ವೆಂಬರ್ಥವಾಗುವದು.

ಇನ್ನು ಪ್ರಮಾಣಗಳ ಸಂಗ್ರಹವು [ ಸಮ್ಯಕ ಗ್ರಹಣವು ಎಂದರೆ ಸಮೀಚಿನ ಜ್ಞಾನವು ] ಯಾವ ಗ್ರಂಥದ ದೆಶೆಯಿಂದ ಆಗುವದೋ ಅದು ಎಂದು ಪಂಚಮಿ ಬಹುವ್ರೀಹಿ ಸಮಾಸ ಮಾಡಿದಲ್ಲಿ ಪ್ರತ್ಯಕ್ಷಾದಿಪ್ರಮಾಣಗಳ ಸಮೀಚಿನಜ್ಞಾನ ಮಾಡಿಕೊಡುವ ಗ್ರಂಥವೆಂಬ–ರ್ಥವಾಗುವದರಿಂದ, ಶೀರ್ಷಿಕೆಯು ಸಮಂಜಸವೂ ಸಾರ್ಥಕವೂ ಆಗಿದೆ.

# ಮಂಗಳಾಚರಣೆಯು

( ಈ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿ ಹೊಂದಲು, ಅದರ ಶ್ರವಣ, ಪಠಣ, ಅಧ್ಯಯನ, ಅಧ್ಯಾಪನಗಳು, ನಿರ್ವಿಘ್ನವಾಗಿ ನೆರವೇರಲು ಹಾಗೂ ಗ್ರಂಥವು ಮಂಗಲ ಪ್ರದವಾಗಿ ಫಲಕಾರಿಯಾಗಲು, ಗ್ರಂಥಾರಂಭದಲ್ಲಿ, ಸಕಲಾನಿಷ್ಟ ನಿವಾರಕರೂ ಸಕಲೇಷ್ಟ ಪ್ರಾಪಕರೂ ಆದ ಶ್ರೀಲಕ್ಷ್ಮೀನರಸಿಂಹದೇವರನ್ನು ಹಾಗೂ ಶ್ರೀಮದಾನಂದ ತೀರ್ಥರೇ ಮೊದಲಾದ ಗುರುಗಳನ್ನು ಸ್ತುತಿಸಿ, ಇಷ್ಟ ದೇವತಾನಮನರೂಪ ಮಂಗಳವನ್ನು ಗ್ರಂಥಕರ್ತರು ಮಾಡುತ್ತಾರೆ. ]

ಇಷ್ಟಪ್ರದನಾದ ಶ್ರೀಲಕ್ಷ್ಮೀನೃಸಿಂಹದೇವರ ಪಾದಕಮಲಗಳನ್ನು ಸದಾ ನಮಸ್ಕರಿಸಿ ಟೀಕಾ ಹಾಗೂ ಟಿಪ್ಪಣಿಗಳಲ್ಲಿ ಹೇಳಿದ್ದನ್ನನುಸರಿಸಿಯೇ " ಪ್ರಮಾಣ ಸಂಗ್ರಹ ವೆಂಬ ಗ್ರಂಥವನ್ನು ರಚಿಸುತ್ತೇನೆ [ ಇಲ್ಲಿ ಗ್ರಂಥಾರಂಭದ ಪ್ರತಿಜ್ಞೆಯೂ ಮಾಡಲ್ಪಟ್ಟಿದೆ ]

ಶ್ರೀ ರಾಮಚಂದ್ರದೇವರ ಪಾದಪದ್ಮಾರಾಧಕರಾದ, ಶ್ರೀಮದಾನಂದತೀರ್ಥರನ್ನು ಹಾಗೂ ಶ್ರೀ ಜಯತೀರ್ಥ ಗುರುಗಳನ್ನು, ಗ್ರಂಥ ಪ್ರತಿಪಾದ್ಯ ಅರ್ಥದ ವಿಶೇಷ ಜ್ಞಾನ ಪ್ರಾಪ್ತಿಗಾಗಿ ನಮಸ್ಕರಿಸುತ್ತೇನೆ. ॥ ೨ ॥

ಪ್ರಮಾಣಗಳಿಂದ ಎಲ್ಲ ದುರ್ಮತಗಳನ್ನು ಖಂಡಿಸಿ ಸರ್ವಸ್ವಾಮಿಯಾದ ವಿಷ್ಣುವಿನ ಸರ್ವೋತ್ತಮತ್ವವನ್ನು ಎಲ್ಲೆಡೆಗೆ ಪ್ರಕಟಪಡಿಸಿದ ಶ್ರೀಸತ್ಯಧ್ಯಾನತೀರ್ಥರನ್ನು ಶರಣು ಹೊಂದುವೆ. ॥ ೩ ॥

ಶ್ರೀ ಮದಾನಂದತೀರ್ಥರ ಶಾಸ್ತ್ರಗಳಲ್ಲಿ ಹುದುಗಿದ ಸಮಸ್ತ ಅರ್ಥ ಸಮುದಾಯವನ್ನು ಸಮೀಚೀನವಾಗಿ ಸ್ಫುಟವಾಗಿ ತಿಳಿಯ ಪಡಿಸುತ್ತಿರುವ ಶ್ರೀಸತ್ಯಪ್ರಮೋದತೀರ್ಥರನ್ನು ಸದಾ ಸೇವಿಸುವೆ. ॥ ೪ ॥

ದುರ್ಮತಗಳೆಂಬ ಕತ್ತಲೆಗೆ ಸೂರ್ಯನಂತಿರುವ " ದ್ವೈತದ್ಯುಮಣಿ " ಎಂಬ ಉದ್ಗ್ರಂಥವನ್ನು ರಚಿಸಿದ ಶ್ರೀನಾಥಾಚಾರ್ಯರಿಗೆ ನಮಸ್ಕರಿಸಿ, ಅವರ ಕೃಪಾಬಲವನ್ನು ಯಾಚಿಸುತ್ತೇನೆ. ॥ ೫ ॥

ಶ್ರೀ ಸತ್ಯಧ್ಯಾನತೀರ್ಥರ ಪಾದಸೇವಕರಾದ ಶ್ರೀಮನ್ನ್ಯಾಯಸುಧಾದಿ ಗ್ರಂಥಗಳ ಪಾಠಪ್ರವಚನದಲ್ಲಿಯೇ ಆಸಕ್ತರಾದ ಹುಲಗಿ ಎಂಬ ಉಪನಾಮವುಳ್ಳ ಗುರುಗಳಾದ ಶ್ರೀಹುಚ್ಚಾಚಾರ್ಯರನ್ನು ಸೇವಿಸುತ್ತೇನೆ. ॥ ೬ ॥

ಯಾವ ದಯಾಳುಗಳಾದ ಶ್ರೀ ಹುಚ್ಚಾಚಾರ್ಯರಿಂದ ನಾನು ಗಿಳಿಯಂತೆ ವಿದ್ಯಾಭ್ಯಾಸ ಹೊಂದಿದೆನೋ ಅಂತಹ ವಿಷ್ಣುಭಕ್ತಿ ಪರಾಯಣರಾದ ಗುರುಗಳನ್ನು ವಂದಿಸುತ್ತೇನೆ ॥ ೭ ॥

## अथ प्रत्यक्षपरिच्छेदः ।

इह खलु अनिष्ठनिवृत्तिपूर्वकेष्ठप्राप्तिरूपनिखिलापेक्षितमोक्षस्य परापरतत्त्वज्ञानसाध्यत्वं मुमुक्षुणाऽवश्यं वेदितव्यं, परापरतत्त्वज्ञानं च प्रमाणाधीनं; प्रमाणादिज्ञानं च लक्षणादित्रिकाधीनमिति. प्रथमतः लक्षणोद्देशादीनां लक्षणमुच्यते । यद्यपि उद्देशलक्षणमेव प्रथमं निर्देश्यं, तथापि लक्षणज्ञानाभावे उद्देशलक्षणमपि ज्ञातुमशक्यं भवेदिति सौकर्याय लक्षणलक्षणमेव प्रथमं निरूप्यते :--

### १. अथ लक्षणादि प्रकरणम् ।

( १ ) लक्ष्यमात्रव्यापको धर्मो लक्षणं, तच्च सकललक्ष्यवृत्तित्वे सति लक्ष्येतरावृत्तित्वं; यथा गौः सास्नादिमत्त्वं तत्र लक्षणसमन्वयस्तु इत्थम्-- सकललक्ष्यं गौः सकललक्ष्यवृत्ति **सास्नादिमत्त्वं**, तत्र सकललक्ष्यवृत्तित्वं वर्तते; तथा लक्ष्येतरं **महिष्यादि**, तत्र सास्नादिमत्त्वं न वर्तत इति ।

---

## ಪ್ರತ್ಯಕ್ಷ ಪರಿಚ್ಛೇದವು

ಈ ಸಾಧಕವರ್ಗದಲ್ಲಿ ಅನಿಷ್ಟನಿವೃತ್ತಿಪೂರ್ವಕ ಇಷ್ಟ ಪ್ರಾಪ್ತಿರೂಪ ಮೋಕ್ಷವು ಪರಾಪರತತ್ತ್ವಜ್ಞಾನದಿಂದ ಮಾತ್ರ ಸಾಧ್ಯವೆಂದು ಮುಮುಕ್ಷುಗಳಿಂದ ಅವಶ್ಯ ತಿಳಿಯಲ್ಪಡತಕ್ಕದ್ದು. ಈ ಪರಾಪರತತ್ತ್ವಜ್ಞಾನವು ಪ್ರಮಾಣಾಧೀನವಾದುದು. ಪ್ರಮಾಣಾದಿ-ಜ್ಞಾನವು, ಉದ್ದೇಶ, ಲಕ್ಷಣ ಹಾಗೂ ಪರಾಮರ್ಶ ( ಪರೀಕ್ಷಾ ) ಗಳ ಆಧೀನವು. ಇವುಗಳಲ್ಲಿ ಮೊದಲು ಉದ್ದೇಶದ ಲಕ್ಷಣವನ್ನು ಹೇಳಬೇಕಾದುದು ಯೋಗ್ಯವಾಗಿದ್ದರೂ, ' ಲಕ್ಷಣ , ಶಬ್ದದ ಜ್ಞಾನವಿಲ್ಲದೇ ' ಉದ್ದೇಶದ ಲಕ್ಷಣವನ್ನು ತಿಳಿಯಲು ಶಕ್ಯವಾಗ. ದ್ದರಿಂದ, ಸೌಕರ್ಯ ದೃಷ್ಟಿಯಿಂದ ' ಲಕ್ಷಣದವ್ಯಾಖ್ಯೆಯನ್ನು ಮೊದಲು ಹೇಳಲಾ-ಗುತ್ತದೆ.

## ಲಕ್ಷಣಾದಿ ಪ್ರಕರಣವು

" ಲಕ್ಷ್ಯವಾದ ಪದಾರ್ಥಗಳಲ್ಲಿ ಮಾತ್ರ ಎಲ್ಲಡೆಗೆ ಇರುವ ಧರ್ಮವೇ ಲಕ್ಷಣವು,, ಎಂದರೆ ಎಲ್ಲ ವಸ್ತುಗಳಲ್ಲಿದ್ದು ಲಕ್ಷ್ಯವಾಗದೇ ಇದ್ದ ಯಾವ ವಸ್ತುವಿನಲ್ಲಿಯೂ ಇಲ್ಲದೇ ಇರುವ ಧರ್ಮವು. ಉದಾ:- " ಆಕಳು ಗಂಗೆದೊಗಲುಳ್ಳ ಪ್ರಾಣಿಯು, " ಇಲ್ಲಿ ಸಕಲ ಲಕ್ಷ್ಯವಾದ ವಸ್ತುವು ' ಆಕಳು, ಅವುಗಳಲ್ಲೆಲ್ಲ ಇರುವ ಧರ್ಮವೆಂದರೆ ' ಗಂಗೆದೊಗಲೇ ಮೊದಲಾದ ಧರ್ಮವು, ಲಕ್ಷ್ಯೇತರ ವಸ್ತುಗಳು ಆಡು, ಎಮ್ಮೆ

तदवृत्तित्वस्य सास्नादिमत्त्वे सत्त्वेन लक्षण समन्वयः। दलकृत्यं--**धर्मो** लक्षणमित्युक्ते एकशफवत्त्वेऽतिव्याप्तिः, तद्वारणाय लक्ष्येति, लक्ष्यवृत्तिधर्म इति यावत्, **लक्ष्यवृत्तिधर्म** इत्युक्ते शबलत्वे-ऽतिव्याप्तिः- तद्वारणाय **लक्ष्यव्यापकधर्मेति**, सकललक्ष्यवृत्तिधर्म इत्यर्थः, तथा च शबलत्वे सकललक्ष्यवृत्तिधर्मत्वाभावात् नाति व्याप्तिः, **सकललक्ष्यवृत्तिधर्म** इत्युक्ते शृंगित्वेऽतिव्याप्तिः, तद्वारणाय **लक्ष्यमात्रेति** वक्तव्यं, तदर्थस्तु लक्ष्येतरावृत्तिधर्मः, तथा च शृंगित्वे लक್ष್ಯेतरवृत्तित्वस्यैव सत्त्वेन तदवृत्तित्वाभावान्नातिव्याप्तिः।

---

ಮುಂತಾದವು. ಅವುಗಳಲ್ಲಿ ಗಂಗೆದೊಗಲು ಕೂಡಿದ ಧರ್ಮವಿಲ್ಲ ( ಸಾಸ್ನಾದಿಮತ್ವವಿಲ್ಲ ) ಹೀಗೆ ಸಾಸ್ನಾದಿಮತ್ವಧರ್ಮವು, ಸಕಲಲಕ್ಷ್ಯವೆಂದರೆ ಎಲ್ಲ ಆಕಳುಗಳಲ್ಲಿದ್ದು ಲಕ್ಷ್ಯೇತರಗಳಾದ ಎಮ್ಮೆ ಮೊದಲಾದ ಪ್ರಾಣಿಗಳಲ್ಲಿರುವದಿಲ್ಲವಾದ್ದರಿಂದ ಈ ಲಕ್ಷಣವು ಲಕ್ಷ್ಯದಲ್ಲಿ ಸಮನ್ವಯವಾಗುವದು.))

ದಲಕೃತ್ಯವು :- ಕೇವಲ 'ಧರ್ಮವು ಲಕ್ಷಣ' ಎಂದು ಹೇಳಿದರೆ, ಒಂದುಗೊರಸೂ' ಕೂಡ [ ಏಕಶಫತ್ವ ] ಧರ್ಮವಾದ್ದರಿಂದ ಈ ಧರ್ಮವು ಕುದುರೆಯಲ್ಲಿ ಇರುವದರಿಂದ ಏಕಶಫತ್ವ ಧರ್ಮದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಲಕ್ಷ್ಯದಲ್ಲಿರುವ ಧರ್ಮ' ಎಂದು ಹೇಳಬೇಕು. ಈಗ 'ಒಂದುಗೊರಸು' ಎಂಬ ಧರ್ಮವು ಲಕ್ಷ್ಯವಾದ ಆಕಳಲ್ಲಿಲ್ಲದ ಮೂಲಕ ಆ ಧರ್ಮದಲ್ಲಿ ಅತಿವ್ಯಾಪ್ತಿ ಬರಲಾರದೇ ಹೋದರೂ, ಅಷ್ಟೇ ಹೇಳಿದರೆ, ಮತ್ತೆ [ ಶಬಲತ್ವ ] 'ಹಂಡ ಬಂಡ ಬಣ್ಣ' ವೆಂಬ ಧರ್ಮದಲ್ಲಿ ಅತಿವ್ಯಾಪ್ತಿ ಬರುವದು. ಈ ಧರ್ಮವು ಯಾವುದೋ ಒಂದೆರಡು ಆಕಳುಗಳಲ್ಲಿರುವದರಿಂದ 'ಆಕಳ' ಸಾಮಾನ್ಯ ಜ್ಞಾನ ಮಾಡಿಕೊಡಲಾರದು. ಇದನ್ನು ನಿವಾರಿಸಲು 'ಸರ್ವಲಕ್ಷ್ಯದಲ್ಲಿದ್ದ ಧರ್ಮ [ ಲಕ್ಷ್ಯವ್ಯಾಪಕ ಧರ್ಮ ] ವೆಂದು ಹೇಳಬೇಕು. ಶಬಲತ್ವವು [ ಸರ್ವಲಕ್ಷ್ಯದಲ್ಲಿಲ್ಲ ಎಲ್ಲ ಆಕಳುಗಳಲ್ಲಿಲ್ಲದರಿಂದ ಇಲ್ಲಿ ಅತಿವ್ಯಾಪ್ತಿ 'ಬರುವುದಿಲ್ಲ. ಆದರೆ "ಲಕ್ಷ್ಯವ್ಯಾಪಕ ಧರ್ಮ" ಎಂದಿಷ್ಟೇ ಲಕ್ಷಣದ ಲಕ್ಷಣವೆಂದು ಹೇಳಿದರೆ, [ ಶೃಂಗಿತ್ವ ] ಕೊಂಬು ಹೊಂದಿ-ರುವ ಧರ್ಮವು ಎಲ್ಲ ಆಕಳುಗಳಲ್ಲಿಯೂ ಇದ್ದು, ಲಕ್ಷ್ಯೇತರಗಳಾದ ಎಮ್ಮೆ ಮೊದಲಾದ ಪ್ರಾಣಿಗಳಲ್ಲಿಯೂ ಇರುವದರಿಂದ, ಈ ಧರ್ಮದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಲಕ್ಷ್ಯಮಾತ್ರ ವ್ಯಾಪಕಧರ್ಮ' ಎಂದರೆ ಲಕ್ಷ್ಯ ಬಿಟ್ಟು ಅನ್ಯವಸ್ತುಗಳಲ್ಲಿ-ರಲಾರದ ಧರ್ಮವೆಂದು ಹೇಳಬೇಕು.

एवं च **सकललक्ष्यवृत्तित्वे सति लक्ष्येतरावृत्तित्वं** सल्लक्षणस्य लक्षणमित्युक्तं भवति ।

अयमभिप्रायः, टीकायां "यो धर्मो लक्ष्ये व्याप्त्या वर्तते, न वर्तते चान्यत्र स धर्मो लक्षणमित्युच्यते" इत्यनेन स्पष्टमुक्तः । अत्र **जनार्दनभट्टीये** एवमुक्तं

"(यो धर्मो लक्ष्ये व्याप्त्या वर्तते न वर्तते चान्यत्र, स धर्मो लक्षणमित्युच्यते",) व्याप्त्येत्येतत् लक्ष्यइत्यनेन अन्यत्रेत्यनेन च संबध्यते, यो धर्मो लक्ष्ये व्याप्त्या वर्तते अन्यत्र च व्याप्त्या न वर्तते सः धर्मो लक्षणमित्युच्यत इति,

तथा च – सकललक्ष्यवृत्तित्वे सति सकललक्ष्येतरावृत्तित्वं लक्षणस्य लक्षणमिति निष्कृष्टोऽर्थः। **व्याप्त्या इत्यस्य अन्यत्रेत्यनेन** अन्वयानंगीकारे यो धर्मो लक्ष्ये वर्तत इत्यंशस्य शबलत्त्वादौ यत्किंचिल्लक्ष्यवृत्तित्वमादाय पर्यवसानवत्,

---

ಕೊಂಬು ಹೊಂದಿರುವ, ಧರ್ಮವು ಲಕ್ಷ್ಯೇತರ ವಸ್ತುಗಳಲ್ಲಿಯು ಧರ್ಮವಾಗಿದೆಯಲ್ಲದೇ ಕೇವಲ ಲಕ್ಷ್ಯವೃತ್ತಿ ಧರ್ಮವಾಗಿಲ್ಲ. ಈಗ ಅಲ್ಲಿ ಅತಿವ್ಯಾಪ್ತಿ ಬರಲಾರದು

ಒಟ್ಟಿನಲ್ಲಿ ' ಸಕಲ ಲಕ್ಷ್ಯದಲ್ಲಿದ್ದು ಲಕ್ಷ್ಯ ಭಿನ್ನವಾದವುಗಳಲ್ಲಿ ಇರದೇ ಇರುವ ಧರ್ಮವು,ಸರಿಯಾದ ಲಕ್ಷಣದ ಲಕ್ಷಣವು.

((ಶ್ರೀಟೀಕಾಕೃತ್ಪಾದರು ಇದನ್ನೇ ಹೀಗೆ ಹೇಳಿದ್ದಾರೆ " ಯಾವ ಧರ್ಮವು ಎಲ್ಲ ಲಕ್ಷ್ಯಗಳಲ್ಲಿದ್ದು ಬೇರೆಡೆಗಳಲ್ಲಿರುವದಿಲ್ಲವೋ ಆ ಧರ್ಮವು ಲಕ್ಷಣವೆಂದು ಹೇಳಲ್ಪಡುತ್ತದೆ.))

ಈ ವಾಕ್ಯದ ಅರ್ಥವನ್ನು ವಿವರಿಸುತ್ತ ಜನಾರ್ದನಭಟ್ಟರು ಹೀಗೆ ಹೇಳಿದ್ದಾರೆ ' ವ್ಯಾಪ್ತ್ಯಾ ' ಎಂಬ ಪದವು ' ಲಕ್ಷ್ಯೇ ' ಎಂಬ ಶಬ್ದಕ್ಕೆ ಅನ್ವಯಿಸುವಂತೆ , ಅನ್ಯತ್ರ ' ಎಂಬ ಶಬ್ದಕ್ಕೂ ಸಂಬಂಧಿಸುತ್ತದೆ. ಅವರ ಅಭಿಪ್ರಾಯದಂತೆ ಯಾವ ಧರ್ಮವು ಸಕಲಲಕ್ಷ್ಯದಲ್ಲಿದ್ದು ಸಕಲಲಕ್ಷ್ಯೇತರದಲ್ಲಿ ಇರುವದಿಲ್ಲವೋ, ಆ ಧರ್ಮವೇ ಲಕ್ಷಣದ ಲಕ್ಷಣವು ಎಂದು ಸ್ಪಷ್ಟಾರ್ಥವು. ' ವ್ಯಾಪ್ತ್ಯಾ ' ಎಂಬ ಪದವನ್ನು ' ಲಕ್ಷ್ಯೇ ' ಎಂಬಲ್ಲಿ ಅನ್ವಯಿಸದಿದ್ದಾಗ ಅಂದರೆ ಯಾವ ಧರ್ಮವು ಲಕ್ಷ್ಯದಲ್ಲಿ ಇರುತ್ತದೆ ' ಎಂದಿಷ್ಟೇ ಹೇಳಿದಾಗ, ಲಕ್ಷ್ಯದ ಒಂದಂಶವಾದ ಹಂಡಬಂಡಆಕಳುಗಳಲ್ಲಿ ಮಾತ್ರ ಇರುವ ' ಹಂಡ ಬಂಡ ಬಣ್ಣ ' ವೆಂಬ ಧರ್ಮದಲ್ಲಿ ಅತಿವ್ಯಾಪ್ತಿ ಹೇಗೆ ಬರುತ್ತದೆಯೋ,

अन्यत्र न वर्तत इत्यंशस्यापि यत्किंचिदलक्ष्यमादाय पर्यवसानापत्त्या यत्किंचिदलक्ष्यशशाद्यवृत्तिविषाणित्वादेः गोर्लक्षणस्य वज्रलेपायितत्वापत्तेः। ननु सामान्यनिषेधस्य सामान्याभावप्रत्यायकत्वस्वाभाव्यादन्यत्र न वर्तत इत्यंशस्यान्यत्र कुत्रापि न वर्तत इत्येवार्थ इति चेन्न, एवं सति "यल्लक्ष्ये सर्वथा न वर्तत इत्यसंभविलक्षणेऽपि 'यल्लक्ष्ये न वर्तत, इति सामान्यनिषेधेन सर्वलक्ष्यवृत्तित्वाभावसंभवेन सर्वथेति पदवैयर्थ्यापत्तेः।

यदि च तत्र सर्वथेति पदसमभिव्याहारेण लक्ष्ये न वर्तत इत्यस्य यत्किंचिल्लक्ष्यवृत्तित्वाभावमादाय पर्यवसानापत्त्या।

---

ಹಾಗೆಯೇ 'ಅನ್ಯತ್ರ ನವರ್ತತೆ' ಎಂಬಲ್ಲಿಯೂ 'ವ್ಯಾಪ್ತ್ಯ' ಎಂಬ ಪದವನ್ನು ಅನ್ವಯಿಸದೇ ಇದ್ದರೆ, ( ಲಕ್ಷ್ಯ ಬಿಟ್ಟು ಬೇರೆ ವಸ್ತುಗಳಲ್ಲಿರಲಾರದ ಧರ್ಮವು ಎಂದಿಷ್ಟೇ ಹೇಳದರೆ ) ಲಕ್ಷ್ಯ ಬಿಟ್ಟು ಬೇರೆ ಇರುವ ಪ್ರಾಣಿಗಳ ಮಧ್ಯದಲ್ಲಿ ಒಂದು ಭಾಗವಾದ ಮೊಲವನ್ನು ( ಶಶ ) ತೆಗೆದುಕೊಂಡು, ಅದರಲ್ಲಿರಲಾರದ ಧರ್ಮವಾದ ಕೋಡು ಹೊಂದಿರುವ [ ವಿಷಾಣಿತ್ವ ] ಧರ್ಮವನ್ನು ಆಕಳ ಲಕ್ಷಣವೆಂದು ಹೇಳುವ ಪ್ರಸಂಗ ಬಂದು ಅತಿವ್ಯಾಪ್ತಿ ವಜ್ರಲೇಪದಂತಾಗುವದು. ಏಕೆಂದರೆ, 'ಕೋಡು ಹೊಂದಿರುವ' ಧರ್ಮವು ಎಲ್ಲ ಆಕಳುಗಳಲ್ಲಿ ವ್ಯಾಪಕವಾಗಿರುವದೂ, ಲಕ್ಷ್ಯೇತರಗಳಾದ ಕೆಲವೊಂದು ಪ್ರಾಣಿಗಳಲ್ಲಿ [ ಮೊಲಗಳಲ್ಲಿ ] ಇರಲಾರದ್ದೂ ಆಗಿರುವದು. ಶಂಕಾ – ಸಾಮಾನ್ಯವಾಗಿ ಹೇಳಲ್ಪಟ್ಟ ನಿಷೇಧವು, ಸಾಮಾನ್ಯವಾದ ಅಭಾವಧರ್ಮವನ್ನು ತಿಳಿಸಿಕೊಡುವದರಿಂದ, [ ಅನ್ಯತ್ರ ನವರ್ತತೆ ] 'ಇತರತ್ರದಲ್ಲಿಲ್ಲ' ಎಂಬ ನಿಷೇಧ ವಾಕ್ಯಾಂಶದಿಂದಲೇ, "ಇತರತ್ರದಲ್ಲಿ ಎಲ್ಲಿಯೂ ಇಲ್ಲ" ಎಂಬರ್ಥವಾಗುವದೆಂದು ಹೇಳಲು ಬರುವದಿಲ್ಲ. ಹಾಗಾದಲ್ಲಿ "ಲಕ್ಷ್ಯದಲ್ಲಿ ಸರ್ವಥಾ ಇಲ್ಲದಿರುವ ಧರ್ಮವು ಅಸಂಭವಿಯು" ಎಂಬ ಅಸಂಭವಿಯ ಲಕ್ಷಣದಲ್ಲಿ ಕೂಡಾ 'ಸರ್ವಥಾ' ಪದವನ್ನು ಹಾಕದೇ, ಕೇವಲ 'ಲಕ್ಷ್ಯದಲ್ಲಿಲ್ಲದ ಧರ್ಮ' ಎಂದಿಷ್ಟೇ ಹೇಳಿದರೂ, ಸಾಮಾನ್ಯ ನಿಷೇಧದಿಂದ ಸಾಮಾನ್ಯ ಅಭಾವದ ಅರ್ಥವಾಗುವದು ಸ್ವಾಭಾವಿಕವೆಂದಮೇಲೆ ಎಲ್ಲ ಲಕ್ಷ್ಯಗಳಲ್ಲಿರಲಾರದೆಂಬ ಅರ್ಥವಾಗಿ "ಸರ್ವಥಾ" ಪದವನ್ನು ಹಾಕಿದ್ದು ವ್ಯರ್ಥವೆಂಬ ಆಪತ್ತಿ ಬರುತ್ತದೆ.

ಒಂದು ವೇಳೆ, ಮೇಲಿನ ಅಸಂಭವಿ ಲಕ್ಷಣದಲ್ಲಿ 'ಲಕ್ಷ್ಯದಲ್ಲಿಲ್ಲದ" ಎಂಬುದು ಕೆಲವು ಲಕ್ಷ್ಯದಲ್ಲಿರಲಾರದು ಎಂಬರ್ಥದಲ್ಲಿ ಪರ್ಯವಸಾನವಾಗಿ,

अव्यापके (शबलत्त्वे) अतिव्याप्तिवारणाय सर्वथेति सार्थकं, तदा प्रकृतेऽपि व्याप्त्येति पदसन्निधानादन्यत्र न वर्तेत इत्त्यंशस्यापि यत्किंचिदलक्ष्यावृत्तित्त्वमादाय पर्यवसानापत्त्या यत्किंचिदलक्ष्य- शशाद्यवृत्तिविषाणित्त्वादेर्गोलक्षणत्त्ववारणाय व्याप्त्येतिपदमन्यत्रेत्यत्राप्यन्वेतव्यमिति संक्षेपः।

अत्र लक्षणमिति लक्ष्यनिर्देशः, लक्ष्यमात्रव्यापको धर्म इति लक्षणोक्तिः। एवं सर्वत्रावगतव्यम्।

सकललक्ष्यवृत्तित्वमित्यत्र सकललक्ष्यवृत्तिधर्मप्रतियोगिकसदृशधर्मवत्त्वमिति; तथा च तत्तल्लक्ष्यगतप्रातिस्विकधर्म एव विवक्षितः, न त्वेकस्य सर्वगतत्वं विवक्षितं; एतेन "भिन्नाश्च भिन्नधर्माश्च पदार्था निखिला अपि,, इत्यनुव्याख्यानोदाहृतश्रुत्या।

---

ಅವ್ಯಾಪಕ ಧರ್ಮವಾದ ಹಂಡಬಂಡಬಣ್ಣ, ದಲ್ಲಿಯೂ ಅತಿವ್ಯಾಪ್ತಿ ಬರುವದಷ್ಟೆ! ಅದನ್ನು ನಿವಾರಣೆ ಮಾಡಲು ಸರ್ವಥಾ ಎಂಬ ಪದವು ಸಾರ್ಥಕವಾಗಿ ಹೇಗೆ ಸರಿಯಾದ ವ್ಯವಹಾರವಾಗುವದೋ ಹಾಗೆಯೇ ಇಲ್ಲಿಯೂ ಕೂಡಾ [ ವ್ಯಾಪ್ತ್ಯಾ ಎಂಬ ಪದ ಸನ್ನಿಧಾನದಿಂದ ] ಅನ್ಯತ್ರ ನವರ್ತತೆ ಎಂಬ ಅಂಶಕ್ಕೆ, ಕೆಲವೊಂದು ಲಕ್ಷ್ಯೇತರಗಳಲ್ಲಿಲ್ಲವಾದುದೆಂಬ ಅರ್ಥದಲ್ಲಿ ಪರ್ಯವಸಾನವಾಗಿ, ಕೆಲವೊಂದು ಲಕ್ಷ್ಯೇತರವಾದ, ಮೊಲದಲ್ಲಿಲ್ಲದ ಧರ್ಮವಾದ [ ವಿಷಾಣಿತ್ವ ] ಕೋಡು ಹೊಂದಿರುವ ಧರ್ಮವು ಆಕಳ ಲಕ್ಷಣವಾಗಬೇಕಾದ ಪ್ರಸಂಗ ಬರುವದು. ಇದನ್ನು ನಿವಾರಿಸಲು ವ್ಯಾಪ್ತ್ಯಾ ಎಂಬಪದವನ್ನು ಅನ್ಯತ್ರ ಎಂಬಲ್ಲಿಯೂ ಅನ್ವಯಿಸಬೇಕು. ಯಾಕೆಂದರೆ ಇಲ್ಲಿ ಕೂಡಾ ಸರ್ವಥಾ ಎಂಬ ಪದ ಸನ್ನಿಧಾನದಂತೆ ವ್ಯಾಪ್ತ್ಯಾ ಎಂಬ ಪದಸನ್ನಿಧಾನವಿದೆ.

ಮೇಲೆಹೇಳಿದ "ಲಕ್ಷ್ಯಮಾತ್ರ ವ್ಯಾಪಕೋಧರ್ಮಃ ಲಕ್ಷಣಂ" ಎಂಬ ವಾಕ್ಯದಲ್ಲಿ 'ಲಕ್ಷಣಂ' ಎಂಬುದೇಲಕ್ಷ್ಯವಾಗಿದೆ. 'ಲಕ್ಷ್ಯಮಾತ್ರ ವ್ಯಾಪಕೋಧರ್ಮಃ' ಅದರ ಲಕ್ಷಣವನ್ನು ಹೇಳುತ್ತದೆ.

ಇಲ್ಲಿ ಸಕಲ ಲಕ್ಷ್ಯದಲ್ಲಿರುವ ಧರ್ಮವೆಂದರೆ, ಎಲ್ಲ ಆ ಲಕ್ಷ್ಯದಲ್ಲಿರುವ ಧರ್ಮದ ಸದೃಶಧರ್ಮವೆಂದರ್ಥ. ಅಂತೂ ಆ ಆ ಲಕ್ಷ್ಯಗತವಾದ " ಪ್ರಾತಿಸ್ವಿಕ ಧರ್ಮವು " ಇಲ್ಲಿ ವಿವಕ್ಷಿತವಾಗಿದೆಯೇ ಹೊರತು, ಒಂದು ಧರ್ಮವು ಎಲ್ಲ ಲಕ್ಷ್ಯಗಳಲ್ಲಿದೆ ಎಂದು ವಿವಕ್ಷಿತವಾಗಿಲ್ಲ. ಶ್ರೀಮದಾಚಾರ್ಯರು ತಮ್ಮ " ಅನುವ್ಯಾಖ್ಯಾನ " ಗ್ರಂಥದಲ್ಲಿ " ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾನಿಖಿಲಾ ಅಪಿ " ಎಂಬ ಶ್ರುತಿಯನ್ನು ಉದಾ-

सिद्धान्ते धर्माणां प्रति व्यक्तिभेदांगीकारात् कथं सास्नादित्त्वस्यैकस्यैव सकललक्ष्यवृत्तित्वरूपलक्ष्यव्यापकत्वमित्त्यादिदूषणं परास्तम् ।

सल्लक्षणं द्विविधम्–(१) यावल्लक्ष्यभावि )२) अयावल्लक्ष्यभावीति; तत्राद्यं-सास्नादिमान् गौरिति । द्वितीयं-भोगायतनंशरीरं । तत्राद्यमेवोत्पाद्यं, तस्यैव सार्वत्रिकव्यवहारोपयोगित्वादिति तदेवात्रोच्यते ।

**इति लक्षणस्वरूपनिरूपणम् ।**

---

**अथ अलक्षणस्वरूपकथनम् ।**

२ सकललक्ष्यवृत्तित्वे सति लक्ष्येतरावृत्तित्वाभावरूपो धर्मोऽलक्षणः तत् त्रिविधम्– (१) असंभवि (२) अव्यापकं (३) अतिव्यापकंचेति

(१) यल्लक्ष्ये सर्वथा न वर्तते तदसंभवि; तथा च

---

ಹರಿಸಿ, ಪ್ರತಿವ್ಯಕ್ತಿಯಲ್ಲಿಯ ಧರ್ಮವು ಭಿನ್ನ ಭಿನ್ನವಾದುದೆಂದು ಸಿದ್ಧಾಂತ ಮಾಡಿದ್ದಾರೆ. ಹೀಗೆ ಸಿದ್ಧಾಂತವಿರುವಾಗ, ಒಂದು ಆಕಳಿನಲ್ಲಿರುವ ಸಾಸ್ನಾದಿಮತ್ತ್ವ ಧರ್ಮವು [ ಗಂಗೆದೊಗಲು ] ಎಲ್ಲ ಲಕ್ಷ್ಯ ಆಕಳುಗಳಲ್ಲಿ ವ್ಯಾಪಕವಾಗಿ ಹೇಗೆ ಇರಲು ಸಾಧ್ಯವೆಂಬೀ-ದೂಷಣವು ನಿರಸ್ತವಾಯಿತು.

ಸಲ್ಲಕ್ಷಣವು ಎರಡು ಪ್ರಕಾರ –[ ೧ ] ಲಕ್ಷ್ಯವಿರುವವರೆಗೆ ಇರುವ ಧರ್ಮವು [ ೨ ] ಕೆಲವು ಕಾಲ ಲಕ್ಷ್ಯದಲ್ಲಿರುವ ಧರ್ಮವು „ ಗಂಗೆದೊಗಲುಳ್ಳ ಪ್ರಾಣಿಯು ಆಕಳು " ಈ ಲಕ್ಷಣವು ಮೊದಲನೆಯದಕ್ಕೆ ಉದಾಹರಣೆಯು. „ ಭೋಗಕ್ಕೆ ಆಶ್ರಯ-ವಾದುದು ಶರೀರವು " ಈ ಲಕ್ಷಣವು ಎರಡನೆಯ ಪ್ರಕಾರಕ್ಕೆ ಉದಾಹರಣೆ ಇವುಗಳಲ್ಲಿ ಮೊದಲನೆಯ ಪ್ರಕಾರವೇ ಎಲ್ಲ ಕಡೆಗಳಲ್ಲಿ ವ್ಯವಹರಿಸಲ್ಪಡಲು ಯೋಗ್ಯವಾದುದರಿಂದ ಅ-ದನ್ನೇ ಇಲ್ಲಿ ಹೇಳಲಾಗುತ್ತದೆ.

**ಅಲಕ್ಷಣ ಸ್ವರೂಪಕಥನವು**

(ಅಲಕ್ಷಣದ ಲಕ್ಷಣವು:— ' ಸಕಲ ಲಕ್ಷ್ಯಗಳಲ್ಲಿದ್ದು , ಸಕಲ ಲಕ್ಷ್ಯೇತರಗಳಲ್ಲಿ ಇಲ್ಲ-ದಿರುವ ಧರ್ಮದ ಅಭಾವರೂಪ ಧರ್ಮವೇ ಅಲಕ್ಷಣವು. ಇದು ಮೂರು ಪ್ರಕಾರವಿದೆ ( ೧ ) ಅಸಂಭವಿಯು [ ೨ ] ಅವ್ಯಾಪಕವು [ ೩ ] ಅತಿವ್ಯಾಪಕವು

[೧] ಯಾವ ಲಕ್ಷ್ಯದಲ್ಲಿ ಸರ್ವಥಾ ಇರುವದಿಲ್ಲವೋ ಅದು ಅಸಂಭವಿಯು, ಉದಾಹರಣೆ–:

यावल्लक्ष्यवृत्तित्वाभावो असंभविनः लक्षणं, यथा गोरेकशफत्वं, गोरेकशफत्वं लक्षणमित्यंगीकारे सर्वेषु गोषु तदभावादेकशफत्वं लक्षणमसंभवीति ।

(२) लक्ष्यैकदेशवृत्तित्वे सति लक्ष्यैकदेशावृत्तित्वमव्यापकस्य लक्षणं, यथा गोः शबलत्वं लक्षणमित्यंगीकारे शबलत्वस्य लक्ष्यैकदेश-शबलगवि वर्तमानत्वेन लक्ष्यैकदेशावृत्तित्वेन च तल्लक्षणमव्यायकं भवति ।

यल्लक्ष्यादन्यत्रापि वर्तते तदतिव्यापकं, तथा च सर्वलक्ष्यवृत्तित्वे सति अलक्ष्यवृत्तित्वमतिव्यपकस्य लक्षणं, गोः शृंगित्वे लक्षणसमन्वयः, यथा सकललक्ष्यं गौः, तत्र शृंगित्वमस्ति, तथा अलक्ष्यं महिष्यादि, तत्रापि शृंगित्वं वर्तत इति, गोः शृंगित्वं लक्षणमित्यंगीकारे लक्षणमतिव्यापकं भवति ।

दलकृत्यं तु--(१) प्रथमलक्षणे लक्ष्यावृत्तित्वमित्युक्ते शबलत्वेऽतिव्याप्तिः,

---

' ಆಕಳು ಒಂದು ಗೊರಸುಳ್ಳ ಪ್ರಾಣಿ, ಎಂದು ಲಕ್ಷಣವನ್ನು ಅಂಗೀಕಾರ ಮಾಡಿದಲ್ಲಿ, ಯಾವ ಆಕಳಿನಲ್ಲಿಯೂ ಈ ಧರ್ಮವಿಲ್ಲದ್ದರಿಂದ. ಇದು ಅಸಂಭವಿರೂಪ ಅಲಕ್ಷಣವಾಗುವದು.

೨ ] ಯಾವ ಧರ್ಮವು ಲಕ್ಷ್ಯದ ಕೆಲಭಾಗದಲ್ಲಿದ್ದು ಕೆಲಭಾಗದಲ್ಲಿ ಇಲ್ಲದೇ ಇರುವದೋ ಅದು ಅವ್ಯಾಪಕವು. ಉದಾಹರಣೆಗೆ– „ ಆಕಳು ಹಂಡಬಂಡಬಣ್ಣದ ಪ್ರಾಣಿ „ ಎಂದು ಲಕ್ಷಣ ಹೇಳಿದರೆ, ಹಂಡಬಂಡ ಬಣ್ಣವು ಕೆಲವು ಆಕಳುಗಳಲ್ಲಿ ಮಾತ್ರವಿದ್ದು ಉಳಿದ ಆಕಳುಗಳಲ್ಲಿಲ್ಲದಿರುವ ಧರ್ಮವಾದ್ದರಿಂದ, ಇದು ಅವ್ಯಾಪಕರೂಪ ಅಲಕ್ಷಣವಾಗುವದು.

೩ ] ಯಾವ ಧರ್ಮವು ಲಕ್ಷ್ಯವಲ್ಲಿದ್ದು, ಲಕ್ಷ್ಯೇತರ ವಸ್ತುಗಳಲ್ಲಿಯೂ ಇರುವುದೋ ಅದು ಅತಿವ್ಯಾಪಕವು, ಉದಾಹರಣೆ— ' ಆಕಳು ಕೋಡುಳ್ಳ ಪ್ರಾಣಿ ' ಎಂದು ಲಕ್ಷಣ ಹೇಳಿದರೆ, ಎಲ್ಲ ಲಕ್ಷ್ಯವಾದ ಆಕಳುಗಳಲ್ಲಿ ಕೋಡು ಇರುವದಲ್ಲದೇ ಲಕ್ಷ್ಯೇತರಗಳಾದ ಎಮ್ಮೆ ಮೊದಲಾದ ಪ್ರಾಣಿಗಳಲ್ಲಿಯೂ ಇರುವದರಿಂದ ಅತಿವ್ಯಾಪಕರೂಪ ಅಲಕ್ಷಣವಾಗುವದು.)

ಮೂರು ಅಲಕ್ಷಣಗಳ ದಲ ಕೃತ್ಯವು—[ ೧ ] ಮೊದಲನೆಯದಾದ ಅಸಂಭವಿಯ ಲಕ್ಷಣದಲ್ಲಿ ಸರ್ವಥಾ ಪದ ಇಡಲಾರದೇ , ಲಕ್ಷ್ಯದಲ್ಲಿಲ್ಲದಿರುವ ಧರ್ಮ' ಎಂದಿಷ್ಟೇ ಹೇಳಿದರೆ [ ಯತ್ ಕಿಂಚಿತ್ ] ಕೆಲವೊಂದು ಆಕಳುಗಳಲ್ಲಿಲ್ಲದೇ ಇರುವ ಹಂಡಬಂಡಬಣ್ಣವೆಂಬ ಧರ್ಮದಲ್ಲಿ ಈ ಲಕ್ಷಣ ಬಂದು ಲಕ್ಷಣವು ಅತಿವ್ಯಾಪ್ತವಾಗುವದು.

तस्यपि यत्किचिल्लक्ष्यावृत्तित्वात् अतः सर्वथेति विशेषणं देयं यावल्लक्ष्यावृत्तित्वमिति तदर्थः, शबलत्वे यत्किचिल्लक्ष्यावृत्तित्वेऽपि यावल्लक्ष्यावृत्तित्वाभावान्नातिव्याप्तिरिति सर्वं सार्थकम् ।

(२) अव्यापकलक्षणे---लक्ष्यैकदेशावृत्तित्वमित्युक्त असंभविन्येकशफत्वादौ लक्ष्यैकदेशावृत्तित्वसद्भावादतिव्याप्तिस्तद्वारणाय लक्ष्यैकदेशवृत्तित्वं देयं, तत्र लक्ष्यैकदेशवृत्तित्वाभावान्नातिव्याप्तिः, लक्ष्यैकदेशवृत्तित्वमित्युक्ते विषाणित्वादावतिव्याप्तिस्तद्वारणाय लक्ष्यैकदेशावृत्तित्वमिति ज्ञेयम् ।

(३) अतिव्यापकलक्षणे लक्ष्यवृत्तित्वमित्युक्ते, सास्नादिमत्त्वे अतिव्याप्तिः,

---

ಇದನ್ನು ಪರಿಹರಿಸಲು ಸರ್ವಥಾ ಎಂಬವಿಶೇಷಣವನ್ನು ಕೊಡಬೇಕು. ಯಾವಲಕ್ಷ್ಯದಲ್ಲಿಯೂ ಇರಲಾರದ ಧರ್ಮವೆಂದರ್ಥ, ಈಗ ಹಂಡಬಂಡಬಣ್ಣವು ( ಯಾವಲ್ಲಕ್ಷ್ಯಾವೃತ್ತಿ ಧರ್ಮ ) ಯಾವತ್ತೂ ಲಕ್ಷ್ಯದಲ್ಲಿ ಇರಲಾರದ ಧರ್ಮವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರಲಾರದು.

೨) ಅವ್ಯಾಪಕ ಲಕ್ಷಣದಲ್ಲಿ " ಲಕ್ಷ್ಯೈಕ ದೇಶ ಅವೃತ್ತಿತ್ವಂ " ಎಂದಿಷ್ಟೇ ಲಕ್ಷಣ ಹೇಳಿದರೆ ಅಸಂಭವೀರೂಪ ಅಲಕ್ಷಣವಾದ ' ಒಂದು ಗೊರಸುಳ್ಳ, ಎಂಬ ಧರ್ಮದಲ್ಲಿ ಈ ಉಕ್ತದಲ ಬರುವದರಿಂದ, ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು " ಲಕ್ಷ್ಯೈಕದೇಶವೃತ್ತಿತ್ವೆ ಸತಿ " ( ಲಕ್ಷ್ಯೈಕದೇಶದಲ್ಲಿ ಇರುವದು ) ಎಂಬ ವಿಶೇಷಣ ಕೊಡಬೇಕು. ಒಂದು ಗೊರಸುಳ್ಳ ಎಂಬ ಧರ್ಮದಲ್ಲಿ ' ಲಕ್ಷ್ಯೈಕದೇಶ ವೃತ್ತಿತ್ವ ವಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. ಕೇವಲ ( ಲಕ್ಷ್ಯೈಕದೇಶ ವೃತ್ತಿತ್ವಂ ) ' ಲಕ್ಷ್ಯದ ಒಂದು ಭಾಗದಲ್ಲಿರುವ ಧರ್ಮ ' ಎಂದಿಷ್ಟನ್ನೇ ಅವ್ಯಾಪಕದ ಲಕ್ಷಣವೆಂದು ಹೇಳಿದರೆ, ಲಕ್ಷ್ಯೈಕದೇಶ ವೃತ್ತಿಯಾದ ( ವಿಷಾಣಿತ್ವ ) ಕೋಡುಳ್ಳ ಎಂಬ ಧರ್ಮದಲ್ಲಿ ಅತಿವ್ಯಾಪ್ತಿ ಬರುವದು. ಇದನು ನಿವಾರಿಸಲು " ಲಕ್ಷ್ಯೈಕದೇಶ ಅವೃತ್ತಿತ್ವಂ [ ಲಕ್ಷ್ಯದ ವಂದು ಭಾಗದಲ್ಲಿ ಇಲ್ಲದಿರುವದು ] ಎಂಬ ದಲವನ್ನು ಹಾಕಿಕೊಳ್ಳಬೇಕು ಕೋಡುಳ್ಳ ಧರ್ಮವು [ ಶೃಂಗಿತ್ವ ] ಲಕ್ಷ್ಯೈಕದೇಶ ಅವೃತಿಯಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ.

೩) ಅತಿವ್ಯಾಪಕ ಲಕ್ಷಣದಲ್ಲಿ ' ಲಕ್ಷ್ಯವೃತ್ತಿತ್ವಂ ' [ ಲಕ್ಷ್ಯದಲ್ಲಿರುವ ಧರ್ಮ ] ಎಂದು ಲಕ್ಷಣ ಹೇಳಿದರೆ, ' ಗಂಗೆದೊಗಲುಳ್ಳ ' ಎಂಬ ಧರ್ಮದಲ್ಲಿ [ ಸಾಸ್ನಾದಿ ಮತ್ವದಲ್ಲಿ ] ಉಕ್ತಲಕ್ಷಣ ಬಂದು ಅತಿವ್ಯಾಪ್ತಿ ಬರುವದು.

अलक्ष्यवृत्तित्वस्यासंभविन्येकशफत्वादौ वर्तमानत्वेनातिव्याप्तिस्त-द्वारणाय 'अपि, शब्देन लक्ष्यवृत्तित्वे सतीत्युक्तम् ।
प्रथमनिर्दिष्टमलक्षणलक्षणं तु विशिष्टाभावरूपम् ।
विशिष्टाभावस्त्रिविधः—, विशेष्याभावेन, यिशेषणाभावेन, उभयाभावेन च; तत्र शृंगित्त्वे अलक्षणे विशेष्याभावेन विशिष्टाभावः, शबलत्त्वरूपालक्षणे विशेषणाभावेन विशिष्टाभावः,

---

ಏಕೆಂದರೆ ಈ ಧರ್ಮವು ಆಕಳ ಲಕ್ಷಣವಾಗಿದೆಯೇ ಹೊರತು, ಅಲಕ್ಷಣವಾಗಿಲ್ಲ. ಈ ಅತಿವ್ಯಾಪ್ತಿ ನಿವಾರಿಸಲು ' ಅಲಕ್ಷ್ಯವೃತ್ತಿಯಾದ ಧರ್ಮ ' [ ಲಕ್ಷ್ಯಬಿಟ್ಟರೆ ಬೇರೆ ಕಡೆಗಳಲ್ಲಿರುವದು ] ಎಂದು ಹೇಳಬೇಕು. ಗಂಗೆದೊಗಲು ಅಲಕ್ಷ್ಯ ವೃತ್ತಿಯಾಗಿಲ್ಲ-ವಾದ್ದರಿಂದ ಅತಿವ್ಯಾಪ್ತಿ ಇಲ್ಲ.)

---

ಆದರೆ ಅಲಕ್ಷ್ಯ ವೃತ್ತಿಯಾದ ' ಒಂದು ಗೊರಸು ' ಎಂಬ ಧರ್ಮದಲ್ಲಿ ಈ ಲಕ್ಷಣ ಬಂದು ಅತಿವ್ಯಾಪ್ತಿಯಾಗುವದು. ' ಅಪಿ ' ಶಬ್ದದಿಂದ ಲಕ್ಷ್ಯವೃತ್ತಿಯಾಗಿದ್ದೂ ' ಎಂಬ ಅಂಶ ಹೇಳಿದಂತಾಗಿ ಏಕಶಫತ್ವದಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

ಪ್ರಥಮದಲ್ಲಿ ಹೇಳಿದ ಅಲಕ್ಷಣದ ಲಕ್ಷಣವು ವಿಶೇಷಣ ಹಾಗೂ ವಿಶೇಷ್ಯಗಳಿಂದ ಕೂಡಿದ ಅಭಾವರೂಪವಾಗಿದೆ. ಈ ವಿಶಿಷ್ಟಾಭಾವವು ಮೂರುಪ್ರಕಾರವಾಗಿವೆ. ೧] ವಿಶೇಷ್ಯಾಭಾವದಿಂದ ಬರುವ ವಿಶಿಷ್ಟಾಭಾವವು. ೨] ವಿಶೇಷಣಾಭಾವದಿಂದಬರುವ ವಿಶಿಷ್ಟಾಭಾವವು. ೩] ವಿಶೇಷಣ ಹಾಗೂ ವಿಶೇಷ್ಯ ಎರಡರ ಅಭಾವದಿಂದ ಬರುವ ವಿಶಿಷ್ಟಾಭಾವವು.

**ಉದಾಹರಣೆಗಳು**— ೧] ಶೃಂಗಿತ್ವವು ಆಕಳ ಲಕ್ಷಣವೆಂದು ಹೇಳಿದಾಗ, ಅದು ಅತಿವ್ಯಾಪಕ ರೂಪ ಅಲಕ್ಷಣವಾಗುವದು. " ಎಲ್ಲ ಲಕ್ಷ್ಯವೃತ್ತಿಯಾಗಿ, ಲಕ್ಷ್ಯಬಿಟ್ಟು, ಬೇರೆಕಡೆಗಳಲ್ಲಿ ಇಲ್ಲವಾಗಿರುವ ಧರ್ಮದ ಅಭಾವರೂಪ ಧರ್ಮ " ಎಂಬ ಅಲಕ್ಷಣದ ಲಕ್ಷಣದಲ್ಲಿ ಮೊದಲನೆಯ ದಲವಾದ ' ಎಲ್ಲ ಲಕ್ಷ್ಯವೃತ್ತಿಯಾಗಿ' ಎಂಬುದು ವಿಶೇಷಣವಾಗಿಯೂ, ' ಲಕ್ಷ್ಯೇತರಗಳಲ್ಲಿ ಇಲ್ಲವಾಗಿರುವ ' ಎಂಬ ಧರ್ಮ ವಿಶೇಷ್ಯವಾಗಿಯೂ ಇರುವದರಿಂದ, ಇಲ್ಲಿ [ ಶೃಂಗಿತ್ವ ] ವಿಶೇಷ್ಯಾಭಾವದಿಂದ ವಿಶಿಷ್ಟಾಭಾವವು ಬಂದಿದೆ.

೨] ಹಂಡಬಂಡಬಣ್ಣವನ್ನು ಆಕಳ ಲಕ್ಷಣವೆಂದು ಹೇಳಿದಾಗ, ಅದು ಅವ್ಯಾಪಕರೂಪ ಅಲಕ್ಷಣವಾಗುವದು. ಇಲ್ಲಿ ' ಸಕಲ ಲಕ್ಷ್ಯವೃತ್ತಿಯಾದ ಧರ್ಮ' ವೆಂಬ ವಿಶೇಷಣದ ಅಭಾವದಿಂದ, ವಿಶಿಷ್ಟಾಭಾವವು ಬರುವದು.

तस्यपि यत्किचिल्लक्ष्यावृत्तित्वात् अतः सर्वथेति विशेषणं देयं यावल्लक्ष्यावृत्तित्वमिति तदर्थः, शबलत्वे यत्किचिल्लक्ष्यावृत्तित्वेऽपि यावल्लक्ष्यावृत्तित्वाभावान्नातिव्याप्तिरिति सर्वं सार्थकम् ।

(२) अव्यापकलक्षणे--लक्ष्यैकदेशावृत्तित्वमित्युक्ते असंभविन्येकशफत्वादौ लक्ष्यैकदेशावृत्तित्वसद्भावादतिव्याप्तिस्तद्वारणाय लक्ष्यैकदेशवृत्तित्वं देयं, तत्र लक्ष्यैकदेशवृत्तित्वाभावान्नातिव्याप्तिः, लक्ष्यैकदेशवृत्तित्वमित्युक्ते विषाणित्वादावतिव्याप्तिस्तद्वारणाय लक्ष्यैकदेशावृत्तित्वमिति ज्ञेयम् ।

(३) अतिव्यापकलक्षणे लक्ष्यवृत्तित्वमित्युक्ते, सास्नादिमत्त्वे अतिव्याप्तिः,

---

ಇದನ್ನು ಪರಿಹರಿಸಲು ಸರ್ವಥಾ ಎಂಬವಿಶೇಷಣವನ್ನು ಕೊಡಬೇಕು. ಯಾವಲಕ್ಷ್ಯದಲ್ಲಿಯೂ ಇರಲಾರದ ಧರ್ಮವೆಂದರ್ಥ, ಈಗ ಹಂಡಬಂಡಬಣ್ಣವು ( ಯಾವಲ್ಲಕ್ಷ್ಯಾವೃತ್ತಿ ಧರ್ಮ ) ಯಾವತ್ತೂ ಲಕ್ಷ್ಯದಲ್ಲಿ ಇರಲಾರದ ಧರ್ಮವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರಲಾರದು.

೨) ಅವ್ಯಾಪಕ ಲಕ್ಷಣದಲ್ಲಿ " ಲಕ್ಷ್ಯೈಕ ದೇಶ ಅವೃತ್ತಿತ್ವಂ " ಎಂದಿಷ್ಟೇ ಲಕ್ಷಣ ಹೇಳಿದರೆ ಅಸಂಭವೀರೂಪ ಅಲಕ್ಷಣವಾದ ' ಒಂದು ಗೊರಸುಳ್ಳ, ಎಂಬ ಧರ್ಮದಲ್ಲಿ ಈ ಉಕ್ತದಲ ಬರುವದರಿಂದ, ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು " ಲಕ್ಷ್ಯೈಕದೇಶವೃತ್ತಿತ್ವೆ ಸತಿ " ( ಲಕ್ಷ್ಯೈಕದೇಶದಲ್ಲಿ ಇರುವದು ) ಎಂಬ ವಿಶೇಷಣ ಕೊಡಬೇಕು. ಒಂದು ಗೊರಸುಳ್ಳ ಎಂಬ ಧರ್ಮದಲ್ಲಿ ' ಲಕ್ಷ್ಯೈಕದೇಶ ವೃತ್ತಿತ್ವ ವಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. ಕೇವಲ ( ಲಕ್ಷ್ಯೈಕದೇಶ ವೃತ್ತಿತ್ವಂ ) ' ಲಕ್ಷ್ಯದ ಒಂದು ಭಾಗದಲ್ಲಿರುವ ಧರ್ಮ ' ಎಂದಿಷ್ಟನ್ನೇ ಅವ್ಯಾಪಕದ ಲಕ್ಷಣವೆಂದು ಹೇಳಿದರೆ, ಲಕ್ಷ್ಯೈಕದೇಶ ವೃತ್ತಿಯಾದ ( ವಿಷಾಣಿತ್ವ ) ಕೋಡುಳ್ಳ ಎಂಬ ಧರ್ಮದಲ್ಲಿ ಅತಿವ್ಯಾಪ್ತಿ ಬರುವದು. ಇದನು ನಿವಾರಿಸಲು " ಲಕ್ಷ್ಯೈಕದೇಶ ಅವೃತ್ತಿತ್ವಂ [ ಲಕ್ಷ್ಯದ ವಂದು ಭಾಗದಲ್ಲಿ ಇಲ್ಲದಿರುವದು ] ಎಂಬ ದಲವನ್ನು ಹಾಕಿಕೊಳ್ಳಬೇಕು ಕೋಡುಳ್ಳ ಧರ್ಮವು [ ಶೃಂಗಿತ್ವ ] ಲಕ್ಷ್ಯೈಕದೇಶ ಅವೃತಿಯಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ.

೩) ಅತಿವ್ಯಾಪಕ ಲಕ್ಷಣದಲ್ಲಿ ' ಲಕ್ಷ್ಯವೃತ್ತಿತ್ವಂ ' [ ಲಕ್ಷ್ಯದಲ್ಲಿರುವ ಧರ್ಮ ] ಎಂದು ಲಕ್ಷಣ ಹೇಳಿದರೆ, ' ಗಂಗೆದೊಗಲುಳ್ಳ ' ಎಂಬ ಧರ್ಮದಲ್ಲಿ [ ಸಾಸ್ನಾದಿ ಮತ್ವದಲ್ಲಿ ] ಉಕ್ತಲಕ್ಷಣ ಬಂದು ಅತಿವ್ಯಾಪ್ತಿ ಬರುವದು.

अलक्ष्यवृत्तित्वस्यासंभविन्येकशफत्वादौ वर्तमानत्त्वेनातिव्याप्तिस्त-द्वारणाय 'अपि, शब्देन लक्ष्यवृत्तित्वे सतीत्युक्तम् ।
प्रथमनिर्दिष्टमलक्षणलक्षणं तु विशिष्टाभावरूपम् ।
विशिष्टाभावस्त्रिविधः-, विशेष्याभावेन, यिशेषणाभावेन, उभयाभावेन च; तत्र शृंगित्त्वे अलक्षणे विशेष्याभावेन विशिष्टाभावः, शबलत्त्वरूपालक्षणे विशेषणाभावेन विशिष्टाभावः,

---

ಏಕೆಂದರೆ ಈ ಧರ್ಮವು ಆಕಳ ಲಕ್ಷಣವಾಗಿದೆಯೇ ಹೊರತು, ಅಲಕ್ಷಣವಾಗಿಲ್ಲ. ಈ ಅತಿವ್ಯಾಪ್ತಿ ನಿವಾರಿಸಲು ' ಅಲಕ್ಷ್ಯವೃತ್ತಿಯಾದ ಧರ್ಮ ' [ ಲಕ್ಷ್ಯಬಿಟ್ಟರೆ ಬೇರೆ ಕಡೆಗಳಲ್ಲಿರುವದು ] ಎಂದು ಹೇಳಬೇಕು. ಗಂಗೆದೊಗಲು ಅಲಕ್ಷ್ಯ ವೃತ್ತಿಯಾಗಿಲ್ಲ-ವಾದ್ದರಿಂದ ಅತಿವ್ಯಾಪ್ತಿ ಇಲ್ಲ.)

---

ಆದರೆ ಅಲಕ್ಷ್ಯ ವೃತ್ತಿಯಾದ ' ಒಂದು ಗೊರಸು ' ಎಂಬ ಧರ್ಮದಲ್ಲಿ ಈ ಲಕ್ಷಣ ಬಂದು ಅತಿವ್ಯಾಪ್ತಿಯಾಗುವದು. ' ಅಪಿ ' ಶಬ್ದದಿಂದ ಲಕ್ಷ್ಯವೃತ್ತಿಯಾಗಿದ್ದೂ ' ಎಂಬ ಅಂಶ ಹೇಳಿದಂತಾಗಿ ಏಕಶಫತ್ವದಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

ಪ್ರಥಮದಲ್ಲಿ ಹೇಳಿದ ಅಲಕ್ಷಣದ ಲಕ್ಷಣವು ವಿಶೇಷಣ ಹಾಗೂ ವಿಶೇಷ್ಯಗಳಿಂದ ಕೂಡಿದ ಅಭಾವರೂಪವಾಗಿದೆ. ಈ ವಿಶಿಷ್ಟಾಭಾವವು ಮೂರುಪ್ರಕಾರವಾಗಿವೆ. ೧] ವಿಶೇಷ್ಯಾಭಾವದಿಂದ ಬರುವ ವಿಶಿಷ್ಟಾಭಾವವು. ೨] ವಿಶೇಷಣಾಭಾವದಿಂದಬರುವ ವಿಶಿಷ್ಟಾಭಾವವು. ೩] ವಿಶೇಷಣ ಹಾಗೂ ವಿಶೇಷ್ಯ ಎರಡರ ಅಭಾವದಿಂದ ಬರುವ ವಿಶಿಷ್ಟಾಭಾವವು.

**ಉದಾಹರಣೆಗಳು**– ೧] ಶೃಂಗಿತ್ವವು ಆಕಳ ಲಕ್ಷಣವೆಂದು ಹೇಳಿದಾಗ, ಅದು ಅತಿವ್ಯಾಪಕ ರೂಪ ಅಲಕ್ಷಣವಾಗುವದು. " ಎಲ್ಲ ಲಕ್ಷ್ಯವೃತ್ತಿಯಾಗಿ, ಲಕ್ಷ್ಯಬಿಟ್ಟು ಬೇರೆಕಡೆಗಳಲ್ಲಿ ಇಲ್ಲವಾಗಿರುವ ಧರ್ಮದ ಅಭಾವರೂಪ ಧರ್ಮ " ಎಂಬ ಅಲಕ್ಷಣದ ಲಕ್ಷಣದಲ್ಲಿ ಮೊದಲನೆಯ ದಲವಾದ ' ಎಲ್ಲ ಲಕ್ಷ್ಯವೃತ್ತಿಯಾಗಿ' ಎಂಬುದು ವಿಶೇಷಣವಾಗಿಯೂ, ' ಲಕ್ಷ್ಯೇತರಗಳಲ್ಲಿ ಇಲ್ಲವಾಗಿರುವ ' ಎಂಬ ಧರ್ಮ ವಿಶೇಷ್ಯವಾಗಿಯೂ ಇರುವದರಿಂದ, ಇಲ್ಲಿ [ ಶೃಂಗಿತ್ವ ] ವಿಶೇಷ್ಯಾಭಾವದಿಂದ ವಿಶಿಷ್ಟಾಭಾವವು ಬಂದಿದೆ.

೨] ಹಂಡಬಂಡಬಣ್ಣವನ್ನು ಆಕಳ ಲಕ್ಷಣವೆಂದು ಹೇಳಿದಾಗ, ಅದು ಅವ್ಯಾಪಕರೂಪ ಅಲಕ್ಷಣವಾಗುವದು. ಇಲ್ಲಿ ' ಸಕಲ ಲಕ್ಷ್ಯವೃತ್ತಿಯಾದ ಧರ್ಮ' ವೆಂಬ ವಿಶೇಷಣದ ಅಭಾವದಿಂದ, ವಿಶಿಷ್ಟಾಭಾವವು ಬರುವದು.

एकशफत्वरूपालक्षणे उभयाभावेन च विशिष्टाभावो ज्ञेयः, तथा च एतद्दोषत्रयवर्जितमेव सल्लक्षणमित्त्युक्तं भवति ।

ननु अव्यापकस्य कथं दुष्टत्वं? तस्यापि लक्ष्ये शबलगवि वर्तमानत्वात् इति चेदुच्यते-अव्याप्तेः लक्षणदोषवादस्तु सर्वस्यापि लिलक्षयिषितत्त्वेन द्रष्टव्यः, तथा हि यदा गोविशेषस्य लिलक्षयिषितत्त्वं तदा शबलत्त्वमपि गोः लक्षणं भवत्त्येव, गोविशेष एव व्यावृत्त्यादेर्बुभुत्सितत्त्वेन तस्यापि स्वाश्रये गवि व्यावृत्त्यादिधीहेतुत्त्वात् । यदा तु गोमात्रस्य लिलक्षयिषितत्त्वं तदा अलक्षणमेव ; गोमात्रे व्यावृत्त्यादेः बुभुत्सितत्त्वेनासार्वत्रिकस्य तस्य तदहेतुत्त्वादिति ज्ञेयम् ।

॥ इति अलक्षणस्वरूपकथनम् ॥

---

३] ವಿಶೇಷಣ ಹಾಗೂ ವಿಶೇಷ್ಯ ಎರಡರ ಅಭಾವದಿಂದಾಗುವ ವಿಶಿಷ್ಟಾಭಾವವು, ಆಕಳ ಒಂದುಗೊರಸು ಹೊಂದಿರುವ ಪ್ರಾಣಿ " ಎಂಬ ಅಸಂಭವಿರೂಪ ಅಲಕ್ಷಣದಲ್ಲಿ ಬರುವದು. [ ಏಕಶಫತ್ವ ] ' ಒಂದುಗೊರಸು ' ಎಂಬ ಧರ್ಮದಲ್ಲಿ " ಸಕಲ ಲಕ್ಷ್ಯವೃತ್ತಿತ್ವ " ಎಂಬ ವಿಶೇಷಣದ ಅಭಾವವೂ " ಲಕ್ಷ್ಯೇತರ ಅವೃತ್ತಿತ್ವ " ಎಂಬ ವಿಶೇಷ್ಯದ ಅಭಾವವೂ ಇದೆ. ಹೀಗೆ ಎರಡೂ ಧರ್ಮಗಳ ಅಭಾವದಿಂದ ಕೂಡಿದ. ವಿಶಿಷ್ಟಾಭಾವರೂಪ ಅಲಕ್ಷಣವೆಂದು ತಿಳಿಯಬೇಕು. ಅಂತೂ ಈ ಮೂರು ದೋಷಗಳಿಂದ ರಹಿತವಾದದ್ದೇ ಸಲ್ಲಕ್ಷಣವು,

ಶಂಕಾ-: ಅವ್ಯಾಪಕ ಧರ್ಮವಾದ « ಹಂಡಬಂಡ ಬಣ್ಣ » ವು ಲಕ್ಷ್ಯವಾದ ಹಂಡಬಂಡ ಆಕಳಿನಲ್ಲಿರುವದರಿಂದ, ಅವ್ಯಾಪಕವು ದೋಷವಾಗುವದು ಹೇಗೆ ಎಂಬ ಸಂಶಯವು ಬಂದರೆ, ಹೀಗೆ ತಿಳಿಯಬೇಕು.

ಲಕ್ಷ್ಯವಾದವುಗಳೆಲ್ಲವನ್ನು ಸಾಮಾನ್ಯವಾಗಿಟ್ಟುಕೊಂಡಾಗ ಮಾತ್ರ ಅವ್ಯಾಪ್ತಿಯು ಲಕ್ಷಣ ದೋಷವಾಗುವದು. ವಿಶೇಷವಾದ ಒಂದನ್ನೇ ಇತರ ಸಜಾತೀಯ ವಿಜಾತೀಯವಾದವುಗಳಿಂದ ಪ್ರತ್ಯೇಕಿಸಿ ಹೇಳಬೇಕಾದಾಗ, ಅದು ದೋಷವಾಗುವದಿಲ್ಲ. ಏಕೆಂದರೆ ಗೋವಿಶೇಷದಲ್ಲಿ ಇತರ ವ್ಯಾವೃತ್ತಿಜ್ಞಾನದ ಅಪೇಕ್ಷೆ ಇರುವದರಿಂದ ಅಲ್ಲಿ ದೋಷವಿಲ್ಲ. ಆದರೆ ಎಲ್ಲ ಆಕಳಗಳಿಗೂ ಅನ್ವಯಿಸುವಂತೆ ಲಕ್ಷಣ ಹೇಳಬೇಕೆಂಬ ವಿವಕ್ಷೆ ಇದ್ದಾಗ ' ಹಂಡಬಂಡಬಣ್ಣ ' ಧರ್ಮವು ಅವ್ಯಾಪಕ ರೂಪ ಅಲಕ್ಷಣವಾಗಿ ದೋಷವಾಗುವದು. ಏಕೆಂದರೆ, ಎಲ್ಲ ಆಕಳುಗಳಿಗೂ ಅನ್ವಯಿಸುವ ಧರ್ಮವನ್ನು ಇದು ಹೇಳುವದಿಲ್ಲ.

(३) लक्ष्यं नाम– अन्यतो व्यावर्तनीयं वा शब्दव्यवहारविशेष्यं वा; यथा गोः सास्नादिमत्त्वं लक्षणमित्यत्र गौः लक्ष्यं ज्ञेयम् । अत्र साक्षादन्यतो यद् व्यावर्तनीयं तल्लक्ष्यमित्येकम् लक्षणम् ।
यावति चैकः शब्दव्युत्पादनीयः (वाचकत्वेन बोधनीयः) तदुच्यते लक्ष्यमित्यपरं, आद्यलक्षणे सजतीयविजतीययोरपि लक्ष्यव्यावर्तनीयत्वेनातिव्याप्तिवारणाय साक्षादिति विशेषणं देयं, सजातीयविजातीययोः लक्ष्यस्वरूपावधारणद्वारा लक्ष्यव्यावर्तनीयत्वेऽपि साक्षादभावात् तत्र नातिव्याप्तिः ।

॥ इतिलक्ष्यस्वरूपकथनम् ॥

---

३] (ಲಕ್ಷ್ಯವೆಂದರೇನು ? ಇತರ ವಸ್ತುಗಳಿಂದ ಭಿನ್ನವಾಗಿ ತಿಳಿಯಲ್ಪಡತಕ್ಕ ವಸ್ತು ಅಥವಾ ಶಬ್ದವ್ಯವಹಾರಕ್ಕೆ ವಿಷಯುವಾದುದು ಲಕ್ಷ್ಯವು.) ಉದಾಹರಣೆಗೆ – 'ಆಕಳು ಗಂಗೆದೊಗಲುಳ್ಳ ಪ್ರಾಣಿಯು' ಎಂಬಲ್ಲಿ ಆಕಳು ಲಕ್ಷ್ಯವೆಂದು ತಿಳಿಯಬೇಕು ಇಲ್ಲಿ ಲಕ್ಷ್ಯಕ್ಕೆ ಎರಡು ಲಕ್ಷಣ ಹೇಳಿದಂತಾಯಿತು. ಮೊದಲನೆಯದು, 'ಯಾವುದು ಸಾಕ್ಷಾತ್ತಾಗಿ ಸಜಾತೀಯ ವಿಜಾತೀಯ ವಸ್ತುಗಳಿಂದ ಪ್ರತ್ಯೇಕಿಸಲ್ಪಡುವದೋ ಅದು ಲಕ್ಷ್ಯವು' ಹಾಗೂ ಯಾವ ವಸ್ತುವಿನ ವಿಷಯದಲ್ಲಿ ಶಬ್ದವು ವಾಚಾಕವಾಗಿ ಅರ್ಥಬೋಧಕವಾಗುವದೋ ಅದು ಲಕ್ಷ್ಯವು' ಎಂಬುದು ಎರಡನೆಯ ಲಕ್ಷಣವು.

ಮೊದಲನೆಯ ಲಕ್ಷಣದಲ್ಲಿ, ಸಜಾತೀಯ ವಿಜಾತೀಯವಾದ ವಸ್ತುಗಳಲ್ಲಿಯೂ ಲಕ್ಷ್ಯವ್ಯಾವರ್ತನೀಯತ್ವ [ ಪ್ರತ್ಯೇಕಿಸುವ ಧರ್ಮ ] ಇದ್ದುದರಿಂದ, ಅವುಗಳಲ್ಲಿ ಅತಿವ್ಯಾಪ್ತಿ ಬರುವದು, ಇದನ್ನು ಪರಿಹರಿಸಲು 'ಸಾಕ್ಷಾತ್ತಾಗಿ' ಎಂಬ ವಿಶೇಷಣ ಕೊಡಬೇಕು. ಸಜಾತೀಯ ವಿಜಾತೀಯ ವಸ್ತುಗಳು [ ಲಕ್ಷ್ಯಜ್ಞಾನದ್ವಾರಾ ] ಲಕ್ಷ್ಯದಿಂದ ವ್ಯಾವರ್ತನೀಯವಾಗಿದ್ದರೂ, ಸಾಕ್ಷಾತ್ತಾಗಿ [ ಅಂದರೆ ಲಕ್ಷ್ಯವ್ಯಾವೃತ್ತಿ ಮಾಡದೆಯೇ ] ಅನ್ಯ ವ್ಯಾವರ್ತನೀಯವಾಗಿಲ್ಲವಾದ್ದರಿಂದ, ಅತಿವ್ಯಾಪ್ತಿ ದೋಷ ಬರಲಾರದು. [ ಇದರ ಅಭಿಪ್ರಾಯ – ಸಾಸ್ನಾದಿಮತ್ವ ಲಕ್ಷಣದಿಂದ ಆಕಳು ಸಜಾತೀಯ ವಸ್ತುಗಳಾದ ಅಶ್ವಾದಿಗಳಿಂದ, ವಿಜಾತೀಯ ವಸ್ತುಗಳಾದ ಘಟ ಮೊದಲಾದವುಗಳಿಂದ ವ್ಯಾವರ್ತಿತ [ ಭಿನ್ನ ] ವಾಗಿದೆ. [ ಎಂದರೆ ಸಜಾತೀಯ ವಿಜಾತೀಯ ವಸ್ತುಗಳ ದೆಶೆಯಿಂದ ಆಕಳು ಭಿನ್ನವು ಎಂಬ ಭೇದಜ್ಞಾನಕ್ಕೆ ಗೋವು ವಿಶೇಷ್ಯವಾಗಿದೆ ] ಅದರಂತೆ ಸಜಾತೀಯ ವಿಜಾತಿಗಳೂ ಗೋವಿನಿಂದ ಭಿನ್ನವಾಗಿದೆ. ಕಾರಣ ಸಜಾತೀಯ ವಿಜಾತೀಯ ವಸ್ತುಗಳಲ್ಲಿ [ಅನ್ಯತಃ] ಗೋವಿನಿಂದ ವ್ಯಾವರ್ತನೀಯತ್ವ ಲಕ್ಷಣ ಬರುವದರಿಂದ ಅವುಗಳಲ್ಲಿ ಅತಿವ್ಯಾಪ್ತಿ

(४) सजातीयविजातीयव्यावृत्ततया लक्ष्यावधारणं लक्षणज्ञानस्य प्रयोजनं, अभिलपनरूपशब्दव्यवहारो वा, तथा हि--(१) अस्मिन् ग्रामे देवदत्तस्य गृहमिति वार्तां श्रुतवतो हि तद्ग्रामस्थेषु सर्वेष्वपि गृहेषु तद् वा देवदत्तगृहमिति इदं वा देवदत्तगृहं इति संदेहरूपा बुद्धिः प्रसक्ता, तल्लक्षणज्ञाने सति इदमेव देवदत्तगृहं नान्यदिति निश्चयात्मकं ज्ञानं जायते, इदमेव लक्षणज्ञानस्य प्रयोजनम् ।

(२) सास्नादिमान् गौरिति लक्षणज्ञाने सति यं यं सास्नादिमत् पिंडं पश्यति तं तं गोशब्दवाच्यं प्रत्येति—अनुमिनोति—अयं पिंडः गोशब्दावाच्यः, सास्नादिमत्त्वात्,

---

ಬರುವದು, ಅತಿವ್ಯಾಪ್ತಿ ನಿವಾರಿಸಲು ' ಸಾಕ್ಷಾತ್ ' ಪದಕೊಡಲಾಗಿದೆ. ಪ್ರಕೃತದಲ್ಲಿ ' ಸಾಸ್ನಾದಿಮತ್ತ್ವ ' ದಿಂದ ಸಾಕ್ಷಾತ್ ವ್ಯಾವರ್ತಿತವಾಗುವದು ಆಕಳು ಹೊರತು ಸಜಾತೀಯ ವಿಜಾತೀಯಗಳು [ ಕುದುರೆ ಮೊದಲಾದವು, ಘಟ ಮೊದಲಾದವು ] ಅಲ್ಲ, ಏಕೆಂದರೆ ಸಜಾತೀಯ ವಿಜಾತೀಯಗಳು ಲಕ್ಷ್ಯವಾದ ' ಗೋವನ್ನು ' ನಿಶ್ಚಯಿಸಿ, ತದ್ವಾರಾ ತಾವೂ, ( ಗೋತ್ವಕ್ಕೆ ಸಜಾತೀಯವು ಪಶುತ್ವವು, ವಿಜಾತೀಯವು ಘಟತ್ವ ಮೊದಲಾದವುಗಳೆಂದು ) ವ್ಯಾವರ್ತಿತವಾಗುತ್ತವಲ್ಲದೇ ಸಾಕ್ಷಾತ್ತಾಗಿ ಅಲ್ಲ.

---

(ಲಕ್ಷಣದ ಪ್ರಯೋಜನವು :— ಸಜಾತೀಯ ವಿಜಾತೀಯ ವಸ್ತುಗಳಿಂದ ಪ್ರತ್ಯೇಕಿಸಿ ಲಕ್ಷ್ಯವಾದ ವಸ್ತುವನ್ನು ತಿಳಿಯಪಡಿಸುವದು ಲಕ್ಷಣದ ಜ್ಞಾನದ ಪ್ರಯೋಜನವು) ಹಾಗೂ ಅಭಿಲಪನರೂಪ ಶಬ್ದವ್ಯವಹಾರವೂ ಇನ್ನೊಂದು ಪ್ರಯೋಜನವು ಆದ: ಹೇಗೆಂದರೆ—

೧] ಒಂದು ಗ್ರಾಮದಲ್ಲಿ ದೇವದತ್ತನ ಮನೆಯಿದೆ ಎಂಬ ವಾರ್ತೆಕೇಳಿದ ಮನುಷ್ಯನಿಗೆ ಅಲ್ಲಿರುವ ಮನೆಗಳಲ್ಲಿ ದೇವದತ್ತನ ಮನೆಯು ಅದೋ, ಇದೋ, ಎಂಬ ಸಂದೇಹ ಬಂದಾಗ, ಅವನ ಮನೆಯ ಲಕ್ಷಣದ ಜ್ಞಾನವಾಗಲು ಇದೇ ದೇವದತ್ತನ ಮನೆ ಎಂಬ ನಿಶ್ಚಯ ಜ್ಞಾನವುಂಟಾಗುವದು ಇದೇ ಲಕ್ಷಣ ಜ್ಞಾನದ ಪ್ರಯೋಜನವು.)

೨] ಅದರಂತೆ, ' ಗಂಗೆದೊಗಲುಳ್ಳ ಪ್ರಾಣಿ ಆಕಳು ' ಎಂಬ ಲಕ್ಷಣಜ್ಞಾನವನ್ನು ಹೊಂದಿದಾಗ ಯಾವ ಯಾವ ಗಂಗೆದೊಗಲುಳ್ಳ ಪ್ರಾಣಿಯನ್ನು ನೋಡುತ್ತಾನೆಯೋ ಅದನ್ನು ಗೋ [ ಆಕಳು ] ಎಂಬ ಶಬ್ದದಿಂದ ವಾಚ್ಯವೆಂದು ತಿಳಿಯುತ್ತಾನೆ. ಅಂದರೆ ಅನುಮಾನ ಜ್ಞಾನ ಮಾಡಿಕೊಳ್ಳುತ್ತಾನೆ— ಗಂಗೆದೊಗಲುಳ್ಳದ್ದರಿಂದ ಈ ವಸ್ತು [ಗೋ] ಆಕಳು ಶಬ್ದದಿಂದ ಕರೆಯಲ್ಪಡುತ್ತದೆ.

य एवं न, स एवं न, यथा अश्वादिरिति, व्यतिरेक्यनुमानेन जानातीति यावत् तथा च वाच्यवाचकभावसंबंधरूपशक्तिज्ञानमेव लक्षणस्य प्रयोजनं, शब्दव्यवहारस्य तत्साध्यत्वात् शब्दव्यवहारो वा इत्युक्तिः उपचारेणेति ध्येया, अत्र व्यवहारशब्दः करणभावव्युत्पत्त्यपेक्षया ज्ञानाभिलपनव्यवहारपरो ज्ञेयः ।

(३) सजातीयविजातीय इत्यत्र सजातीयत्वं नाम—लक्षतावच्छेदकसाक्षाव्द्यापकत्वं, तच्च लक्ष्यतावच्छेदकव्यापकाव्यापकत्वे सति लक्ष्यतावच्छेदकव्यापकावच्छिन्नत्वं । प्रकृते गां प्रति सजातीया अश्वादयः । तत्र लक्षणसमन्वयस्तु लक्ष्यं गोः लक्ष्यतावच्छेदकं गोत्वं तद्व्यापकं द्रव्यत्वं तदव्यापकं पशुत्वं,

---

ಯಾವದು ಗಂಗೆದೊಗಲುಳ್ಳದ್ದಲ್ಲವೋ ಅದು 'ಗೋ' ಶಬ್ದವಾಚ್ಯವಲ್ಲ. ಹೇಗೆಂದರೆ 'ಅಶ್ವ' [ ಕುದುರೆ ] ಮೊದಲಾದವುಗಳಂತೆ ಹೀಗೆ ವ್ಯತಿರೇಕ ಅನುಮಾನದಿಂದ ತಿಳಿಯುತ್ತಾನೆ. ಅದೇ ಮೇರೆಗೆ ಶಬ್ದಗಳಿಗೆ ಇರುವ ವಾಚ್ಯ-ವಾಚಕ ಸಂಬಂಧ ರೂಪವಾದ ಶಕ್ತಿಯ ಜ್ಞಾನವು ಲಕ್ಷಣದ ಪ್ರಯೋಜನವು. ಈ ಶಬ್ದ ಶಕ್ತಿಜ್ಞಾನದಿಂದಲೇ (ಶಬ್ದ ವ್ಯವಹಾರವು ಪ್ರಯೋಜನವೆಂದು) ಮೇಲೆ ಹೇಳಿದ್ದು ಔಪಚಾರಿಕ [ ಅಮುಖ್ಯವೃತ್ತಿಯಿಂದ ] ತಿಳಿಯಬೇಕು. ಇಲ್ಲಿ 'ವ್ಯವಹಾರ' ವೆಂಬ ಶಬ್ದದಿಂದ [ ವ್ಯವಹ್ರಿಯತೆ ಅನೇನ ಇತಿ ] 'ಯಾವುದರಿಂದ ವ್ಯವಹಾರವಾಗುತ್ತದೆಯೋ ಅದು ಎಂದು 'ಕರಣ' ರೂಪವಾದ ಶಬ್ದವನ್ನೂ, ಹಾಗೂ [ ವ್ಯವಹ್ರಿಯತೆ ಇತಿ 'ಯಾವದು ವ್ಯವಹಾರ ಮಾಡಲ್ಪಡುವದೋ ಅದು ' ಎಂದು ಭಾವರೂಪವಾದ ಜ್ಞಾನವನ್ನೂ ತಿಳಿಯಬೇಕು.

೩] ಸಜಾತೀಯ ವಿಜಾತೀಯ ವೆಂದರೇನು ? ಸಜಾತೀಯ ವೆಂದರೆ–ಸಕಲ ಲಕ್ಷ್ಯಗಳಿಗೆ ಸಾಕ್ಷಾತ್ತಾಗಿ [ ವ್ಯಾಪಕವಾದ ] ಅಧಿಕ ವೃತ್ತಿಯಾದ ಧರ್ಮವುಳ್ಳವು ಸಜಾತೀಯವೆಂದು ತಿಳಿಯಬೇಕು. ಸಾಕ್ಷಾತ್ತಾಗಿ ವ್ಯಾಪಕವೆಂದರೆ, ಸಕಲ ಲಕ್ಷ್ಯಗಳಿಗೆ ವ್ಯಾಪಕವಾದ ವಸ್ತುಗಳಿಗೆ ವ್ಯಾಪಕವಾಗದೇ ಇದ್ದು, ಸಕಲ ಲಕ್ಷ್ಯಗಳಿಗೆ ಮಾತ್ರ ವ್ಯಾಪಕವುಳ್ಳದ್ದಾಗಿದ್ದರೆ, ಅದು ಸಾಕ್ಷಾತ್ ವ್ಯಾಪಕ ಧರ್ಮವುಳ್ಳದ್ದಾಗಿರುವದು. ಪ್ರಕೃತ ಆಕಳಿಗೆ, ಕುದುರೆ ಮುಂತಾದವು ಸಜಾತೀಯಗಳು.

ಇಲ್ಲಿ ಲಕ್ಷಣ ಸಮನ್ವಯವು – ಲಕ್ಷ್ಯವು ಆಕಳು. ಗೋತ್ವವು ಲಕ್ಷ್ಯತಾವಚ್ಛೇದಕವು. [ ಎಂದರೆ ನ್ಯೂನವಾಗದೇ ಹಾಗೂ ಅಧಿಕವಾಗದೇ ಇದ್ದ ಧರ್ಮವು ] ಗೋತ್ವಕ್ಕೆ ವ್ಯಾಪಕವಾದ ಧರ್ಮವು ದ್ರವ್ಯತ್ವಧರ್ಮವು ದ್ರವ್ಯತ್ವಕ್ಕೆ ಅವ್ಯಾಪಕಧರ್ಮವು ಪಶುತ್ವವು.

अव्यापकत्वं च पशुत्वे आयातं, लक्ष्यतावच्छेदकं गोत्वं, तद्व्यापकं पशुत्वं, तव्द्यापकत्वं पशुत्वे, तव्द्यापकावच्छिन्नाः (पशुत्वावच्छिन्नाः) अश्वादयः तदवच्छिन्नत्वं अश्वादिषु वर्तत इति लक्षणसमन्वयः । तथा च अश्वादयः सजातीयाः तदनवच्छिन्नाः घटादयो विजातीयाः ज्ञेयाः ।

(४) नन्वेतावता लक्षणलक्षणमुक्तं, लक्षणं नाम किं? उच्यते-- इतरभेदानुमितिजनकं असाधारणधर्मो वा लक्षणं बोध्यम् । लक्षणस्य इतरभेदानुमितिजनकत्वं कथमिति चेदित्थम्--सास्नादिमत्त्वं गोलक्षणमित्युक्तं "गौः, इतरभिन्ना, सास्नादिमत्त्वात् इत्यनुमानेन गवि इतरभेदानुमितिरुत्पद्यते, तज्जनकत्वं सास्नादिमत्त्वरूपलक्षणे वर्तत इति लक्षणसमन्वयः ।

**। इतिलक्षणज्ञानप्रयोजनसमर्थनम्**

**।। इति लक्षणादिप्रकरणम् ।।**

---

ಈ ಪಶುತ್ವವು ದ್ರವ್ಯತ್ವಧರ್ಮಕ್ಕೆ ಅವ್ಯಾಪಕವಾಗಿದ್ದು, ಲಕ್ಷ್ಯತಾವಚ್ಛೇದಕ ಗೋತ್ವ ಧರ್ಮಕ್ಕೆ ವ್ಯಾಪಕವೂ ಆಗಿದೆ. ಈ ಪಶುತ್ವಧರ್ಮವುಳ್ಳ ಕುದುರೆ ಮೊದಲಾದವು ಸಜಾತೀಯಗಳು. ಈ ಸಜಾತೀಯ ಧರ್ಮವನ್ನು ಹೊಂದದೇ ಇರುವ ಘಟ ವೊದಲಾದವು ವಿಜಾತೀಯವಾದವುಗಳೆಂದ ತಿಳಿಯುಬೇಕು.

( ಒಟ್ಟು ಅಭಿಪ್ರಾಯ-- ಆಕಳಿಗಿಂತ ಅಧಿಕ ವೃತ್ತಿಯಾಗಿರುವ ಧರ್ಮಗಳಾದ ' ದ್ರವ್ಯ ,' ಸತ್ತಾ , ದಿಗಳಿಂದ ನ್ಯೂನವೃತ್ತಿಯಾಗಿಯೂ, ಆಕಳಿಗೆ ಅಧಿಕವೃತ್ತಿಯಾಗಿಯೂ ಇರುವ ಧರ್ಮವೆಂದರೆ ಪಶುತ್ವವಾಗುವದು. ಆದ್ದರಿಂದ ಈ ಪಶುತ್ವವು ಕುದುರೆವೊದಲಾದವುಗಳು ಸಜಾತೀಯವಾಗುವವು.

ಲಕ್ಷಣವೆಂದರೇನು?-- ಅನುಮಾನದಿಂದ ಅನ್ಯವಸ್ತುಗಳಲ್ಲಿ ಭೇದಜ್ಞಾನವನ್ನು ಹುಟ್ಟಿಸುವದೇ ಲಕ್ಷಣವು. ಅಥವಾ ವಸ್ತುವಿನ ಅಸಾಧಾರಣ ಧರ್ಮವು ಲಕ್ಷಣವು. ಅನುಮಾನದಿಂದ ಅನ್ಯ ವಸ್ತುಗಳ ಭೇದಜ್ಞಾನವನ್ನು ಹುಟ್ಟಿಸುವದು ಹೀಗೆ--: ಗಂಗೆದೊಗಲುಳ್ಳ ಧರ್ಮ ಆಕಳ ಲಕ್ಷಣವೆಂದು ಹೇಳಿದಾಗ, ಆಕಳು ಗಂಗೆದೊಗಲುಳ್ಳದ್ದರಿಂದ ಇತರ ಸಜಾತೀಯ ವಿಜಾತೀಯಗಳಿಂದ ಭಿನ್ನವಾಗಿದೆ ಎಂಬ ಅನುಮಾನದಿಂದ ಇತರ ಭೇದವಿಷಯಕಜ್ಞಾನ ( ಅನುಮಿತಿ ) ಹುಟ್ಟುತ್ತದೆ. ' ಗಂಗೆದೊಗಲುಳ್ಳದ್ದು ' ಎಂಬ ಲಕ್ಷಣವು ಈ ಜ್ಞಾನ ಹುಟ್ಟಿಸುವ ಕಾರಣ ಅಲ್ಲಿ ಲಕ್ಷಣಸಮನ್ವಯವಾಗುವದು

## (२) अथउद्देशप्रकरणम् ।

नाममात्रेण वस्तुसंकीर्तनमुद्देशः । पृथिवीति शब्दे लक्षणसमन्वयः। तत्र पृथिवीतिनाममात्रेण पृथिवीरूपवस्तुप्रतिपादकत्वात् ।

दलकृत्यं तु-**कीर्तनं नाम** शब्दः, शब्दत्वमुद्देशस्य लक्षणमित्युक्ते गंगा. घोषेऽतिव्याप्तिः, तत्र शब्दत्वस्य सत्त्वात्, तद्वारणाय **संकीर्तनमिति**, तदर्थस्तु वर्णात्मकशब्दत्वं । गंगाघोषे शब्दत्वस्य सत्त्वेऽपि वर्णात्मकशब्दत्वाभावान्नातिव्याप्तिः वर्णात्मकशब्दत्वमित्युक्ते लक्ष्ये पृथिवीतिशब्दे सत्त्वेऽपि वंध्यासुत इतिशब्दे अलक्ष्येऽपि गतं, तस्यापि वर्णात्मकशब्दत्त्वात्, अतो वस्तु इति विशेषणं देयं, तथा च वस्तुप्रतिपादकवर्णात्मकशब्दत्त्वमित्त्युक्तं भवति, वंध्यासुत इति शब्दे वस्तुप्रतिपादकवर्णात्मकशब्दत्त्वाभावान्नातिव्याप्तिः, वस्तुप्रतिपादकवर्णात्त्मकशब्दत्त्वमित्येवोक्ते

---

ಒಂದು ವಸ್ತುವನ್ನು ಹೆಸರಿನಿಂದ ( ನಾಮ ] ಮಾತ್ರ ನಿರ್ದೇಶನ ಮಾಡುವದು ಉದ್ದೇಶವು ‘ ಪ್ರಥಿವೀ’ ಶಬ್ದದಲ್ಲಿ ಈ ಲಕ್ಷಣವನ್ನು ಸಮನ್ವಯ ಮಾಡಬಹುದು. ಇಲ್ಲಿ ಉದ್ದೇಶವು ಪೃಥಿವೀ ಎಂಬ ಶಬ್ದವು. ಈ ಶಬ್ದದಿಂದ ಪೃಥಿವೀ ರೂಪ ಅರ್ಥವು ಪ್ರತಿಪಾದಿತವಾಗುವದರಿಂದ ಲಕ್ಷಣ ಸಮನ್ವಯವಾಗುವದು-

ದಲಕೃತ್ಯವು– “ ನಾಮ ಮಾತ್ರೇಣವಸ್ತು ಸಕೀರ್ತನಂ ಉದ್ದೇಶ: ” ಎಂಬಲ್ಲಿ ‘ ಕೀರ್ತನ , ವೆಂದರೆ ಶಬ್ದವೆಂದರ್ಥವಾಗುವದು. “ ಕೀರ್ತನಂ ಉದ್ದೇಶಃ ” ಎಂದಿಷ್ಟೇ ಲಕ್ಷಣ ಹೇಳಿದರೆ, ಗಂಗಾ ಪ್ರವಾಹಧ್ವನಿಯೂ, ಧ್ವನ್ಯಾತ್ಮಕ ಶಬ್ದವಾದ್ದರಿಂದ, ಆ ಧ್ವನಿಯಲ್ಲಿ ಅತಿವ್ಯಾಪ್ತಿ ಬರುವದು ಇದನ್ನು ನಿವಾರಿಸಲು ‘ ಸಂಕೀರ್ತನ , ಎಂದಿಡಲಾಗಿದೆ. ಇದರಿಂದ ‘ ವರ್ಣಾತ್ಮಕ ಶಬ್ದ . ವೆಂದರ್ಥವು. ಗಂಗಾಪ್ರವಾಹ ಧ್ವನಿಯಲ್ಲಿ ವರ್ಣಾತ್ಮಕ ಶಬ್ದವಿಲ್ಲದ್ದರಿಂದ ಅತಿವ್ಯಾಪ್ತಿ ಬರಲಾರದು. “ ವರ್ಣಾತ್ಮಕ ಶಬ್ದತ್ವವು ಉದ್ದೇಶದ ಲಕ್ಷಣ ” ವೆಂದಿಷ್ಟೇ ಇಟ್ಟುಕೊಂಡರೆ, ಲಕ್ಷ್ಯವಾದ ‘ ಪ್ರಥಿವೀ , ಶಬ್ದದಲ್ಲಿ ಈ ಲಕ್ಷಣ ಬಂದರೂ ಅಲಕ್ಷ್ಯವಾದ ‘ ಬಂಜೆಯ ಮಗ, ಎಂಬ ಶಬ್ದ. ವರ್ಣಾತ್ಮಕವಾದ್ದರಿಂದ, ಆ ಶಬ್ದದಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗಾಗಿ ‘ ವಸ್ತು , ವಿಶೇಷಣ ಕೊಡಬೇಕು. ‘ ಬಂಜೆಯ ಮಗ , ಶಬ್ದವು ವರ್ಣಾತ್ಮಕವಾದರೂ , ವಸ್ತು ಪ್ರತಿಪಾದಕವಾಗಿಲ್ಲವಾದ್ದರಿಂದ, ಅತಿವ್ಯಾಪ್ತಿ ಬರಲಾರದು. ಆದರೆ · ವಸ್ತು ಪ್ರತಿಪಾದಕ ವರ್ಣಾತ್ಮಕ ಶಬ್ದವು ಉದ್ದೇಶವು · ಎಂದು ಲಕ್ಷಣ ಹೇಳಿದರೆ,

अव्यापकत्वं च पशुत्वे आयातं, लक्ष्यतावच्छेदकं गोत्वं, तद्व्यापकं पशुत्वं, तद्व्यापकत्वं पशुत्वे, तद्व्यापकावच्छिन्नाः (पशुत्वावच्छिन्नाः) अश्वादयः तदवच्छिन्नत्वं अश्वादिषु वर्तत इति लक्षणसमन्वयः । तथा च अश्वादयः सजातीयाः तदनवच्छिन्नाः घटादयो विजातीयाः ज्ञेयाः ।

(४) नन्वेतावता लक्षणलक्षणमुक्तं, लक्षणं नाम किं? उच्यते-- इतरभेदानुमितिजनकं असाधारणधर्मो वा लक्षणं बोध्यम् । लक्षणस्य इतरभेदानुमितिजनकत्वं कथमिति चेदित्थम्--सास्नादिमत्त्वं गोर्लक्षणमित्युक्तं "गौः, इतरभिन्ना, सास्नादिमत्त्वात् इत्यनुमानेन गवि इतरभेदानुमितिरुत्पद्यते, तज्जनकत्वं सास्नादिमत्त्वरूपलक्षणे वर्तत इति लक्षणसमन्वयः ।

। इतिलक्षणज्ञानप्रयोजनसमर्थनम्

॥ इति लक्षणादिप्रकरणम् ॥

---

ಈ ಪಶುತ್ವವು ದ್ರವ್ಯತ್ವಧರ್ಮಕ್ಕೆ ಅವ್ಯಾಪಕವಾಗಿದ್ದು, ಲಕ್ಷ್ಯತಾವಚ್ಛೇದಕ ಗೋತ್ವ ಧರ್ಮಕ್ಕೆ ವ್ಯಾಪಕವೂ ಆಗಿದೆ. ಈ ಪಶುತ್ವಧರ್ಮವುಳ್ಳ ಕುದುರೆ ಮೊದಲಾದವು ಸಜಾತೀಯಗಳು. ಈ ಸಜಾತೀಯ ಧರ್ಮವನ್ನು ಹೊಂದದೇ ಇರುವ ಘಟ ವೊದಲಾದವು ವಿಜಾತೀಯವಾದವುಗಳೆಂದ ತಿಳಿಯಬೇಕು.

( ಒಟ್ಟು ಅಭಿಪ್ರಾಯ-- ಆಕಳಿಗಿಂತ ಅಧಿಕ ವೃತ್ತಿಯಾಗಿರುವ ಧರ್ಮಗಳಾದ ' ದ್ರವ್ಯ ,' ಸತ್ತಾ , ದಿಗಳಿಂದ ನ್ಯೂನವೃತ್ತಿಯಾಗಿಯೂ, ಆಕಳಿಗೆ ಅಧಿಕವೃತ್ತಿಯಾಗಿಯೂ ಇರುವ ಧರ್ಮವೆಂದರೆ ಪಶುತ್ವವಾಗುವದು. ಆದ್ದರಿಂದ ಈ ಪಶುತ್ವವುಳ್ಳ ಕುದುರೆವೊದಲಾದವುಗಳು ಸಜಾತೀಯವಾಗುವವು.

ಲಕ್ಷಣವೆಂದರೇನು?-- ಅನುಮಾನದಿಂದ ಅನ್ಯವಸ್ತುಗಳಲ್ಲಿ ಭೇದಜ್ಞಾನವನ್ನು ಹುಟ್ಟಿಸುವದೇ ಲಕ್ಷಣವು. ಅಥವಾ ವಸ್ತುವಿನ ಅಸಾಧಾರಣ ಧರ್ಮವು ಲಕ್ಷಣವು. ಅನುಮಾನದಿಂದ ಅನ್ಯ ವಸ್ತುಗಳ ಭೇದಜ್ಞಾನವನ್ನು ಹುಟ್ಟಿಸುವದು ಹೀಗೆ--: ಗಂಗೆದೊಗಲುಳ್ಳ ಧರ್ಮ ಆಕಳ ಲಕ್ಷಣವೆಂದು ಹೇಳಿದಾಗ, ಆಕಳು ಗಂಗೆದೊಗಲುಳ್ಳದ್ದರಿಂದ ಇತರ ಸಜಾತೀಯ ವಿಜಾತೀಯಗಳಿಂದ ಭಿನ್ನವಾಗಿದೆ ಎಂಬ ಅನುಮಾನದಿಂದ ಇತರ ಭೇದವಿಷಯಕಜ್ಞಾನ ( ಅನುಮಿತಿ ) ಹುಟ್ಟುತ್ತದೆ. ' ಗಂಗೆದೊಗಲುಳ್ಳದ್ದು ' ಎಂಬ ಲಕ್ಷಣವು ಈ ಜ್ಞಾನ ಹುಟ್ಟಿಸುವ ಕಾರಣ ಅಲ್ಲಿ ಲಕ್ಷಣಸಮನ್ವಯವಾಗುವದು

## (२) अथउद्देशप्रकरणम् ।

नाममात्रेण वस्तुसंकीर्तनमुद्देशः । पृथिवीति शब्दे लक्षणसमन्वयः। तत्र पृथिवीतिनाममात्रेण पृथिवीरूपवस्तुप्रतिपादकत्वात् ।

दलकृत्यं तु-**कीर्तनं नाम** शब्दः, शब्दत्वमुद्देशस्य लक्षणमित्युक्ते गंगा. घोषेऽतिव्याप्तिः, तत्र शब्दत्वस्य सत्त्वात्, तद्वारणाय **संकीर्तनमिति**, तदर्थस्तु वर्णात्मकशब्दत्वं । गंगाघोषे शब्दत्वस्य सत्त्वेऽपि वर्णात्मकशब्दत्वाभावान्नातिव्याप्तिः वर्णात्मकशब्दत्वमित्युक्ते लक्ष्ये पृथिवीतिशब्दे सत्त्वेऽपि वंध्यासुत इतिशब्दे अलक्ष्येऽपि गतं, तस्यापि वर्णात्मकशब्दत्वात्, अतो वस्तु इति विशेषणं देयं, तथा च वस्तुप्रतिपादकवर्णात्मकशब्दत्त्वमित्युक्तं भवति, वंध्यासुत इति शब्दे वस्तुप्रतिपादकवर्णात्मकशब्दत्त्वाभावान्नातिव्याप्तिः, वस्तुप्रतिपादकवर्णात्मकशब्दत्त्वमित्येवोक्ते

---

ಒಂದು ವಸ್ತುವನ್ನು ಹೆಸರಿನಿಂದ ( ನಾಮ ] ಮಾತ್ರ ನಿರ್ದೇಶನ ಮಾಡುವದು ಉದ್ದೇಶವು ' ಪೃಥಿವೀ' ಶಬ್ದದಲ್ಲಿ ಈ ಲಕ್ಷಣವನ್ನು ಸಮನ್ವಯ ಮಾಡಬಹುದು. ಇಲ್ಲಿ ಉದ್ದೇಶವು ಪೃಥಿವೀ ಎಂಬ ಶಬ್ದವು. ಈ ಶಬ್ದದಿಂದ ಪೃಥಿವೀ ರೂಪ ಅರ್ಥವು ಪ್ರತಿಪಾದಿತವಾಗುವದರಿಂದ ಲಕ್ಷಣ ಸಮನ್ವಯವಾಗುವದು.

ದಲಕೃತ್ಯವು– " ನಾಮ ಮಾತ್ರೇಣವಸ್ತು ಸಕೀರ್ತನಂ ಉದ್ದೇಶ: " ಎಂಬಲ್ಲಿ ' ಕೀರ್ತನ , ವೆಂದರೆ ಶಬ್ದವೆಂದರ್ಥವಾಗುವದು. " ಕೀರ್ತನಂ ಉದ್ದೇಶಃ " ಎಂದಿಷ್ಟೇ ಲಕ್ಷಣ ಹೇಳಿದರೆ, ಗಂಗಾ ಪ್ರವಾಹಧ್ವನಿಯೂ, ಧ್ವನ್ಯಾತ್ಮಕ ಶಬ್ದವಾದ್ದರಿಂದ, ಆ ಧ್ವನಿಯಲ್ಲಿ ಅತಿವ್ಯಾಪ್ತಿ ಬರುವದು ಇದನ್ನು ನಿವಾರಿಸಲು ' ಸಂಕೀರ್ತನ , ಎಂದಿಡಲಾಗಿದೆ. ಇದರಿಂದ ' ವರ್ಣಾತ್ಮಕ ಶಬ್ದ . ವೆಂದರ್ಥವು. ಗಂಗಾಪ್ರವಾಹ ಧ್ವನಿಯಲ್ಲಿ ವರ್ಣಾತ್ಮಕ ಶಬ್ದವಿಲ್ಲದ್ದರಿಂದ ಅತಿವ್ಯಾಪ್ತಿ ಬರಲಾರದು. " ವರ್ಣಾತ್ಮಕ ಶಬ್ದತ್ವವು ಉದ್ದೇಶದ ಲಕ್ಷಣ " ವೆಂದಿಷ್ಟೇ ಇಟ್ಟುಕೊಂಡರೆ, ಲಕ್ಷ್ಯವಾದ ' ಪೃಥಿವೀ , ಶಬ್ದದಲ್ಲಿ ಈ ಲಕ್ಷಣ ಬಂದರೂ ಅಲಕ್ಷ್ಯವಾದ ' ಬಂಜೆಯ ಮಗ, ಎಂಬ ಶಬ್ದ, ವರ್ಣಾತ್ಮಕವಾದ್ದರಿಂದ, ಆ ಶಬ್ದದಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗಾಗಿ ' ವಸ್ತು , ವಿಶೇಷಣ ಕೊಡಬೇಕು. ' ಬಂಜೆಯ ಮಗ , ಶಬ್ದವು ವರ್ಣಾತ್ಮಕವಾದರೂ , ವಸ್ತು ಪ್ರತಿಪಾದಕವಾಗಿಲ್ಲವಾದ್ದರಿಂದ, ಅತಿವ್ಯಾಪ್ತಿ ಬರಲಾರದು. ಆದರೆ ' ವಸ್ತು ಪ್ರತಿಪಾದಕ ವರ್ಣಾತ್ಮಕ ಶಬ್ದವು ಉದ್ದೇಶವು ' ಎಂದು ಲಕ್ಷಣ ಹೇಳಿದರೆ.

काकरवे गतं, काकरवस्यापि वस्तुप्रतिपादकवर्णात्मकशब्दत्वात्:, त
द्वारणाय **नाम्नेति**, गीर्वाणभाषयेत्यर्थः, तथा च गीर्वाणभाषया वस्तु
प्रतिपादकवर्णात्मकशब्दत्वमित्युक्तं भवति, काकरवस्य गीर्वाणभाषय
वस्तुप्रतिपादकवर्णात्मकशब्दत्वाभावान्नातिव्याप्तिः ।

तथापि गंधवती पृथिवीतिलक्षणवाक्ये गतं, तत्रापि गीर्वाणभाष
या वस्तुप्रतिपादकवर्णात्मकशब्दत्वस्य सत्त्वादतिव्याप्तिस्तत्परिहारा
**मात्रेणेति**, तदर्थस्तु लक्षणतया अप्रयुक्तत्वमिति, गंधवती पृथिवीति
वाक्ये लक्षणतया प्रयुक्तत्वस्यैव सत्त्वेन लक्षणतया अप्रयुक्तत्वाभावा
न्नातिव्याप्तिः, तथा च लक्षणतयाऽप्रयुक्तत्वे सति गीर्वाणभाषया व
स्तुप्रतिपादकवर्णात्मकशब्दत्वमुद्देशस्य लक्षणमित्युक्तं भवति, पृथि
वीतिशब्दे लक्षणसमन्वयः— तत्र लक्षणतयाऽप्रयुक्तत्वविशिष्टगीर्वा
णभाषया वस्तुप्रतिपादक- ( पृथिवीति वस्तुप्रतिपादक )

---

ಕಾಗೆಯ ಶಬ್ದವು [ ಕಾ, ಕಾ, ಎಂಬಲ್ಲಿರುವವು ] ಕೂಡ ವಸ್ತುಪ್ರತಿಪಾದ ವರ್ಣಾತ್ಮಕಶಬ್ದವಾದ್ದರಿಂದ, ಆ ಕಾಗೆಯ ಧ್ವನಿಯಲ್ಲಿ ಅತಿವ್ಯಾಪ್ತಿ ಬರುವದು. ಇದನ್ನ ನಿವಾರಿಸಲು [ ನಾಮ್ನಾ ] ಹೆಸರಿನಿಂದ ಎಂದರೆ ' ಸಂಸ್ಕೃತ ( ಗೀರ್ವಾಣ ) ಭಾಷೆ ಯಿಂದ ಹೇಳಿದ ವಸ್ತು ಪ್ರತಿಪಾದಕವರ್ಣಾತ್ಮಕ ಶಬ್ದವೆಂದು ಹೇಳಬೇಕು. ಕಾಗೆಯ ಶಬ್ದ ಗೀರ್ವಾಣ ಭಾಷೆಯಾಗದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದು.

ಆದರೂ [ ಗಂಧವತೀ ಪೃಥಿವೀ ) " ಪೃಥಿವಿಯು ಗಂಧವುಳ್ಳದ್ದು " ಎಂ ಲಕ್ಷಣವಾಕ್ಯವೂ ಸಂಸ್ಕೃತ ಭಾಷೆಯಿಂದ ವಸ್ತುಪ್ರತಿಪಾದಕ ವರ್ಣಾತ್ಮಕ ಶಬ್ದವುಳ್ಳದ್ದರಿಂ ಈ ಲಕ್ಷಣವಾಕ್ಯದಲ್ಲಿ ಅತಿವ್ಯಾಪ್ತಿ ಬರುವದು, ಅದನ್ನು ನಿವಾರಿಸಲು. ( ಮಾತ್ರೇಣ ' ಕೇವಲ ' ಎಂಬ ಶಬ್ದಹಾಕಲಾಗಿದೆ. ಲಕ್ಷಣವಾಕ್ಯವಾಗಿ ಪ್ರಯೋಗವಾಗದೇ ಇದ್ದ ಎಂದರ್ಥವು. ಈಗ ಲಕ್ಷಣ ವಾಕ್ಯದಲ್ಲಿ ಅತಿವ್ಯಾಪ್ತಿ ಬರಲಾರದು.

ಒಟ್ಟನಲ್ಲಿ ಲಕ್ಷಣ ವಾಕ್ಯವಾಗಿ ಪ್ರಯೋಗಿಸಲ್ಪಡದೇ ಇದ್ದು ಸಂಸ್ಕೃತಭಾಷೆಯಿಂ ವಸ್ತುಪ್ರತಿಪಾದಕವಾದ ವರ್ಣಾತ್ಮಕ ಶಬ್ದಧರ್ಮವು, ಉದ್ದೇಶದ ಲಕ್ಷಣವೆಂದು ಹೇಳಿದ ಹಾಯಿತು.

" ಪೃಥಿವೀ " ಶಬ್ದದಲ್ಲಿ ಈ ಲಕ್ಷಣ ಸಮನ್ವಯವಾಗುವದು. " ಪೃಥಿವೀ " ಶಬ್ದ ಲಕ್ಷಣವಾಕ್ಯವಾಗಿ ಪ್ರಯೋಗವಾಗಿಲ್ಲ. ಹಾಗೂ ಸಂಸ್ಕೃತಭಾಷೆಯಿಂದ ಪೃಥಿವಿಯ ಅರ್ಥವುಳ್ಳ ವಸ್ತುವನ್ನು ಪ್ರತಿಪಾದಿಸುವ

वर्णात्मकशब्दत्त्वस्य सत्त्वादिति ध्येयम् ।
परीक्षा नाम--युक्तायुक्तचिन्ता ( लक्षितस्य लक्षणं उत्पद्यते न वा इति विचारः )

## इति उद्देश प्रकरणम्

———————

## ४. अथ प्रमाण प्रकरणम् ।

(१) तत्रादौ प्रमाणसामान्य लक्षणमुच्यते--

**यथार्थं प्रमाणं**, अत्र यथाशब्दोऽनतिक्रमे वर्तते, अर्थशब्दश्च अर्यत इति व्युत्पत्त्या ज्ञेयवाची, तथा च ज्ञेयमनतिक्रम्य वर्तमानमित्युक्तं स्यात्, ज्ञेयमनतिक्रम्येत्यस्य प्रकारांतरेण विना यद्देशकालयोः यद्ज्ञेयं यादृशं तथैवेति यावत्, वर्तमानं विषयीकारि, एवं च --यथावस्थितज्ञेयविषयीकारित्वं प्रमाणसामान्यलक्षणमित्युक्तं भवति ।

---

ವರ್ಣಾತ್ಮಕ ಶಬ್ದವಾಗಿದೆ. ಯಾದ್ದರಿಂದ, ಮೇಲಿನ ಧರ್ಮವು ಈ ಶಬ್ದದಲ್ಲಿ ಬಂದು, ಲಕ್ಷಣ ಸಮನ್ವಯವಾಗುವದು. ಪರೀಕ್ಷೆಯೆಂದರೆ–: ಯುಕ್ತಾಯುಕ್ತ ವಿಚಾರವು. ( ಲಕ್ಷಣದಿಂದ ಲಕ್ಷ್ಯಭೂತವಾದ ವಸ್ತುವು ಸರಿಯಾಗಿ ತಿಳಿಯಲ್ಪಡುವದೋ ಇಲ್ಲವೋ ಎಂಬ ವಿಚಾರವು. )

**(೧) ಪ್ರಮಾಣ ಲಕ್ಷಣ ಸ್ವರೂಪವು:—**

ಪ್ರಮಾಣ ಸಾಮಾನ್ಯದ ಲಕ್ಷಣವು— ಯಥಾರ್ಥವಾದುದು ಪ್ರಮಾಣವು ಇಲ್ಲಿ ' ಯಥಾ ' ಎಂದರೆ ಜ್ಞಾನಕ್ಕೆ ವಿಷಯವಾದ ವಸ್ತುವನ್ನು ಅತಿಕ್ರಮಿಸದೇ ( ಅದುಹೇಗಿದೆಯೋ ಹಾಗೆಯೇ ) ಇದ್ದುದು. ' ಅರ್ಥ ' ಶಬ್ದಕ್ಕೆ ( ಅರ್ಯತೆ ಇತಿ ) ' ತಿಳಿಯಲ್ಪಡುವ ' ಎಂಬ ವ್ಯುತ್ಪತ್ತಿಯಿಂದ ' ಜ್ಞೇಯವನ್ನು ವಿಷಯೀಕರಿಸುವದು ' ಎಂದು ಅರ್ಥವು.

ಜ್ಞಾನಕ್ಕೆ ವಿಷಯವಾದ ವಸ್ತು ( ಜ್ಞೇಯ ) ವನ್ನು ( ಅನತಿಕ್ರಮ್ಯ ) ಅತಿಕ್ರಮಿಸದೇ ಇರುವದೆಂದರೆ ಯಾವ ದೇಶದಲ್ಲಿ ಯಾವ ಕಾಲದಲ್ಲಿ ಯಾವ ವಸ್ತುವು ಹೇಗಿದೆಯೋ ಹಾಗೆಯೇ ಅದನ್ನು ತಿಳಿಯುವದು ಎಂದರ್ಥವು.

ಅದರಂತೆ [ ಯಥಾವಸ್ಥಿತವಾದ ] ಇದ್ದಕ್ಕಿದ್ದಂತೆಯೇ ವಸ್ತುವು ಯಾವದು ಗ್ರಹಿಸುವದೋ ಆ ಜ್ಞಾನವು ಪ್ರಮಾಣವು, ಯಥಾವಸ್ಥಿತ ಜ್ಞೇಯ ವಿಷಯ ಕಾರಿತ್ವವು ಎಂದರೆ ಇದ್ದಕ್ಕಿದ್ದಂತೆ ವಸ್ತುವನ್ನು ವಿಷಯೀಕರಿಸುವದು ಪ್ರಮಾಣ ಸಾಮಾನ್ಯದ ಲಕ್ಷಣವೆಂದು ತಿಳಿಯಬೇಕು.

काकरवे गतं, काकरवस्यापि वस्तुप्रतिपादकवर्णात्मकशब्दत्वात्, त द्वारणाय **नाम्नेति**, गीर्वाणभाषयेत्यर्थः, तथा च गीर्वाणभाषया वस्तु प्रतिपादकवर्णात्मकशब्दत्वमित्युक्तं भवति, काकरवस्य गीर्वाणभाषय वस्तुप्रतिपादकवर्णात्मकशब्दत्वाभावान्नातिव्याप्तिः ।

तथापि गंधवती पृथिवीतिलक्षणवाक्ये गतं, तत्रापि गीर्वाणभाष या वस्तुप्रतिपादकवर्णात्मकशब्दत्वस्य सत्त्वादतिव्याप्तिस्तत्परिहारा **मात्रेणेति**, तदर्थस्तु लक्षणतया अप्रयुक्तत्वमिति, गंधवती पृथिवीति वाक्ये लक्षणतया प्रयुक्तत्वस्यैव सत्त्वेन लक्षणतया अप्रयुक्तत्वाभावा न्नातिव्याप्तिः, तथा च लक्षणतयाऽप्रयुक्तत्वे सति गीर्वाणभाषया व स्तुप्रतिपादकवर्णात्मकशब्दत्वमुद्देशस्य लक्षणमित्युक्तं भवति, पृथि वीतिशब्दे लक्षणसमन्वयः— तत्र लक्षणतयाऽप्रयुक्तत्वविशिष्टगीर्वा णभाषया वस्तुप्रतिपादक- ( पृथिवीति वस्तुप्रतिपादक )

---

ಕಾಗೆಯು ಶಬ್ದವು [ ಕಾ, ಕಾ, ಎಂಬಲ್ಲಿರುವವು ] ಕೂಡ ವಸ್ತುಪ್ರತಿಪಾ ವರ್ಣಾತ್ಮಕಶಬ್ದವಾದ್ದರಿಂದ, ಆ ಕಾಗೆಯು ಧ್ವನಿಯಲ್ಲಿ ಅತಿವ್ಯಾಪ್ತಿ ಬರುವದು. ಇದ ನಿವಾರಿಸಲು [ ನಾಮ್ನಾ ] ಹೆಸರಿನಿಂದ ಅಂದರೆ ' ಸಂಸ್ಕೃತ ( ಗೀರ್ವಾಣ ) ಭಾ ಯಿಂದ ಹೇಳಿದ ವಸ್ತು ಪ್ರತಿಪಾದಕವರ್ಣಾತ್ಮಕ ಶಬ್ದವೆಂದು ಹೇಳಬೇಕು. ಕಾಗೆ ಶಬ್ದ ಗೀರ್ವಾಣ ಭಾಷೆಯಾಗದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದು.

ಆದರೂ [ ಗಂಧವತೀ ಪೃಥಿವೀ ) " ಪೃಥಿವಿಯು ಗಂಧವುಳ್ಳದ್ದು " ಎ ಲಕ್ಷಣವಾಕ್ಯವೂ ಸಂಸ್ಕೃತ ಭಾಷೆಯಿಂದ ವಸ್ತುಪ್ರತಿಪಾದಕ ವರ್ಣಾತ್ಮಕ ಶಬ್ದವುಳ್ಳದ್ದರಿ ಈ ಲಕ್ಷಣವಾಕ್ಯದಲ್ಲಿ ಅತಿವ್ಯಾಪ್ತಿ ಬರುವದು, ಅದನ್ನು ನಿವಾರಿಸಲು. ( ಮಾತ್ರೇಣ ' ಕೇವಲ ' ಎಂಬ ಶಬ್ದಹಾಕಲಾಗಿದೆ. ಲಕ್ಷಣವಾಕ್ಯವಾಗಿ ಪ್ರಯೋಗವಾಗದೇ ಇದ್ದ ಎಂದರ್ಥವು. ಈಗ ಲಕ್ಷಣ ವಾಕ್ಯದಲ್ಲಿ ಅತಿವ್ಯಾಪ್ತಿ ಬರಲಾರದು.

ಒಟ್ಟಿನಲ್ಲಿ ಲಕ್ಷಣ ವಾಕ್ಯವಾಗಿ ಪ್ರಯೋಗಿಸಲ್ಪಡದೇ ಇದ್ದು ಸಂಸ್ಕೃತಭಾಷೆಯಿ ವಸ್ತುಪ್ರತಿಪಾದಕವಾದ ವರ್ಣಾತ್ಮಕ ಶಬ್ದಧರ್ಮವು, ಉದ್ದೇಶದ ಲಕ್ಷಣವೆಂದು ಹೇಳ ಲಾಯಿತು.

" ಪೃಥಿವೀ " ಶಬ್ದದಲ್ಲಿ ಈ ಲಕ್ಷಣ ಸಮನ್ವಯವಾಗುವದು. " ಪೃಥಿವೀ " ಶಬ್ಧ ಲಕ್ಷಣವಾಕ್ಯವಾಗಿ ಪ್ರಯೋಗವಾಗಿಲ್ಲ. ಹಾಗೂ ಸಂಸ್ಕೃತಭಾಷೆಯಿಂದ ಪೃಥಿವಿ ಅರ್ಥವುಳ್ಳ ವಸ್ತುವನ್ನು ಪ್ರತಿಪಾದಿಸುವ

वर्णात्मकशब्दत्वस्य सत्त्वादिति ध्येयम् ।
परीक्षा नाम--युक्तायुक्तचिन्ता ( लक्षितस्य लक्षणं उत्पद्यते न वा इति विचारः )

## इति उद्येश प्रकरणम्

---

## ४. अथ प्रमाण प्रकरणम् ।

(१) तत्रादौ प्रमाणसामान्य लक्षणमुच्यते--

यथार्थं प्रमाणं, अत्र यथाशब्दोऽनतिक्रमे वर्तते, अर्थशब्दश्च अर्यत इति व्युत्पत्त्या ज्ञेयवाची, तथा च ज्ञेयमनतिक्रम्य वर्तमानमित्युक्तं स्यात्, ज्ञेयमनतिक्रम्येत्यस्य प्रकारांतरेण विना यद्देशकालयोः यद्ज्ञेयं यादृशं तथैवेति यावत्, वर्तमानं विषयीकारि, एवं च --यथावस्थितज्ञेयविषयीकारित्वं प्रमाणसामान्यलक्षणमित्युक्तं भवति ।

---

ವರ್ಣಾತ್ಮಕ ಶಬ್ದವಾಗಿದೆ- ಯಾದ್ದರಿಂದ, ಮೇಲಿನ ಧರ್ಮವು ಈ ಶಬ್ದದಲ್ಲಿ ಬಂದು, ಲಕ್ಷಣ ಸಮನ್ವಯವಾಗುವದು. ಪರೀಕ್ಷೆಯೆಂದರೆ-: ಯುಕ್ತಾಯುಕ್ತ ವಿಚಾರವು. ( ಲಕ್ಷಣದಿಂದ ಲಕ್ಷ್ಯಭೂತವಾದ ವಸ್ತುವು ಸರಿಯಾಗಿ ತಿಳಿಯಲ್ಪಡುವದೋ ಇಲ್ಲವೋ ಎಂಬ ವಿಚಾರವು. )

**(೧) ಪ್ರಮಾಣ ಲಕ್ಷಣ ಸ್ವರೂಪವು:—**

ಪ್ರಮಾಣ ಸಾಮಾನ್ಯದ ಲಕ್ಷಣವು— ಯಥಾರ್ಥವಾದುದು ಪ್ರಮಾಣವು ಇಲ್ಲಿ ‘ ಯಥಾ ’ ಎಂದರೆ ಜ್ಞಾನಕ್ಕೆ ವಿಷಯವಾದ ವಸ್ತುವನ್ನು ಅತಿಕ್ರಮಿಸದೇ ( ಅದುಹೇಗಿದೆಯೋ ಹಾಗೆಯೇ ) ಇದ್ದುದು. ‘ ಅರ್ಥ ’ ಶಬ್ದಕ್ಕೆ ( ಅರ್ಯತೆ ಇತಿ ) ‘ ತಿಳಿಯಲ್ಪಡುವ ’ ಎಂಬ ವ್ಯುತ್ಪತ್ತಿಯಿಂದ ‘ ಜ್ಞೇಯವನ್ನು ವಿಷಯೀಕರಿಸುವದು ’ ಎಂದು ಅರ್ಥವು.

ಜ್ಞಾನಕ್ಕೆ ವಿಷಯವಾದ ವಸ್ತು ( ಜ್ಞೇಯ ) ವನ್ನು ( ಅನತಿಕ್ರಮ್ಯ ) ಅತಿಕ್ರಮಿಸದೇ ಇರುವದೆಂದರೆ ಯಾವ ದೇಶದಲ್ಲಿ ಯಾವ ಕಾಲದಲ್ಲಿ ಯಾವ ವಸ್ತುವು ಹೇಗಿದೆಯೋ ಹಾಗೆಯೇ ಅದನ್ನು ತಿಳಿಯುವದು ಎಂದರ್ಥವು.

ಅದರಂತೆ [ ಯಥಾವಸ್ಥಿತವಾದ ] ಇದ್ದಕ್ಕಿದ್ದಂತೆಯೇ ವಸ್ತುವು ಯಾವದು ಗ್ರಹಿಸುವದೋ ಆ ಜ್ಞಾನವು ಪ್ರಮಾಣವು, ಯಥಾವಸ್ಥಿತ ಜ್ಞೇಯ ವಿಷಯ ಕಾರಿತ್ವವು ಎಂದರೆ ಇದ್ದಕ್ಕಿದ್ದಂತೆ ವಸ್ತುವನ್ನು ವಿಷಯೀಕರಿಸುವದು ಪ್ರಮಾಣ ಸಾಮಾನ್ಯದ ಲಕ್ಷಣವೆಂದು ತಿಳಿಯಬೇಕು.

ननु यथावस्थितज्ञेयविषयीकारित्वस्य अनुप्रमाणेष्वभावात् अव्याप्तिरिति चेन्न, करणेष्वपि सम्यक् ज्ञानसाधनतया परंपरया ज्ञेयविषयीकारित्वमस्त्येव, न हि साक्षादेव ज्ञेयविषयीकारित्वं लक्षणे विवक्षितं, येनोक्तदोषः स्यात्, अपि तु उभयसाधारणं ज्ञेयविषयीकारित्वमात्रं; इदं च पररीत्यैवोक्तम् ।

स्वमते तु—ज्ञान इव करणेष्वपि साक्षादेव ज्ञेयविषयीकारित्वमस्तीति नोक्ताव्याप्तिरिति द्रष्टव्यम् ।

उक्तं हि सुधायां—ज्ञानविषय एव करणानां विषय इति, परंतु अर्थे ज्ञेयत्वं तत् ज्ञानोपाधिकं ( ज्ञेयघटकज्ञानोपाधिकं न करणोपाधिकम् । करणानि तु—ज्ञानजनकतया ज्ञेयतां संपादयंतीत्येतावन्तं विशेषमाश्रित्य केवलानुप्रमाणभेदः समर्थित इति न कश्चिद्दोषः ।

---

ಶಂಕಾ – ಈ ಯಥಾವಸ್ಥಿತ ಜ್ಞೇಯ ವಿಷಯೀಕರಿಸುವಿಕೆಯು ಅನುಪ್ರಮಾಣದಲ್ಲಿ. ಬರುವುದಿಲ್ಲವಾದ್ದರಿಂದ ಅವ್ಯಾಪ್ತಿದೋಷ ಬರುವದೆಂದು ಹೇಳಲಾಗದು

ಇಂದ್ರಿಯಗಳು ಸರಿಯಾದ ಜ್ಞಾನ ಸಾಧನಗಳಾದುದರಿಂದ ಪರಂಪರೆಯಾಗಿ ( ಜ್ಞಾನದ್ವಾರಾ ) ಜ್ಞೇಯವನ್ನು ( ವಸ್ತುವನ್ನು ] ವಿಷಯೀಕರಿಸುವವು ಸಾಕ್ಷಾತ್ ವಿಷಯೀಕರಿಸುವವೆಂದು ಹೇಳಿಲ್ಲವಾದ್ದರಿಂದ ಅವ್ಯಾಪ್ತಿ ದೋಷ ಬರಲಾರದು. ಈ ಲಕ್ಷಣದಲ್ಲಿ ಕರಣ [ ಇಂದ್ರಿಯ ] ಹಾಗೂ ಜ್ಞಾನ ಎರಡಕ್ಕೂ ಸಾಮಾನ್ಯವಾದ ವಿಷಯೀಕಾರಿತ್ವವು ಮಾತ್ರ ಹೇಳಲ್ಪಟ್ಟಿದೆ. ಇದು ಅನ್ಯಮತೀಯರ ಪ್ರಕಾರ ಹೇಳಿದ್ದಾಯಿತು.

ನಮ್ಮ ಸಿದ್ಧಾಂತದಲ್ಲಿ ಜ್ಞಾನದಂತೆ ( ಕರಣ ) ಇಂದ್ರಿಯಗಳೂ ಸಾಕ್ಷಾತ್ತಾಗಿಯೇ ಜ್ಞೇಯವನ್ನು ವಿಷಯೀಕರಿಸುವವು. ಆದ್ದರಿಂದ ಅವ್ಯಾಪ್ತಿದೋಷವು ಬರಲಾರದು. ಶ್ರೀಮನ್ನ್ಯಾಯ ಸುಧಾ ಗ್ರಂಥದಲ್ಲಿ ಹೀಗೆ ಹೇಳಿದೆ—ಜ್ಞಾನದ ವಿಷಯವಾದುದೇ ಕರಣಗಳಿಗೆ ವಿಷಯವು. ಆದರೆ ವಸ್ತುವಿನಲ್ಲಿದ್ದ ಜ್ಞೇಯತ್ವವು ಜ್ಞಾನೋಪಾಧಿಕವು [ ಜ್ಞೇಯ ಘಟಕ ಜ್ಞಾನ ನಿಮಿತ್ತವು ][ ಎಂದರೆ ಜ್ಞೇಯದಲ್ಲಿ ಅಡಕವಾದ ಜ್ಞಾನವೇ ಕಾರಣವಾಗಿ ಉಳ್ಳದ್ದು ] ಆಗಿದೆಯೇ ಹೊರತು ಕರಣೋಪಾಧಿಕವಾಗಿಲ್ಲ, ಇಂದ್ರಿಯಗಳು ಜ್ಞಾನಹುಟ್ಟಿಸಿ ವಸ್ತುವಿನಲ್ಲಿದ್ದ ಜ್ಞೇಯತ್ವವನ್ನು ವಿಷಯಕರಿಸುತ್ತವೆ. ಈ ವಿಶೇಷದ ಕಾರಣ ' ಕೇವಲ, ಹಾಗೂ ಅನುಪ್ರಮಾಣಗಳಲ್ಲಿ ವ್ಯತ್ಯಾಸ ಮಾಡಲಾಗಿದೆ. ಜ್ಞೇಯ ವಿಷಯಯೀಕಾರಿತ್ವವು ಎರಡರಲ್ಲಿಯೂ ಸಾಕ್ಷಾತ್ತಾಗಿಯೇ ಇರುವದರಿಂದ ಯಾವ ಅವ್ಯಾಪ್ತಿ ದೋಷವು ಇಲ್ಲ.

( ಒಟ್ಟು ಅಭಿಪ್ರಾಯವೇನಂದರೆ- ಒಂದು ವಸ್ತುವನ್ನು ಸಾಕ್ಷಾತ್ತಾಗಿ ವಿಷಯೀಕರಿಸುವಲ್ಲಿ

**प्रमाणलक्षणे दलकृत्यं तु**–यथावस्थितज्ञेयविषयीकारित्वमित्यत्र **यथावस्थितत्वमेव** लक्षणमित्युक्ते प्रमातृप्रमेययोरतिव्याप्तिः। तयोरपि यथावस्थितत्वात्, तद्वारणाय **विषयीकारित्वं** देयं, तयोर्निर्विषयत्वेन विषयीकारित्वाभावान्नातिव्याप्तिः। विषयीकारित्वमित्येवोक्ते विपर्ययादौ अतिव्याप्तिः, तद्वारणाय यथावस्थितत्वं देयं, विपर्यये यथावस्थितविषयीकारित्वाभावान्नातिव्याप्तिः।

**इति प्रमाणलक्षणस्वरूपविचारः।**

(२) प्रमातृप्रमेययोः स्वरूपं तु– प्रमावान् प्रमाता, स्वामित्वसंबंधेन प्रमावान् प्रमास्वामीति यावत्, प्रमाविषयः प्रमेयम्।

(३) विषयत्वं नाम–

---

ಜ್ಞಾನವು ಹಾಗೂ ಕರಣಗಳೂ ಸಮಾನವಾಗಿವೆ ಆದರೆ ವಸ್ತುವಿನಲ್ಲಿರ ತಕ್ಕ ಜ್ಞೇಯತ್ವ ಧರ್ಮವನ್ನು ಜ್ಞಾನವು ಸಾಕ್ಷಾತ್ ಆಗಿಯೂ ಕರಣಗಳು ಜ್ಞಾನವನ್ನು ಹುಟ್ಟಿಸಿ ಆ ಜ್ಞಾನ ದ್ವಾರಾ ಗ್ರಹಿಸುತ್ತವೆ. ಈ ವಿಶೇಷದಿಂದ ಎರಡರಲ್ಲಿ ವ್ಯತ್ಯಾಸವೆಂದು ತಿಳಿಯಬೇಕು.)

ದಲಕೃತ್ಯವು :- 'ಯಥಾವಸ್ಥಿತ ಜ್ಞೇಯ ವಿಷಯೀಕಾರಿತ್ವಂ ಎಂದು ಹೇಳಿದ ಪ್ರಮಾಣದ ಲಕ್ಷಣದಲ್ಲಿ 'ಯಥಾವಸ್ಥಿತಂ ಪ್ರಮಾಣಂ' ಎಂದಿಷ್ಟೇ ಲಕ್ಷಣವೆಂದು ಹೇಳಿದರೆ ತಿಳಿದುಕೊಳ್ಳುವ ಮಾನವ (ಪ್ರಮಾತೃ) ನಲ್ಲಿಯೂ ಹಾಗೂ ತಿಳಿಯಲ್ಪಡುವ ವಿಷಯ (ಪ್ರಮೇಯ) ದಲ್ಲಿಯೂ ಅತಿವ್ಯಾಪ್ತಿ ಬರುವದು ಏಕಂದರೆ ಇವರಡರಲ್ಲಿಯೂ 'ಯಥಾವಸ್ಥಿತಿಯು' ಇರುವದು ಇದನ್ನು ನಿವಾರಿಸಲು 'ವಿಷಯೀಕಾರಿತ್ವ', ಎಂಬ ಪದವನ್ನಿಡಬೇಕು. ಪ್ರಮಾತೃ ಹಾಗೂ ಪ್ರಮೇಯಗಳು ನಿರ್ವಿಷಯವಾದ್ದರಿಂದ [ವಿಷಯೀಕರಿಸಲಾದ್ದರಿಂದ] ಅವುಗಳಲ್ಲಿ ಅತಿವ್ಯಾಪ್ತಿ ಬರಲಾರದು ಆದರೆ ಕೇವಲ "ವಿಷಯೀಕಾರಿತ್ವಂ ಪ್ರಮಾಣಂ" ಎಂದಿಷ್ಟೇ ಲಕ್ಷಣ ಹೇಳಿದರೆ ವಿಪರೀತ ಜ್ಞಾನ ಹಾಗೂ ಸಂಶಯ ಜ್ಞಾನಗಳೂ ವಸ್ತು ವಿಷಯೀಕರಿಸುವದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುವದು, ಇದರ ನಿವಾರಣೆಗಾಗಿ "ಯಥಾವಸ್ಥಿತ" ಎಂದು ಹೇಳಬೇಕು ಸಂಶಯ ವಿಪರ್ಯಯ ಜ್ಞಾನಗಳು ವಸ್ತು ವಿಷಯೀಕಾರಿಗಳಾದರೂ ಯಥಾಸ್ಥಿತ ವಸ್ತು ವಿಷಯೀಕಾರಿಗಳಾಗದ್ದರಿಂದ ಅತಿವ್ಯಾಪ್ತಿಯು ಬರಲಾರದು.

೨ ಪ್ರಮಾತೃ ಪ್ರಮೇಯಗಳ ಸ್ವರೂಪ ವಿಚಾರವು-: "ಪ್ರಮಾತೃ" ವೆಂದರೆ ಯಥಾರ್ಥ ಜ್ಞಾನವು [ಪ್ರಮಾ]ವುಳ್ಳವನು, ಸ್ವಾಮಿತ್ವ ಸಂಬಂಧದಿಂದ ಪ್ರಮಾವನ್ನು ಹೊಂದಿದವನು ಎಂದರ್ಥವು.

ಪ್ರಮೇಯ ಎಂದರೆ [ಯಥಾರ್ಥ ಜ್ಞಾನಕ್ಕೆ] ವಿಷಯವಾದುದೇ ಪ್ರಮೇಯವು

यत्सन्निकृष्टकरणेन यद्ज्ञानं जायते स तस्य विषयः, यथा - घटसन्निकृद्रियेण ष्टे (चक्षुरिंद्रियेण) घटज्ञानं जायते, सः घटः, तस्य ज्ञानस्य (घटज्ञानस्य) विषय इति, घटे एतादृशविषयत्वमस्तीति ज्ञेयम् ।

अत्र सन्निकर्षशब्देन प्रत्यासत्तेरेवाभिमतत्वात् इंद्रियाणां अर्थैः संयोग इव लिंगशब्दयोरपि लिंगिवाक्यार्थाभ्यां व्याप्तिशक्तिरूपप्रत्यासत्त्या लिंगिवाक्यार्थधीजनकत्त्वस्य सत्त्वात् प्रत्त्यासत्तिरेव सन्निकर्षः । अन्यथा तयोः सन्निकर्षाभावेन अनुमित्यादिजनकत्त्वं न स्यात् ।

(४) विषयिता च–अर्थप्रकाशनशक्तिर्ज्ञेया ।

(५) प्रमा नाम – यथार्थज्ञानं

---

ವಿಷಯತ್ವ ಎಂದರೆ– ಯಾವ ವಸ್ತುವಿಗೆ ಇಂದ್ರಿಯ ಸನ್ನಿಕರ್ಷ ವಾಗಲು ಜ್ಞಾನವುಂಟಾಗುವದೋ ಆ ವಸ್ತುವೆ ಆ ಜ್ಞಾನಕ್ಕೆ ವಿಷಯುವು ಆದರಲ್ಲಿ ವಿಷಯುತ್ವವಿದೆ, ಉದಾಹರಣೆಗೆ–: ಒಂದು ಘಟಕ್ಕೆ ಚಕ್ಷುರಿಂದ್ರಿಯುಸನ್ನಿಕರ್ಷವಾದಾಗ ಆ ಇಂದ್ರಿಯದಿಂದ ‹ ಘಟದ, ಜ್ಞಾನವು ಹುಟ್ಟುವದು ಈ ಘಟ ಜ್ಞಾನಕ್ಕೆ ಘಟವು ವಿಷಯುವು ಆದ್ದರಿಂದ ಘಟದಲ್ಲಿ ವಿಷಯತ್ವ ಬಂದಿತು.

‹ ಸನ್ನಿಕರ್ಷ, ಶಬ್ದದಿಂದ ( ಪ್ರತ್ಯಾಸತ್ತಿ ) ಸಂಬಂಧ ಸಾಮಾನ್ಯವು ಎಂಬ ಅಬಿಪ್ರಾಯ › ವಿರುವದರಿಂದ, ಇಂದ್ರಿಯಗಳಿಗೂ ಇರುವ ಸಂಯೋಗ ಸಂಬಂಧದಂತೆ ಅನುಮಾನಲ್ಲಿ ಲಿಂಗ. ಲಿಂಗಿಗಳಿಗೆ [ ಹೇತು ಸಾಧ್ಯಗಳಿಗೆ ] ವ್ಯಾಪ್ತಿರೂಪ ಸಂಬಂಧವೂ, ಶಬ್ದದಿಂದ ಹುಟ್ಟುವ ಜ್ಞಾನದಲ್ಲಿ ಶಬ್ದ ಹಾಗೂ ವಾಕ್ಯಾರ್ಥಗಳಿಗೆ ಶಬ್ದ ಶಕ್ತಿರೂಪ ಸಂಬಧವೂ ಇದ್ದು, ಈ ವ್ಯಾಪ್ತಿ ಹಾಗೂ ಶಬ್ದ ಶಕ್ತಿರೂಪ ಸಂಬಂಧದಿಂದ, ಲಿಂಗಿ [ ಅನುಮತಿ ] ಹಾಗೂ ವಾಕ್ಯಾರ್ಥ ಜ್ಞಾನ ಹುಟ್ಟುವದರಿಂದ ,ಸನ್ನಿಕರ್ಷವೆಂದರೆ ಪ್ರತ್ಯಾಸತ್ತಿ [ ಸಂಬಂಧ ಮಾತ್ರ ] ಎಂದಾಗುವದು. ಒಂದು ವೇಳೆ ‹ವ್ಯಾಪ್ತಿ , ಹಾಗೂ ‹ ಶಕ್ತಿರೂಪ, ಸಂಬಂಧವನ್ನು ವಿವಕ್ಷಾಮಾಡದೆ ಸನ್ನಿಕರ್ಷ ಶಬ್ದಕ್ಕೆ ಕೇವಲ ‹ ಸಂಯೋಗ ಸಂಬಂಧ, ಒಂದನ್ನೇ ಇಟ್ಟು ಕೊಳ್ಳುವದಾದರೆ, ಅನುಮಾನದಿಂದ ಹಾಗೂ ಶಬ್ದಗಳಿಂದ ಹುಟ್ಟುವ ಜ್ಞಾನವು ಸನ್ನಿಕರ್ಷವಿಲ್ಲದೇ ಹುಟ್ಟದೇ ಹೋಗಬೇಕಾದ ಪ್ರಸಂಗ ಬರುವದು.

ವಿಷಯುದಲ್ಲಿರುವ ಅರ್ಥಪ್ರಕಾಶನಸಾಮರ್ಥ್ಯಕ್ಕೆ ‹ ವಿಷಯಿತಾ ಎಂದು ಸಂಜ್ಞ, ಇದು ಜ್ಞಾನದ ಧರ್ಮವಾಗಿದೆ.

೫] ಪ್ರಮಾ :– ಪ್ರಮಾ ಎಂದರೆ ಯಥಾರ್ಥ ಜ್ಞಾನವು

ज्ञानमित्युक्ते संशयविपर्ययपोरतिव्याप्तिः, तद्वारणाय यथार्थग्रहणं, तयोर्यथार्थत्वाभावान्नातिव्याप्तिः, यथार्थमित्युक्ते करणेषु गतं, अतो ज्ञानमिति ।

इतिप्रमातृप्रमेयादिस्वरूपकथनम् ।

इति प्रमाणप्रकरणम् ॥

---

## (५) अथ संशयप्रकरणम् ।

प्रसक्तसंशयस्वरूपं विस्तारेणोच्यते—

(१) संशयस्य लक्षणं तु—एकस्मिन् धर्मिणि भासमानविरुद्धानेकाकारावगाहिज्ञानत्वं, तच्च लक्षणं, अयं स्थाणुर्वा पुरुषो वा इत्याकारकसंशये समन्वितं भवति, तथा हि—एकस्मिन् धर्मिणि पुरोवृत्तिपदार्थे भासमानविरुद्धानेकाकारौ स्थाणुत्व पुरुषत्वे, तदवगाहि ज्ञानं, अयं स्थाणुर्वा पुरुषो वा इत्याकारकज्ञानं,

---

ಈ ಲಕ್ಷಣದಲ್ಲಿ ಕೇವಲ ಜ್ಞಾನಂ ಎಂದಿಷ್ಟೆ ಹೇಳಿದರೆ ಸಂಶಯ ಹಾಗೂ ವಿಪರೀತ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು ಅದನ್ನು ನಿವಾರಿಸಲು ‹ ಯಥಾರ್ಥ ›ವೆಂದು ಜ್ಞಾನಕ್ಕೆ ವಿಶೇಷಣ ಕೊಡಬೇಕು ಸಂಶಯ ಹಾಗೂ ವಿಪರ್ಯಯಗಳಲ್ಲಿ ಯಥಾರ್ಥ ಜ್ಞಾನತ್ವವಿಲ್ಲದ್ದರಿಂದ ಅಲ್ಲಿ ಅತಿವ್ಯಾಪ್ತಿ ಬಾರದು „ಯಥಾರ್ಥಂ" ಎಂದಿಷ್ಟೇ ಹೇಳಿದರೆ ಕರಣ [ ಇಂದ್ರಿಯ ] ಗಳೂ ಯಥಾರ್ಥ ವಾದುದರಿಂದ, ಕರಣಗಳಲ್ಲಿ ಅತಿವ್ಯಾಪ್ತಿ ಬರುವದು ಇದನ್ನು ನಿವಾರಿಸಲು ‹ಜ್ಞಾನ›, ಎಂದಿಡಬೇಕು ಕರಣಗಳಲ್ಲಿ ಜ್ಞಾನತ್ವವಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿಯಿಲ್ಲ.

## ೫. ಸಂಶಯ ಪ್ರಕರಣವು

ಮೇಲೆ ಪ್ರಸಕ್ತವಾದ ‹ ಸಂಶಯ › ಸ್ವರೂಪವನ್ನು ಇಲ್ಲಿ ವಿಸ್ತಾರವಾಗಿ ವಿವೇಚಿಸಲಾಗುತ್ತಿದೆ-

೧] ಸಂಶಯದ ಲಕ್ಷಣವು – ಒಂದು ಧರ್ಮದಲ್ಲಿ ತೋರುವ ಪರಸ್ಪರ ವಿರುದ್ಧವಾದ ಅನೇಕ ಪ್ರಕಾರಗಳನ್ನೊಳಗೊಂಡಿರುವ ಜ್ಞಾನವು ಸಂಶಯವು. ಇದು ಮೋಟು ಮರವೋ ಇಲ್ಲವೇ ಮನುಷ್ಯನೋ ಸಂಶಯದಲ್ಲಿ ಈ ಲಕ್ಷಣ ಸಮನ್ವಯವಾಗುವದು–: ಪದಾರ್ಥವು ಒಂದು ಧರ್ಮಿಯು, ಅಲ್ಲಿ ತೋರುವ ವಿರುದ್ಧ ಅನೇಕ ಆಕಾರಗಳು, ಮೋಟು ಮರದ ಧರ್ಮ, ಹಾಗೂ ಪುರುಷ ಧರ್ಮಗಳು, ಅವುಗಳನ್ನು ವಿಷಯೀಕರಿಸುವ ಜ್ಞಾನವು, ಇದು ಮೋಟು ಮರವೆ ? ಪುರುಷನೇ ? ಎಂಬ ಜ್ಞಾನವು

तस्मिन् ज्ञानत्वस्य सत्त्वाल्लक्षणसमन्वयः।

दलकृत्यं तु इत्थम्—ज्ञानमित्युक्ते अयं घट इति ज्ञानेऽतिव्याप्तिः, अतो अनेकाकारावगाहीति ज्ञाने विशेषणं देयं, अयं घट इति ज्ञाने एकाकारावगाहित्वेनानेकाकारावगाहित्वाभावान्नातिव्याप्तिः, -अनेकाकारावगाहिज्ञानत्वमित्युक्ते स्थाणुपुरुषौ, घटपटस्तंभा इत्यादिके समूहालंबनज्ञाने अतिव्याप्तिः- तत्र अनेकाकारावगाहिज्ञानत्वस्य सत्त्वात्, तत्परिहार्थं एकस्मिन् धर्मिणीति वक्तव्यं, समूहालंबानात्मकज्ञानस्यानेकधर्मिकत्वेन एकधर्मिकत्वाभावान्नातिव्याप्तिः। एकस्मिन् धर्मिणि अनेकाकारावनाहिज्ञानत्वं इत्यवोक्ते वृक्षः शिंशुपा, घटो द्रव्यमित्यत्र अतिव्याप्तिः,

---

ಈ ಜ್ಞಾನದಲ್ಲಿ ಉಕ್ತ ಲಕ್ಷಣ ಬರುವದರಿಂದ ಲಕ್ಷಣ ಸಮನ್ವಯ ವಾಗುವದು.

---

**ಸಂಶಯದ ಲಕ್ಷಣದ** ಲಕೃತ್ಯವು :– ಕೇವಲ ‘ ಜ್ಞಾನಂ ಸಂಶಯಃ; ಎಂದರೆ ಇದು ಘಟಕವು ಎಂಬ ಒಂದೇ ಘಟತ್ವ ಧರ್ಮ ಗ್ರಹಿಸುವ ಯಥಾರ್ಥ ಜ್ಞಾನದಲ್ಲಿ ಅತಿ. ವ್ಯಾಪ್ತಿ ಬರುವದು. ಆದ್ದರಿಂದ ಜ್ಞಾನಕ್ಕೆ ‘ಅನೇಕಾಕಾರವ ಗಾಹಿ’ ( ಅನೇಕ ಧರ್ಮವನ್ನು ಗ್ರಹಿಸುವ) ಎಂಬ ವಿಶೇಷಣ ಕೊಡಬೇಕು. ‘ಇದು ಘಟವು, ಎಂಬ ಜ್ಞಾನವು ಘಟ ಧರ್ಮ ಒಂದನ್ನು ಗ್ರಹಿಸುವದಲ್ಲದೇ ಅನೇಕಾಕಾರಗಳನ್ನು ಗ್ರಹಿಸುವದಿಲ್ಲವಾದಕಾರಣ ಅಲ್ಲಿ ಅತಿವ್ಯಾಪ್ತಿ ಬರುವದಿಲ್ಲ “ ಅನೇಕಾಕಾರಾವಗಾಹಿತ್ವಂ ” ( ಅನೇಕ ಧರ್ಮಗಳನ್ನು ಗ್ರಹಿಸುವ ಧರ್ಮವು ಸಂಶವು ) ಎಂದು ಮಾತ್ರ ಲಕ್ಷಣ ಹೇಳಿದರೆ, ಮೋಟು,ಮರ, ಮನುಷ್ಯ, ಘಟ. ವಸ್ತ್ರ, ಕಂಬ, ಗೋಡೆ ಇತ್ಯಾದಿ ಜ್ಞಾನವು, ಸಮೂಹಾಲಂಬನ ಜ್ಞಾನ. ವಾಗಿದ್ದು, ಅನೇಕ ಧರ್ಮಾವಗಾಹಿ ಯಾಗಿದ್ದರಿಂದ ಈ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸುವಲ್ಲಿ ಒಂದು ಧರ್ಮಿಯಲ್ಲಿ ( ಏಕಸ್ಮಿನ್ ಧರ್ಮಿಣಿ) ಎಂದು ಹೇಳಬೇಕು. ಸಮೂಹದು ಜ್ಞಾನವು ಅನೇಕ ಧರ್ಮಗಳ ಬಗ್ಗೆ ಇದೆಯೇ ಹೊರತು ಏಕ ಧರ್ಮಿಕವಾಗಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದು ( ಏಕಸ್ಮಿನ್ ಧರ್ಮಿಣಿ ಅನೇಕ ಆಕಾರಾಗಾಹಿಜ್ಞಾನಂ ಸಂಶಯಃ ) ‘ ಒಂದು ಧರ್ಮಿಯಲ್ಲಿ ಅನೇಕ ಧರ್ಮಗಳನ್ನು ಗ್ರಹಿಸುವ ಜ್ಞಾನ ಸಂಶಯ ‘ವೆಂದು ಲಕ್ಷಣ ಹೇಳಿದರೆ, ಘಟವು ದ್ರವ್ಯವು ಇಧ ಅರಳಿ ಮರವು ಎಂಬ ಅನೇಕ ಧರ್ಮಗಳುಳ್ಳ ಒಂದೆ ಧರ್ಮಿಯ ಯಥಾರ್ಥಜ್ಞಾನದಲ್ಲಿ ಅತಿ. ವ್ಯಾಪ್ತಿ ಬರುವದು.

तत्र वृक्षधर्मिकवृक्षत्वशिंशुपात्त्वानेकाकारावगाहिज्ञानत्वस्यसत्त्वात् अतिव्याप्तिः, तद्वारणाय विरुद्धेति, वृक्षः शिंशुपा इति ज्ञाने आकाराणामविरुद्धत्वात्, विरुद्धानेकाकारावगाहिज्ञानत्वाभावान्नातिव्याप्तिः, विरुद्धानेकाकारावगाहिज्ञानत्वमित्येवोक्ते इदं रजतमिति भ्रमे गतंतत्र एकस्मिन् धर्मिणि शुक्तौ इदंत्वरजतत्वानेकाकारावगाहिज्ञानत्वस्य सत्त्वात्, अतो भासमानेति विशेषणं देयं, इदं रजतमिति भ्रमे इदंत्वरजतत्वयोर्विरोधसत्त्वेऽपि विरोधस्य भासमानत्त्वाभावान्नातिव्याप्तिः ।

एवं च एकस्मिन् धर्मिणि भासमानविरुद्धानेकाकारावगाहिज्ञानत्वं संशयस्य लक्षणमित्युक्तं भवति । तथापि इदं संशयसामान्यलक्षणं न भवति, संशयानामनेकप्रकारकत्वात् उक्तं च अभिनवामृते, तथा हि–

(१) एकधर्मिकानेककोटिकः, यथा-अयं स्थाणुर्वा पुरुषो वा

---

ಏಕೆಂದರೆ ಇದು ಅರಳಿಯ ಮರ ಎಂಬ ಜ್ಞಾನವು, ಅರಳಿಯ ಸಿಂಶುಪಾ ಜಾತಿ ಧರ್ಮ, ಹಾಗೂ ವೃಕ್ಷಧರ್ಮ, ಹೀಗೆ ಅನೇಕ ಧರ್ಮಗಳಿಂದ ಕೂಡಿದ ಎದುರಿಗಿರುವ ವೃಕ್ಷರೂಪ ಧರ್ಮಿಯ ಜ್ಞಾನವಾಗಿದೆ. ಇದರ ನಿವಾರಣೆಗಾಗಿ 'ವಿರುದ್ಧ' ಎಂಬ ಪದವನ್ನು ಸೇರಿಸಬೇಕು. ಅಂದರೆ ವಿರುದ್ಧ ಅನೇಕಾಕಾರವಗಾಹಿಜ್ಞಾನತ್ವಂ ಎಂದು ಹೇಳಬೇಕು. ಈಗ 'ಇದು ಅರಳಿಮರ' ಎಂಬ ಜ್ಞಾನದಲ್ಲಿ ಅತಿವ್ಯಾಪ್ತಿ ಬರಲಿಲ್ಲ. ಆದರೆ 'ಇದು ಬೆಳ್ಳಿಯು' ಎಂಬ ಭ್ರಮದಲ್ಲಿ ಮತ್ತೆ ಅತಿವ್ಯಾಪ್ತಿ ಬರುವದು.

ಭ್ರಮಾತ್ಮಕ ಜ್ಞಾನದಲ್ಲಿ ಧರ್ಮಿಯಾದ ಸಿಂಪಿನಲ್ಲಿ (ಶುಕ್ತಿ) ಎದುರಿಗಿದ್ದ ವಸ್ತು ಧರ್ಮ (ಇದಂತ್ವ) ಹಾಗೂ ಬೆಳ್ಳಿಯ ಧರ್ಮ (ರಜತತ್ವ) ಗಳೆಂಬ ವಿರುದ್ಧ ಅನೇಕಾಕಾರವಗಾಹಿ ಜ್ಞಾನತ್ವವಿದೆ ಇದನ್ನು ಪರಿಹರಿಸಲು ತೋರುವ [ಭಾಸಮಾನ] ಎಂಬ ವಿಶೇಷಣ ಕೊಡಬೇಕು [ಭಾಸಮಾನ ವಿರುದ್ಧ ಧರ್ಮ ಎನ್ನಬೇಕು] ಇದು ಬೆಳ್ಳಿ ಎಂಬ ಭ್ರಮದಲ್ಲಿ, ಮುಂದಿರುವ ವಸ್ತು ಎಂಬ ಧರ್ಮ ಹಾಗೂ 'ಬೆಳ್ಳಿಯ ಧರ್ಮಗಳಲ್ಲಿ, ವಿರೋಧ ವಿದ್ದರೂ ಅವು ಭಾಸಮಾನವಾಗಿಲ್ಲವಾದ್ದರಿಂದ ಭ್ರಮದಲ್ಲಿ ಅತಿವ್ಯಾಪ್ತಿಯಿಲ್ಲ.

ಅಂತೂ ಒಂದು ಧರ್ಮಿಯಲ್ಲಿ ತೋರತಕ್ಕ ವಿರುದ್ಧವಾದ ಅನೇಕ ಧರ್ಮಗಳನ್ನು ಅವಗಾಹಿಸತಕ್ಕ ಜ್ಞಾನವು ಸಂಶಯವು ಎಂದಂತಾಯಿತು. ಆದರೂ ಇದು ಸಂಶಯ ಸಾಮಾನ್ಯ ಲಕ್ಷಣವಾಗಲಾರದು ಸಂಶಯಗಳು ಅನೇಕರೀತಿ ಯಾಗಿದೆಯೆಂದು ಅಭಿನವಾಮೃತ ಗ್ರಂಥದಲ್ಲಿ ಹೇಳಿದೆ.

(२) अनेकधर्मिक, एककोटिको यथा-किमयं ब्राह्मणः उत स ब्राह्मणः, अनेकधर्मिक अनेककोटिकः, यथा-कालो वा कारणं राज्ञो राजा वा कालकारणमित्यादिकः ।

तथा च अनेकधर्मिकसंशये एकधर्मिकत्वाभावात् अव्याप्तिः, तथा अनेकधर्मिक-एककोटिकसंशयेऽपि भासमानविरुद्धानेकाकारावगाहित्वाभावादव्याप्तिश्च, अत इदं संशयसामान्यलक्षणं न; किंतु विशेषलक्षणं ज्ञेयम् ।

ननु संशयलक्षणे एकस्मिन्धर्मिणीति मास्तु, किंतु भासमानविरुद्धानेकाकारनिष्ठप्रकरतानिरूपितविशेष्यताकत्वमित्येव संशयलक्षणमस्तु,

---

೧] ಏಕ ಧರ್ಮಿಕ ಅನೇಕ ಕೋಟಿಕ ಸಂಶಯವು. ಉದಾಹರಣೆಗೆ :- ಇದು ಮೋಟು ಮರವೋ ಮನುಷ್ಯನೋ ಎಂಬ ಸಂಶಯವು.

೨] ಅನೇಕ ಧರ್ಮಿಕ ಏಕ ಕೋಟಿಕ ಸಂಶಯವು. ಉದಾಹರಣೆಗೆ :-ಬ್ರಾಹ್ಮಣನು ಅವನೋ ಇವನೋ ಎಂಬ ಸಂಶಯವು.

೩] ಅನೇಕ ಧರ್ಮಿಕ ಅನೇಕಕೋಟಿಕಸಂಶಯವು. ಉದಾಹರಣೆಗೆ :- ಕಾಲವು ರಾಜನಿಗೆ ಕಾರಣವೋ, ಅಥವಾ ರಾಜನು 'ಕಾಲಕ್ಕೆ ಕಾರಣನೋ ಎಂಬ ಸಂಶಯವು ಇತ್ಯಾದಿಗಳು. ಪ್ರಕೃತ ಮೇಲೆ ಹೇಳಿದ ಲಕ್ಷಣ, ಅನೇಕ ಧರ್ಮಿಕ ಏಕ ಕೋಟಿಕ, ಹಾಗೂ ' ಅನೇಕ ಧರ್ಮಿಕ ಅನೇಕ ಕೋಟಿಕ , ಎಂಬ ಸಂಶಯಗಲ್ಲಿ ಬರುವದಿಲ್ಲ ಏಕೆಂದರೆ ಅವುಗಳಲ್ಲಿ ' ಒಂದೇ ಧರ್ಮಿಯೂ, ಇಲ್ಲ ಹಾಗೂ ' ವಿರುದ್ಧವಾಗಿ ತೋರುವ ಅನೇಕಾಕಾರಾವಗಾಹಿತ್ವವೂ ಇಲ್ಲ. ಹೀಗೆ ಲಕ್ಷಣಕ್ಕೆ ಅವ್ಯಾಪ್ತಿ ದೋಷ ಬರುವದು ಆದಕಾರಣ ಮೇಲೆ ಹೇಳಿದ ಲಕ್ಷಣವು ಒಂದು ಪ್ರಕಾರ ಸಂಶಯ ವಿಶೇಷದ ಲಕ್ಷಣವಾಗಿದೆಯೇ ಹೊರತು ಸಂಶಯ ಸಾಮಾನ್ಯ ಲಕ್ಷಣವಲ್ಲ ಎಂದು ತಿಳಿಯಬೇಕು.

ಶಂಕಾ- ಮೇಲೆ ಹೇಳಿದ ಲಕ್ಷಣದಲ್ಲಿ 'ಒಂದು ಧರ್ಮಿಯಲ್ಲಿ' ಎಂಬಲ್ಲಿಯ ' ಒಂದು ಎಂಬ ವಿಶೇಷಣ **ಬೇಡ** ಕೇವಲ ಧರ್ಮಿಯಲ್ಲಿ ತೋರುವ ಅನೇಕ ವಿರುದ್ಧ ಧರ್ಮ ಗ್ರಹಿಸುವ ಜ್ಞಾನ ಇಷ್ಟೆ ಇರಲಿ. ಹಾಗೆಂದರೆ, ವಿರುದ್ಧವಾಗಿ ತೋರುವ ಅನೇಕ ಧರ್ಮಗಳನ್ನು ಹಾಗೂ ಧರ್ಮಿಯನ್ನು ಅವಗಾಹಿಸುವ ಜ್ಞಾನವು ಸಂಶಯವು ( ಭಾಸಮಾನ ವಿರುದ್ಧ ಪ್ರಕಾರತಾ ನಿರೂಪಿತ ವಿಶೇಷ್ಯ ನಿರೂಪಕ ಜ್ಞಾನತ್ವಂ ) ಎಂದು ಲಕ್ಷಣ ಮಾಡಿದರೆ

तथा च एकधर्मिकसंशये अनेकधर्मिकानेककोटिकसंशयेऽपिभासमानविरुद्धानेकाकारनिष्ठप्रकारतानिरूपितविशेष्यताकत्वस्य सत्त्वान्नाव्याप्तिरिति चेन्न, संभावनारूपे, बाह्यप्रदेशे अनेन पुरुषेण भाव्यमित्यन्यतरकोटिप्रधानरूपसंशये तथा अनेकधर्मिक-एककोटिकसंशये च भासमानविरुद्धानेकाकारावगाहित्वाभावादव्याप्तिर्भवत्येव, अतः संशयविशेषलक्षणम् ।

॥ इति संशयविशेषलक्षणनिरूपणम् ॥

(२) संशयसामान्यलक्षणं तु—अनवधारणज्ञानं संशयः, तथा चावधारणभिन्नं ज्ञानं संशय इत्युक्तं भवति, सर्वसंशयेष्वपि अस्य लक्षणस्य सत्त्वेन नाव्याप्त्यादिदोषावकाशः ।

ननु अवधारणभिन्नं ज्ञानं संशय इत्युक्तं । तत्र अवधारणत्वं च संशयभिन्नत्वं,

---

ಏಕ ಧರ್ಮಿಕ ಸಂಶಯ ಹಾಗೂ ಅನೇಕ ಧರ್ಮಿಕ ಅನೇಕ ಕೊಟಿಕ, ಸಂಶಯಗಲ್ಲಿಯೂ ವಿರುದ್ಧವಾಗಿ ತೋರುವ ಅನೇಕಾಕಾರನಿಷ್ಠಪ್ರಕಾರತಾ ಹಾಗೂ ವಿಶೇಷ್ಯತಾವನ್ನೂ ಗ್ರಹಿಸುವ ಜ್ಞಾನತ್ವ ಇರುವದರಿಂದ, ಅವುಗಳಲ್ಲಿ ಅವ್ಯಾಪ್ತಿ ಬರದೇ ಸಂಶಯ ಸಾಮಾನ್ಯ ಲಕ್ಷಣವಾಗವದು, ಎಂಬ ಸಂಶಯ ಬಂದರೆ ಇದು ಸರಿಯಲ್ಲ.

ಹೊರಭಾಗದಲ್ಲಿ ಇಂಥ ಪುರುಷನಿರಬಹುದು—: ಎಂಬ ಸಂಭಾವನ ರೂಪವಾದ ಅನ್ಯತರಕೋಟಿ ಪ್ರಧಾನ ಸಂಶಯದಲ್ಲಿಯೂ. ಹಾಗೂ ' ಅವನು ಬ್ರಾಹ್ಮಣನೇ ಅಥಾವಾ ಇವನು ಬ್ರಾಹ್ಮಣನೆ ಎಂಬ ಅನೇಕ ಧರ್ಮಿಕ ಏಕ ಕೊಟಿಕ ಸಂಶಯದಲ್ಲಿಯೂ ವಿರುದ್ಧವಾಗಿ ತೋರುವ ಅನೇಕಾಕಾರಾವ ಗಾಹಿತ್ವವು ಇಲ್ಲದಕಾರಣ ಅವ್ಯಾಪ್ತಿದೋಷ, ಅದುದರಿಂದ ಮೇಲಿನ ಲಕ್ಷಣವು ಸಂಶಯ ವಿಶೇಷದ ಲಕ್ಷಣವೇ ಹೊರತು ಸಂಶಯ ಸಾಮಾನ್ಯ ಲಕ್ಷಣವಲ್ಲ.

೨ ಸಂಶಯ ಸಾಮಾನ್ಯದ ಲಕ್ಷಣವು-:

ಅನವ ಧಾರಣ ಜ್ಞಾನವು ಸಂಶಯವು. ಎಂದರೆ ನಿಶ್ಚಯ ಭಿನ್ನ ಜ್ಞಾನವು ಸಂಶಯವೆಂದಂತಾಯಿತು. ಈ ಲಕ್ಷಣವು ಎಲ್ಲ ಪ್ರಕಾರದ ಸಂಶಯಗಳಲ್ಲಿ ಬರುವದರಿಂದ ಅವ್ಯಾಪ್ತಿ ಮೊದಲಾದ ದೋಷಗಳು ಬರಲಾರವು. ( ಏಕೆಂದರೆ ಎಲ್ಲ ಸಂಶಯುಗಳು ನಿಶ್ಚಯ ಜ್ಞಾನದಿಂದ ಭಿನ್ನವಾಗಿದೆ )

ಶಂಕಾ—: ನಿಶ್ಚಯ ಭಿನ್ನ ಜ್ಞಾನವು ಸಂಶಯವೆಂದು ಹೇಳವದಾದರೆ, ನಿಶ್ಚಯವೆಂದರೆ

तथा च अवधारणभिन्नं ज्ञानं संशयः संशयभिन्नं ज्ञानमवधारणमित्यन्योन्याश्रयः स्यादिति चेदत्र **जनार्दनीये एवं समाहितं अवधारणभिन्नज्ञानमेव** संशयः, अवधारणत्वं च ( न संशयभिन्नत्वं ) **निष्कंपप्रवृत्तिजननयोग्यज्ञानत्वमिति** निर्वचनेनान्योन्याश्रयानवकाशात् । ननु **प्रवृत्तेः** निष्कंपत्वं च निःसंशयत्वमेवेति, पुनरप्यन्योन्याश्रय इति चेन्न, प्रवृतेः निष्कंपत्वं नाम ज्ञाने स्पष्टत्ववत् प्रवृत्तिगतजातिविशेष एवेति न **कश्चित्** क्षुद्रोपद्रव इति ।

**श्रीनिवासतीर्थीये** एवमुक्तं– न च संशयस्यापि धर्म्यंशे अवधारणत्वेन तत्रावधारणभिन्नत्वं वा अवधारणत्वानधिकरणत्वं वा नास्तीत्यसंभव इति वाच्यं,

---

**ಸಂಶಯ ಭಿನ್ನವೆಂದು ಅರ್ಥ,**

ಸಂಶಯವೆಂದರೆ ನಿಶ್ಚಯ ಭಿನ್ನವೆಂದರ್ಥ, ಹೀಗೆ ಅನ್ಯೋನ್ಯಾಶ್ರಯವೆಂಬದಕ್ಕೆ (ಹುಚ್ಚು ಹೋಗದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಹೋಗದು ಎಂಬ ನಾಣ್ಣುಡಿಯು ಉದಾಹರಣೆಯಾಗಿದೆ ) ಆದ್ದರಿಂದ ಈ ಲಕ್ಷಣ ಸಿದ್ಧಿಸಲಾರದು ಈ ವಿಷಯದಲ್ಲಿ ಜನಾರ್ಧನ ಭಟ್ಟರು ತಮ್ಮ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ–: ನಿಶ್ಚಯ **ಭಿನ್ನ** ಜ್ಞಾನವೇ ಸಂಶಯವು. ನಿಶ್ಚಯವೆಂದರೆ ಸಂಶಯ ಭಿನ್ನ ಜ್ಞಾನವೆಂದರ್ಥವಲ್ಲ. ನಿಷ್ಕಂಪ ಪ್ರವೃತ್ತಿಗೆ ಕಾರಣವಾದ ಜ್ಞಾನವೆಂದರ್ಥವು ( ಯಾವುದರಿಂದ ನಮ್ಮ ಪ್ರವೃತ್ತಿಯು ಸಫಲವಾಗುವದೋ ಆ ಜ್ಞಾನವು. ) ಪ್ರವೃತ್ತಿಯಲ್ಲಿ ನಿಷ್ಕಂಪವೆಂದರೇನು ಎಂದು ಆಕ್ಷೇಪಿಸಿದಲ್ಲಿ ಸಂಶಯ ಭಿನ್ನವೆಂದು ಹೇಳಿದಲ್ಲಿ ಮತ್ತೆ ಅನ್ಯೋನ್ಯಾಶ್ರಯ ಬಂದೇ ಬರುವದೆಂಬ ಶಂಕೆ ಬರುವದಾದರೆ, ಜ್ಞಾನದಲ್ಲಿ ಸ್ಪಷ್ಟತೆಯೆಂಬ ಧರ್ಮವು ಹೇಗೆ ಸ್ವಾಭಾವಿಕವೋ ಹಾಗೆಯೇ ಪ್ರವೃತ್ತಿಯಲ್ಲಿಯ ನಿಷ್ಕಂಪತ್ವವು ಸ್ವಾಭಾವಿಕ ಧರ್ಮವೆಂದು ( ನಿರ್ವಚನ ಮಾಡಲಾಗದ ಅಖಂಡ ಧರ್ಮ ) ಹೇಳಬೇಕು. ಆದುದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

ಈ ವಿಷಯದಲ್ಲಿ ಶ್ರೀನಿವಾಸ ತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಹೀಗೆ ಬರೆಯುತ್ತಾರೆ ಸಂಶಯವು ಕೂಡ ಧರ್ಮಿಯ ವಿಷಯದಲ್ಲಿ ( ವಿಶೇಷ್ಯಾಂಶದಲ್ಲಿ ) ಎಂದರೆ ಮುಂದಿರುವ ಪದಾರ್ಥದಲ್ಲಿ ನಿಶ್ಚಯವೇ ಆಗಿರುವದರಿಂದ, ನಿಶ್ಚಯ ಭಿನ್ನ [ ಸಂಶಯ ] ವಾಗಲಿಲ್ಲ. ಕಾರಣ ಸಂಶಯದಲ್ಲಿ ನಿಶ್ಚಯ ಭಿನ್ನವೆಂಬ ಲಕ್ಷಣವೇ ಬರಲಿಲ್ಲವಾದ್ದರಿಂದ, ಅನವಧಾರಣ ಜ್ಞಾನವು ಸಂಶಯವು, ಎಂಬ ಲಕ್ಷಣವು ಅಸಂಭವಿಯಾಗುವದೆಂದು ಅನ್ನಕೂಡದು

प्रकारावधारणज्ञानत्वस्याभिमतत्वात्, अवधारणत्वं च निश्चयत्वं, तच्च व्यस्थितकोटिकत्वमतो नात्र कश्चित् क्षुद्रोपद्रव इति संक्षेपः ।

तथा च संशये धर्म्यंशेऽवधारणत्वेऽपि प्रकारांशे व्यवस्थितकोटिकत्वरूपावधारणत्वाभावादवधारणभिन्नत्वस्य तत्रापि सत्त्वेन नासंभव इत्यभिप्रायः ।

॥ इति संशयसामान्यलक्षणम् ॥

(३) संशयकारणं तु–निर्णायकाभावसहकृतसाधारणधर्मवद्धर्मिज्ञानं कारणं, यथा–अयं स्थाणुर्वा पुरुषो वा इत्यत्र स्थाणुत्वपुरुषत्वकोटिनिर्णायकाभावासहकृतसाधारणघर्म ऊर्ध्वता, तादृशधर्मवद्धर्मी, पुरोवर्तिपदार्थः, तद्ज्ञानं पूर्वोक्तसंशयं प्रति कारणम् ।

---

[ **ಲಕ್ಷ್ಯ**ವಾದ ಧರ್ಮಿಯಲ್ಲಿ ಅನವಧಾರಣಾ ಭಿನತ್ವವಾಗಲೀ. ಅನವಧಾರಣಾ ಅನಧಿಕರಣತ್ವವಾಗಲೀ, ಇಲ್ಲದ್ದರಿಂದ ಅಸಂಭವಿಯಾಗುವದೆಂದು ಹೇಳಲಾಗದು ] ಪ್ರಕಾರಾಂಶದಲ್ಲಿ ನಿಶ್ಚಯವಿದ್ದಾಗ ಈ ದೋಷ ಬರುವದೆಂದು ಅಭಿಪ್ರಾಯವು. ಮುಂದಿರುವ ವಸ್ತುವು ಮೋಟು ಮರವೋ, ಮನುಷ್ಯನೋ ಎಂಬ ಸಂಶಯದಲ್ಲಿ ಧರ್ಮಿ ಅಂಶದಲ್ಲಿ ನಿಶ್ಚಯ ಇದ್ದರೂ, ಮೋಟು ಮರ ಧರ್ಮ ಹಾಗೂ ಪುರುಷಧರ್ಮಗಳ [ ಪ್ರಕಾರಗಳು ] ಅಂಶದಲ್ಲಿ ನಿಶ್ಚಯ ಇರುವದಿಲ್ಲವಾದ್ದರಿಂದಲೇ ಸಂಶಯ ಬರುತ್ತದೆ. ಹೀಗೆಯೇ **ಸರ್ವ** ಸಂಶಯಗಳಲ್ಲಿಯೂ ನಿಶ್ಚಯ ಭಿನ್ನತ್ವವಿರುವದರಿಂದ ಲಕ್ಷಣ ಸಮನ್ವಯವಾಗುತ್ತದೆ. [ ಅಸಂಭವಿ ದೋಷ ಬರುವುದಿಲ್ಲ ] ನಿಶ್ಚಯವೆಂದರೆ **ಅವಧಾರಣವು**. ಅವಧಾರಣವೆಂದರೆ **ವ್ಯವಸ್ಥಿತ** ಧರ್ಮಗಳ ( ಪ್ರಕಾರಗಳ ) ಜ್ಞಾನವೆಂದರ್ಥವು. ಸಂಶಯದಲ್ಲಿ ಪ್ರಕಾರಗಳ ವಿಷಯದಲ್ಲಿ ಇವು ಹೀಗೆಯೇ ಎಂಬ ವ್ಯವಸ್ಥಿತ ಧರ್ಮಗಳ ಜ್ಞಾನವು ( ವ್ಯವಸ್ಥಿತ ಕೋಟಿಕತ್ವರೂಪ ಅವಧಾರಣತ್ವ ) ಇಲ್ಲದಿರುವದರಿಂದ ಲಕ್ಷಣ ಸಮನ್ವಯವಾಗುತ್ತದೆ. ಯಾವ ದೋಷವೂ ಬರುವದಿಲ್ಲ.

**ಸಂಶಯ ಕಾರಣವು**–: ನಿರ್ಣಾಯಕ ಅಭಾವದಿಂದ ಕೂಡಿದ ಸಾಧಾರಣ ಧರ್ಮವುಳ್ಳ ಧರ್ಮಿಯ ಜ್ಞಾನವು ಸಂಶಯಕ್ಕೆ ಕಾರಣವು. ಉದಾಹರಣೆಗೆ– ಅದು ಮೋಟುಮರವೋ ಮನುಷ್ಯನೋ ಎಂಬ ಸಂಶಯದಲ್ಲಿ, ಮರದ ಧರ್ಮ ಪುರುಷ ಧರ್ಮಗಳ [ ಸ್ಥಾಣುತ್ವ ಪುರುಷತ್ವಗಳಲ್ಲಿ ] ನಿಶ್ಚಯ ಅಭಾವದಿಂದ ಕೂಡಿದ್ದ ಸಾಧಾರಣ ಧರ್ಮವಾದ **ಎತ್ತರವು** [ ಊರ್ಧ್ವತಾ ] ಮುಂದೆ ತೋರುವ ಪದಾರ್ಥದಲ್ಲಿ ಇದ್ದದರಿಂದ,

साधारणत्वं च–संशयकोटयधिकरणवृत्तित्वे सति संशयविशेष्यवृत्तित्वं, यथा, अयं स्याणुर्वा पुरुषो वा इत्यत्र साधारणधर्मः, ऊर्ध्वता, तत्र लक्षणसमन्वयः, यथा–

स्थाणुर्वा पुरुषो वा इति संशयः, संशयकोटी स्थाणुत्वपुरुषत्वकोटी, तदधिकरणं स्थाणुपुरुषौ तद्वृत्तिः, ऊर्ध्वता, तद्वृत्तित्त्वं ऊर्ध्वतायां, संशयविशेष्यं पुरोवृत्तिपदार्थः, तद्वृत्तिः, ऊर्ध्वता, तद्वृत्तित्त्वं उर्ध्वतायामिति लक्षणसमन्वयः-

अत्र ऊर्ध्वता साधारणधर्म इत्युक्तः, स्थाणुगत-ऊर्ध्वता-एव पुरुषगता कथं भवति? " भिन्नाश्च भिन्नधर्मश्च पदार्था निखिला अपि ,, इति नियमादिति चेत् आदर्शे एवमुक्तं–साधारणत्त्वं च संशयकोटिधर्मवृत्तिधर्मसजातीयत्त्वमिति ।

---

ಈ ಎತ್ತರವಿರುವ ಪದಾರ್ಥಜ್ಞಾನವು ಸಂಶಯಕ್ಕೆ ಕಾರಣವು.

ಸಾಧಾರಣ ಧರ್ಮ ಎಂದರೆ–: ಸಂಶಯ ಕೋಟಿಗಳಿಗೆ ಆಶ್ರಯ [ ಅಧಿಕರಣ ] ವಾದ ಪದಾರ್ಥಗಳಲ್ಲಿದ್ದು ಸಂಶಯಕ್ಕೆ ಧರ್ಮಿ [ ವಿಶೇಷ್ಯ ] ಯಾದ ಪದಾರ್ಥದಲ್ಲಿಯೂ ಇರುವ ಧರ್ಮವು. ಉದಾಹರಣೆಗೆ– ಅದು [ ಸ್ಥಾಣು ] ಮೋಟುಮರವೋ ಅಥವಾ ಮನುಷ್ಯನೋ ಎಂಬ ಸಂಶಯದಲ್ಲಿ ಎತ್ತರವು ಸಾಧಾರಣ ಧರ್ಮವು.

**ಲಕ್ಷಣ ಸಮನ್ವಯವು** : " ಅಯಂ ಸ್ಥಾಣುಃ ವಾಪುರುಷೋವಾ " ಎಂಬ ಸಂಶಯದಲ್ಲಿ 'ಸ್ಥಾಣುತ್ವ, ಹಾಗೂ ' ಪುರುಷತ್ವ , ಸಂಶಯ ಕೋಟಿಗಳು. ಇವುಗಳಿಗೆ ಅಧಿಕರಣಗಳು ' ಸ್ಥಾಣು , ಹಾಗೂ ' ಪುರುಷನು, ಅವುಗಳಲ್ಲಿ [ ಊರ್ಧ್ವತಾ ] ಎತ್ತರ ಧರ್ಮವಿರುವದು. ಈ ಧರ್ಮವು ಸಂಶಯ ವಿಶೇಷ್ಯವಾದ ಧರ್ಮಿಯಲ್ಲಿ ( ಮುಂದಿರುವ ಪದಾರ್ಥದಲ್ಲಿ ) ಯೂ ಇರುವದರಿಂದ, ಊರ್ಧ್ವತೆ ಎಂದರೆ ಎತ್ತರವು ಸಾಧಾರಣ ಧರ್ಮವು. [ ಒಟ್ಟು ಅಭಿಪ್ರಾಯವು– ಸಂಶಯದಲ್ಲಿ ಯಾವ ಧರ್ಮವು ಉಭಯಕೋಟಿಗೆ ಅಧಿಕರಣವಾದವುಗಳಲ್ಲಿ ಇರುವದೋ ಮತ್ತು ಸಂಶಯದ ವಿಶೇಷ್ಯವಾದ ಮುಂದಿರುವ ಪದಾರ್ಥದಲ್ಲಿಯೂ ಇರುವದೋ ಅದೇ ಧರ್ಮವೇ ಸಾಧಾರಣ ಧರ್ಮವು. ] ಪ್ರಕೃತ ಸ್ಥಾಣುರ್ವಾ ಪುರುಷೋವಾ ಎಂಬ ಸಂಶಯದಲ್ಲಿ ಊರ್ಧ್ವತೆಯು ಸಾಧಾರಣಧರ್ಮವೆಂದಂತಾಯಿತು. ಆದರೆ ಸಮಸ್ತ ಪದಾರ್ಥಗಳು ಪರಸ್ಪರ ಭಿನ್ನವಾಗಿಯೂ ಭಿನ್ನ ಭಿನ್ನ ಧರ್ಮವುಳ್ಳದ್ದಾಗಿಯೂ ಇರುವದೆಂಬ ನಿಯಮವಿರುವದರಿಂದ, ಸ್ಥಾಣುಗತವಾದ ಊರ್ಧ್ವತೆಯು ಪುರುಷಗತ ಹೇಗಾಗುವದೆಂಬ ಸಂಶಯಬಂದರೆ.

एवं सर्वत्र साजात्यघटितं लक्षणं, कार्यम् ।

अत्र नैयायिकादयः संशयं प्रति पंच कारणानि वदंति –तदित्थम् (१) साधारणधर्मः (२) असाधारणधर्मः (३)विप्रतिपत्तिः (४) उपलब्धिः (५) अनुपलब्धिरिति । तद्यथा–

(१) स्थाणुपुरुषयोः साधारणं ऊर्ध्वतालक्षणं धर्मं पुरोवर्तिन्युपलभ्य स्थाणुपुरुषौ स्मृत्वा विशेषजिज्ञासायां स्थाणुत्वनिश्चायकं वक्रकोटरादिकं पुरुषत्वनिश्चायकं शिरःपाण्यादिकं च अनुपलभमानस्य पुंसो डोलायमानं संशयज्ञानमुत्पद्यते–किमयं स्थाणुर्वा पुरुषो वेति, अयं च साधारणधर्मजन्यसंशयः ।

(२) असाधारणधर्मजन्यसंशयो यथा–शब्दे आकाशविशेषगुणत्वमसाधाणधर्ममुपलभमानस्य निर्णायकमजानतः, संशयो भवति

---

ಸದೃಶವಾದ ಊರ್ಧ್ವತೆಯು ಪುರುಷನಲ್ಲಿರುತ್ತದೆಂದು ಹೇಳುವದರಿಂದ ಉಕ್ತ ನಿಯಮಕ್ಕನುಗುಣವೇ ಆಗುವದು. ಸ್ಥಾಣು ವೃತ್ತಿ ಊರ್ಧ್ವತಾ ಸದೃಶ ಧರ್ಮವೇ ಪುರುಷ ವೃತ್ತಿ ಊರ್ಧ್ವತಾ ಎಂದು ತಿಳಿಯಬೇಕು.) ಹೀಗೆ ಎಲ್ಲೆಡೆಗೆ ಸಾದೃಶ್ಯದಿಂದ ಕೂಡಿದ್ದಾಗಿಯೇ ಲಕ್ಷಣ ಹೇಳಬೇಕು.

ಸಂಶಯವನ್ನು ಕುರಿತು ನೈಯಾಯಿಕರೇ ಮೊದಲಾದವರು ಐದು ಕಾರಣಗಳಿರುತ್ತವೆಂದು ಹೇಳುತ್ತಾರೆ- ೧) ಸಾಧಾರಣ ಧರ್ಮ ೨) ಅಸಾಧಾರಣ ಧರ್ಮ ೩) ವಿಪ್ರತಿಪತ್ತಿ ೪) ಉಪಲಬ್ಧಿ ಅವುಗಳ ವಿವರಣೆ ಹೀಗಿದೆ.

(೧) ಸಾಧಾರಣ ಧರ್ಮದಿಂದ ಹುಟ್ಟುವ ಸಂಶಯವೆಂದರೆ,- ಸ್ಥಾಣು ಹಾಗೂ ಪುರಷ ಸಾಧಾರಣವಾದ ಊರ್ಧ್ವತಾ ಧರ್ಮವನ್ನು ಮುಂದಿರುವ ಪದಾರ್ಥದಲ್ಲಿ ಕಂಡು ಸ್ಥಾಣು ಪುರುಷರ ಸ್ಮರಣೆ ಬಂದು ಸ್ಥಾಣುತ್ವ ನಿಶ್ಚಾಯಕವಾದ ಟೊಂಗೆ ಪೊದರುಗಳನ್ನಾಗಲೀ ಪುರುಷತ್ವ ನಿಶ್ಚಾಯಕವಾದ ಕೈ ಕಾಲು ತಲೆಗಳನ್ನಾಗಲೀ ಕಾಣಲಾರದೇ ಇದ್ದ ಪುರುಷನಿಗೆ ಮುಂದಿರುವ ಪದಾರ್ಥವು ಸ್ಥಾಣುವೇ ಪುರುಷನೇ ಎಂಬ ಹೊಯ್ದಾಡುವ ಸಂಶಯ ಜ್ಞಾನವು ಹುಟ್ಟುತ್ತದೆ ಈ ಸಂಶಯವು ಊರ್ಧ್ವತಾ ರೂಪ ಸಾಧಾರಣ ಧರ್ಮದಿಂದ ಹುಟ್ಟುತ್ತದೆ.

೨) ಅಸಾಧಾರಣ ಧರ್ಮದಿಂದ ಹುಟ್ಟುವ ಸಂಶಯವೆಂದರೆ- ಶಬ್ದದಲ್ಲಿ ಆಕಾಶ ವಿಶೇಷ ಗುಣತ್ವವೆಂಬ ಅಸಾಧಾರಣ ಧರ್ಮವನ್ನು ಕಂಡು ನಿಶ್ಚಾಯಕವನ್ನು ತಿಳಿಯದೇ ಇರುವವನಿಗೆ ಶಬ್ದವು ನಿತ್ಯವೋ ಅನಿತ್ಯವೋ ಎಂಬ ಸಂಶಯ ಬರುವದು.

किमयं शब्दः नित्यो वा अनित्यो वेति ।

(३) विप्रतिपत्तिजन्यसंशयो यथा–इंद्रियेषु वैशेषिकसांख्ययोः भौतिकत्वाभौतिकत्वविप्रतिपत्तिं पश्यतो निश्चायकमजानतः पुरुषस्य संदेहो भवति-किमिंद्रियाणि भौतिकानि उत अभौतिकानीती ।

(४) उपलब्धिजन्यसंशयो यथा–कूपखननानंतरं जलोपलब्धौ सत्यां निश्चायकाभावे संशयो जायते-किं प्राक् सदेवोदकं कूपखननेनाभिव्यक्तं उपलभ्यते उत प्रागविद्यमानमेवोदकं कूपखननेनोत्पन्नमिति ।

(५) अनुपलब्धिजन्यसंशयो यथा–अस्मिन्वटे पिशाचोऽस्तीति वार्तां श्रुतवतो हि वटसमीपं गतस्य पिशाचानुपलब्धौ सत्यां निर्णायकाभावे संशयो भवति-किं विद्यमान एव पिशाचो अंतर्धानशक्त्या नोपलभ्यते उत अविद्यमान एवेति ।

---

ಈ ಸಂಶಯ ಅಸಾಧಾರಣ ಧರ್ಮದಿಂದ ಹುಟ್ಟಿತು.

೩) ವಿಪ್ರತಿ ಪತ್ತಿಯಿಂದ ( ವಿವಾದದಿಂದ ) ಹುಟ್ಟುವ ಸಂಶಯವೆಂದರೆ ಇಂದ್ರಿಯಗಳು ಭೌತಿಕವೆಂದು ಅಭೌತಿಕವೆಂದು ವೈಶೇಷಿಕರು ಹಾಗೂ ಸಾಂಖ್ಯರಲ್ಲಿ ವಿವಾದನ್ನು ಕಂಡ ಮಧ್ಯಸ್ಥ ಪುರುಷನಿಗೆ ನಿಶ್ಚಾಯಕ ವಿಲ್ಲದೆ ಇರುವಾಗ, ಇಂದ್ರಿಯಗಳು ಭೌತಿಕವೋ ಅಥವಾ ಅಭೌತಿಕವೋ ಎಂಬ ಸಂಶಯವು ಬರುವದು ಈ ಸಂಶಯವು ಉಭಯವಾದಿಗಳ ವಿವಾದದಿಂದ ( ವಿಪ್ರತಿ ಪತ್ತಿಯಿಂದ ) ಹುಟ್ಟುವದು.

೪) ಉಪಲಬ್ಧಿಯಿಂದ ಹುಟ್ಟುವ ಸಂಶಯವೆಂದರೆ– ಭೂಮಿಯನ್ನು ತೋಡಿದ ಮೇಲೆ ನೀರು ಕಂಡ ನಂತರ ಇಂತಹಕಾರಣದಿಂದಲೇ ನೀರು ಬಂದಿತೆಂದು ತಿಳಿಯದ ಪುರುಷನಿಗೆ, ಮೊದಲಿದ್ದ ನೀರೆ ಭೂಮಿಯನ್ನು ತೋಡಿದ ಮೇಲೆ ಬಂದಿತೇ ? ಅಥವಾ ಮೊದಲು ಇಲ್ಲದೇ ಇದ್ದ ನೀರು ಅಗೆತದಿಂದ ಉತ್ಪನ್ನವಾಯಿತೇ ? ಎಂಬ ಸಂಶಯ ಹುಟ್ಟುತ್ತದೆ ಈ ಸಂಶಯವು ನೀರಿನ ಉಪಲಬ್ಧಿಯಿಂದ ಹುಟ್ಟಿತು.

೫] ಅನುಪ ಲಬ್ಧಿಯಿಂದ [ ತೋರದೇ ಇರುವದರಿಂದ ] ಹುಟ್ಟುವ ಸಂಶಯವೆಂದರೆ- ಒಂದು ಆಲದಮರದಲ್ಲಿ ಪಿಶಾಚಿ ಇರುವದೆಂಬ ವಾರ್ತೆ ಕೇಳಿದ ಮನುಷ್ಯನು; ಆ ವೃಕ್ಷದ ಸಮಿಪಕ್ಕೆ ಬಂದು ಅಲ್ಲಿ ಪಿಶಾಚವನ್ನು ಕಾಣದೇ, ನಿರ್ಣಾಯಕ ಚಿನ್ಹವನ್ನು ಕಾಣದಿದ್ದಾಗ, ಈ ವೃಕ್ಷದಲ್ಲಿದ್ದ ಪಿಶಾಚವು ಅಂತರ್ಧಾನ ಶಕ್ತಿಯಿಂದ ಕಾಣುವದಿಲ್ಲವೇ ? ಅಥವಾ ಪಿಶಾಚವು ಇರಲಾರದ್ದರಿಂದ ಕಾಣಲಾರದೇ ? ಎಂಬ ಸಂಶಯ ಬರುತ್ತದೆ. ಈ ಸಂಶಯ ಅನುಪಲಬ್ಧಿಯಿಂದ ಹುಟ್ಟಿತು.)

उपलब्ध्योः साधारण धर्मजन्यसंशय एवांतर्भावात् त्रीण्येव संशयकारणानीति नवीननैयायिकाः, तदित्थम् ।

(१) उपलब्धिर्हि सतामेव घटादीनां प्रदीपारोपणेन दृष्टा, असतां घटादीनां च कुलालव्यापारानंतरं दृष्टा । तथा च उपलब्धेः सदसत्साधारण्यात् साधारणधर्मजन्यसंशय एवायं संशयोऽप्यन्तर्भवति, अतो न पृथग् वक्तव्य इति ।

(२) तथा अनुपलब्धिः सतामीश्वरादीनां दृष्टा, असतां शशविषाणादीनां च दृष्टेति, अनुपलब्धेः सदसत्साधारण्यात् साधारणधर्मजन्यसंशये एवायमपि संशयोऽन्तर्भवतीति न पृथग् वक्तव्यः ।

अतः संशयकारणानि त्रीण्येव वक्तव्यानीति तेषामाशयः ।

**इति संशयं प्रति पंच त्रीणि वा कारणानीति नैयायिकप्रक्रियानिरूपणम्**

---

ಈ ಸಂಶಯದ ಕಾರಣಗಳ ವಿಷಯದಲ್ಲಿ ನವೀನ ನೈಯಾಯಿಕರು 'ಉಪಲಬ್ಧಿ, ಹಾಗೂ 'ಅನುಪಲಬ್ಧಿ, ಇವೆರಡೂ ಸಂಶಯಗಳು ಸಾಧಾರಣ ಧರ್ಮದಿಂದಲೇ ಹುಟ್ಟುವದರಿಂದ ಅದರಲ್ಲಿ ಸಮಾವೇಶವಾಗುವದೆಂದೂ ಮೂರೇ ಸಂಶಯದ ಕಾರಣಗಳೆಂದು ಹೇಳುತ್ತಾರೆ.

ಅ] ಕತ್ತಲೆಯಲ್ಲಿದ್ದ ಘಟವು. ದೀಪವನ್ನು ಹಚ್ಚುವದರಿಂದ ಉಪಲಬ್ಧವಾಗುತ್ತದೆ, ಮೊದಲು ಇಲ್ಲದೇ ಇದ್ದ ಘಟವು ಕುಂಬಾರನ ವ್ಯಾಪಾರಾ ನಂತರದಲ್ಲಿ ಉಪಲಬ್ಧವಾಗುತ್ತದೆ. ಉಪಲಬ್ಧಿಯು, ಇರುವ [ಇಲ್ಲದಿರುವ] ಇವುಗಳಲ್ಲಿ ಸಾಧಾರಣವಾದ ಕಾರಣ ಈ ಉಪಲಬ್ಧಿ ಜನ್ಯ ಸಂಶಯವು ಸಾಧಾರಣ ಧರ್ಮಜನ್ಯ ಸಂಶಯದಲ್ಲಿಯೇ ಅಂತರ್ಭಾವವಾಗುತ್ತದೆ ಪ್ರತ್ಯೇಕ ಹೇಳುವ ಕಾರಣವಿಲ್ಲವೆಂದು ಹೇಳುತ್ತಾರೆ.

ಆ] ಇದೇ ರೀತಿ, ಇದ್ದ ಈಶ್ವರನೇ ಅಂತರ್ಧಾನ ಶಕ್ತಿಯಿಂದ ಅನುಪಲಬ್ಧನಾಗಿದ್ದಾನೇ, ಎಂದೂ ಇಲ್ಲದೆ ಇದ್ದ ಮೊಲದ ಕೋಡು ಅನುಪಲಬ್ಧವಾಗಿದೆ, ಹೀಗೆ ಅನುಪಲಬ್ಧಿಯು ಈಶ್ವರ ಮುಂತಾದ 'ಸತ್, ಪದಾರ್ಥಗಳಲ್ಲಿಯೂ. ಮೊಲದ ಕೋಡು ಮುಂತಾದ ಅಸತ್ ಪದಾರ್ಥಗಳಲ್ಲಿಯೂ ಇದ್ದು ಉಭಯ ಸಾಧಾರಣವಾದ್ದರಿಂದ ಅನುಪಲಬ್ಧಿ ಜನ್ಯ ಸಂಶಯವು ಸಾಧಾರಣ ಧರ್ಮದಿಂದಲೇ ಹುಟ್ಟುವದರಿಂದ ಅದರಲ್ಲಿಯೇ ಅಂತರ್ಭಾವ ಮಾಡಬೇಕೆಂದು ಹೇಳುತ್ತಾರೆ. ಕಾರಣ ಇದನ್ನು ಪ್ರತ್ಯೇಕ ಹೇಳಬೇಕಾಗಿಲ್ಲವೆಂದು ನವೀನ ನೈಯಾಯಿಕರ ಮತವು.

असाधारणविप्रतित्त्योरपि साधारणधर्म एवांतर्भावात् साधारधर्म एक एव संशयहेतुरिति तत्त्वं तत्कथमिति चेत् **भावदीपस्थ**विषयोऽत्र कथ्यते ।

प्रकृते आकाशविशेषगुणत्वरूप, असाधारणधर्मो हि न स्वरूपेण संशयहेतुः, नित्यत्वानित्यत्वरूपकोटिस्मरणकारणत्वाभावात्, किंतु नित्यानित्यव्यावृत्तत्वेन ज्ञातः सन्, तथा च–नित्यव्यावृत्तत्वं अनित्यधर्मो घटरूपदौ संशयधर्मिणि शब्दे च साधारणं, अनित्यव्यावृत्तत्वं नित्यधर्मो गगनपरिमाणादौ संशयधर्मिणि शब्दे च वर्तत इति, नित्यानित्यवस्तु (गगनपरिमाणघटरूप) धर्मेषु साधारणयोः अनित्यव्यावृत्तत्वनित्यव्यावृत्तत्वयोः आकाशविशेषगुणत्वे वर्तमानत्वात्

---

ಸಿದ್ಧಾಂತವು-: ಈ ವಿಷಯದಲ್ಲಿ ನಿಜವಾದ ತತ್ತ್ವವೆಂದರೆ ಅಸಾಧಾರಣ ಧರ್ಮ ಹಾಗೂ ವಿಪ್ರತಿಪತ್ತಿಗಳು ಸಾಧಾರಣ ಧರ್ಮದಲ್ಲಿಯೇ ಅಂತರ್ಭಾವವಾಗುವದರಿಂದ ' ಸಾಧಾರಣ ಧರ್ಮವೊಂದೇ, ಸಂಶಯಕ್ಕೆ ಕಾರಣವು ಅದು ಹೇಗೆಂದರೆ, ಭಾವ ದೀಪದಲ್ಲಿ ಹೇಳಿದ್ದನ್ನು ಇಲ್ಲಿ ವಿವರಿಸಲಾಗುತ್ತದೆ.

[ಈಗ ಶಬ್ದದಲ್ಲಿಯ ಆಕಾಶ ವಿಶೇಷಗುಣತ್ವ ಅಸಾಧಾರಣ ಧರ್ಮವು, ಸ್ವತಃ ಸಂಶಯಕ್ಕೆ ಕಾರಣವಾಗುವದಿಲ್ಲ, ಏಕೆಂದರೆ ಆ ಧರ್ಮವು ನಿತ್ಯತ್ವ ಅನಿತ್ಯತ್ವ ಕೋಟಿಯ ಸ್ಮರಣ ತಂದು ಕೊಡುವದಿಲ್ಲ, ಆದರೆ ನಿತ್ಯತ್ವದಿಂದ ಭಿನ್ನವಾಗಿ ತಿಳಿದು ಸಂಶಯ ಕಾರಣವಾಗುತ್ತದೆ. ಹೇಗೆಂದರೆ– ನಿತ್ಯ ವ್ಯಾವೃತತ್ವವು ( ನಿತ್ಯ ಪದಾರ್ಥದಿಂದ ಭಿನ್ನವಾದ ಧರ್ಮವು ) ಅನಿತ್ಯ ಧರ್ಮವಾದ ಘಟರೂಪದಲ್ಲಿಯೂ ಹಾಗೂ ಸಂಶಯ ಧರ್ಮಿಯಾದ ಶಬ್ದದಲ್ಲಿಯೂ ಇದೆ. ಅದರಂತೆ ಅನಿತ್ಯ ವ್ಯಾವೃತತ್ವವು ( ಅನಿತ್ಯ ಧರ್ಮದಿಂದ ಭಿನ್ನವಾದ ಧರ್ಮ ) ನಿತ್ಯ ಧರ್ಮವಾದ ಗಗನ ಪರಿಮಾಣದಲ್ಲಿ, ಹಾಗೂ ಸಂಶಯ ಧರ್ಮಿಯಾದ ಶಬ್ದದಲ್ಲಿಯೂ ಇದೆ. ನಿತ್ಯಾನಿತ್ಯವಸ್ತುವಾದ ಗಗನ ಪರಿಮಾಣ ಹಾಗೂ ಘಟರೂಪ ಧರ್ಮಗಳಲ್ಲಿ, ಹಾಗೂ ಶಬ್ದದಲ್ಲಿ, ಸಾಧಾರಣವಾದ ಅನಿತ್ಯವ್ಯಾವೃತತ್ವ, ನಿತ್ಯ ವ್ಯಾವೃತತ್ವ ಧರ್ಮಗಳು ' ಆಕಾಶ ವಿಶೇಷ ಗುಣತ್ವ, ಧರ್ಮದಲ್ಲಿ ಅವೆ. ( ಅಂದರೆ ಆಕಾಶ ವಿಶೇಷ ಗುಣತ್ವ ಧರ್ಮವು ನಿತ್ಯವಾದ ಗಗನ ಪರಿಮಾಣಾದಿಗಳಿಂದ ಭಿನ್ನವಾಗಿದೆ. ಕಾರಣ ಅದರಲ್ಲಿ ನಿತ್ಯ ವ್ಯಾವೃತತ್ವವು ಬಂದಿತು, ಮತ್ತು ಅನಿತ್ಯವಾದ ಘಟರೂಪಾದಿಗಳಿಂದ ಭಿನ್ನವಾದ ಕಾರಣ ಆಕಾಶವಿಶೇಷಗುಣತ್ವದಲ್ಲಿ ಅನಿತ್ಯವ್ಯಾವೃತತ್ವವೂ ಬಂದಿತು ಎಂಬ ಭಾವ )

तादृशसाधारणधर्मद्वयोपेतः, अयमाकाशविशेषगुणत्वधर्मः स्वाधिकरणे शब्दे नित्योऽनित्यो वेति संशयमादधातीति सोऽपि साधारण एव, तादृशधर्मविशिष्टः सन्नेव संशयाधायको न स्वत इति स्वयमपि तथैव भवतीति बोध्यम् ।

ननु ऊर्ध्वतालक्षणसाधारणधर्मस्य एकस्यैव कोटिस्मरणद्वारा संशयहेतुत्वं दृष्टं, इह तु नित्यव्यावृत्तधर्मवत्त्वं अनित्यव्यावृत्त धर्मवत्त्वं चेति धर्मद्वयं साधारणमित्युक्तं; तत्कथं धर्मद्वयस्य संशयहेतुत्वमिति चेत्, भावविवरणोक्तविषय उच्यते—

---

ನಿತ್ಯ ವ್ಯಾವೃತತ್ವ ಅನಿತ್ಯ ವ್ಯಾವೃತತ್ವ ಈ ಧರ್ಮ ತನಗೆ ಅಧಿಕರಣವಾದ ಶಬ್ದದಲ್ಲಿ ನಿತ್ಯವೋ ? ಅನಿತ್ಯವೋ ? ಎಂಬ ಸಂಶಯ ಹುಟ್ಟಿಸುವದರಿಂದ, ಈ ಸಂಶಯವೂ ಸಾಧಾರಣ ಧರ್ಮಜನ್ಯವೇ ಆಗುತ್ತದೆ.

(ವಿವರಣೆ– ಆಕಾಶ ವಿಶೇಷ ಗುಣತ್ವ ಧರ್ಮವು ಶಬ್ದದ ಅಸಾಧಾರಣ ಧರ್ಮ, ಅದನ್ನು ಬಿಟ್ಟು ಮತ್ತೊಂದು ಕಡೆ ಇಲ್ಲ ) ಈ ಅಸಾಧಾರಣ ಧರ್ಮದಲ್ಲಿ ನಿತ್ಯ ವ್ಯಾವೃತತ್ವ, ಅನಿತ್ಯವ್ಯಾವೃತತ್ವ, ಇವು ಸಾಧಾರಣ ಧರ್ಮಗಳು. ಏಕೆಂದರೆ ಇವು ಘಟರೂಪ ಹಾಗೂ ಗಗನ ಪರಿಮಾಣ ಮತ್ತು ಶಬ್ದದಲ್ಲಿ ಇರುವದರಿಂದ ಸಾಧಾರಣವಾಗಿವೆ. ಈ ಸಾಧಾರಣ ಧರ್ಮದ್ವಯಗಳಿಂದ ಕೂಡಿದ, ಆಕಾಶ ವಿಶೇಷ ಗುಣತ್ವರೂಪ ಧರ್ಮವು, [ ತನಗೆ ಆಶ್ರಯವಾದ ] ಶಬ್ದದಲ್ಲಿ ನಿತ್ಯವ್ಯಾವೃತತ್ವ ಧರ್ಮದಿಂದ ಕೂಡಿದ, ಆಕಾಶ ವಿಶೇಷಗುಣತ್ವ ವಿರುವದರಿಂದ ಶಬ್ದವು ಅನಿತ್ಯವೋ ? ಅಥವಾ ಅನಿತ್ಯ ವ್ಯಾವೃತತ್ವ ಧರ್ಮದಿಂದ ಕೂಡಿದ ಆಕಾಶ ವಿಶೇಷ ಗುಣತ್ವ ಇರುವದರಿಂದ ಶಬ್ದವು ನಿತ್ಯವೋ ? ಎಂಬ ಸಂಶಯವನ್ನು ಹುಟ್ಟಿಸುವದರಿಂದ ಈ ಆಕಾಶ ವಿಶೇಷ ಗುಣತ್ವದಿಂದ ಹುಟ್ಟಿದ ಸಂಶಯವು ಸಾಧಾರಣ ಧರ್ಮಜನ್ಯ ಸಂಶಯವೇ ಆಗುತ್ತದೆ ಹೊರತು ಅಸಾಧಾರಣ ಧರ್ಮಜನ್ಯ ಸಂಶಯ ಆಗುವದಿಲ್ಲ. ಯಾಕೆಂದರೆ ಸಾಧಾರಣ ಧರ್ಮವಾಗದೇ ಸ್ವತಃ ಇದು ಸಂಶಯ ಹುಟ್ಟಿಸಲಾರದು.)

ಶಂಕಾ–: ಅಯಂ ಸ್ಥಾಣುರ್ವಾ ಪುರುಷೋವಾ ಎಂಬಲ್ಲಿ ಊರ್ಧ್ವತಾ ಲಕ್ಷಣ ಸಾಧಾರಣ ಧರ್ಮವು ಇದೊಂದೇ ಸಂಶಯ ಕಾರಣವಾದದ್ದು ಕಂಡು ಬಂದಿದೆ ಆದರೆ ಪ್ರಕೃತ ನಿತ್ಯೋವಾ ಅನಿತ್ಯೋವಾ ಎಂಬಲ್ಲಿ ಅನಿತ್ಯವ್ಯಾವೃತತ್ವವು, ನಿತ್ಯವ್ಯಾವೃತತ್ವ, ಎಂಬ ಎರಡು ಧರ್ಮಗಳು ಸಂಶಯಕ್ಕೆ ಕಾರಣವಾದದ್ದು ಕಂಡು ಬರುತ್ತದೆ. ಸಾಧಾರಣ ಧರ್ಮದ್ವಯಗಳಿಗೆ ಸಂಶಯ ಕಾರಣತ್ವ ಹೇಗೆ ಕೂಡುತ್ತದೆ ? ಎಂದರೆ

एकस्येव धर्मद्वयस्यापि संशयहेतुत्वे बाधकाभावात्, ननु ऊर्ध्वतादेः पुरोवृत्तिनिष्ठस्य कोटिद्वयसहचरितत्वमेव साधारण्यं दृष्टं, यथा–पुरोवृत्तिधर्मः ऊर्ध्वता, तस्याः स्थाणुत्वपुरुषत्वकोटिद्वये सहचारो वर्तत इति ऊर्ध्वतायाः साधारण्यं, इह तु शब्दनिष्ठयोः नित्यव्यावृत्तधर्मवत्त्वानित्यव्यावृत्तधर्मवत्त्वयोः प्रत्येकं नित्यत्वानित्यत्त्वरूप-एकैककोटिसहचरितत्त्वेऽपि न तदुभयकोटिसहचरितत्त्वं, अतः कथमेतयोः साधारण्यं, तथांगीकारे बाधकाभावश्च । उच्यते—

पुरोवृत्तिनिष्ठधर्मस्य धर्मिकोटिसहचरितत्त्वमेव साधारण्यं, लाघवात्; तावतैव कोटिस्मरणोपयोगित्त्वाच्च,

---

ಭಾವ ವಿವರಣ ಗ್ರಂಥದಲ್ಲಿ ಬರೆದ ವಿಷಯುವನ್ನು ಇಲ್ಲಿ ಹೇಳಲಾಗುತ್ತದೆ.

---

ಒಂದು ಸಾಧಾರಣ ಧರ್ಮದಿಂದ ಸಂಶಯು ಹುಟ್ಟುವಂತೆ, ಎರಡು ಸಾಧಾರಣ ಧರ್ಮಗಳಿಂದಲೂ ಸಂಶಯು ಹುಟ್ಟುತ್ತದೆ ಎಂದು ಹೇಳಿದಲ್ಲಿ ಯಾವ ಬಾಧಕವೂ ಇಲ್ಲ

ಶಂಕಾ–: ಪುರೋವೃತ್ತಿ ಪದಾರ್ಥದಲ್ಲಿ ಇದ್ದ ಧರ್ಮವು ಎತ್ತರವು, ಸ್ಥಾಣುತ್ವ ಪುರುಷತ್ವ ಧರ್ಮಗಳು ಇದ್ದಲ್ಲಿ ತಾನು ಇದ್ದು ಸಾಧಾರಣ ಧರ್ಮವಾಗಿ ಕಂಡಿದೆ. ಆದರೆ ಪ್ರಕೃತ, ' ಶಬ್ದದಲ್ಲಿ ಇದ್ದ ನಿತ್ಯವ್ಯಾವೃತ್ತತ್ವ ಧರ್ಮ ( ನಿತ್ಯದಿಂದ ಭಿನ್ನವಾದ ಧರ್ಮ ಅನಿತ್ಯವ್ಯಾವೃತ್ತತ್ವ ( ಅನಿತ್ಯದಿಂದ ಭಿನ್ನವಾದ ಧರ್ಮ ) ಇವೆರಡೂ ಧರ್ಮಗಳು ಪ್ರತ್ಯೇಕವಾಗಿ ನಿತ್ಯತ್ವದಲ್ಲಿ ಹಾಗೂ ಅನಿತ್ಯತ್ವದಲ್ಲಿ ಇರುವದರಿಂದ ( ಒಂದೊಂದು ಕೋಟಿ ಸಹಚರಿತವಾಗಿದೆಯೇ ಹೊರತು ಉಭಯು ಕೋಟಿ ಸಹಚರಿತ ಧರ್ಮಗಳಾಗಿಲ್ಲ. ) ಹೀಗಿರುವಾಗ್ಗೆ ಇವೆರಡು ಧರ್ಮಗಳು ಸಾಧಾರಣ ಧರ್ಮಗಳೆಂದು ಹೇಗೆ ಹೇಳಬೇಕು ? ಹೀಗೆ ಹೇಳಿದರೆ ಬಾಧಕವು ಹೇಗೆ ಬರಲಾರದು ಎಂದು ಶಂಕಿಸಿದಲ್ಲಿ ಸಮಾಧಾನ ಹೇಳುತ್ತೇವೆ.

ಪುರೋವೃತ್ತಿ ( ಮುಂದಿರುವ ) ಪದಾರ್ಥದಲ್ಲಿದ್ದ ಧರ್ಮವು ( ಎತ್ತರವು ) ಪ್ರಕೃತ ಧರ್ಮಿಯಲ್ಲಿಯೂ [ ಪುರೋವೃತ್ತಿ ಪದಾರ್ಥದಲ್ಲಿ ] ಕೋಟೆಯಲ್ಲಿಯೂ ಅಂದರೆ ಸ್ಥಾಣುತ್ವ ಪುರುಷತ್ವದಲ್ಲಿಯೂ ಕೂಡಿಕೊಂಡು [ ಸಹಚರಿಸಿ ] ಇದ್ದರೆ ಸಾಕು, ಹೀಗಿರುವದೇ ಆ ಧರ್ಮಕ್ಕೆ [ ಊರ್ಧ್ವತೆಗೆ ] ಸಾಧಾರಣ್ಯವು ಹೀಗೆ ಹೇಳುವದರಿಂದ ಲಾಘವವೂ ಆಗುತ್ತದೆ.

न तु कोटिद्वयसहचरितत्त्वं गौरवात्, कोटिस्मरणानुपयोगित्त्वाच्च, प्रकृते तु-शब्दनिष्ठं नित्त्यव्यावृत्तत्वं अनित्त्यधर्मे घटरूपादौ शब्दे च, अनित्त्यव्यावृत्तत्वं तु नित्त्यधर्मे, गगनपरिमाणादौ, धर्मिणि शब्दे च वर्तत इति, कोटिसहचरितत्त्वमेवमस्त्येव, तथा च तावेव धर्मौ नित्त्यत्त्वानित्त्यत्त्वकोटिस्मरणोपयोगिनौ संतौ संशयधायकौ भवत इत्यंगीकारे न कापि हानिर्भवति ।

ऊर्ध्वतादौ कोटिद्वयसाधारण्यमार्थिकमेव, तद्यथा–
अयं स्थाणुर्वा पुरुषो वा इत्यत्र

---

ಇಷ್ಟರಿಂದಲೇ ಕೋಟಿಗಳು ಸ್ಮರಣಕ್ಕೆ ಬರುತ್ತವೆ, ಹೊರತು ಕೋಟಿ ದ್ವಯ ಸಹಚರಿಸಿದ ಧರ್ಮವೇ ಸಾಧಾರಣವು ಎಂಬುದು ಸರಿಯಲ್ಲ ಮತ್ತೆ ಗೌರವವೂ ಆಗುತ್ತದೆ

( ವಿವರಣೆ :— ಒಂದೊಂದು ಧರ್ಮಗಳೇ ಒಂದೊಂದು ಕೋಟಿ ಭೂತ ಧರ್ಮಗಳಲ್ಲಿ ಹಾಗೂ ಪುರೋವೃತ್ತಿ ಪದಾರ್ಥದಲ್ಲಿ ಇದ್ದು ಸಾಧಾರಣಗಳಾಗಿ ಕೋಟಿಗಳ ಸ್ಮರಣೆ ತಂದು ಸಂಶಯಕ್ಕೆ ಕಾರಣವೆಂದರೆ ಲಾಘವವು, ಆದರೆ ಒಂದು ಧರ್ಮವೇ ಉಭಯ ಕೋಟಿಗಳಲ್ಲಿ ಹಾಗೂ ಧರ್ಮಿಯಲ್ಲಿ ಸಂಚರಿಸಿ ಸಂಶಯಕ್ಕೆ ಕಾರಣ ಎಂದು ಹೇಳುವದು ಗೌರವವು ಎಂದು ತಿಳಿಯಬೇಕು. )

ಪ್ರಕೃತ ಸಂಶಯದಲ್ಲಿ [ ಶಬ್ದವು ನಿತ್ಯವೋ ಅನಿತ್ಯವೋ ಎಂಬಲ್ಲಿ ] ಶಬ್ದದಲ್ಲಿದ್ದ ನಿತ್ಯವ್ಯಾವೃತ್ತತ್ವವು ಅನಿತ್ಯ ಧರ್ಮವಾದ ಘಟರೂಪಾದಿಗಳಲ್ಲಿ ಹಾಗೂ ಧರ್ಮಿಯಾದ ಶಬ್ದದಲ್ಲಿಯೂ ಇದೆ. ಅನಿತ್ಯವ್ಯಾವೃತ್ತತ್ವ ಧರ್ಮವು ನಿತ್ಯ ಪದಾರ್ಥವಾದ ಗಗನ ಪರಿಮಾಣದಲ್ಲಿ ಹಾಗೂ ಧರ್ಮಿಯಾದ ಶಬ್ದದಲ್ಲಿಯೂ ಇದೆ. ಹೀಗೆ ( ಒಂದೊಂದು ಧರ್ಮಕ್ಕೆ ಉಭಯಕೋಟಿ ಸಹಚರಿತತ್ವ ಇಲ್ಲದಿದ್ದರೂ, ಕೋಟಿ ಸಹಚರಿತತ್ವವು ಇದ್ದೇ ಇದೆ ) ಕೋಟಿ ಸಹಚಾರ ಇರುವದರಿಂದ, ನಿತ್ಯವ್ಯಾವೃತ್ತತ್ವ, ಅನಿತ್ಯವ್ಯಾವೃತ್ತತ್ವ ಧರ್ಮಗಳು ನಿತ್ಯತ್ವ ಅನಿತ್ಯತ್ವ ಕೋಟಿ ಸ್ಮರಣಕ್ಕೆ ಕಾರಣವಾಗಿ ನಿತ್ಯ ಇಲ್ಲವೇ ಅನಿತ್ಯವೇ ? ಎಂಬ ಸಂಶಯ ಹುಟ್ಟಿಸುತ್ತವೆ, ಎಂದಲ್ಲಿ ಯಾವ ಹಾನಿಯಾಗುವದಿಲ್ಲ

ಊರ್ಧ್ವತಾ ಧರ್ಮವು, ಕೋಟಿದ್ವಯ ಸಹಚಾರದಿಂದ ಸಾಧಾರಣವೆಂಬುದು ಆರ್ಥಿಕವಾಗಿ ಪ್ರಾಪ್ತವಾಗಿದೆ. ಆ ಊರ್ಧ್ವತೆಯು ಒಂದೊಂದು ಕೋಟಿ ಹಾಗೂ ಧರ್ಮಿಯಲ್ಲಿ ಸಹಚಾರದಿಂದ ಸಾಧಾರಣ ಧರ್ಮ ಆಗಿದೆ ಎಂದು ಹೇಳಿದಲ್ಲಿ ಯಾವ ದೋಷವೂ ಬರಲಾರದು.

ಅದು ಹೇಗೆಂದರೆ – 'ಅಯಂ ಸ್ಥಾಣುರ್ವಾ ಪುರುಷೋ ವಾ, ಎಂಬ ಸಂಶಯದಲ್ಲಿ

पुरोवृत्तिनिष्ठ-ऊर्ध्वता तु पुरुषत्वसमानाधिकरणतया अनुभूता, तथा स्थाणुत्वसमानाधिकरणतया चानुभूतेति, एकैककोटिसहचरितत्वमस्त्येव, तथापि कोटिद्वयसहचरितत्वमप्यस्तीति यदुच्यते तदर्थात् प्राप्तमेव । अत एव तत्त्वप्रकाशिकायां धर्मद्वयस्यापि तत्र तत्राधिकरणेषु संशयबीजत्वमुक्तमिति ध्येयम् । नैयायिकैरपि एकस्मिन् पुरुषे दंडकुंडलवत्त्वज्ञानानंतरं दंडकुंडलयोः चैत्रमैत्रमात्रधर्मत्वं प्राङ्निश्चितवतः पुरुषस्य मैत्रव्यावृत्तदंडवत्त्वादयं चैत्रो वा, आहोस्वित् चैत्रव्यावृत्तकुंडलवत्त्वादयं मैत्रो वा इति जायमानसंशयस्य साधारणधर्मजन्यत्वाभ्युपगमात् तद् युक्तं । तथा च असाधारणधर्मजन्यसंशयोऽपि पुर्वोक्तरीत्या साधारणधर्मजन्य इति सर्वैरप्यंगीकर्तव्यम् ।

साधारणधर्माणाम् अनेकत्वे कथं संशयाधायकत्वमिति

---

ಪುರೊವೃತ್ತಿ ಪದಾರ್ಥದಲ್ಲಿದ್ದ ಊರ್ಧ್ವತಾ ಧರ್ಮವು ‘ ಪುರುಷತ್ವ , ಎಲ್ಲಿದೆಯೋ ಅಲ್ಲಿಯೂ ಕಂಡಿದೆ- ಹಾಗೂ ಸ್ಥಾಣುತ್ವ ಎಲ್ಲಿದೆ ಅಲ್ಲಿಯೂ ಅನುಭೂತವಾಗಿದೆ, ಹೀಗೆ ಊರ್ಧ್ವತಾ ಧರ್ಮವು ಒಂದೊಂದು ಕೋಟಿ ಸಹಚಾರದಿಂದ ಅನುಭೂತವಾಗಿದೆ- ಆದರೂ ಎರಡು ಕೋಟಿಗಳಲ್ಲಿ ಇದೆ ಎಂಬುವದು ಅರ್ಥಿಕವಾಗಿ ಪ್ರಾಪ್ತವಾಗಿದೆ ಹೊರತು ಬೇರೆರೀತಿಯಿಂದಲ್ಲ. ಈ ಕಾರಣದಿಂದಲೇ ತತ್ವಪ್ರಕಾಶಿಕೆಯಲ್ಲಿ ಆ. ಆ. ಅಧಿಕರಣದಲ್ಲಿ ಧರ್ಮದ್ವಯಗಳಿಗೆ ಸಂಶಯ ಕಾರಣತ್ವವು ಹೇಳಿದ್ದನ್ನು ನೊಡಬಹುದು

ನೈಯಾಯಿಕರು ಕೂಡ, ದಂಡಮಾತ್ರವುಳ್ಳವನು ಚೈತ್ರನು ಹಾಗೂ ಕುಂಡಲಮಾತ್ರವುಳ್ಳವನು ಮೈತ್ರನು ಎಂದು ಚೈತ್ರ ಮೈತ್ರರ ದಂಡ ಹಾಗೂ ಕುಂಡಲ ಮಾತ್ರ ಧರ್ಮಗಳ ನಿಶ್ಚಿತ ಜ್ಞಾನವಿದ್ದ ಮನುಷ್ಯನೊಬ್ಬನಿಗೆ, ದಂಡ ಹಾಗೂ ಕುಂಡಲಗಳನ್ನು ಧರಿಸಿ ಒಬ್ಬ ಪುರುಷನನ್ನು ನೋಡಿ ( ಎರಡು ಧರ್ಮಗಳು ಒಬ್ಬನಲ್ಲಿಯೇ ಇರುವದನ್ನು ಕಂಡು ) ಮೈತ್ರನಲ್ಲಿರಲಾರದ ‘ ದಂಡ, ವುಳ್ಳವನಾದ್ದರಿಂದ ಇವನು ಚೈತ್ರನೇ ? ಅಥವಾ ಚೈತ್ರವ್ಯಾವೃತ್ತ ಕುಂಡಲ ಉಳ್ಳವನಾದ್ದರಿಂದ ಮೈತ್ರನೇ ? ಎಂದು ಹುಟ್ಟುವ ಸಂಶಯವು. ಸಾಧಾರಣ ಧರ್ಮದಿಂದ ಹುಟ್ಟಿದ ಸಂಶಯವೆಂದೇ ಅಂಗೀಕರಿಸುತ್ತಾರೆ. ಆದುದರಿಂದ ಅಸಾಧಾರಣ ಜನ್ಯವಾದ ಸಂಶಯವೂ ಕೂಡಾ ಈ ಮೇಲೆ ತಿಳಿಸಿದಂತೆ ಸಾಧಾರಣ ಧರ್ಮದಿಂದ ಹುಟ್ಟುವದೆಂದೇ ಸರ್ವರೂ ಒಪ್ಪಿಕೊಳ್ಳಬೇಕು. ಸಾಧಾರಣ ಧರ್ಮಗಳು ಅನೇಕವಿದ್ದಲ್ಲಿ ಅವು ಹೇಗೆ ಸಂಶಯ ಹುಟ್ಟಿಸಬಹುದು

चेन्न न चैकेनैव साधारणधर्मेण भाव्यमिति नियमोऽस्ति येन भवदुक्तं युक्तं स्यात्, साधारणधर्माणामनेकत्वेऽपि बाधकाभावेन संशयोत्पादकत्वसंभव इति ज्ञेयम्।

विप्रतिपतिजन्यसंशयोऽपि साधारणधर्मजन्यसंशय एव अंतर्भवति, तथाहि—

यथा क्रियावत्त्वं मूर्तमात्रस्य धर्मः, स्पर्शराहित्यं अमूर्तमात्रस्य धर्म इति द्वाभ्यां ( क्रियावत्त्वस्पर्शराहित्याभ्यां ) साधारणधर्माभ्यां मनः किं मूर्तं अमूर्तं वा इति संदेह उत्पद्यत इत्युच्यते, तथा भौतिकत्वं भौकिमात्रधर्मः, अभौतिकत्वं अभौतिकमात्रधर्मः इति द्वाभ्यां विप्रतिपत्तिविषयाभ्यां धर्माभ्यां इंद्रियाणि किं भौतिकानि उत- अभौतिकानीति संदेहो जायत इति,

---

ದೆಂಬ ಆಕ್ಷೇಪ ಸಲ್ಲದು. ಸಂಶಯ ಹುಟ್ಟಲು ಒಂದೇ ಸಾಧಾರಣ ಧರ್ಮವಿರಬೇಕೆಂಬ ನಿಯಮವಿಲ್ಲ ಸಾಧಾರಣ ಧರ್ಮಗಳು ಅನೇಕವಾದರೂ ಯಾವ ಬಾಧಕವಿಲ್ಲ. ಅವುಗಳಿಂದ ಸಂಶಯ ಹುಟ್ಟುತ್ತದೆಯೆಂದು ತಿಳಿಯಬೇಕು.

ವಿಪ್ರತಿಪತ್ತಿಯಿಂದ ಹುಟ್ಟುವ ಸಂಶಯವೂ ಕೂಡಾ ಸಾಧಾರಣ ಜನ್ಯ ಸಂಶಯದಲ್ಲಿಯೇ ಅಂತರಭಾವವಾಗುತ್ತದೆ. ಅದು ಹೇಗೆಂದರೆ ಈಗ ಕ್ರಿಯೆ ಹೊಂದಿರುವದು ಮೂರ್ತ ( ಅಳತೆಯುಳ್ಳ ) ಪದಾರ್ಥದ ಧರ್ಮವು ಹೀಗೆಯೇ ಸ್ಪರ್ಶರಾಹಿತ್ಯವೂ ಅಮೂರ್ತ ( ಅಳತೆಯಿಲ್ಲದ ) ಪದಾರ್ಥದ ಧರ್ಮವು ಇವೆರಡೂ ಅಸಾಧಾರಣ ಧರ್ಮಗಳಿಂದ ಮನಸ್ಸು ಮೂರ್ತವೋ? ಅಮೂರ್ತವೋ? ಎಂದು ಸಂಶಯ ಬಂದು ಹೇಗೆ ಹುಟ್ಟುವದೋ ( ಕ್ರಿಯಾವತ್ವ ಧರ್ಮವು ಪರಿಮಿತಿಯುಳ್ಳ ಪೃಥಿವಿಮೊದಲಾದ ಪದಾರ್ಥಗಲ್ಲಿದ್ದು, ಮನಸ್ಸಿನಲ್ಲಿಯೂ ಇರುವದರಿಂದ ಮನಸ್ಸು ( ಮೂರ್ತವೋ ) ಪರಿಮಿತಿಯುಳ್ಳದ್ದೋ? ಇಲ್ಲವೆ ಸ್ಪರ್ಶರಾಹಿತ್ಯವು ಪರಿಮಿತಿ ಇಲ್ಲದೇ ( ಅಮೂರ್ತ ) ಕಾಲಾದಿ ಪದಾರ್ಥಗಳಲ್ಲಿದ್ದು ಮನಸ್ಸಿನಲ್ಲಿಯೂ ಇರುವದರಿಂದ ಮನಸ್ಸು ಅಪರಿಮಿತಿ ಉಳ್ಳದ್ದೊ? ಎಂಬ ಸಂಶಯ ಹುಟ್ಟುವಂತೆ ) ಹಾಗೆಯೆ, ಭೌತಿಕತ್ವವು ಭೌತಿಕಪದಾರ್ಥಮಾತ್ರ ಧರ್ಮವೂ. ಅಭೌತಿಕತ್ವವು ಅಭೌತಿಕ ಪದಾರ್ಥಮಾತ್ರ ಧರ್ಮವೊ ಆಗಿರುವಾಗ್ಗೆ, ತಾರ್ಕಿಕರು ಇಂದ್ರಿಯಗಳು ಭೌತಿಕಗಳೆಂದೂ ಸಾಂಖ್ಯರು ಅಭೌತಿಕಗಳೆಂದೂ ಹೇಳುವದರಿಂದ, ಈ ವಿವಾದಕ್ಕೊಳಗಾದ ಧರ್ಮಗಳಿಂದ ಇಂದ್ರಿಯಗಳು ಭೌತಿಕಗಳೇ ಅಭೌತಿಕಗಳೇ ಎಂಬ ಸಂದೇಹ ಹುಟ್ಟುತ್ತದೆ.

सोऽपि साधारणधर्मजन्य एवेति ज्ञेयम् ।

**इति संशयकारणं तु साधारणधर्म एवेति तत्त्वकथनपूर्वकं तत्रैव सर्वकारणानां अंतर्भावसमर्थनम् ।**

**इति संशयप्रकरणं ।**

---

## ( ५ ) अथ विपर्ययप्रकरणम् ।

क्रमप्राप्तविपर्ययतत्साधनस्वरूपं निरूप्यते--

(१) विपरीतनिश्चयो विपर्ययः, तदभाववति तत्प्रकारकनिश्चय इत्यर्थः, शुक्तौ इदं रजतमिति निश्चये, लक्षणसमन्वयः, तत्र (निश्चये ) रजतत्वाभाववत्यां शुक्तिकायां रजतत्वप्रकारकनिश्चयत्वस्य सत्वात् ।

दलकृत्यं तु-- निश्चयो विपर्यय इत्युक्ते सम्यग्ज्ञानेऽतिव्याप्तिः,

---

ಈ ಸಂಶಯವೂ

ಎರಡು ಸಾಧಾರಣ ಧರ್ಮಗಳಿಂದ ಸಾಧಾರಣ ಧರ್ಮಜನ್ಯ ಸಂಶಯವೆಂದೇ ತಿಳಿಯಬೇಕು

( ವಿವರಣೆ – ಮೇಲಿನ ಸಂಶಯದಲ್ಲಿ ಭೌತಿಕತ್ವ ಅಭೌತಿಕತ್ವಗಳು ಸಾಧಾರಣ ಧರ್ಮಗಳು ಹೇಗೆಂದರೆ, ಭೌತಿಕತ್ವವು ಇಂದ್ರಿಯಗಳಲ್ಲಿಯೂ ಇದೆ, ಪೃಥಿವಿ ಮೊದಲಾದವು ಗಳಲ್ಲಿಯೂ ಇದೆಯಾದಕಾರಣ ಸಾಧಾರಣವಾಗಿದೆ ಅಭೌತಿಕತ್ವವು ಇಂದ್ರಿಯಳಲ್ಲಿಯೂ ಇದೆ ಹಾಗೂ ಕಾಲಾದಿಗಳಲ್ಲಿಯೂ ಇದೆಯಾದಕಾರಣ ಸಾಧಾರಣವಾಗಿದೆ ಎಂದು ತಿಳಿಯಬೇಕು.

## ವಿಪರ್ಯಯ ಪ್ರಕರಣವು

ಕ್ರಮಪ್ರಾಪ್ತವಾಗಿರುವ ವಿಪರೀತ ಜ್ಞಾನ, ಅದಕ್ಕೆ ಸಾಧನ, ಅವುಗಳ ಸ್ವರೂಪಗಳನ್ನು ಇಲ್ಲಿ ವಿಚಾರ ಮಾಡಲಾಗುತ್ತದೆ.–

೧. 'ವಿಪರೀತ ನಿಶ್ಚಯವು ವಿಪರ್ಯಯ' ಯಾವ ಧರ್ಮವು ಎಲ್ಲಿ ಇಲ್ಲವೋ ಆ ಧರ್ಮವು ಅಲ್ಲಿರುವದೆಂದು ಗ್ರಹಿಸುವ ಜ್ಞಾನವೆಂದರ್ಥವು. ಉದಾಹರಣೆಗೆ – ಸಿಂಪಿನಲ್ಲಿ 'ಇದು ಬೆಳ್ಳಿ, ಎಂಬ ನಿಶ್ಚಯ ಜ್ಞಾನವು ಹುಟ್ಟಿದರೆ, ಅದು ವಿಪರ್ಯಯವು. ಇಲ್ಲಿ ರಜತ ಧರ್ಮವಿಲ್ಲದಿರುವ ಸಿಂಪಿನಲ್ಲಿ ರಜತ ಧರ್ಮವಿರುವವೆಂಬ ನಿಶ್ಚಯ ಜ್ಞಾನವಿರುವದರಿಂದ, ಲಕ್ಷಣ ಸಮನ್ವಯವಾಗುವದು.

ದಲಕೃತ್ಯವು – 'ನಿಶ್ಚಯವು ವಿಪರ್ಯಯವು, ಇಷ್ಟೆ ಲಕ್ಷಣ ಮಾಡಿದರೆ,

तद्वारणाय तदभाववति तत्प्रकारकेति विशेषणं देयं, सम्यग्ज्ञाने तद्वति तत्प्रकारकत्वसत्त्वेन तदभाववति तत्प्रकारकत्वाभावान्नातिव्याप्तिः, तदभाववति तत्प्रकारकेत्त्येवोक्ते संशयेऽतिव्याप्तिः, अतः निश्चय इति, तत्र निश्चयत्वाभावान्नातिव्याप्तिः, तदभाववति तत्प्रकारकज्ञानमित्युक्ते पुनः संशये गतं, अतः तदभाववति तत्प्रकारकनिश्चय इत्युक्तम् ।

स च प्रत्यक्षानुमानागमाभासेभ्यो जायते ।

(१) तत्रप्रत्यक्षाभासतो यथा—शुक्तिकायां इदं रजतमिति ज्ञानम् ।

(२) अनुमानाभासतो यथा—धूलिपटले धूमभ्रमात् वन्ह यभाववति बन्हिमानयमिति ज्ञानम् ।

(३) आगमाभासतो यथा - नदीतीरे पंच फलानि सन्तीति प्रतारकवाक्यजन्यं ज्ञानम् ।

---

ಯಥಾರ್ಥ ಜ್ಞಾನವು ನಿಶ್ಚಯಾತ್ಮಕವಾದುದರಿಂದ, ಅದರಲ್ಲಿ ಅತಿವ್ಯಾಪ್ತಿ ಬರುವದು. ಅದರ ನಿವಾರಣೆಗಾಗಿ ಎಲ್ಲಿ ಯಾವ ಧರ್ಮವಿಲ್ಲವೋ ಅಲ್ಲಿ ಆ ಧರ್ಮಪ್ರಕಾರ (ತದಭಾವವತಿ ತತ್ಪ್ರಕಾರಕ) ಎಂಬ ವಿಶೇಷಣ ನಿಶ್ಚಯಕ್ಕೆ ಕೊಡಬೇಕು. ಯಥಾರ್ಥ ಜ್ಞಾನದಲ್ಲಿ ಯಾವ ಧರ್ಮವು ಎಲ್ಲಿದೆಯೋ ಅಲ್ಲಿ ಅದೆ ಧರ್ಮದ ನಿಶ್ಚಯವಿರುವದರಿಂದ, ಇಲ್ಲದೇ ಇರುವ ಧರ್ಮಗಳನ್ನೊಳಗೊಳ್ಳದ್ದರಿಂದ, ಅಲ್ಲಿ ಅತಿವ್ಯಾಪ್ತಿ ಬರಲಾರದು. ಇನ್ನು „ತದಭಾವತಿ ತತ್ಪ್ರಕಾರಕ" (ಎಲ್ಲಿ ಯಾವ ಧರ್ಮವಿಲ್ಲವೋ ಅಲ್ಲಿ ಆ ಧರ್ಮಗಳ ಜ್ಞಾನ) ಇಷ್ಟೆ ಸಾಕೆಂದರೆ. ಸಂಶಯದಲ್ಲಿ ಅತಿವ್ಯಾಪ್ತಿ ಬರುವದು. ಆದ್ದರಿಂದ 'ನಿಶ್ಚಯ'. ಎಂದು ಹೇಳಬೇಕು ಸಂಶಯವು ನಿಶ್ಚಯಾತ್ಮಕವಾಗದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರುವದಿಲ್ಲ ವಸ್ತುವಿನಲ್ಲಿ ಇಲ್ಲದಿರುವ ಧರ್ಮಗಳ ಜ್ಞಾನವೆಂದಲ್ಲಿ ಸಂಶಯದಲ್ಲಿ ಪುನಃ ಅತಿವ್ಯಾಪ್ತಿ ಬರುವಕಾರಣದಿಂದಲೇ ಎಲ್ಲಿ ಯಾವ ಧರ್ಮವಿಲ್ಲವೋ ಅಲ್ಲಿ ಆ ಧರ್ಮದ ನಿಶ್ಚಯಾತ್ಮಕ ಜ್ಞಾನವೆಂದು ಹೇಳಿದೆ. ಈಗ ಸಂಶಯದಲ್ಲಿ ಅತಿವಾಪ್ತಿ ಇಲ್ಲ. ಈ ವಿಪರ್ಯಯವು ಪ್ರತ್ಯಕ್ಷ, ಅನುಮಾನ, ಆಗಮಗಳ ಆಭಾಸಗಳಿಂದ ಹುಟ್ಟುತ್ತದೆ.

೧) ಪ್ರತ್ಯಕ್ಷಾಭಾಸದಿಂದ ಹುಟ್ಟುವ ವಿಪರ್ಯಯಕ್ಕೆ ಉದಾಹರಣೆ- ಸಿಂಪಿನಲ್ಲಿ ಇದು ರಜತವೆಂಬ ಜ್ಞಾನವು.

೨) ಅನುಮಾನಾಭಾಸದಿಂದ ಹುಟ್ಟುವ ವಿಪರ್ಯಯಕ್ಕೆ ಉದಾಹರಣೆ- ಧೂಳಿ ರಾಶಿ. ಧೂಮವೆಂದು ಭ್ರಮಿಸಿ, ಅಗ್ನಿ ಇಲ್ಲದಿರುವಲ್ಲಿ ಅಗ್ನಿಯಿದೆ ಎಂಬ ಜ್ಞಾನವು.

ननु प्राभाकरादयः अयथार्थज्ञानमेव नास्तीति वदंति, तथाहि- इदं रजतमित्यादिकं तु नैकं विशिष्टज्ञानं, किंतु ग्रहणस्मरणात्मकं ज्ञानद्वयमेव ( इदमिति ग्रहणात्मकं, रजतमिति स्मरणात्मकं, ) तयोः ( ग्रहणस्मरणात्मकयोः ) स्वरूपतो विषयतश्च भेदाग्रहमात्रेण, इदं रजतमिति सामानाधिकरण्येन व्यवहारादिकं, तदेव च नेदमिति भेदग्रहणेन बाध्यत इति ।

तथा च तन्मतरीत्या विपर्ययाभावात् संशयविपर्ययव्यावृत्त्यर्थं प्रमाणलक्षणे कथं यथार्थमिति विशेषणं दत्तमिति चेन्न,

---

ಆಗಮಾಭಾಸದಿಂದ ಹುಟ್ಟುವ ವಿಪರ್ಯಯಕ್ಕೆ ಉದಾಹರಣೆ- ನದಿ ದಂಡೆಯ ಮೇಲೆ ಐದು ಹಣ್ಣುಗಳಿವೆಯೆಂಬ ಮೋಸಗಾರನ ಮಾತುಗಳಿಂದ ಹುಟ್ಟುವ ಜ್ಞಾನವು.

ಶಂಕಾ- ಪ್ರಾಭಾಕರರೇ ಮೊದಲಾದವರು ಅಯಥಾರ್ಥ ಜ್ಞಾನವೇ ಇಲ್ಲವೆಂದು ಹೇಳುತ್ತಾರೆ. ಅದು ಹೀಗೆ ‘ಇದಂ ರಜತ’ ವೆಂಬ ಜ್ಞಾನವು ಒಂದೇ ವಿಶಿಷ್ಟ ( ವಿಶೇಷ್ಯ ವಿಶೇಷಣ ಸಂಬಂಧದಿಂದ ಕೂಡಿದ ) ಜ್ಞಾನವಾಗದೇ, ಗ್ರಹಣ ಹಾಗೂ ಸ್ಮರಣಗಳೆಂದು ಎರಡು ಜ್ಞಾನಗಳಿಂದ ಕೂಡಿದುದು. ಇದಂ ಎಂಬ ಮುಂದಿರುವ ಪದಾರ್ಥವನ್ನು ನೋಡಿ ಗ್ರಹಿಸುವದು ಗ್ರಹಣಾತ್ಮಕ ಜ್ಞಾನವು, ಹಾಗೂ ‘ರಜತ’ವೆಂಬುದು ಹಿಂದಿನ ರಜತ ಜ್ಞಾನದ ಸ್ಮರಣರೂಪವಾದ ಜ್ಞಾನವು; ಇವುಗಳ ( ಗ್ರಹಣ ಸ್ಮರಣಾತ್ಮಕಗಳ ) ಸ್ವರೂಪ ಹಾಗೂ ವಿಷಯಗಳಲ್ಲಿರುವ ಭೇದ ಗ್ರಹಿಸದಿರುವಾಗಮಾತ್ರ ಸಮಾನಾಧಿಕರಣಗಳಿಂದ ( ಗ್ರಹಣಕ್ಕೆ ವಿಷಯವಾದ ‘ಇದಂ’ ಮತ್ತು ಸ್ಮರಣಕ್ಕೆ ವಿಷಯವಾದ ‘ರಜತಂ’, ಎರಡಕ್ಕೂ ಆಶ್ರಯವಾಗಿದ್ದರಿಂದ, ಇದಂ ರಜತವು ಎಂಬ ವ್ಯವಹಾರವು ಮಾಡಲ್ಪಡುತ್ತದೆ. ಆದರೆ ಅವುಗಳ ಭೇದ ಗ್ರಹಣದಿಂದ ಇದಂ ರಜತವಲ್ಲವೆಂದು ಬಾಧ ಜ್ಞಾನ ಹುಟ್ಟುತ್ತದೆ. ( ವಿವರಣೆ ಪ್ರಾಭಾಕರರು ‘ಸಿಂಪಿನಲ್ಲಿ ಇದು ಬೆಳ್ಳಿ’ ಎಂಬ ಜ್ಞಾನವನ್ನು ಒಂದೇ ವಿಶಿಷ್ಟ ಜ್ಞಾನವೆಂದು ಒಪ್ಪುವದಿಲ್ಲ ‘ಗ್ರಹಣ ಹಾಗೂ ಸ್ಮರಣ’ ರೂಪ ಎರಡು ಜ್ಞಾನಗಳಿಂದ ಕೂಡಿದುದೆಂದು ಹೇಳುತ್ತಾರೆ ಆದರೆ ‘ರಜತ’ ವೆಂದು ವ್ಯವಹಾರ ಹೇಗೆ ಕೂಡುತ್ತದೆಂದರೆ, ಗ್ರಹಣ, ಹಾಗೂ ಸ್ಮರಣ, ಗಳೆಂಬ ಜ್ಞಾನ ಸ್ವರೂಪಗಳಲ್ಲಿಯ ಭೇದವನ್ನು ಹಾಗೂ ಆ ಜ್ಞಾನಗಳಿಗೆ ವಿಷಯವಾದ ಮುಂದಿರುವ ಪದಾರ್ಥ ( ಧರ್ಮಿ ) ಹಾಗೂ ರಜತ ಗಳಲ್ಲಿಯ ಭೇದವನ್ನು ಗ್ರಹಿಸದೇ ಇದ್ದಾಗ ಎರಡಕ್ಕೂ ಸಮಾನಾಶ್ರಯವಾದ ಧರ್ಮಿಯಲ್ಲಿ ಇದಂ ರಜತವೆಂಬ ಅನುಭವ ಕೊಡುವದು.

अयथार्थज्ञानानंगीकारे तेषामनुभवविरोधः सुस्थः, तथा हि–शुक्तिकायां रजताभेदज्ञानस्य, इदं रजतात्मना जानामीति अनुभवसिद्धत्वात् अन्यथा क्वचिदपि रजताभेदज्ञानं न सिध्येत्, तथा च उक्तसाक्ष्यनुभवविरोधः, अपि च एतावंतं कालमहं शुक्तिकामेव रजतत्वेन प्रतिपन्नोऽस्मीति उत्तरकाले परामर्शात् तद्विरोधश्च ।

**इति विपर्यय लक्षण स्वरूप कथनम् ।**

(२) एवं अयथार्थज्ञानं समर्थितम् । तद्विषये वादिनां विवादः एवं दृश्यते—

(१) भ्रमकाले प्रतीतं रजतं देशांतरे सदेवेति वैशेषिकादयः, तदित्थं— सर्वथाऽसत्त्वे प्रतीत्यनुपपत्तिः, तत्रैव सत्त्वे वा बाधानुपपत्तिः, अतः तत्र प्रतीतं रजतं देशांतरे सदेवेत्यंगीकार्यमिति वदन्ति

---

ಪ್ರಾಭಾಕರರ ಪ್ರಕಾರ ವಿಪರ್ಯಯ ಜ್ಞಾನವೇ ಇಲ್ಲವೆಂದಾದರೆ, ವಿಪರ್ಯಯ ಜ್ಞಾನದಲ್ಲಿ ಬಂದ ಅತಿವ್ಯಾಪ್ತಿ ಪರಿಹಾರಕ್ಕಾಗಿ ಪ್ರಮಾಣ ಲಕ್ಷಣದಲ್ಲಿ, ಯಥಾರ್ಥ ಎಂಬ ವಿಶೇಷಣವನ್ನು ಜ್ಞಾನಕ್ಕೆ ಕೊಟ್ಟದ್ದು ಹೇಗೆ ಕೂಡುವದೆಂಬ ಶಂಕೆಗೆ ಅವಕಾಶವಿಲ್ಲ. ವಿಪರ್ಯಯ ಜ್ಞಾನವನ್ನು ಅಂಗಿಕಾರ ಮಾಡದೇ ಇದ್ದಲ್ಲಿ ಅನುಭವ ವಿರೋಧವು ಬರುತ್ತದೆ.

ಸಿಂಪನ್ನು ಬೆಳ್ಳಿಯನ್ನಾಗಿಯೇ ತಿಳಿದುಕೊಂಡಿದ್ದೇನೆ, ಎಂದು ಪ್ರತಿಯೊಬ್ಬನಿಗೂ ಅನುಭವ ವಿರುವದರಿಂದ, ಸಿಂಪಿನಲ್ಲಿ ಬೆಳ್ಳಿಯ ಅಭೇದ ಜ್ಞಾನವು ಸಿದ್ಧಿಸುತ್ತದೆ. ಇದನ್ನು ಒಪ್ಪದಿದ್ದರೆ ಬೆಳ್ಳಿಯ ಅಭೇದ ಜ್ಞಾನವೇ ಎಂದೂ ಸಿದ್ಧಿಸದೇ ಹೋಗಬೇಕಾದೀತು. ಹಾಗೆನ್ನಲು ಬರುವದಿಲ್ಲ. ಏಕೆಂದರೆ ಸಾಕ್ಷೀ ಭೂತವಾದ ಅನುಭವವನ್ನು ನಿರಾಕರಿಸಲು ಸಾಧ್ಯವಿಲ್ಲ. ಇದಲ್ಲದೇ, ಇಷ್ಟು ಕಾಲ ಪರ್ಯಂತರ ಸಿಂಪನ್ನೇ ಬೆಳ್ಳಿಯನ್ನಾಗಿ ತಿಳಿದಿದ್ದೆ, ಎಂಬ ಉತ್ತರಕಾಲದಲ್ಲಿ ಪರಾಮರ್ಶ ಜ್ಞಾನವು ಕೂಡಾ ಬರುತ್ತದೆ. (ಅಂತೂ ವಿಪರ್ಯಯವನ್ನು ಅಲ್ಲಗಳೆಯಲು ಬರುವದಿಲ್ಲ. ಅಂತೆಯೇ ಅಯಥಾರ್ಥ ಜ್ಞಾನದಲ್ಲಿ ಬರುವ ಅತಿವ್ಯಾಪ್ತಿ ಪರಿಹಾರಕ್ಕಾಗಿ ಜ್ಞಾನದಲ್ಲಿ ಯಥಾರ್ಥವೆಂಬ ವಿಶೇಷಣ ಕೊಟ್ಟದ್ದು ಸಾರ್ಥಕವು.)

(೨) ಈ ಪ್ರಕಾರ ಅಯಥಾರ್ಥ ಜ್ಞಾನವು ಸಿದ್ಧವಾಯಿತು. ಈ ವಿಷಯದಲ್ಲಿ ವಾದಿಗಳ ವಿವಾದಗಳಿದ್ದು, ಅವುಗಳು ಹೀಗಿವೆ

(२) तत्र प्रतीतं रजतं ज्ञानस्वरूपमेवेति **विज्ञानवादिनः**, तथाहि, सर्वथाऽसत्त्वे प्रतीत्यनुपपत्तिः, देशांतरे सत्त्वे प्रमाणाभावः, पुरतः सत्त्वे भ्रांत्यनुपपत्तिः । परिशेषात् विज्ञानमेव तदिति वक्तव्यं, न चैवं तस्य भ्रांतित्वानुपपत्तिः, " आंतरस्य बाह्यतावभासो भ्रम ,, इत्यंगीकारात् । तथा च विज्ञानस्वरूपमेव रजतमिति वदंति ।

(३) तत्रैव तात्कालिकमुत्पन्नं सदिति **भास्करः**, तथाहि—असत्त्वे प्रतीत्यनुपपत्तेः सदिति उक्तं, अत्र प्रतीतस्य देशांतरे सत्वे प्रमाणाभावात्

---

೧) (ಭ್ರಮಕಾಲದಲ್ಲಿ ಸಿಂಪಿನಲ್ಲಿ ತೋರಿದ ರಜತವು ದೇಶಾಂತರದಲ್ಲಿ ಸತ್ಯವೆಂದು ವೈಶೇಷಿಕರು ಹೇಳುತ್ತಾರೆ. ಏಕೆಂದರೆ ಆ ರಜತವು ಸರ್ವಥಾಸುಳ್ಳಾದರೆ, ಸಿಂಪಿನಲ್ಲಿ ಇದು ರಜತವೆಂಬ ಭ್ರಮೆಯು ಬರದೇ ಹೋಗಬೇಕಾದೀತು. ಆದರೆ ರಜತವು ಸಿಂಪಿನಲ್ಲಿಯೇ ಇದ್ದರೆ ಉತ್ತರಕಾಲದಲ್ಲಿ ಇದುಬೆಳ್ಳಿಯಲ್ಲವೆಂಬ ಬಾಧಜ್ಞಾನವು ಬರದೇ ಹೋಗಬೇಕಾದೀತು. ಆದುದ್ದರಿಂದ ಸಿಂಪಿನಲ್ಲಿ ತೋರುವ ರಜತವು ದೇಶಾಂತರದಲ್ಲಿ ಸತ್ಯವೆಂಬುದನ್ನು ಅಂಗೀಕಾರ ಮಾಡಬೇಕೆಂದು ಹೇಳುತ್ತಾರೆ.)

---

೨] ಸಿಂಪಿನಲ್ಲಿ ತೋರಿದ ಬೆಳ್ಳಿಯು ಜ್ಞಾನಸ್ವರೂಪವೆಂದು ವಿಜ್ಞಾನವಾದಿಗಳು ಹೇಳುತ್ತಾರೆ. ಹೇಗೆಂದರೆ ಸರ್ವಥಾ ರಜತವಿಲ್ಲವೆಂದರೆ ರಜತ ಜ್ಞಾನವೇ ಹುಟ್ಟಲಾರದು ದೇಶಾಂತರದಲ್ಲಿ ರಜತವಿದೆ ಎಂಬುದಕ್ಕೆ ಪ್ರಮಾಣವಿಲ್ಲ. ಸಿಂಪಿನಲ್ಲಿ ರಜತವು ಸತ್ಯವಾಗಿದ್ದಲ್ಲಿ ಭ್ರಾಂತಿಯೇ ಕೂಡುವದಿಲ್ಲ. ಈ ಪರಿಶೇಷದಿಂದ ರಜತವು ಜ್ಞಾನರೂಪವೆಂದು ತಿಳಿಯಬೇಕು. ಒಳಗೆ ಇದ್ದದ್ದು ಹೊರಗೆ ತೋರುವದೇ [ ಒಳಗಿದ್ದ ಜ್ಞಾನವೇ ರಜತಾಕಾರವಾಗಿ ಪರಿಣಮಿಸಿ ಹೊರಗೆ ತೋರುವದೇ ] ಭ್ರಮವೆಂದು ಅಂಗೀಕರಿಸಿದ್ದ ಕಾರಣ ಭ್ರಮವು ಹುಟ್ಟದೆ ಇರದು, ಭ್ರಮದಲ್ಲಿ ತೊರುವ ರಜತವು ವಿಜ್ಞಾನಸ್ವರೂಪವೆಂದು ಅವರ ಮತವು.

೩] ಸಿಂಪಿನಲ್ಲಿಯೇ ತತ್ಕಾಲದಲ್ಲಿ ರಜತವು ಹುಟ್ಟಿ ಸತ್ಯವಾಗಿದೆ ಎಂದು ಭಾಸ್ಕರರು ಹೇಳುತ್ತಾರೆ. ರಜತವು ಅಸತ್ಯ ಪದಾರ್ಥವಾದಲ್ಲಿ ಜ್ಞಾನವೇ ಹುಟ್ಟುವದಿಲ್ಲ. ಆದುದರಿಂದ ಆ ' ರಜತವು ' ' ಸತ್ ಪದಾರ್ಥ, ವೆಂದು ಹೇಳಬೇಕು. ಸಿಂಪಿನಲ್ಲಿ ತೋರಿದ ರಜತವು ದೇಶಾಂತರದಲ್ಲಿ ಇದೆ ಎಂಬುವದಕ್ಕೆ ಪ್ರಮಾಣವಿಲ್ಲದ್ದರಿಂದ

तत्रैवेति, अनुपन्नत्वे पूर्वमेवोत्पन्नत्वे वा भ्रान्त्यनुपपत्तिः, अतः तात्कालिकमुत्पन्नमिति, नश्यतीत्यपि ग्राह्यमिति । एवं तेषां वादः ।

(४) न सन्नासन्न सदसत् किन्त्वनिर्वचनीयमेवेति मायावादिनः, तथाहि– सत्त्वे बाधानुपपत्तिः, असत्त्वे ख्यात्यनुपपत्तिः, सदसत्त्वे विरोधः, तस्मात् सदसद्विलक्षणरूपमनिर्वचनीयमेवेति ।

इति विपर्यये वादिनां विप्रतिपत्तिनिरूपणम् ।

(३) वैशेषिकादिपक्षचतुष्टयं अप्रामाणिकमिति ज्ञापयितुं अयथार्थज्ञानस्वरूपं प्रामाणिक टिप्पण्याद्युक्तरीत्या निरूप्यते । (एवं सर्वत्रावगन्तव्यम् )

---

ಸಿಂಪಿನಲ್ಲಿಯೇ ತಾತ್ಕಾಲಿಕವಾಗಿ ಹುಟ್ಟಿ ಸತ್ಯಭೂತವಾಗಿಯೇ ತೋರುವದು. ಅಲ್ಲಿ ರಜತವು ಹುಟ್ಟದೇ ಹೋದರೆ, [ ಇಲ್ಲದೆ ಇರುವಾಗ ] ಅಥವಾ ಪೂರ್ವದಲ್ಲಿಯೇ ಉತ್ಪನ್ನವಾಗಿದ್ದರೆ [ ಮೊದಲೆ ಇದ್ದರೆ ] ಭ್ರಾಂತಿಯು ಕೂಡುವದಿಲ್ಲ. ಕಾರಣ ತಾತ್ಕಾಲಿಕವಾಗಿ [ ಸಿಂಪಿನಲ್ಲಿ ] ಉತ್ಪನ್ನವಾಗುತ್ತದೆ. ಹಾಗೂ ನಾಶಹೊಂದುತ್ತದೆಂದು ಅವರ ಮತವು.

(೪) ಸಿಂಪಿನಲ್ಲಿ ತೋರುವ ರಜತವು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ, ಸದಸತ್ ಪದಾರ್ಥವೂ ಅಲ್ಲ, ಆದರೆ ಸದಸದ್ವಿಲಕ್ಷಣ ( ಅನಿರ್ವಚನೀಯ ) ವೆಂದು ಮಾಯಾವಾದಿಗಳು ಹೇಳುತ್ತಾರೆ. ಹೇಗೆಂದರೆ, ರಜತವು ಸತ್ಯವಾದಲ್ಲಿ ಇದು ಬೆಳ್ಳಿಯಲ್ಲವೆಂಬ ಉತ್ತರ ಕಾಲದ ಬಾಧ ಜ್ಞಾನವು ಬರದೇ ಹೋಗಬೇಕಾದೀತು. ಆದ್ದರಿಂದ ಸತ್ಯವಲ್ಲ. ರಜತವು ಅಸತ್ಯವಾದಲ್ಲಿ, ತೋರದೇ ಹೋಗಬೇಕಾದೀತು ಬೆಳ್ಳಿಯೆಂದು ತೋರುವದರಿಂದ ಅಸತ್ಯವೂ ಅಲ್ಲ. ಬೆಳ್ಳಿಯು 'ಸದಸತ್' ಪದಾರ್ಥವೆನ್ನಲೂ ಬರುವದಿಲ್ಲ, ಏಕೆಂದರೆ ಒಂದೇ ಪದಾರ್ಥವು ಸತ್ಯ ಹಾಗೂ ಅಸತ್ಯ ಹೀಗೆ ಪರಸ್ಪರ ವಿರೋಧವನ್ನು ಹೊಂದಿರಲಾರದು. ( ಒಂದೇ ಪದಾರ್ಥವು ಏಕ ಕಾಲಕ್ಕೆ ಸತ್ಯವೂ ಅಸತ್ಯವೂ ಆಗಿರುವದು ಕಂಡಿರುವದಿಲ್ಲ ) ಆದ್ದರಿಂದ [ ಹೀಗೆಯೇ ಎಂದು ನಿರ್ವಚನ ಮಾಡಿ ಹೇಳಲು ಬಾರದೆಂದು ) ಸದಸದ್ವಿಲಕ್ಷಣವೆಂದು [ ಸತ್ಯ ಪದಾರ್ಥದಿಂದ ಹಾಗೂ ಅಸತ್ ಪದಾರ್ಥದಿಂದ ಭಿನ್ನವೆಂದು ] ಹೇಳುತ್ತಾರೆ.

೩. ವೈಶೇಷಿಕರೇ ಮೊದಲಾದ ಈ ನಾಲ್ಕು ಪಕ್ಷಗಳು ಅಪ್ರಮಾಣಿಕವೆಂದು ತಿಳಿಸಲು, ಟಿಪ್ಪಣಿಗಳಲ್ಲಿ ಹೇಳಲ್ಪಟ್ಟದ್ದನ್ನೇ ಇಲ್ಲಿ ನಿರೂಪಣೆ ಮಾಡಲಾಗುತ್ತದೆ.

असदेव रजतं प्रत्यभादित्युत्तरकालीनानुभवात् शुक्तिरेव अत्यंतासद्रजतात्मना प्रतीयत इत्याचार्यसिद्धांतः ।

अत्र विचारः—नन्वेवं नैयायिकमतान्न विशेष आचार्यमतस्य, तैरपि शुक्तावविद्यमानं देशांतरीयं यद् रजतं तदात्मतया शुक्तेर्भानांगीकारादिति चेन्न, "अत्यंतासद्रजतात्मना" इत्यनेन कुत्रापि कदापि अविद्यमानेत्यर्थकथनेन, न तदभेदः स्वमतस्य ।

ननु भ्रमस्य कथमत्यंतासद्रजततादात्म्यविषयकत्व, असता साकं चक्षुरादेः सन्निकर्षाभावादिति चेन्न,

---

ಸಿಂಪಿನಲ್ಲಿ ಅಸತ್ಯವಾದ (ಇಲ್ಲದೇ ಇದ್ದ) ರಜತವು ತೋರಿತು ಎಂಬ ಉತ್ತರ ಕಾಲದ ಅನುಭವ ಬರುವದರಿಂದ ಸಿಂಪೇ (ಮೂರು ಕಾಲಗಳಲ್ಲಿಯೇ ಇಲ್ಲದ) ಅತ್ಯಂತ ಅಸತ್ ರಜತಾಕಾರವಾಗಿ ಭ್ರಮದಲ್ಲಿ ತೋರುತ್ತದೆಯೆಂದು ಶ್ರೀ ಮಧ್ವಾಚಾರ್ಯರ ಸಿದ್ಧಾಂತವು.

## ಇಲ್ಲಿ ವಿಚಾರ ಹೀಗಿದೆ

ಆಚಾರ್ಯರ ಮತಕ್ಕೆ ಏನು ವಿಶೇಷ ಹೇಳಿದ್ದಾಯಿತು ? ನೈಯಾಯಿಕರು ಕೂಡ ಸಿಂಪಿನಲ್ಲಿ ಇಲ್ಲದೇ ಇದ್ದ ದೇಶಾಂತರದಲ್ಲಿದ್ದ ರಜತವು, ಸಿಂಪಿನಲ್ಲಿ ಅಭೇದದಿಂದ (ರಜತವು) ತೋರುತ್ತದೆ ಎಂದು ಹೇಳುತ್ತಾರೆ. ಆಚಾರ್ಯರೂ ಸಿಂಪಿನಲ್ಲಿ ರಜತಾಭೇದವು ತೋರುತ್ತದೆಂದು ಹೇಳುತ್ತಾರೆ. ರಜತಾಭೇದ ತೋರುವದು ಇಬ್ಬರಿಗೂ ಸಾಮಾನ್ಯವಾಗಿದೆಯೆಂದು ಸಂಶಯ ಬಂದರೆ, ಅದು ಸರಿಯಲ್ಲ, ಶ್ರೀ ಮಧ್ವಾಚಾರ್ಯರ ಮತದ ಪ್ರಕಾರ ಅತ್ಯಂತ ಅಸತ್ತಾದ ರಜತಾಭೇದದಿಂದ (ಅತ್ಯಂತ ಸುಳ್ಳಾದ ಬೆಳ್ಳಿಯ ರೂಪವಾಗಿ) ತೋರುವದಾಗಿ ಹೇಳಿದ್ದರಿಂದ ವೈಶೇಷಿಕರಿಗೂ ಆಚಾರ್ಯರಿಗೂ ಬಹಳ ಅಂತರವಿದೆ. [ದೇಶಾಂತರದಲ್ಲಿ ತೋರುವ ಸತ್ಯವಾದ ರಜತವೇ ಸಿಂಪಿನಲ್ಲಿ ಅಭೇದದಿಂದ ತೋರುವದಲ್ಲದೇ. ಅತ್ಯಂತ ಅಸತ್ಯವಾದುದಲ್ಲವೆಂಬುದಾಗಿ ವೈಶೇಷಿಕರು ಹೇಳುತ್ತಾರೆ.) ಆದರೆ ನಮ್ಮ ಸಿದ್ಧಾಂತದಲ್ಲಿ ಯಾವ ದೇಶ ಯಾವಕಾಲದಲ್ಲಿಯೂ ಇಲ್ಲದೇ ಇದ್ದ ರಜತವು ಇಲ್ಲಿ ತೋರುತ್ತದೆಯೆಂದು ಹೇಳುವದರಿಂದ, ಎರಡೂ ಮತಗಳಲ್ಲಿ ಭೇದವಿದೆಯೆಂಬ ಅಭಿಪ್ರಾಯವು.)

ಶಂಕಾ :- ಭ್ರಮವು ಅತ್ಯಂತ ಅಸತ್ ಆದ ರಜತದ ಅಭೇದವನ್ನು ವಿಷಯೀಕರಿಸುವದು ಹೇಗೆ ? ಅಸತ್ತಿಗೂ ಇಂದ್ರಿಯಕ್ಕೂ ಸನ್ನಿಕರ್ಷವೇ ಆಗುವದಿಲ್ಲ. ಅಸತ್ ಪದಾರ್ಥಕ್ಕೆ ಇಂದ್ರಿಯ ಸನ್ನಿಕರ್ಷವಾದರೆ ಮಾತ್ರ, ಮುಂದೆ ಭ್ರಮ ಜ್ಞಾನವು

" असदेव रजतं प्रत्यभात् " इत्युनुभवबलेन अत्यंतासतोऽपि रजततादात्म्यस्य दोषरूपसन्निकर्षेण भ्रमोल्लेख्यत्वलक्षणं विषयत्वं कल्प्यते, अत्र भ्रमोल्लेख्यविषयत्वं नाम—भ्रमोल्लिखितरजतमिति शब्दव्यवहारविषयत्वमेव नान्यदिति ज्ञेयं, इदं च यत्र अधिष्ठानासन्निहितमारोप्यं तदभिप्रायेण, तत्र आरोप्यतत्तादात्म्ययोः उभयोरपि बाध्यत्वेनासत्त्वात् ।

यत्र आरोप्यं, अधिष्ठानसन्निहितं तत्र तादात्म्यमात्रमसत् तन्मात्रस्यैव बाधात् । आरोप्यं तु सदेव बाधोत्तरकालेऽप्यनुवर्तमानत्वात् ।

---

ಅಸದ್ವಿಷಯಕವು ) ಹುಟ್ಟಬಹುದು ಇಂದ್ರಿಯ ಸನ್ನಿಕರ್ಷವೇ ಸುಳ್ಳು, ಪದಾರ್ಥಕ್ಕಾಗುವದಿಲ್ಲ. ಆದಕಾರಣ ಭ್ರಮವು ಹುಟ್ಟುವದು ಸಾಧ್ಯವಿಲ್ಲ. ಎಂದಮೇಲೆ ಭ್ರಮವು ಅಸದ್ವಿಷಯಕ ಹೇಗಾಗುವದು ? ಎಂದು ಭಾವವು ] ಆದರೆ ಈ ಸಂಶಯ ಕೂಡದು. ' ಸುಳ್ಳಾದ ರಜತವೇ ತೋರಿತು , ಎಂಬ ಅನುಭವ ಬಲದಿಂದ, ಬೆಳ್ಳಿ ಹಾಗೂ ಅದರ ತಾದಾತ್ಮ್ಯವು ಅತ್ಯಂತ ಸುಳ್ಳಾದರೂ [ ಅಸತ್ ] ಚಕ್ಷುರಿಂದ್ರಿಯ ದೋಷ ರೂಪವಾದ ಸನ್ನಿಕರ್ಷದಿಂದ ರಜತದ ತಾದಾತ್ಮ್ಯಕ್ಕೆ [ ಅಭೇದಕ್ಕೆ ] ಭ್ರಮದಲ್ಲಿ ಉಲ್ಲೇಖ್ಯತಾಖ್ಯ ವಿಷಯತ್ವವು ಕೂಡುತ್ತದೆ. ಉಲ್ಲೇಖ್ಯತಾಖ್ಯ ವಿಷಯ ಎಂದರೆ : ' ರಜತ ಎಂಬ ಶಬ್ದ ವ್ಯವಹಾರಕ್ಕೆ ಮಾತ್ರ ವಿಷಯವಾಗಿ ತೋರುವದು. ಯಾವ ಭ್ರಮದಲ್ಲಿ ಆರೋಪಿತವಾದ ಪದಾರ್ಥವು [ ಬೆಳ್ಳಿಯು ] ಅಧಿಷ್ಠಾನದಲ್ಲಿ [ ಸಿಂಪಿನಲ್ಲಿ ] ಸನ್ನಿಹಿತವಾಗಿಲ್ಲವೋ ಆ ಭ್ರಮದ ಅಭಿಪ್ರಾಯದಿಂದ , ಶಬ್ದವ್ಯವಹಾರ ವಿಷಯ ವೆಂದು ಹೇಳಲಾಗಿದೆ. ಏಕೆಂದರೆ ಆರೋಪಿತವಾದದಕ್ಕೂ ( ಬೆಳ್ಳಿಗೂ ) ಅದರ ತಾದಾತ್ಮ್ಯಕ್ಕೂ ( ಅಭೇದ ಸಂಬಂಧಕ್ಕೂ ) ಬಾಧೆ ಬರುವದರಿಂದ ಎರಡೂ ಅಸತ್ತೇ ಆಗುತ್ತವೆ

ವಿವರಣೆ – ಸಿಂಪಿನಲ್ಲಿ ರಜತವು ಆರೊಪ್ಯವು ಸಿಂಪು ಅಧಿಷ್ಠಾನವು. ಸಿಂಪಿನಲ್ಲಿ ರಜತವು ಸನ್ನಿಹಿತವಾಗಿಲ್ಲ. ಭ್ರಮದಲ್ಲಿ ಸಿಂಪಿನಲ್ಲಿ ಬೆಳ್ಳಿಯ ತಾದಾತ್ಮ್ಯವು [ ಅಭೇದವು ] ತೋರುತ್ತದೆ. ಅಲ್ಲಿ ತೋರುವ ಬೆಳ್ಳಿಯು ಅಸತ್ ಎಂದರೆ ಸುಳ್ಳು ಆಗಿರುವಾಗ, ಅಲ್ಲಿ ಪದಾರ್ಥವೇ ಇಲ್ಲದ್ದರಿಂದ ಭ್ರಮಕ್ಕೆ ವಿಷಯತ್ವ ಹೇಗೆ ಎಂಬ ಶಂಕಾ ಬಂದರೆ, ' ರಜತ ' ವೆಂಬ ಶಬ್ದ ವ್ಯವಹಾರ ವಿಷಯಕತ್ವ ಹೇಳಬೇಕೆಂಬ ಭಾವ.

ಎಲ್ಲಿ ಆರೊಪ್ಯವು ಅಧಿಷ್ಠಾನ ಸನ್ನಿಹಿತವಾಗಿದೆಯೋ ಅಲ್ಲಿ ತಾದಾತ್ಮ್ಯ [ ಅಭೇದವು ] ಅಸತ್ [ ಸುಳ್ಳು ] ಇರುತ್ತದೆ. ಬಾಧವು ಕೂಡ ತಾದಾತ್ಮ್ಯಕ್ಕೇ ಬರುತ್ತದೆ.

यथा दूरस्थयोः चूतपनसयोरयं चूत इति भ्रमः. बाधज्ञाने असदेवेति एवकारेण न देशांतरे सत्, नापि ज्ञानस्वरूपं, नापि तात्कालिकमुत्पन्नं, नापि अनिर्वाचनीयमिति प्रागुक्तमतानि निरस्तानि भवंतीति ध्येयम् ।

ननु अधिष्ठानप्रधानयोश्च आरोप्येण सादृश्यस्यापेक्षितत्वादसतः सादृश्यायोगात्

---

ಬಾಧ ಜ್ಞಾನ ಬಂದ ಮೇಲೆ ಆರೋಪ್ಯ ಇದ್ದಂತೆ ಇರುವದರಿಂದ, ಆರೋಪ್ಯವು ಸತ್ಯವಾಗುತ್ತದೆ. ಉದಾಹರಣೆಗೆ – ಬಹು ದೂರದಲ್ಲಿರುವ ಒಂದಕ್ಕೊಂದು ಕೂಡಿಕೊಂಡ ಮಾವು ಹಾಗೂ ಹಲಸಿನ ಗಿಡಗಳನ್ನು ಕಂಡು, ದೂರಿರುವ ದೋಷದಿಂದ ಅದು ಮಾವಿನಗಿಡವೆಂಬ ಭ್ರಮ ಬರುತ್ತದೆ. ಸಮೀಪಕ್ಕೆ ಬಂದು ನೋಡಿದಾಗ ) ಹಲಸಿನ ಗಿಡವನ್ನು ತಿಳಿದಾಗ ) ಹಲಸ ಮಾವುಗಳ ತಾದಾತ್ಮ್ಯ ಜ್ಞಾನವು ಮಾತ್ರ ಬಾಧಿತವಾಗುವದಲ್ಲದೇ ಆರೋಪಿಸಲ್ಪಟ್ಟ 'ಮಾವು' ಅಲ್ಲಿರುವದರಿಂದ ಬಾಧಿತವಾಗುವದಿಲ್ಲ.

ಬಾಧ ಜ್ಞಾನದಲ್ಲಿ ಅಸತ್ ( ಸುಳ್ಳು ) ಆದುದೇ ತೋರಿತೆಂದು ಜ್ಞಾನವಿರುವದೆಂಬುದನ್ನು ತಿಳಿಸಲು "ಏವ" ಎಂಬ ಪದವನ್ನು ಹಾಕಲಾಗಿದೆ ( ಅಸತ್ ಏವ ರಜತಂ ಪ್ರತ್ಯಭಾತ್ ) ಅಸತ್ಯವೇ ಆದ ಬೆಳ್ಳಿ ತೋರಿತು ಎಂದು ಬಾಧ ಜ್ಞಾನ ಬರುತ್ತದೆ. ಆದುದರಿಂದ ಅಲ್ಲಿ ತೋರಿದ ಬೆಳ್ಳಿಯು ದೇಶಾಂತರದಲ್ಲಿದ್ದುದಲ್ಲ ( ಸತ್ಯವಾದುದಲ್ಲ) ಜ್ಞಾನರೂಪವು ಅಲ್ಲ, ತಾತ್ಕಾಲಿಕವಾಗಿ ಉತ್ಪನ್ನವಾದುದೂ ಅಲ್ಲ, ಹಾಗೂ ಅನಿರ್ವಚನೀಯವು ( ಸದಸದ್ವಿಲಕ್ಷಣ ) ಅಲ್ಲ ಇದರಿಂದ ಮೇಲೆ ಹೇಳಿದ ಮತಗಳು ನಿರಸ್ತವಾದವು ಎಂದು ತಿಳಿಯಬೇಕು. [ ವಿವರಣೆ – ವೈಶೇಷಿಕರು ಹೇಳುವ ದೇಶಾಂತರ ಸತ್ಯ ರಜತವೇ ತೋರುವದೆಂಬ ವಾದ, ವಿಜ್ಞಾನವಾದಿಗಳ ಜ್ಞಾನ ಸ್ವರೂಪವೇ ರಜತವೆಂಬ ವಾದ, ಭಾಸ್ಕರರ ತಾತ್ಕಾಲಿಕವಾಗಿ ಉತ್ಪನ್ನವಾಗಿ ಬಾಧ ಬಂದಾಗ ನಷ್ಟವಾಗುವ ರಜತವು, ಭ್ರಮದಲ್ಲಿ ತೋರುವದೆಂಬ ವಾದ, ಅದ್ವೈತಿಗಳ ರಜತವು ಸತ್, ಅಸತ್ಯ ಹಾಗೂ ಸತಾ ಸತ್ಯ ಭಿನ್ನವಾಗಿ ಅನಿರ್ವಚನೀಯವಾಗಿದೆಯೆಂಬ ವಾದಗಳೆಲ್ಲವೂ ಭ್ರಮದಲ್ಲಿ ತೋರಿದ ರಜತವು ಅತ್ಯಂತ ಸುಳ್ಳು ಎಂಬ ಸಿದ್ಧಾಂತದಿಂದ ನಿರಸನವಾಗುತ್ತದೆ

ಶಂಕಾ (ಭ್ರಮದಲ್ಲಿ) ಅಧಿಷ್ಠಾನವು ಶುಕ್ತಿಯು, ಪ್ರಧಾನವು ನಿಜವಾದ ಬೆಳ್ಳಿಯು. ಆರೋಪ್ಯದ ಸಾದೃಶ್ಯವು ಪ್ರಧಾನ ಹಾಗೂ ಅಧಿಷ್ಠಾನಗಳಲ್ಲಿದ್ದರೆ ಭ್ರಮವು ಆಗುತ್ತದೆ ಪ್ರಧಾನ ಹಾಗೂ ಅಧಿಷ್ಠಾನಗಳಿಗೆ ಆರೋಪ್ಯದಿಂದ ಸಾದೃಶ್ಯವು ಅಪೇಕ್ಷಿತವಾಗಿದೆ ಆರೋಪ್ಯವೇ ಸುಳ್ಳಾದರೆ ಇದಕ್ಕೆ ಸಾದೃಶ್ಯವೇ ಕೂಡದು.

कथं शुक्तिकायामसद्रजतारोपो युज्यते इति चेन्न, चाकचक्यस्य आरोप्यनिष्ठत्वाभावेऽपि चाकचक्येन यच्छुक्तिगतं सादृश्यं तत्प्रतियोगित्वस्य सत्यरजत इव असत्यपि संभावात्। प्रतियोगित्वस्य धर्मिसत्तानिरपेक्षत्वात् युज्यते शुक्तिकायां रजतारोपः। भ्रमविषयीभूतासद्रजते सादृश्यप्रतियोगित्वं नाम–तेनायं सदृश इति ज्ञानजनकीभूतज्ञानोल्लिख्यमानशब्दविषयत्वं, तद्यथा–तेनायं सदृश इति ज्ञानं, रजतमिति ज्ञानं, ज्ञानोल्लिख्यमानशब्दः, रजतमिति शब्दः, तद्विषयत्वं रजत इति, रजते सादृश्यप्रतियोगित्वं बोध्यं, एवं प्रधाननिष्ठसादृश्यप्रतियोगित्वमपि आरोप्यस्योह्यम्।

---

ಎಂದ ಮೇಲೆ ಸಿಂಪಿನಲ್ಲಿ ಸುಳ್ಳು ರಜತದ ಆರೋಪವು ಹೇಗೆ ಕೂಡುವದು ? ಹೀಗ ಶಂಕಿಸಕೂಡದು.

ರಜತ ಸಾದೃಶ್ಯವಾದ ಚಾಕಚಕ್ಯತೆಯು [ ಹೊಳಪು ] ಅಸತ್ ಆದ ಆರೋಪ್ಯದಲ್ಲಿಲ್ಲದಿದ್ದರೂ, ಸಿಂಪಿನಲ್ಲಿದ್ದ ಚಾಕಚಕ್ಯ ರೂಪ ಸಾದೃಶ್ಯ ಪ್ರತಿಯೋಗಿಯು ಸತ್ಯರಜತವು ಹೇಗೆ ಆಗುತ್ತದೆಯೋ, ಅದರಂತೆ ಆರೋಪಿತವಾದ ಅಸತ್ ರಜತವೂ ಸಾದೃಶ್ಯ ಪ್ರತಿಯೋಗಿ ಆಗುವದು ಎಂದು ಹೇಳುವದು ಸಮಂಜಸವಾಗುತ್ತದೆ. ಸಾದೃಶ್ಯವು [ ಹೊಳಪು ] ಆಶ್ರಯವನ್ನು [ ಧರ್ಮಿಯನ್ನು ] ಅಪೇಕ್ಷಿಸುತ್ತದೆ. ಆದರೆ ಸಾದೃಶ್ಯ ಪ್ರತಿಯೋಗಿತ್ವವು [ ಧರ್ಮಿ ] ಆಶ್ರಯವಿಲ್ಲದಿದ್ದರೂ ಅಸತ್ ಪದಾರ್ಥದಲ್ಲಿ ಬರುತ್ತದೆ. ಹೀಗೆ ಪ್ರತಿಯೋಗಿತ್ವವು ಧರ್ಮಿಯ ಸತ್ಯತೆಯನ್ನು ಅಪೇಕ್ಷಿಸುವದಿಲ್ಲವಾದ್ದರಿಂದ, ಸಿಂಪಿನಲ್ಲಿ ಆರೋಪಿಸಲ್ಪಟ್ಟ [ ಸುಳ್ಳು ] ರಜತದ ಆರೋಪವು ಕೂಡುತ್ತದೆ. 'ಭ್ರಮ' ದಲ್ಲಿ ವಿಷಯವಾದ ಅಸತ್ ರಜತಕ್ಕೆ ಸಾದೃಶ್ಯ ಪ್ರತಿಯೋಗಿತ್ವ ವಿದೆ. ಎಂದು ಹೇಳಿದಷ್ಟೇ ! 'ಈ ಸಾದೃಶ್ಯ ಪ್ರತಿಯೋಗಿತ್ವ' ವೆಂದರೇನು ? ಬೆಳ್ಳಿಗೆ ಇದು ಸದೃಶವು ಎಂಬ ಜ್ಞಾನಕ್ಕೆ ಕಾರಣವಾದುದು ಇದು ರಜತವೆಂಬ ಜ್ಞಾನವು. ಈ ಜ್ಞಾನದಲ್ಲಿ ಉಲ್ಲೇಖ್ಯಮಾನ ಶಬ್ದ [ ಹೇಳಲ್ಪಟ್ಟ ಶಬ್ದ ] ವೆಂದರೆ 'ರಜತ' ವೆಂಬ ಶಬ್ದವು ಈ ಶಬ್ದಕ್ಕೆ ವಿಷಯವಾಗಿದೆ ರಜತವು, ರಜತದಲ್ಲಿ ಶಬ್ದವಿಷಯತ್ವ ಬರುವದು. ಕಾರಣ ರಜತಕ್ಕೆ ಸಾದೃಶ್ಯ ಪ್ರತಿಯೋಗಿತ್ವವಿದೆಯೆಂದು ತಿಳಿಯಬೇಕು, ಇದರಂತೆಯೇ ಪ್ರಧಾನದಲ್ಲಿ ( ನಿಜವಾದ ಬೆಳ್ಳಿಯಲ್ಲಿ ) ಯೂ ಸಾದೃಶ್ಯಪ್ರತಿಯೋಗಿತ್ವವು ಆರೋಪಿತವಾದ ರಜತಕ್ಕೆ ಇದೆಯೆಂದು ಭಾವಿಸಬೇಕು.

**इति वादिकथितविपर्यये दूषणाभिधानपूर्वकं स्वमते विपर्ययसमर्थनम्**

(४) किंसंज्ञकोऽयं वृक्षः इत्यनध्यवसायः, स्वप्नश्च, अयथार्थज्ञानाद् ज्ञानांतरमित्यंगीक्रियते वैशेषिकैः, तन्न, किंसंज्ञकोऽयं वृक्ष इत्यनध्यवसायः, कोटीनां बाहुल्यादनिर्दिष्टकोटिकसंशये एवांतर्भवति, न तु ज्ञानांतरम् ।

**इति वैशेषिकांगीकृतानध्यवसायस्य संशये अंतर्भावसमर्थनम् ।**

तथा वटादिव्यावृत्तिं पश्यतोऽपि पनसे, यत् किंसंज्ञकोऽयं वृक्ष इत्युत्पद्यते, तद् ज्ञानमेव न भवति, किं तु संज्ञाविषयजिज्ञासा - ( इच्छा ) मात्रं ।

---

**ವಿಪರ್ಯಯವನ್ನು ಕುರಿತು ಪರವಾದಿಗಳು ಹೇಳುವುದರಲ್ಲಿ ದೋಷಣೆ ಹಾಗೂ ಅದರ ಸಮರ್ಥನೆ —**

---

**೪. ವೈಶೇಷಿಕರು ಹೇಳುವ ‘ ಅನಧ್ಯವಸಾಯ’ ವೆಂಬ ಜ್ಞಾನವು ‘ ಸಂಶಯ’ದಲ್ಲಿಯೇ ಅಂತರಭಾವ ಹೊಂದುವದೆಂಬುದರ ಸಮರ್ಥನೆ—**

‘ ಇದು ಯಾವ ಹೆಸರಿನ ಗಿಡವು ? ಎಂಬ ಅನಧ್ಯವಸಾಯವು [ ಅನಿಶ್ಚಿತತೆಯು ] ಹಾಗೂ ಸ್ವಪ್ನವು ಅಯಥಾರ್ಥ ಜ್ಞಾನದಿಂದ ಭಿನ್ನವಾದ ಪ್ರತ್ಯೇಕ ಜ್ಞಾನಗಳೆಂದು ವೈಶೇಷಿಕರು ಹೇಳುತ್ತಾರೆ. ಇದು ಸರಿಯಲ್ಲ. ‘ ಇದು ಯಾವ ವೃಕ್ಷ’ ವೆಂಬ ಅನಧ್ಯವಸಾಯದಲ್ಲಿ ಕೋಟಿಗಳು ( ಧರ್ಮಗಳು ) ಬಹಳ ಇರುವದರಿಂದ ನಿರ್ದೇಶ ಮಾಡಲಶಕ್ಯವಾದ [ ಅನಿರ್ದಿಷ್ಟ ಕೋಟಿಕ ] ಧರ್ಮವುಳ್ಳ ಸಂಶಯವೇ ಹೊರತು, ಜ್ಞಾನದಿಂದ ಭಿನ್ನವಾದ ಬೇರೊಂದು ಜ್ಞಾನವಾಗಲಾರದು. ವೃಕ್ಷತ್ವ ಸಾಧಾರಣಧರ್ಮ ಜ್ಞಾನವಿದ್ದು, ವಿಶೇಷಧರ್ಮ ತಿಳಿಯಲ್ಪಡಿಸುವಲ್ಲಿ ನಿರ್ಣಾಯಕವಿಲ್ಲದ್ದರಿಂದ ಹುಟ್ಟಿದ ಸಂಶಯವು ಇದು, ಈ ಅನಧ್ಯವಸಾಯವು ಸಂಶಯದಲ್ಲಿಯೇ ಅಂತರ್ಭಾವವಾಗುವದಲ್ಲದೇ ಜ್ಞಾನಾಂತರವಲ್ಲ, ಆದರೆ ಆಲದ ಮರದ ಜ್ಞಾನಮಾತ್ರ ಇದ್ದವನು ‘ಹಲಸು’ ನೋಡಿ ಇದು ಆಲದ ಮರದಿಂದ ಭಿನ್ನವಾದ ಯಾವದೋ ಮರ ಎಂದು ತಿಳಿದು, ಈ ಮರದ ಹೆಸರೇನಿರಬಹುದು ? ಎಂಬ ಅನಧ್ಯವಸಾಯವು ಜ್ಞಾನವೇ ಆಗಲಾರದು. ಅದು ಜಿಜ್ಞಾಸಾ ಮಾತ್ರ, ವೃಕ್ಷಸಾಮಾನ್ಯಜ್ಞಾನವು, ಅದರಲ್ಲಿಯ ವಿಶೇಷ ಧರ್ಮಗಳ ಜಿಜ್ಞಾಸೆಯನ್ನು ಹುಟ್ಟಿಸುತ್ತದೆ. “ ಆಲದ ಮರದಿಂದ ಭಿನ್ನವಾದ ವೃಕ್ಷವು ಯಾವುದಿರಬಹುದು ?” ಎಂಬುದೇ ಆ ಇಚ್ಛೆಯು, ಅದು ಜ್ಞಾನ ಸ್ವರೂಪವಾಗಲಾರದು.

स्वप्नगजादिदर्शनं यथार्थमेव, मानसवासनाजन्यत्त्वात् गजदीनां तेषु यद्बाह्यत्त्वज्ञानं स विपर्यय एवेति, न तयोर्ज्ञानांतरत्त्वम् ।

**इति स्वप्नगजादिदर्शनं यथार्थायथार्थज्ञानान्तर्भावसमर्थनम्**

ननु संभावनारूपं ज्ञानांतरमस्ति । तत्कुतो प्रमाणलक्षणे यथार्थपदेन न व्यावर्तितमिति न शंकनीयम्, बाह्यवीथीप्रदेशे पुरुषेणानेन भवितव्यमिति ऊहापरनामकं संभावनाज्ञानमपि अन्यतरकोटिप्रापकप्राचुर्यनिमित्तोऽन्यतरकोटिप्रधानः संशय एव, अतो न व्यावर्तितः ।

तथा च संशयो द्विविधः——(१) निर्दिष्टकोटिकः (२) अनिर्दिष्टकोटिकश्चेति, अनिर्दिष्टकोटिकोऽपि संशयो द्विविधः——समानानेककोटिकः, अन्यतरकोटिप्रधानश्च, अत्र संभावनापर्यायं ज्ञानं अन्यतरकोटिप्रधानसंशयरूपमेवेति द्रष्टव्यम् ।

**इति विपर्ययप्रकरणम् ।**

---

**ಸ್ವಪ್ನ ಪದಾರ್ಥಗಳ ಜ್ಞಾನವು ಯಥಾರ್ಥ, ಅಯಥಾರ್ಥ ಜ್ಞಾನಗಳಲ್ಲಿ ಅಂತರ್ಭಾವವಾಗುವದರ ಸಮರ್ಥನೆ–**

ಸ್ವಪ್ನದಲ್ಲಿ ಆನೆ ಮೊದಲಾದವುಗಳ ಜ್ಞಾನವಾಗುತ್ತದೆ. ಆ ಜ್ಞಾನವು ಯಥಾರ್ಥವು, ಕನಸಿನಲ್ಲಿಯ ವಸ್ತುಗಳುವ ಮನಸ್ಸಿನ ಸಂಸ್ಕಾರದಿಂದ ಹೊರಗಿನವು ಎಂಬ (ಹೊರಗಿನ ವಸ್ತುಗಳ ತಾದಾತ್ಮ್ಯ) ಜ್ಞಾನವು ಮಾತ್ರ ಅಯಥಾರ್ಥ ಜ್ಞಾನವು, ಸ್ವಪ್ನದಲ್ಲಿಯ ಈ ಎರಡೂ ಜ್ಞಾನಗಳು ಯಥಾರ್ಥ ಹಾಗೂ ಅಯಥಾರ್ಥ ಜ್ಞಾನಸ್ವರೂಪಗಳೇ ಹೊರತು, ಜ್ಞಾನಾಂತರಗಳಲ್ಲ.

ಶಂಕಾ– ಊಹಾ ರೂಪವಾದ 'ಸಂಭಾವನಾ' ಎಂಬುವದು ಒಂದು ಪ್ರತ್ಯೇಕ ಜ್ಞಾನ (ಜ್ಞಾನಾಂತರ) ಇರುವಾಗ, ಅದನ್ನು ಪ್ರಮಾಣದ ಲಕ್ಷಣವನ್ನು ಹೇಳುವಾಗ 'ಯಥಾರ್ಥ' ಪದದಿಂದ ವ್ಯಾವರ್ತನೆ ಮಾಡಲಿಲ್ಲವೇಕೆಂದು (ಪ್ರತ್ಯೇಕಿಸಲಿಲ್ಲವೇಕೆಂದು) ಶಂಕಿಸಕೂಡದು 'ಹೊರಪ್ರದೇಶದಲ್ಲಿ ಬಹುಶಃ ಈ ಪುರುಷನಿರಬಹುದು' ಎಂಬ ಊಹಾರೂಪವಾದುದೇ ಸಂಭವನಾ ಜ್ಞಾನವು ಈ ಜ್ಞಾನವು ಅನ್ಯತರಕೋಟಿ ಪ್ರಧಾನವಾದ ಸಂಶಯಯವೇ ಆಗಿದ್ದು. ಸಂಶಯದಲ್ಲಿ ಅಂತರ್ಭಾವ ಹೊಂದುವದರಿಂದ, ಅದನ್ನು ಯಥಾರ್ಥ ಪದದಿಂದ ವ್ಯಾವರ್ತನೆ ಮಾಡಲಿಲ್ಲ. ಈ ಪ್ರಕಾರ ಸಂಶಯವು ಎರಡು ಪ್ರಕಾರ – ೧) ಯಾವ ಸಂಶಯದಲ್ಲಿ ಪ್ರಕಾರಗಳು ನಿರ್ದಿಷ್ಟವಾಗಿರವವೋ ಅದು

## अथ वाद्यन्तरोक्तप्रमाणलक्षण भंगप्रकरणम्--

( १ ) ननु तर्करूपमयथार्थज्ञानांतरमस्ति । तत्कुतो न व्यावर्तितमिति चेत् पद्धतौ तर्कोऽनुमानमेवेत्युक्तं, तथा च तल्लक्ष्यमेवेति न व्यावर्तितम् ।

एवं यथावस्थितज्ञेयविषयीकारित्वं प्रमाणसामान्यमिति निरूप्य, तल्लक्षणदृढीकरणाय वाद्यंतरोक्तलक्षणानि निराकुर्वता तावत्प्राभाकरादीनां प्रमाणसामान्यलक्षणमनूद्य दूषणं क्रियते— अनुभूतिः प्रमाणं, अनुभूतिर्नाम स्मृतिव्यतिरिक्तं ज्ञानं, तथा च स्मृतिव्यतिरिक्तत्वे सति ज्ञानत्वं प्रमाणसामान्यलक्षणमित्युक्तं भवति, अयं घट इति ज्ञाने लक्षणसमन्वयः—तत्र स्मृतिव्यतिरिक्तत्व-

---

( ನಿರ್ದಿಷ್ಟ ಕೋಟಿಕವು )

೨ ) ಯಾವ ಸಂಶಯದಲ್ಲಿ ಪ್ರಕಾರಗಳು ನಿರ್ದಿಷ್ಟವಾಗಿಲ್ಲವೊ ಅದು ( ಅನಿರ್ದಿಷ್ಟ ಕೋಟಿಕವು ) ಅನಿರ್ದಿಷ್ಟ ಕೋಟಿಕ ಸಂಶಯವೂ ಎರಡೂ ಪ್ರಕಾರ: – ೧) ಸಮಾನಾನೇಕ ಕೋಟಿಕವು ಹಾಗೂ ೨) ಅನ್ಯತರ ಕೋಟಿ ಪ್ರಧಾನವು, ಸಂಭಾವನೆಯು ಅನ್ಯತರ ಕೋಟಿಪ್ರಧಾನ ಸಂಶಯವೆಂದೇ ತಿಳಿಯಬೇಕು.

ಪರವಾದಿಗಳು ಹೇಳುವ ಪ್ರಮಾಣ ಲಕ್ಷಣಗಳ ಭಂಗ ಪ್ರಕರಣವು–

ಶಂಕೆ :– ತರ್ಕವೆಂಬುದು ಅಯಥಾರ್ಥ ಜ್ಞಾನದಿಂದ ಭಿನ್ನವಾದ ಪ್ರತ್ಯೇಕ ಜ್ಞಾನವಾದುದರಿಂದ, ಅದನ್ನು ಪ್ರಮಾಣದ ಲಕ್ಷಣದಲ್ಲಿ ' ಯಥಾರ್ಥ ' ಪದದಿಂದ ಏಕೆ ವ್ಯಾವರ್ತನೆ ಮಾಡಲಿಲ್ಲವೆಂದನ್ನಕೂಡದು. ಪ್ರಮಾಣ ಪದ್ಧತಿಯಲ್ಲಿ ತರ್ಕವು ಅನುಮಾನವೇ ಎಂದು ಹೇಳಿದ್ದಾಗಿದೆ, ಆದ್ದರಿಂದ ತರ್ಕವು ಲಕ್ಷ್ಯವೇ ಆದಕಾರಣ ವ್ಯಾವರ್ತನೆ ಮಾಡಲಿಲ್ಲ

' ಯಥಾವಸ್ಥಿತಜ್ಞೇಯವಿಷಯಕಾರಿಯಾದುದು ಪ್ರಮಾಣವು ' ಎಂದು ಪ್ರಮಾಣ ಸಾಮಾನ್ಯದ ಲಕ್ಷಣವನ್ನು ಧೃಡಪಡಿಸಲು, ಹಾಗೂ ಪರವಾದಿಗಳು ಹೇಳುವ ಬೇರೆ ಲಕ್ಷಣಗಳನ್ನು ನಿರಾಕರಿಸಲು, ಪ್ರಭಾಕರರೇ ಮೊದಲಾದವರು ಹೇಳಿದ ಪ್ರಮಾಣದ ಲಕ್ಷಣಗಳನ್ನು ಅನುವಾದಿಸಿ ದೂಷಿಸಲಾಗುತ್ತದೆ.

೧. ಪ್ರಭಾಕರವಾದವು ಹಾಗೂ ಅದರ ನಿರಾಸವು :–

' ಅನುಭೂತಿಯು ಪ್ರಮಾಣವು, ಅನುಭೂತಿ ಎಂದರೆ ಸ್ಮೃತಿವ್ಯತಿರಿಕ್ತವಾದ ಜ್ಞಾನವು ಸ್ಮೃತಿವ್ಯತಿರಿಕ್ತವಾದ ಜ್ಞಾನವು ಪ್ರಮಾಣವೆಂದಾಯಿತು.

विशिष्ट ज्ञानत्वस्य सत्त्वादिति ।

दलकृत्यं तु—स्मृतिव्यतिरिक्तं प्रमाणमित्युक्ते घटादौ अतिव्याप्तिः, तद्वारणाय ज्ञानमिति, घटे स्मृतिव्यतिरिक्तत्वसद्भावेऽपि ज्ञानत्वाभावान्नातिव्याप्तिः, ज्ञानमित्युक्ते स्मृतावतिव्याप्तिः, तस्या अपि ज्ञानत्वात्, अतः स्मृतिव्यतिरिक्तेति, स्मृतेः स्मृतिव्यतिरिक्तत्वाभावान्नातिव्याप्तिरिति प्राभाकरा वदंति ।

तदेतल्लक्षणमयुक्तं—संशयविपर्ययव्यापकत्वात्, तथा हि तयोरपि स्मृतिव्यतिरिक्तत्वविशिष्टज्ञानत्वस्य सद्भावात्, तं प्रति अयथार्थज्ञानस्म साधितत्वादतिव्याप्तिः, तथा स्मृतौ वेदादिषु यथार्थज्ञानसाधनेषु अव्याप्तेश्च

---

'ಇದು ಘಟವು' ಎಂಬ ಜ್ಞಾನವು ಸ್ಮೃತಿಯಿಂದ ಭಿನ್ನವಾದ ಜ್ಞಾನವಾದ್ದರಿಂದ, ಮೇಲಿನ ಲಕ್ಷಣವು ಈ ಜ್ಞಾನದಲ್ಲಿ ಸಮನ್ವಯವಾಗುವದು.

ದಲಕೃತ್ಯವು :- 'ಸ್ಮೃತಿವ್ಯತಿರಿಕ್ತವಾದದ್ದು ಪ್ರಮಾಣ' ವೆಂದಿಷ್ಟೇ ಹೇಳಿದರೆ, ಘಟವೂ ಸ್ಮೃತಿಯಿಂದ ಭಿನ್ನವಾದುದರಿಂದ, ಘಟದಲ್ಲಿ ಈ ಲಕ್ಷಣ ಬಂದು ಅತಿವ್ಯಾಪ್ತಿ ಬರುವದು. ಈ ಅತಿವ್ಯಾಪ್ತಿ ಪರಿಹರಿಸಲು, 'ಜ್ಞಾನ' ವೆಂಬ ಪದವನ್ನು ಸೇರಿಸಬೇಕು. ಘಟದಲ್ಲಿ ಜ್ಞಾನತ್ವವಿಲ್ಲದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದು. ಕೇವಲ 'ಜ್ಞಾನವು' ಪ್ರಮಾಣ ವೆಂದಿಷ್ಟೇ ಹೇಳಿದರೆ, ಸ್ಮೃತಿಯೂ ಜ್ಞಾನರೂಪವಾದ್ದರಿಂದ ಸ್ಮೃತಿಯಲ್ಲಿ ಅತಿವ್ಯಾಪ್ತಿ ಬರುವದು. ಅದರ ನಿವಾರಣೆಗೆ 'ಸ್ಮೃತಿವ್ಯತಿರಿಕ್ತ' ಎಂದು ವಿಶೇಷಣ ಕೊಡಲಾಗಿದೆ. ಸ್ಮೃತಿ ಭಿನ್ನವಾದ ಜ್ಞಾನವು ಸ್ಮೃತಿಯಾಗಲಾರದುದರಿಂದ ಅತಿವ್ಯಾಪ್ತಿ ಬರುವದಿಲ್ಲ ಹೀಗೆ ಪ್ರಾಭಾಕರರು ಪ್ರಮಾಣದ ಲಕ್ಷಣವನ್ನು ಹೇಳುತ್ತಾರೆ.

ಆದರೆ ಈ ಲಕ್ಷಣವು ಅಯುಕ್ತವು. ಸಂಶಯ ಹಾಗೂ ವಿಪರ್ಯಯಗಳಲ್ಲಿ ಈ ಲಕ್ಷಣ ಹೋಗುವದರಿಂದ ಅತಿವ್ಯಾಪ್ತವಾಗುವದು. ಸಂಶಯ ಹಾಗೂ ವಿಪರ್ಯಯ ಜ್ಞಾನಗಳು ಸ್ಮೃತಿವ್ಯತಿರಿಕ್ತವಾಗಿದ್ದು, ಜ್ಞಾನರೂಪಗಳಾಗಿವೆ. ಇದಲ್ಲದೇ ಪ್ರಾಭಾಕರರನ್ನು ಕುರಿತು ಅಯಥಾರ್ಥ ಜ್ಞಾನವಿರುವದಾಗಿ ಈ ಮೊದಲು ಸಾಧನೆ ಮಾಡಿದ್ದರಿಂದ, ಅಯಥಾರ್ಥ ಜ್ಞಾನ ಹಾಗೂ ಸಂಶಯಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಸ್ಮೃತಿಯು ಸ್ಮರಣರೂಪವಾಗಿ ಸ್ಮರಣ ಭಿನ್ನವಾಗದೇ ಇದ್ದುದರಿಂದ ಸ್ಮೃತಿಯಲ್ಲಿಯೂ ವೇದಾದಿಗಳು ಜ್ಞಾನಗಳಾಗದೇ ಯಥಾರ್ಥ ಜ್ಞಾನ ಸಾಧನ ಮಾತ್ರಗಳಾದುದರಿಂದ, ವೇದಾದಿಗಳಲ್ಲಿಯೂ ಅವ್ಯಾಪ್ತಿ ಬರುವದು.

ननु सिद्धान्तिनोक्तं प्रमाणसामान्यलक्षणं स्मृतौ अव्यापकमिति चेन्न, तस्या अपि प्रमाणत्वेन ब्रह्मतर्कस्मृतिवेदयोः संव्यहारात्, "स्मृतिःप्रत्यक्षमैतिह्यं अनुमानचतुष्टयं प्रमाणमिति विज्ञेयं धर्माद्यर्थे बुभूषुभिरिति," तस्मान्नात्राव्याप्तिरिति शंका कार्या।

**इति प्राभाकराणां प्रमाणलक्षणनिरूपणं तद्दूषणं च ।**

**(२) भाट्टानां प्रमाणलक्षणं** तु---ज्ञाततापाकट्यापरपर्यायवाच्यस्य प्रमेयाश्रितस्य प्रकाशविशेषस्य साधनं क्रियाज्ञानं ( ज्ञानमिति यावत् ) प्रमाणमिति, अत्र ज्ञाततापाकट्यापरपर्यायवाच्यप्रमेयाश्रितप्रकाशविशेषसाधनत्वं प्रमाणसामान्यलक्षणमित्युक्तं भवति ।

अयं घट, इति ज्ञाने लक्षणसमन्वयः--

---

ಶಂಕಾ :- ಸಿದ್ಧಾಂತಿಗಳಿಂದ ಹೇಳಲ್ಪಟ್ಟ ಪ್ರಮಾಣ ಸಾಮಾನ್ಯದ ಲಕ್ಷಣವು [ ಯಥಾವಸ್ಥಿತ ಜ್ಞೇಯ ವಿಷಯಕಾರಿತ್ವವು ] ಸ್ಮೃತಿಯಲ್ಲಿ ಬರದೇ, ಅವ್ಯಾಪ್ತವಾಗುವದೆಂಬ ಶಂಕೆ ಸರಿಯಲ್ಲ. ಬ್ರಹ್ಮ ತರ್ಕ ಹಾಗೂ ಶ್ರುತಿ ಸ್ಮೃತಿಗಳಲ್ಲಿ ಸ್ಮೃತಿಯು ಪ್ರಮಾಣವೆಂದು ವ್ಯವಹಾರ ಕಂಡಿದೆ :- 'ಸ್ಮೃತಿ ಪ್ರತ್ಯಕ್ಷ ಇತಿಹಾಸ, ಅನುಮಾನ ಇವು ನಾಲ್ಕು ಧರ್ಮಾದಿ ವಿಷಯಗಳಲ್ಲಿ ಪ್ರಮಾಣವೆಂದು. ಫಲಾಪೇಕ್ಷೆಯುಳ್ಳವರು ತಿಳಿಯತಕ್ಕದ್ದು ' ಹೀಗೆ ಜ್ಞಾನಿಗಳ ಉಕ್ತಿಯಿರುವದರಿಂದ, ಸ್ಮೃತಿಯಲ್ಲಿ [ ಸ್ಮರಣದಲ್ಲಿ ] ಅವ್ಯಾಪ್ತಿ ಬರುವದಿಲ್ಲ. [ಸ್ಮರಣವು ] ಯಥಾವಸ್ಥಿತ ಜ್ಞೇಯ ವಿಷಯೀಕಾರಿಯಾಗಿದ್ದು, ಪ್ರಮಾಣವಾದುದರಿಂದ ಸಿದ್ಧಾಂತಿಗಳ ಲಕ್ಷಣವು ನಿರ್ದೋಷವಾದುದೆಂಬ ಅಭಿಪ್ರಾಯವು]

೨] ಮೀಮಾಂಸಕರ [ ಭಾಟ್ಟರ ] ಲಕ್ಷಣವು ಹಾಗೂ ಅದರ ದೂಷಣೆಯು - ಜ್ಞಾತತಾ ಹಾಗೂ ಪ್ರಾಕಟ್ಯ ಎಂಬ ಪರ್ಯಾಯ ಶಬ್ದಗಳಿಂದ ಕರೆಯಲ್ಪಡುವ ಪ್ರಮೇಯದಲ್ಲಿರುವ ಪ್ರಕಾಶ ವಿಶೇಷಕ್ಕೆ ಸಾಧನವಾದ ಜ್ಞಾನವು ಪ್ರಮಾಣವು, ಈ ಲಕ್ಷಣದಲ್ಲಿಯ ಜ್ಞಾತತಾ ಹಾಗೂ ಪ್ರಾಕಟ್ಯ ಎಂಬ ಪರ್ಯಾಯ ಶಬ್ದಗಳಿಂದ ಕರೆಯಲ್ಪಡುವದು ಎಂಬುದು ಪ್ರಕಾಶ ವಿಶೇಷ, ಎಂಬ ಶಬ್ದದ ವ್ಯಾಖ್ಯಾನವಾಗಿದೆ. ಅಂತೂ ಜ್ಞಾತತಾ, ಪ್ರಾಕಟ್ಯ ಇತ್ಯಾದಿ ಪದವಾಚ್ಯವಾದ ಪ್ರಮೇಯಾಶ್ರಿತವಾದ ಪ್ರಕಾಶ ವಿಶೇಷವನ್ನು ಹುಟ್ಟಿಸುವ ಜ್ಞಾನವು ಪ್ರಮಾಣವೆಂದಾಯಿತು. 'ಇದು ಘಟವು' ಎಂಬ ಜ್ಞಾನವು ಜ್ಞಾತತಾ ಪ್ರಾಕಟ್ಯವೆಂಬ ಪರ್ಯಾಯ ಪದಗಳಿಂದ ಹೇಳಲ್ಪಡುವ

अयं घट, इति ज्ञाने ज्ञातताप्राकटयापरपर्यायवाच्यप्रमेयाश्रित-प्रकाशविशेषसाधनज्ञानत्वस्य सत्त्वात् । ज्ञानस्य ज्ञातताजनकत्वे प्रमाणं--' ज्ञातो घटः प्रकटो घट , इत्यादि प्रत्यक्षमेव, तथा ज्ञानं, स्वकर्मणि किंचित्करोति, क्रियात्वात् छिदिक्रियावत्, इत्यनुमानमपि मानम् ।

**भाट्टानां एतल्लक्षणमयुक्तं**--' ज्ञातो घटः, प्रकटो घट, इत्यादिव्यवहारस्य ज्ञानविषयत्वेनैवोपपत्तेः, ज्ञानविषयत्वातिरिक्तज्ञाततायां प्रमाणाभावेन, प्रत्यक्षेण ज्ञाततासिद्धेरभावात् लक्षणस्यासंभवः ।

---

ಪ್ರಮೇಯಾಶ್ರಿತ [ ಘಟಾಶ್ರಿತ ] ಪ್ರಕಾಶ ವಿಶೇಷವನ್ನು ಹುಟ್ಟಿಸುವ ಜ್ಞಾನವಾದುದರಿಂದ ಲಕ್ಷಣ ಸಮನ್ವಯವಾಯಿತು. [ವಿವರಣೆ- ಜ್ಞಾತತಾ, ಪ್ರಾಕಟ್ಯ ಇವು ಪ್ರಮೇಯವಾದ ಘಟದಲ್ಲಿವೆ, ಇದನ್ನೇ ಪ್ರಕಾಶ ವಿಶೇಷವೆಂದು ಕರೆಯಲಾಗಿದೆ. ಈ ಪ್ರಕಾಶ ವಿಶೇಷಕ್ಕೆ ಸಾಧನವಾದ ( ಹುಟ್ಟಿಸುವ ) ಜ್ಞಾನವು ಪ್ರಮಾಣವು. ಎಂದರೆ ಜ್ಞಾನವು ಪ್ರಮೇಯದಲ್ಲಿ ಜ್ಞಾತತಾ, ಹಾಗೂ ಪ್ರಾಕಟ್ಯಗಳನ್ನು ಹುಟ್ಟಿಸಿ ನಂತರ ಪ್ರಮಾಣವಾಗುತ್ತದೆ ಎಂಬ ಭಾವ.] ಜ್ಞಾನವು ಜ್ಞಾತತಾ ಹುಟ್ಟಿಸುವದೆಂಬಲ್ಲಿ ಪ್ರಮಾಣಗಳೇನೆಂದರೆ :-- ' ಘಟವು ಜ್ಞಾತವಾಯಿತು ' ' ಘಟವು ಪ್ರಕಟವಾಯಿತು ' ಎಂಬ ಪ್ರತ್ಯಕ್ಷವೇ ಪ್ರಮಾಣವು. ಅಲ್ಲದೇ, ಜ್ಞಾನವು ಕ್ರಿಯೆಯಾಗಿರುವದರಿಂದ ತನಗೆ ವಿಷಯವಾದ ಪದಾರ್ಥದಲ್ಲಿ ಕಿಂಚಿತ್ ಕಾರ್ಯ ಮಾಡುತ್ತದೆ, ಛೇದನ ಕ್ರಿಯೆಯಂತೆ. ಎಂಬ ಅನುಮಾನವೂ ಈ ವಿಷಯದಲ್ಲಿ ಪ್ರಮಾಣವು [ ಈ ಅನುಮಾನದಿಂದ ಘಟದಲ್ಲಿ ಜ್ಞಾತತಾ, ಹಾಗೂ ಪ್ರಾಕಟ್ಯ ಸಿದ್ಧಿಸುತ್ತದೆ. ಏಕೆಂದರೆ, ಜ್ಞಾನವು ತನಗೆ ವಿಷಯವಾದ ಪದಾರ್ಥದಲ್ಲಿ, [ಘಟದಲ್ಲಿ] ಕಿಂಚಿತ್ ಕಾರ್ಯ ಮಾಡುತ್ತಿದೆಯೆಂದರೆ, ಜ್ಞಾತತಾ, ಪ್ರಾಕಟ್ಯ ಹುಟ್ಟಿಸುತ್ತದೆ ಎಂದರ್ಥವು.

ಭಾಟ್ಟರು ಹೇಳುವ ಈ ಲಕ್ಷಣವು ಸರಿಯಾದುದಲ್ಲ. ಘಟವು ಜ್ಞಾತವಾಯಿತು, ಪ್ರಕಟವಾಯಿತು ಎಂಬ ವ್ಯವಹಾರಗಳು, ಜ್ಞಾನ ವಿಷಯತ್ವ ಘಟಕ್ಕಿದ್ದ ಪ್ರಯುಕ್ತ, ಕೂಡುತ್ತದೆ. ಜ್ಞಾನ ವಿಷಯತ್ವದಿಂದ ಬೇರೆಯಾದ ಜ್ಞಾತತೆಯಾಗಲಿ, ಪ್ರಾಕಟ್ಯವಾಗಲಿ ಇರುವದಕ್ಕೆ ಇದ್ದ ಕಾರಣ, ಜ್ಞಾನ ವಿಷಯತ್ವದಿಂದ ಭಿನ್ನವಾದ 'ಜ್ಞಾತತಾ' ಹುಟ್ಟುವದೆಂಬಲ್ಲಿ ಪ್ರಮಾಣವಿಲ್ಲದ್ದರಿಂದ, ಪ್ರತ್ಯಕ್ಷದಿಂದಲೂ ಜ್ಞಾತತಾ ಹಾಗೂ ಪ್ರಾಕಟ್ಯ ಸಿದ್ಧಿಸಲಾರದು. ಕಾರಣ ಲಕ್ಷಣವು ಯಾವ ಲಕ್ಷ್ಯದಲ್ಲಿಯೂ ಬಾರದೇ ಅಸಂಭವಿಯಾಗುತ್ತದೆ.

मा भूत् प्रत्यक्षेण ज्ञाततासिद्धिः, तथापि प्रागुक्तानुमानेन तत्सिद्धिः स्यादिति चेन्न । अतीतादिविषयज्ञानानां ज्ञातताजनकत्वायोगेन स्वकर्मणि किंचित्कारित्वाभावात् बाधितविषयमनुमानं भवति । अपि च अतीतादिविषयज्ञाने उक्तलक्षणाभावादव्यापकं लक्षणम् । वेदेषु च ज्ञातताप्राकट्यापरपर्यायवाच्यप्रमेयाश्रितप्रकाशविशेषसाधनज्ञानत्वस्याभावात्, अतिव्याप्तिः ।

" अज्ञातयथावस्थितार्थविषयकं ज्ञानं प्रमाणमिति **भाट्टानामेव लक्षणान्तरं**, अत्र ज्ञातार्थ ज्ञानेऽतिव्याप्तिवारणाय अज्ञातेति ( अनधिगतेति ) विशेषणं,

---

ಪ್ರತ್ಯಕ್ಷದಿಂದ ' ಜ್ಞಾತತಾ ' ಸಿದ್ಧಿಸದೇ ಹೋದರೂ ಪೂರ್ವದಲ್ಲಿ ಹೇಳಿದ, ಅನುಮಾನದಿಂದ ಸಿದ್ಧಿಸುವದೆಂದರೆ, ಅದೂ ಕೂಡುವದಿಲ್ಲ. ಗತಿಸಿ ಹೋದ ಅಥವಾ ಹಿಂದಿನ ಕಾಲದ ವಸ್ತು ವಿಷಯೀಕರಿಸುವ ಜ್ಞಾನಗಳಿಗೆ [ಜ್ಞಾತತಾ ಜನಕತ್ವವು] ಜ್ಞಾತತೆಯನ್ನು ಹುಟ್ಟಿಸುವದು ಕೂಡುವದಿಲ್ಲವಾದ್ದರಿಂದ ಆ, ಜ್ಞಾನಗಳು ತಮಗೆ ವಿಷಯವಾದ ಪದಾರ್ಥಗಳಲ್ಲಿ ಕಿಂಚಿತ್ ಕಾರಿ ಆಗಲಾರವು. ಮೇಲಿನ ಕ್ರಿಯೇಯನ್ನು ಹೇತು ಮಾಡಿರುವ ಕ್ರಿಯಾತ್ಮ ಅನುಮಾನದಲ್ಲಿ ಪಕ್ಷವಾದ ಜ್ಞಾನದಲ್ಲಿ [ ತನಗೆ ಆಶ್ರಯವಾದುದರಲ್ಲಿ ] ಕಿಂಚಿತ್ ಕಾರಿತ್ವ ಎಂಬ ಸಾಧ್ಯ ಬರಲಿಲ್ಲವಾದ್ದರಿಂದ ಅನುಮಾನವು ಬಾಧಿತವಾಗುವದು. [ ಪಕ್ಷದಲ್ಲಿ ಸಾಧ್ಯ ಬರದಿದ್ದರೆ ಬಾಧವೆಂಬ ದೋಷವು ಬಂದು ಅನುಮಾನವು ಕೆಡುವದು] ವಿವರಣೆ:- ಇವರ ಮತದಂತೆ ವರ್ತಮಾನ ಕಾಲದ ಜ್ಞಾನವೇ, ಪ್ರಮೇಯ ವಸ್ತುವಿನಲ್ಲಿ ' ಜ್ಞಾತತಾ ' ಎಂಬ ಕಾರ್ಯ ಹುಟ್ಟಿಸುತ್ತದೆ ಹೊರತು ಅತೀತಜ್ಞಾನದಲ್ಲಿ ಅಲ್ಲ. ಅತೀತ ಮೊದಲಾದ ಜ್ಞಾನವು ಕಿಂಚಿತ್ ಕಾರಿ ಆಗುವದಿಲ್ಲವಾದ್ದರಿಂದ ಅನುಮಾನವು ಬಾಧಿತವಾಗುವದು. ಇಲ್ಲಿ ಜ್ಞಾನ ಸಾಮಾನ್ಯವು ಪಕ್ಷವೆಂದು ತಿಳಿಯಬೇಕು] ಇದಲ್ಲದೇ, ಅತೀಂದ್ರಿಯ ವಿಷಯ ಜ್ಞಾನದಲ್ಲಿಯೂ ಉಕ್ತ ಲಕ್ಷಣ ಬರುವದಿಲ್ಲವಾದ್ದರಿಂದ ಅವ್ಯಾಪ್ತವಾಗುತ್ತದೆ. ಅದರಂತೆ, ಜ್ಞಾತತಾ, ಪ್ರಾಕಟ್ಯವೆಂಬ ಪರ್ಯಾಯ ಶಬ್ದವಾಚ್ಯವಾದ, ಪ್ರಮೇಯಾಶ್ರಿತವಾದ, ಪ್ರಕಾರ ವಿಶೇಷಕ್ಕೆ ಸಾಧನವಾದ ಜ್ಞಾನತ್ವವು ಕರಣವಾದ ವೇದಗಳಲ್ಲಿಲ್ಲ. [ ಎಂದರೆ ವೇದಗಳು ಜ್ಞಾನಸಾಧನಗಳೇ ಹೊರತು ಜ್ಞಾನ ಸ್ವರೂಪಗಳಲ್ಲ] ಲಕ್ಷಣವು ಅವ್ಯಾಪ್ತವಾಗುತ್ತದೆ.

ಭಾಟ್ಟರ ಇನ್ನೊಂದು ಲಕ್ಷಣವು ಹೀಗಿದೆ:- ಅಜ್ಞಾತವಾದ ವಸ್ತುವಿನ ಯಥಾರ್ಥ ವಿಷಯಕ ಜ್ಞಾನವು ಪ್ರಮಾಣವು. ಜ್ಞಾತಾರ್ಥ ಜ್ಞಾನದಲ್ಲಿ ಅತಿವ್ಯಾಪ್ತಿ ಪರಿಹಾರ

ज्ञातार्थज्ञानस्य ,अधिगतयथावस्थितार्थविषयकत्वान्नातिव्याप्तिः, अनधिगतार्थविषयकं ज्ञानमित्युक्ते, विपर्यये अतिव्याप्तिः, अतः यथावस्थितेति । तत्र यथावस्थितार्थविषयकत्वाभावान्नातिव्याप्तिः भाट्टनामेतल्लक्षणान्तरमप्ययुक्तं—स्मृतौ वेदादिषु च अव्याप्तेः, तत्र स्मृतेरधिगतार्थविषयकत्वात्, वेदादिषु ज्ञानत्वाभावाच्चेति । ( भावादीपे )

**इति भाट्टानां प्रमाणलक्षणनिरूपणं तद्दूषणं च ।**

( २ ) सम्यगनुभवसाधनं प्रमाणमिति नैयायिकादीनां लक्षणं । अत्र अनुभवः प्रमाणमित्युक्ते विपर्यये गतं,

---

ಮಾಡಲು 'ಅಜ್ಞಾತ ಯಥಾರ್ಥ ವಿಷಯಕ' ಎಂದು ವಿಶೇಷಣ ಕೊಟ್ಟಿದೆ. ಜ್ಞಾತವಾದ ಪದಾರ್ಥ ಜ್ಞಾನದಲ್ಲಿ ಈ ಲಕ್ಷಣ ಬರುವದಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದು, ಇನ್ನು 'ಯಥಾರ್ಥ' ಎಂಬ ಪದ ಸೇರಿಸದೇ, 'ಅಜ್ಞಾತಾರ್ಥ ವಿಷಯಕಜ್ಞಾನವು ಪ್ರಮಾಣ' ವೆಂದಿಷ್ಟೇ ಹೇಳಿದರೆ, ವಿಪರ್ಯಯವು ಅಜ್ಞಾತಾರ್ಥ ವಿಷಯಕ ಜ್ಞಾನವಾದ್ದರಿಂದ, ವಿಪರ್ಯಯದಲ್ಲಿ ಅತಿವ್ಯಾಪ್ತಿ ಬರುವದು. ಅದರ ನಿವಾರಣೆಗಾಗಿ 'ಅಜ್ಞಾತ ಯಥಾರ್ಥ ವಿಷಯಕ ಜ್ಞಾನ' ವೆಂದು ಹೇಳಬೇಕು. ವಿಪರ್ಯಯದಲ್ಲಿ ಯಥಾರ್ಥ ವಿಷಯತ್ವ ವಿಲ್ಲದ್ಧರಿಂದ ಅತಿವ್ಯಾಪ್ತಿ ಇಲ್ಲ.

ಆದರೆ ಭಾಟ್ಟರ ಈ ಲಕ್ಷಣವೂ ಅಯುಕ್ತವಾದದು. ಸ್ಮೃತಿ ಮತ್ತು ವೇದ ಮೊದಲಾದವುಗಳಲ್ಲಿ ಅವ್ಯಾಪ್ತಿ ಬಂದೇ ಬರುತ್ತದೆ. ಸ್ಮರಣೆಯು ಜ್ಞಾತಾರ್ಥ ವಿಷಯಕವಾಗದೆಯಲ್ಲದೇ 'ಅಜ್ಞಾತಾರ್ಥ ವಿಷಯಕವಾಗಿಲ್ಲ.' ವೇದಗಳು ಜ್ಞಾನ ಸಾಧನಗಳೇ ಹೊರತು, ಜ್ಞಾನ ಸ್ವರೂಪಗಳಾಗಿಲ್ಲ [ ವೇದಗಳಲ್ಲಿ ಜ್ಞಾನತ್ವವಿಲ್ಲ ] ಲಕ್ಷ್ಯವಾದ ಇವುಗಳಲ್ಲಿ ಲಕ್ಷಣ ಬಾರದೇ ಅವ್ಯಾಪ್ತವಾಯಿತು. ಭಾವದೀಪದಲ್ಲಿ ಹೀಗೆ ನಿರಾಸ ಮಾಡಲಾಗಿದೆ.

**೨ ನೈಯಾಯಿಕರು ಹೇಳುವ ಪ್ರಮಾಣ ಲಕ್ಷಣ ಹಾಗೂ ಅದರ ದೂಷಣೆ**

"ಸಮ್ಯಕ್ ಅನುಭವಕ್ಕೆ ಸಾಧನವಾದದ್ದು ಪ್ರಮಾಣವು" ಎಂದು ನೈಯಾಯಿಕರು ಪ್ರಮಾಣದ ಲಕ್ಷಣ ಹೇಳುತ್ತಾರೆ. ಸಮ್ಯಕ್ ಅನುಭವವೆಂದರೆಯಥಾರ್ಥ ನಿಶ್ಚಯವು ಕೇವಲ 'ಅನುಭವವು ಪ್ರಮಾಣವು' ಎಂದಿಷ್ಟೇ ಹೇಳಿದರೆ, ವಿಪರೀತ ಜ್ಞಾನವೂ ಅನುಭವವಾದ್ಧರಿಂದ, ವಿಪರೀತ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಸಮ್ಯಕ್ ಅನುಭವ ಸಾಧನವೆಂದು ಹೇಳಬೇಕು.

तदर्थं सम्यगिति देयं, विपर्ययस्य सम्यक्त्वाभावान्नातिव्याप्तिः । तथा च सम्यगनुभव इत्युक्तं भवति, तथात्वे फले अतिव्याप्तिः, तदर्थं साधनमिति, फलस्य साधनत्वाभावान्नातिव्याप्तिः । साधनमित्त्येवोक्ते कुठारादौ गतं, तदर्थं सम्यगनुभवसाधनमिति, कुठारस्य छिदिक्रियां प्रति साधनत्वेऽपि सम्यगनुभवसाधनत्वाभावान्नातिव्याप्तिः ।

एतल्लक्षणमप्ययुक्तं, तथा हि-यथार्थज्ञाने अव्याप्तेः,तस्य सम्यगनुभवत्वेऽपि सम्यगनुभवसाधनत्वाभावात् । यद्यपि करणाप्रमाण्यवादिनां तेषां यथार्थज्ञानस्यालक्ष्यत्वान्न तत्राव्याप्तिः, लक्ष्यैकदेशे लक्षणासत्त्वेऽव्याप्तिः, यथार्तज्ञानस्य लक्ष्यत्वाभावेन तत्र लक्षणाभावे कथमव्याप्तिर्भवेदितिभावः ।

तथापि ल्युडन्तप्रमाणशब्दस्य करण इव भावेऽप्यनुशासनात्

---

ವಿಪರ್ಯಯವು ಸಮ್ಯಕ್ ಅನುಭವವಲ್ಲವಾದ್ದರಿಂದ ಅತಿವ್ಯಾಪ್ತಿಯಿಲ್ಲ. ' ಸಮ್ಯಕ್ ಅನುಭವ ಪ್ರಮಾಣ " ಎಂದಿಷ್ಟೇ ಹೇಳಿದರೆ, ಫಲರೂಪವಾದ [ ಘಟ, ಪಟ ಇತ್ಯಾದಿ ] ಜ್ಞಾನವು ಸಮ್ಯಕ್ ಅನುಭವವಾದ್ದರಿಂದ, ಫಲದಲ್ಲಿ ಅತಿವ್ಯಾಪ್ತಿ ಬರುವದು. ಆದ್ದರಿಂದ, ಸಮ್ಯಕ್ ಅನುಭವಸಾಧನ ' ವೆಂದು ಹೇಳಬೇಕು. ಫಲರೂಪ ಜ್ಞಾನವು ಸಾಧನವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರಲಾರದು. ಕೇವಲ ' ಸಾಧನವು ಪ್ರಮಾಣ ' ವೆಂದರೆ, ಕೊಡಲಿಯೂ ಕಡಿಯುವ ಕ್ರಿಯೆಗೆ ಸಾಧನವಾದುದರಿಂದ, ಅದರಲ್ಲಿ ಅತಿವ್ಯಾಪ್ತಿ ಬರುವದು. ಈ ಅತಿವ್ಯಾಪ್ತಿ ಪರಿಹಾರಕ್ಕಾಗಿ ' ಸಮ್ಯಕ್ ಅನುಭವ ಸಾಧನವು ' ಎಂದು ಹೇಳಬೇಕು. ಕೊಡಲಿಯು ಕಡಿಯುವ ಕ್ರಿಯೆಗೆ ಸಾಧನವಾದರೂ ಅನುಭವ ಸಾಧನವಾಗಲಾರದ ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ.

ನೈಯಾಯಿಕರು ಹೇಳುವ ಈ ಲಕ್ಷಣವೂ ಸರಿಯಾದುದಲ್ಲ. ಯಥಾರ್ಥ ಜ್ಞಾನವು ಸಮ್ಯಕ್ ಅನುಭವ ಸಾಧನವಾಗಿಲ್ಲವಾದ್ದರಿಂದ ಯಥಾರ್ಥ ಜ್ಞಾನದಲ್ಲಿ ಅವ್ಯಾಪ್ತಿ ಬರುವದು. ಕರಣ ಪ್ರಾಮಾಣ್ಯವಾದಿಗಳಾದ ನೈಯಾಯಿಕರು ಕೇವಲ ಪ್ರಮಾಣವಾದ ಯಥಾರ್ಥ ಜ್ಞಾನವನ್ನು ಲಕ್ಷ್ಯವೆಂದು ಒಪ್ಪದ ಕಾರಣ ಯಥಾರ್ಥ ಜ್ಞಾನವು ಅವರ ಲಕ್ಷಣಕ್ಕೆ ಲಕ್ಷ್ಯವಾಗಿಲ್ಲವಾದ್ದರಿಂದ [ ಲಕ್ಷ್ಯೈಕ ದೇಶದಲ್ಲಿ ಲಕ್ಷಣ ಬರಲಿಲ್ಲವೆನ್ನಲು ಪ್ರಸಕ್ತಿಯಿಲ್ಲವಾದ್ದರಿಂದ ] ಅವ್ಯಾಪ್ತಿ ದೋಷವಿಲ್ಲವೆನ್ನಬಹುದು. ಆದರೆ, ' ಪ್ರಮಾಣ ಶಬ್ದವು ಲ್ಯುಡಂತ ' ಶಬ್ದವಾಗಿದ್ದು, ' ಲ್ಯುಡಂತವು ' ಕರಣಾರ್ಥದಲ್ಲಿ ಬರುವಂತೆ

ज्ञानस्यापि प्रमाणशब्दवाच्यतासत्त्वेन तस्य लक्ष्यत्वात् भवत्येवो-क्तलक्षणस्य तत्राव्याप्तिरिति ।

प्रमाव्याप्तं प्रमाणमिति उदयनः । प्रमया व्याप्तमिति तदर्थः एतदपि ईश्वरप्रमाया अनादिनित्यत्वेन, यदा घटादिप्रमेयं तदा ईश्वरप्रमेति व्याप्तेः सत्त्वात् । तथा च सर्वस्यापि प्रमेयस्य ईश्वरप्रमाव्याप्तत्वेन अस्य लक्षणस्य प्रमेयेऽतिव्यापकत्वादयुक्तमिदं लक्षणमिति चेन्न, प्रमासाधनाश्रययोरन्यतरत्वे सति प्रमाव्याप्तत्वं विवक्षितं, अत्र साधनाश्रययोरन्यतरत्वग्रहणेन प्रमेयस्य तदुभयान्यतरत्वाभावान्नातिव्याप्तिरिति ।

**एतदप्ययुक्तं— लक्षणे आश्रयग्रहणं व्यर्थं**

---

ಭಾವಾರ್ಥದಲ್ಲಿಯೂ ಇರುವದಾಗಿ ವ್ಯಾಕರಣ ನಿಯಮ [ ಅನುಶಾಸನ ] ವುಂಟು. ಆದ್ದರಿಂದ "ಜ್ಞಾನವೂ" ಪ್ರಮಾಣ ಶಬ್ದದಿಂದ ವಾಚ್ಯವಾಗುವದರಿಂದ, ಲಕ್ಷ್ಯವಾಗುವದು ಲಕ್ಷ್ಯವಾದ ಜ್ಞಾನದಲ್ಲಿ ಹೇಳಿದ ಲಕ್ಷಣ ಬರಲಾರದ ಕಾರಣ, ಅವ್ಯಾಪ್ತಿ ದೋಷ ಬಂದೇ ಬರುತ್ತದೆ. ಉದಯನನು "ಪ್ರಮಾ ವ್ಯಾಪ್ತವು ಪ್ರಮಾಣ" ವೆಂದು ಲಕ್ಷಣ ಹೇಳುತ್ತಾನೆ. ಪ್ರಮಾ ಎಂದರೆ ಯಥಾರ್ಥ ಜ್ಞಾನವು. ಯಥಾರ್ಥ ಜ್ಞಾನದಿಂದ ವ್ಯಾಪ್ತಿಯುಳ್ಳದೆಂದರ್ಥವು. [ ವ್ಯಾಪ್ತಿ ಹೇಗೆಂದರೆ — ಯಾವಾಗ್ಗೆ ವಿಷಯ ಸಂಬಂಧವುಳ್ಳ ಇಂದ್ರಿಯಗಳೋ ಅವಾಗ್ಗೆ 'ಪ್ರಮಾ' ಎಂದು ಅವನು ಹೇಳುವದರಿಂದ, 'ಪ್ರಮಾ' ದಿಂದ, ಸನ್ನಿಕೃಷ್ಟ ಇಂದ್ರಿಯವು ವ್ಯಾಪ್ತವಾಯಿತು. ಆದ್ದರಿಂದ [ ಸನ್ನಿಕೃಷ್ಟ ] ವಿಷಯ ಸಂಬಂಧವುಳ್ಳ ಇಂದ್ರಿಯವು ಪ್ರಮಾಣವು. ಇದರಂತೆಯೇ 'ಶಬ್ದ' ಹಾಗೂ 'ಲಿಂಗಗಳು' ಪ್ರಮಾಣಗಳೆಂದು ತಿಳಿಯಬೇಕು. ] ಆದರೆ ಹೀಗೆ ಲಕ್ಷಣ ಮಾಡುವದೂ ಅಯುಕ್ತವು ಈಶ್ವರ ಪ್ರಮಾ ಅನಾದಿ ನಿತ್ಯವಾದ್ದರಿಂದ ಯಾವಾಗ್ಗೆ ಘಟ ಮೊದಲಾದ ಪ್ರಮೇಯಗಳಿವೆಯೋ ಆಗಾಗ್ಗೆ ಈಶ್ವರ ಪ್ರಮಾ ಇರುವ ವ್ಯಾಪ್ತಿ ಇರುವದರಿಂದ ಎಲ್ಲ ಘಟ ಮೊದಲಾದ ಪ್ರಮೇಯದಲ್ಲಿ ಅತಿವ್ಯಾಪ್ತವಾಗುವದರಿಂದ ಸರಿಯಲ್ಲವೆಂದು ಹೇಳಕೂಡದು. ಏಕೆಂದರೆ "ಪ್ರಮಾವ್ಯಾಪ್ತ" ವೆಂದರೆ, ಪ್ರಮಾಕ್ಕೆ ಸಾಧನವಾಗಲೀ ಇಲ್ಲವೇ ಆಶ್ರಯವಾಗಲೀ ಇವೆರಡರಲ್ಲಿ ಒಂದಾಗಿದ್ದು ಪ್ರಮಾದಿಂದ ವ್ಯಾಪ್ತವಾದದ್ದು ಪ್ರಮಾಣವೆಂದು ಅಭಿಪ್ರಾಯವು. ಪ್ರಮಾಕ್ಕೆ ಸಾಧನ ಇಲ್ಲವೇ ಆಶ್ರಯಗಳಲ್ಲೊಂದಾಗಿರಬೇಕೆಂಬ ವಿವಕ್ಷೆ ಮಾಡಿದ್ದರಿಂದ, ಪ್ರಮೇಯದಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

ಏಕೆಂದರೆ ಪ್ರಮೇಯವಾದ ಘಟ ಮೊದಲಾದವು ಪ್ರಮಾಸಾಧನವೂ ಅಲ್ಲ, ಪ್ರಮಾಕ್ಕೆ

साधनत्वविवक्षयैव प्रमेयेऽतिव्याप्तिपरिहारस्य सुशकत्वात्, " तन्मे प्रमाणं शिव " इत्युक्तत्वेन ईश्वरः प्रमाणमिति व्यवहारसिद्धयर्थं तद्विशेषणं (आश्रयविशेषणं) इति चेन्न, आश्रयपदेन किमत्र प्रमावान्, तत्कर्ताऽभिप्रेतः, उताधिकरणमात्रं । आद्ये कर्तरि प्रमाणशब्दस्याननु शासनात् । तत्पक्षे प्रमातीति प्रमाणमिति प्रपूर्वात् माङ्मान इति धातोः कर्तरि ल्युट्प्रत्यये प्रमाणमिति रूपं भवतीति वक्तव्यम न हि कर्तरि ल्युटो विधानमस्ति ल्युटो भावे करणाधिकरणयोश्चेति विधानात्, लक्षणे आश्रयग्रहणं व्यर्थमेव । यथार्थज्ञानमेव

---

ಆಶ್ರಯುಗಳೂ ಅಲ್ಲ, ಉದಯನನು ಹೇಳುವ ಈ ಲಕ್ಷಣವು ಸರಿಯಲ್ಲ – ಈ ಲಕ್ಷಣದಲ್ಲಿ 'ಆಶ್ರಯ' ಪದ ಗ್ರಹಣ ಮಾಡಿದ್ದು ವ್ಯರ್ಥವು 'ಸಾಧನ ಪದ ವಂದರಿಂದಲೇ ಪ್ರಮೇಯ ದಲ್ಲಿ ಬಂದ ಅತಿವ್ಯಾಪ್ತಿ ಪರಿಹಾರವಾಗುವದು. 'ಆದರೆ ನನಗೆ ಆ ಶಿವನೇ ಪ್ರಮಾಣನು' ಎಂಬ ವಾಕ್ಯವಿರುವದರಿಂದ, ಈಶ್ವರನು ಪ್ರಮಾಣ ನೆಂಬ ವ್ಯವಹಾರ ಸಿದ್ಧಿಸುವದಕ್ಕೋಸ್ಕರ, 'ಆಶ್ರಯ' ಪದವನ್ನು ಇಟ್ಟುಕೊಂಡದ್ದು ಯುಕ್ತವೆಂದು ಅವನು ಹೇಳುತ್ತಾನೆ. [ಏಕೆಂದರೆ. ಈಶ್ವರನು ಪ್ರಮಾಣನೆಂದು ವ್ಯವಹಾರ ವಿರುವದರಿಂದ, ಈಶ್ವರನು ಮೇಲೆ ಹೇಳಿದ ಲಕ್ಷಣಕ್ಕೆ ಲಕ್ಷ್ಯನಾದನು. ಅವನಲ್ಲಿ ಮೇಲಿನ ಲಕ್ಷಣ ಬರಬೇಕಾದರೆ, ಆಶ್ರಯ ಪದಗ್ರಹಣ ಮಾಡಬೇಕಾಗುವದು. ಹೀಗೆ ಹೇಳಲು ಬರುವದಿಲ್ಲ ಮೇಲಿನ ಲಕ್ಷಣದಲ್ಲಿಯ ಆಶ್ರಯ ಪದದಿಂದ "ಪ್ರಮಾ ಹುಟ್ಟಿಸುವನೆಂಬ ಅಭಿಪ್ರಾಯವೋ? ಅಥವಾ ಪ್ರಮೆಗೆ ಅಧಿಕರಣನು ಆದವನೆಂಬ ಅಭಿಪ್ರಾಯವೋ? ಪ್ರಥಮ ಪಕ್ಷವು ಸರಿಯಲ್ಲ, ಪ್ರಮಾಣ ಶಬ್ದವು "ಕರ್ತೃ" ಈ ಅರ್ಥದಲಿಲ್ಲ. ಅವರ ಪಕ್ಷದಲ್ಲಿ "ಪ್ರಮಾತಿ ಇತಿ ಪ್ರಮಾಣಂ" ಎಂದು "ಪ್ರ" ಉಪಸರ್ಗದಿಂದ ಕೂಡಿದ 'ಮಾಙಂ" ಧಾತುವಿಗೆ ಕರ್ತ್ರರ್ಥದಲ್ಲಿ ಲ್ಯುಟ್ ಬರಲಾಗಿ "ಪ್ರಮಾಣ" ಎಂಬರೂಪ ಸಿದ್ಧಿಯಾಗುತ್ತದೆಂದು ಹೇಳುವದು ಸರಿಯಲ್ಲ. ಕರ್ತೃ ಅರ್ಥದಲ್ಲಿ ಲ್ಯುಟ ಪ್ರತ್ಯಯ ವಿಧಾನವೇ ಇಲ್ಲ. "ಭಾವೇ ಕರಣಾಧಿಕರಣಯೋಃ ಲ್ಯುಟ್' ಎಂಬ ವ್ಯಾಕರಣಸೂತ್ರದ ಪ್ರಕಾರ, ಲ್ಯುಟ್ ಪ್ರತ್ಯಯವು ಭಾವಾರ್ಥಕದಲ್ಲಿ [ಧಾತು ಅರ್ಥ ದಲ್ಲಿ] ವಿಧಾನವಿದೆ ಹೊರತು 'ಕರ್ತೃ" ಎಂಬರ್ಥದಲ್ಲಿ ವಿಧಾನವಿಲ್ಲ. ಕಾರಣ ಲಕ್ಷಣದಲ್ಲಿ ಆಶ್ರಯ ಪದಗ್ರಹಣ ಮಾಡಿದ್ದು ವ್ಯರ್ಥವು. [ ವಿವರಣೆಯು ಈಶ್ವರನ ಪ್ರಮಾ ] ಅನಾದಿ ನಿತ್ಯವಾದುದರಿಂದ ಯಾವಾಗ್ಗೆ ಯಾವಾಗ್ಗೆ ಈಶ್ವರನೋ ಆಗಾಗ್ಗೆ ಪ್ರಮಾ ಇರುವ ಕಾರಣ ಅವನು ಪ್ರಮಾವ್ಯಾಪ್ತನು ಈ ಪ್ರಕಾರ ಈಶ್ವರನು ಪ್ರಮಾಶ್ರಯನು

ज्ञानेऽव्याप्तेश्च, तत्र प्रमासाधनाश्रययोरन्यतरत्वाभावात् । नान्त्यः, उत्तरत्र निराकरिष्यमाणत्वादिति ।

इति नैयायिकोक्तप्रमाणलक्षणनिरूपणं तद्दूषणञ्च ॥

एवं परोक्तलक्षणानामतिव्याप्त्यादिदुष्टत्वात् यथावस्थितज्ञेयविषयीकारित्वमेव प्रमाणलक्षणं इति यदुक्तं तदबाध्यमेव ।

इति सिद्धान्तोक्तलक्षणदृढीकरणं ।

इति प्राभाकराद्युक्तप्रमाणलक्षणभङ्गप्रकरणम् ॥

---

अथ केवलप्रमाणप्रकरणम् ।

१ ) अवसरप्राप्तः प्रमाणविभाग उच्यते । द्विविधं प्रमाणं, केवलं, अनुप्रमाणं चेति, अत्र यथावस्थितज्ञेयविषयीकारिज्ञानं केवलप्रमाणं, अत्र ज्ञानमित्येवोक्ते

---

ಹಾಗೂ ಪ್ರಮಾವ್ಯಾಪ್ತನು ಆದುದರಿಂದ ಪ್ರಮಾಣವೆಂದು ಹೇಳಬೇಕಷ್ಟೇ, ಆದರೆ "ಪ್ರಮಾಣ" ಶಬ್ದವು ಕರ್ತೃ ಅರ್ಥದಲ್ಲಿ ಇರದೇ ಭಾವಾರ್ಥಕದಲ್ಲಿ ಇರುವದರಿಂದ ಪ್ರಮಾ ಕರ್ತೃಭೂತ ಈಶ್ವರನು ಪ್ರಮಾಣನಾಗಲಾರನು. ಈಶ್ವರನು ಪ್ರಮಾಣನಾಗಬೇಕೆಂಬುವದಕ್ಕೆ ಹೇಳಿದ "ಆಶ್ರಯ ಪದವು ವ್ಯರ್ಥವೇ ಸರಿ, ಇದಲ್ಲದೇ, 'ಸಾಧನ, ಆಶ್ರಯಗಳಲ್ಲೊಂದಾಗಿದ್ದು. ಪ್ರಮಾದಿಂದ ವ್ಯಾಪ್ತವಾದದ್ದು ಪ್ರಮಾಣವೆಂಬ ಲಕ್ಷಣವು ಯಥಾರ್ಥ ಜ್ಞಾನದಲ್ಲಿ ಬರುವದಿಲ್ಲವಾದ್ದರಿಂದ ಅವ್ಯಾಪ್ತಿ ದೋಷಬರುವದು ಏಕೆಂದರೆ ಯಥಾರ್ಥ ಜ್ಞಾನವು ಪ್ರಮಾಕ್ಕೆ ಸಾಧನ ಇಲ್ಲವೆ ಆಶ್ರಯ ವಾಗಿಲ್ಲ. ಇನ್ನು ಪ್ರಮಾಕ್ಕೆ ಅಧಿಕರಣವೆಂಬ ಅಭಿಪ್ರಾಯದಿಂದ ಪ್ರಮಾಶ್ರಯವೆಂದು ಹೇಳಲಾಗಿದೆ ಎಂಬ ಎರಡನೆಯ' ಪಕ್ಷನ್ನು ಮುಂದೆ ನಿರಾಕರಿಸಲಾಗುತ್ತದೆ. ಹೀಗೆ ಪರವಾದಿಗಳಿಂದ ಹೇಳಲ್ಪಟ್ಟ ಪ್ರಮಾಣ ಲಕ್ಷಣಗಳು ಅತಿವ್ಯಾಪ್ತಿ ಮೊದಲಾದ ದೋಷಗಳಿಂದ ಕೂಡಿದ್ದು ಸಿದ್ಧಾಂತಿಗಳ ಯಥಾವಸ್ಥಿತ ಜ್ಞೇಯ ವಿಷಯಕಾರಿತ್ವಲಕ್ಷಣವು ಸ್ಥಿರವಾಯಿತು.

ಕ್ರಮ ಪ್ರಾಪ್ತವಾದ ಪ್ರಮಾಣ ವಿಭಾಗಗಳನ್ನು ಇಲ್ಲಿ ಹೇಳಲಾಗುತ್ತದೆ. ಪ್ರಮಾಣವು ಎರಡು ಪ್ರಕಾರ. (೧) ಕೇವಲ ಪ್ರಮಾಣ [೨] ಅನು ಪ್ರಮಾಣ. (೧) ವಸ್ತು ಹೇಗಿದೆಯೋ ಹಾಗೆಯೇ ಆ ವಸ್ತುವನು ಗ್ರಹಿಸತಕ್ಕ ಜ್ಞಾನವು ಕೇವಲ ಪ್ರಮಾಣವು. "ಯಥಾವಸ್ಥಿತ ಜ್ಞೇಯ ವಿಷಯೀಕಾರಿ ಜ್ಞಾನತ್ವವು ಕೇವಲ ಪ್ರಮಾಣದ ಲಕ್ಷಣವು. ಈ ಲಕ್ಷಣದಲ್ಲಿ, ಜ್ಞಾನವು ಕೇವಲ ಪ್ರಮಾಣ" ವೆಂದಿಷ್ಟೇ ಹೇಳಿದಲ್ಲಿ,

संशयादौ गतं, अतो यथार्थज्ञानमिति, यथार्थमित्युक्ते इन्द्रियार्थसंनिकर्षरूपप्रत्यक्षे अतिव्याप्तिः, तद्वारणाय ज्ञानमिति विशेषणं देयम ।

नन्विदं केवलप्रमाणलक्षणमतिव्यापकं, अनुप्रमाणत्वेनाभिमतयोर्लिङ्गज्ञानवाक्यज्ञानयोः यथावस्थितार्थविषयकत्वात्, तद्वारणाय साक्षाद्यथावस्थितार्थविषयकज्ञानं केवलप्रमाणमिति वक्तव्यं, तथापि लिंगज्ञानवाक्यज्ञानयोरपि साक्षाद्यथावस्थितार्थविषयकज्ञानत्वस्य सत्त्वात् पुनरतिव्याप्तिः, " ज्ञानविषय इव करणेष्वपि साक्षाद् ज्ञेयविषयीकारित्वमस्तीति सुधायामुक्तं– " ज्ञानविषय एव करणानां विषय इति " ।

---

ಸಂಶಯ, ವಿಪರ್ಯಯಗಳೂ ಜ್ಞಾನವಾದುದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುವದು. ಆದ್ದರಿಂದ 'ಯಥಾಸ್ಥಿತ ಜ್ಞೇಯ ವಿಷಯೀಕಾರಿ" ಎಂಬ ದಲವನ್ನು ಕೊಡಬೇಕು. ಸಂಶಯ ವಿಪರ್ಯಯಗಳು ಯಥಾರ್ಥವಾಗಿ ವಸ್ತುವನ್ನು ಗ್ರಹಿಸುವ ಜ್ಞಾನಗಳಾಗಿದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ. 'ಯಥಾವಸ್ಥಿತ ವಸ್ತು' ಇಷ್ಟನ್ನೇ ಲಕ್ಷಣ ಮಾಡಿದರೆ, ಇಂದ್ರಿಯ–ಅರ್ಥಗಳ ಸನ್ನಿಕರ್ಷರೂಪವಾದ ಪ್ರತ್ಯಕ್ಷವೂ [ ಕರಣವು ] ಯಥಾವಸ್ಥಿತ ವಸ್ತುವಾದ ಕಾರಣ, ಅದರಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಜ್ಞಾನ'ವೆಂಬ ದಲವನ್ನು ಕೊಡಬೇಕು. ಇಂದ್ರಿಯಾರ್ಥ ಸನ್ನಿಕರ್ಷವು ಜ್ಞಾನವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ.

ಶಂಕಾ–ಅನುಪ್ರಮಾಣವೆಂದು ಕರೆಯಲ್ಪಡುವ ಲಿಂಗಜ್ಞಾನ ಹಾಗೂ ವಾಕ್ಯಜ್ಞಾನಗಳಲ್ಲಿಯೂ ಮೇಲಿನ ಲಕ್ಷಣವು ಬರುವದರಿಂದ ಅತಿವ್ಯಾಪ್ತಿಯಾಗುವದೆಂಬ ದೋಷ ಬಂದೇ ಬರುವದರಿಂದ, ಈ ಅತಿವ್ಯಾಪ್ತಿ ನಿವಾರಣೆಗೆ ಲಕ್ಷಣದಲ್ಲಿ 'ಸಾಕ್ಷಾತ್' ಎಂಬ ದಲವನ್ನು ಹಾಕಿ "ಸಾಕ್ಷಾತ್ ಯಥಾವಸ್ಥಿತ ವಸ್ತು ವಿಷಯೀಕಾರಿ ಜ್ಞಾನವು" ಎಂದು ಹೇಳಬೇಕಾಗಿತ್ತು ಎಂದು ಶಂಕಾ ಮಾಡಕೂಡದು. ಏಕೆಂದರೆ ಸಾಕ್ಷಾತ್' ಪದ ಹಾಕಿದರೂ ಸಹ, ಲಿಂಗಜ್ಞಾನ ವಾಕ್ಯಜ್ಞಾನಗಳೂ ಸಾಕ್ಷಾತ್ತಾಗಿಯೇ ವಸ್ತುವಿಷಯೀಕರಿಸುವ ಜ್ಞಾನಗಳಾಗುವದರಿಂದ ಮತ್ತೆ ಅತಿವ್ಯಾಪ್ತಿ ಬಂದೇ ಬರುವದು. ಕೇವಲ ಪ್ರಮಾಣವು ಹೇಗೆ ಸಾಕ್ಷಾತ್ತಾಗಿ ವಸ್ತು ವಿಷಯೀಕರಿಸುವ ಜ್ಞಾನವಾಗಿದೆಯೋ ಹಾಗೆಯೇ ಕರಣಗಳೂ [ಇಂದ್ರಿಯಗಳು] ಸಾಕ್ಷಾತ್ತಾಗಿಯೇ ವಸ್ತುವಿಷಯೀಕರಿಸುವಗಳಾಗಿವೆ. ಶ್ರೀ ನ್ಯಾಯಸುಧಾ ಗ್ರಂಥದಲ್ಲಿ 'ಜ್ಞಾನ ವಿಷಯಗಳೇ ಕರಣಗಳಿಗೂ ವಿಷಯಗಳು' ಎಂದು ಹೇಳಲಾಗಿದೆ.

**अयमत्र विचारः**– अत्र साक्षाद्यथावस्थितार्थविषयकत्वं **नाम** स्व-
विषये ज्ञेयत्वावधाने स्वात्मन्यन्यानपेक्षत्वं । यद्यपि ज्ञेयविषयी-
कारित्वं केवलप्रमाणानुप्रमाणयोः समानं, तथापि ज्ञानमुपाधि-
तया ज्ञेयता शरीरप्रविष्टत्वेन स्वविषयनिष्ठज्ञेयतासंपादकं, ज्ञान-
साधन तु ज्ञेयताशरीरप्रविष्ठज्ञानसंपादकतया ज्ञेयतासंपादकं, अतो
लिंगज्ञानादेः लिंग्यादौ ज्ञेयत्वावधाने स्वात्मनि अनुमित्याद्यपेक्ष-
णात् पूर्वोकतसाक्षाद्ज्ञेयविषयोकारित्वाभावात् लिंगज्ञानवाक्यज्ञान-
योः केवलतापत्तिर्नास्तीति न तत्रातिव्याप्तिः

**इति केवलप्रमाणस्वरूपनिरूपणम् ॥**

---

ಸಾಕ್ಷಾತ್ ಜ್ಞೇಯ ವಿಷಯೀಕಾರಿತ್ವವು, ಕೇವಲ ಹಾಗೂ ಅನುಪ್ರಮಾಣಗಳೆರಡರಲ್ಲಿಯೂ
ಇರುವದಾಗಿ ನಿರೂಪಿತವಾಗಿದೆ, ಹಾಗಾದರೆ ಎರಡರಲ್ಲಿಯೂ ಪ್ರಭೇದವೇನು ? ಎಂಬ ಬಗ್ಗೆ
ಹೀಗೆ ವಿಚಾರವಿದೆ-ಸಾಕ್ಷಾತ್ತಾಗಿ ಯಥಾವಸ್ಥಿತವಾದ ಅರ್ಥವನ್ನು ವಿಷಯೀಕರಿಸುವದೆಂದರೆ,
ಜ್ಞಾನಕ್ಕೆ ವಿಷಯವಾದುದರಲ್ಲಿ ಯಾವ ವಿಷಯತ್ವ ಅಥವಾ ಜ್ಞೇಯತ್ವ ಎಂಬ ಧರ್ಮವಿ-
ರುವದೋ ಆ ಧರ್ಮವನ್ನು ಗ್ರಹಣ ಮಾಡುವದರಲ್ಲಿ ಇನ್ನೊಂದನ್ನಪೇಕ್ಷೆ ಮಾಡದಿರುವದು
ಆದರೆ,ಸಾಕ್ಷಾತ್ತಾಗಿ ಜ್ಞೇಯವನ್ನು ವಿಷಯೀಕರಿಸುವ ಧರ್ಮವು, ಕೇವಲ ಪ್ರಮಾಣ, ಅನು-
ಪ್ರಮಾಣಗಳಲ್ಲಿ ಸಮವಾಗಿದ್ದರೂ, ಜ್ಞಾನವು ಜ್ಞೇಯದ ಶರೀರದಲ್ಲಿದ್ದ ಜ್ಞೇಯತಾ
ಧರ್ಮವನ್ನು ಅಥವಾ ಜ್ಞಾನ ವಿಷಯತ್ವವನ್ನು ಸಾಕ್ಷಾತ್ತಾಗಿ ವಿಷಯೀಕರಿಸುತ್ತದೆ. [ಜ್ಞೇಯ-
ತಾ ಧರ್ಮಗ್ರಹಣ ವಿಷಯ ದಲ್ಲಿ ಇನ್ನೊಂದನ್ನಪೇಕ್ಷೆ ಮಾಡುವದಿಲ್ಲ] ಜ್ಞಾನ ಸಾಧನವಾದ
ಕರಣವು ಮಾತ್ರ ಜ್ಞಾನವನ್ನು ಹುಟ್ಟಿಸಿ, [ಜ್ಞಾನದ್ವಾರಾ] ಅನಂತರ ಜ್ಞೇಯತಾ ಧರ್ಮ-
ವನ್ನು ಗ್ರಹಣ ಮಾಡುತ್ತದೆ. [ವಿವರಣೆ-ಧರ್ಮ ವಿಷಯದಲ್ಲಿ ಎರಡೂ ಸಾಕ್ಷಾತ್ ವಿಷಯೀ-
ಕರಿಸುವವು. ಆದರೆ ಅದರಲ್ಲಿರುವ ಜ್ಞೇಯತ್ವ ರೂಪ ಧರ್ಮ ವಿಷಯದಲ್ಲಿ ಕೇವಲ ಪ್ರಮಾ-
ಣವು ಸಾಕ್ಷಾತ್ತಾಗಿ, ಕರಣಗಳು ಜ್ಞಾನ ಹುಟ್ಟಿಸಿ. ತನ್ಮೂಲಕ ಜ್ಞೇಯತಾ ವಿಷಯೀಕರಿ-
ಸುತ್ತವೆಂಬ ಭಾವವು] ಇನ್ನು ಲಿಂಗ ಜ್ಞಾನವು [ಧೂಮ ಜ್ಞಾನವು, ಲಿಂಗಿಯಲ್ಲಿ [ಅಗ್ನಿಯಲ್ಲಿ]
ಇದ್ದ ಜ್ಞೇಯತಾವನ್ನು ಅನುಮಿತಿ ಹುಟ್ಟಿಸಿ ತನ್ಮೂಲಕ ಗ್ರಹಣ ಮಾಡುವದರಿಂದ [ವಾಕ್ಯ
ಜ್ಞಾನವೂ ಅರ್ಥವಿಷಯದಲ್ಲಿ, ಶಬ್ದ ಶಕ್ತಿಜ್ಞಾನ ಹುಟ್ಟಿಸಿ, ತನ್ಮೂಲಕ ಅರ್ಥ-
ವಿಷಯದಲ್ಲಿಯ ಜ್ಞೇಯತಾ ಗ್ರಹಣ ಮಾಡುವದರಿಂದ ] ಸಾಕ್ಷಾತ್ ಯಥಾವ-
ಸ್ಥಿತ ಜ್ಞೇಯ ವಿಷಯೀಕಾರಿತ್ವ, ಲಿಂಗಜ್ಞಾನ, ವಾಕ್ಯ ಜ್ಞಾನಗಳಲ್ಲಿ ಬರಲಾರದು ಅತಿ-
ವ್ಯಾಪ್ತಿ ಇಲ್ಲ [ವಿವರಣೆ-ಲಿಂಗಜ್ಞಾನ ಹಾಗೂ ವಾಕ್ಯ ಜ್ಞಾನಗಳು ಕೇವಲ ಹಾಗೂ

२. केवलप्रमाणविभाग उच्यते—तच्चतुर्विधं (१) ईश्वरज्ञानं (२) लक्ष्मीज्ञानं (३) योगिज्ञानं (४) अयोगिज्ञानमिति ।

१) स्वपरगतसर्वार्थविषयकं ज्ञानं ईश्वरज्ञानमित्युच्यते । दलकृत्यं तु, ज्ञानमीश्वरज्ञानमित्युक्ते अयोगिज्ञानेऽतिव्याप्तिः, तद्वारणाय सर्वार्थविषयकमिति, अयेगिज्ञाने सर्वार्थविषयकत्वाभावान्नातिव्याप्तिः, सर्वार्थविषयकं ज्ञानमित्युक्ते ईश्वरादन्यत्र सर्वविषयकलक्ष्मीज्ञानादावतिव्याप्तिस्तद्वारणाय स्वपरगतेति । तथा च स्वपरगतसर्वार्थविषयकज्ञानमीश्वरज्ञानमित्युक्तं भवति, लक्ष्मीज्ञानादौ स्वपरगतसर्वार्थविषयकत्वाभावान्नातिव्याप्तिः (लक्ष्मीज्ञानादेः ईश्वरादन्यत्रैव सर्वविषयकत्वं नेश्वरेऽपीति भावः) अत्र ज्ञानमित्यनुक्ते ईश्वरकरणप्रत्यक्षेऽति व्याप्तिः, तद्वारणाय ज्ञानमिति ।

---

ವೆರಡೂ ರೂಪಗಳನ್ನು ಹೊಂದುವವು. ಲಿಂಗವಾದ ಧೂಮವನ್ನೇ ವಿಷಯೀಕರಿಸಿದಾಗ ಧೂಮ ಜ್ಞಾನವು ಕೇವಲ ಪ್ರಮಾಣವಾಗುವದು. ಧರ್ಮ ಜ್ಞಾನದಿಂದ ಅಗ್ನಿಯ ಜ್ಞಾನ ಹುಟ್ಟಿಸಿ, ಅಗ್ನಿಯಲ್ಲಿಯ ಜ್ಞೇಯತಾ ಧರ್ಮವನ್ನು ವಿಷಯೀಕರಿಸಿದಾಗ ಅನುಪ್ರಮಾಣವಾಗುತ್ತದೆ ಎಂದು ತಿಳಿಯಬೇಕು.

೨] **ಕೇವಲ ಪ್ರಮಾಣವು**- ೧] ಈಶ್ವರ ಜ್ಞಾನ ೨] ಲಕ್ಷ್ಮೀ ಜ್ಞಾನ ೩] ಯೋಗಿ ಜ್ಞಾನ ಹಾಗೂ ೪] ಅಯೋಗಿ ಜ್ಞಾನ, ಎಂದು ನಾಲ್ಕು ಪ್ರಕಾರನಾಗಿದೆ.

೧] **ಈಶ್ವರ ಜ್ಞಾನಸ್ವರೂಪವು**- ತನ್ನಲ್ಲಿಯ ಹಾಗೂ ಪ್ರಪಂಚದಲ್ಲಿಯ ಸರ್ವ ವಿಷಯಕ ಜ್ಞಾನವು ಈಶ್ವರ ಜ್ಞಾನವು. ಈ ಲಕ್ಷಣದ ದಲಕೃತ್ಯವು–ಜ್ಞಾನವು ಈಶ್ವರ ಜ್ಞಾನವೆಂದರೆ, ಅಯೋಗಿ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು "ಸರ್ವವಿಷಯಕ" ವೆನ್ನಬೇಕು. ಅಯೋಗಿ ಜ್ಞಾನವು ಸರ್ವ ವಿಷಯಕವಲ್ಲ ಕಾರಣ ಅಲ್ಲಿ ಅತಿವ್ಯಾಪ್ತಿ ಬರಲಾರದು. 'ಸರ್ವ ವಿಷಯಕ ಜ್ಞಾನ' ವೆಂದಿಷ್ಟೇ ಲಕ್ಷಣ ಹೇಳಿದರೆ, ಲಕ್ಷ್ಮೀ ಜ್ಞಾನವು ಈಶ್ವರನನ್ನು ಬಿಟ್ಟು ಇತರ ಪ್ರಪಂಚದ ವಿಷಯದಲ್ಲಿ ಸರ್ವ ವಿಷಯಕವಾಗಿದ್ದರಿಂದ, ಲಕ್ಷ್ಮೀ ಜ್ಞಾನದಲ್ಲಿ **ಅತಿವ್ಯಾಪ್ತಿ** ಬರುವದು. ಅದನ್ನು ನಿವಾರಿಸಲು 'ಸ್ವಪರಗತ' ವೆನ್ನಬೇಕು.

ಲಕ್ಷ್ಮೀ ಜ್ಞಾನವು ಪರಮಾತ್ಮನ ವಿಷಯದಲ್ಲಿ ಸರ್ವಾರ್ಥವಿಷಕವಾಗಿಲ್ಲವಾದ್ದರಿಂದ ಸ್ವ ಹಾಗೂ ಪರಗತಸರ್ವ ವಿಷಯಕ ವಾಗಲಾರದು. ಆದ್ದರಿಂದಅತಿವ್ಯಾಪ್ತಿ ದೂರವಾಯಿತು ಮೇಲಿನ ಲಕ್ಷಣದಲ್ಲಿ "ಜ್ಞಾನ"ವೆಂಬ ಪದವನ್ನು ಹಾಕದೇ ಹೋದರೆ,

इदं च ईश्वरज्ञानं नियमेन यथार्थं, ईश्वरस्वरूपमनादि नित्यं च ।

॥ इति ईश्वशरज्ञानस्वरूपकथनम् ॥

२ ) ईश्वरे तु असार्वत्रिकं अन्यत्रानालोचने सर्वविषयकं ज्ञानं लक्ष्मीज्ञानम् ।

**दळकृत्यं तु**—ज्ञानं लक्ष्मीज्ञानमित्युक्ते, अस्मदादिज्ञाने अतिव्याप्तिः, अतः सर्वविषयकमिति, अस्मदादिज्ञाने सर्वविषयकत्वाभावान्नातिव्याप्तिः, सर्वविषयकं ज्ञानं लक्ष्मीज्ञानमित्युक्ते आलोचनदशापन्नऋजुयोगिज्ञाने गतं अतो अनालोचनेति,

---

ಈಶ್ವರನ, ಪ್ರತ್ಯಕ್ಷದಲ್ಲಿ ಅತಿವ್ಯಾಪ್ತಿ ಬರುವದು. (ಏಕೆಂದರೆ ಈಶ್ವರನ ಪ್ರತ್ಯಕ್ಷವೂಸರ್ವಾರ್ಥ ವಿಷಯಕವಾಗಿದೆ). ಅದರ ಪರಿಹಾರಕ್ಕಾಗಿ 'ಜ್ಞಾನ' ವೆಂದು ಹೇಳಬೇಕು

(ವಿವರಣೆ- ಈಶ್ವರನ ಪ್ರತ್ಯಕ್ಷ ಹಾಗು ಈಶ್ವರನ ಜ್ಞಾನವೆರಡು ಅವನ ಸ್ವರೂಪಗಳಾಗಿದ್ದು, ಅವುಗಳಲ್ಲಿ ಅಭೇದವೇ ಇದ್ದರು, ಭೇದಕಾರ್ಯ ನಿರ್ವಾಹ ಮಾಡತಕ್ಕ ಒಂದು ವಿಶೇಷ ಅವುಗಳಲ್ಲಿದ್ದು, ಪ್ರತ್ಯಕ್ಷ ಹಾಗು ಜ್ಞಾನವೆಂದು ಭೇದವ್ಯವಹಾರ ಮಾಡುವದರಿಂದ ಭೇದವನ್ನು ತಿಳಿಯುಬೇಕಲ್ಲದೆ ಸ್ವತಃ ಭೇದವಿಲ್ಲವು)

ಈ, ಈಶ್ವರ ಜ್ಞಾನವು ನಿಯಮದಿಂದ ಯಥಾರ್ಥವು, ಈಶ್ವರನ ಸ್ವರೂಪವು, ಅನಾದಿ-ನಿತ್ಯವು ಆಗಿದೆ.

(೨) ಲಕ್ಷ್ಮೀಜ್ಞಾನ ಸ್ವರೂಪವು- ಈಶ್ವರನನ್ನು ಸರ್ವಾಂಶದಿಂದ ವಿಷಯಿಕರಿಸದಿದ್ದರೂ ಈಶ್ವರನಿಂದ ಭಿನ್ನವಾದ ಪ್ರಪಂಚದಲ್ಲಿ ಆಲೋಚನೆ ಇಲ್ಲದೆ ಸರ್ವವಿಷಯುಕ ಜ್ಞಾನವು ಲಕ್ಷ್ಮೀ ಜ್ಞಾನವು.

ದಲಕೃತ್ಯವು- ಜ್ಞಾನವು ಲಕ್ಷ್ಮೀಜ್ಞಾನವೆಂದರೆ, ಜೀವರ ಜ್ಞಾನವು ಜ್ಞಾನವಾದ್ದರಿಂದ ಅತಿವ್ಯಾಪ್ತವಾಗುವದು. ಇದರ ನಿವಾರಣೆಗೆ 'ಸರ್ವ ವಿಷಯುಕ ಜ್ಞಾನ'ವೆಂದು ಹೇಳಬೇಕು. ಸಾಮಾನ್ಯ ಜೀವರಜ್ಞಾನ, ಸರ್ವವಿಷಯುಕವಾಗಿಲ್ಲವಾದುದರಿಂದ ಅತಿವ್ಯಾಪ್ತಿಯಿಲ್ಲ. ಸರ್ವವಿಷಯುಕ ಜ್ಞಾನವು ಲಕ್ಷ್ಮೀಜ್ಞಾನವೆಂದು ಲಕ್ಷಣ ಹೇಳಿದರೆ, ಆಲೋಚನೆ ದೇಶೆಯಲ್ಲಿ ಋಜುಯೋಗಿಗಳಿಗೂ ಜಗತ್ತಿನ ವಿಷಯದಲ್ಲಿ ಸರ್ವವಿಷಯುಕಜ್ಞಾನವಿರುವದರಿಂದ ಋಜುಯೋಗಿಗಳ ಜ್ಞಾನದಲ್ಲಿಯೂ ಈ ಲಕ್ಷಣ ಬಂದು, ಮತ್ತೆ ಅತಿವ್ಯಾಪ್ತವಾಗುವದು. ಇದನ್ನು ನಿವಾರಿಸಲು (ಅನಾಲೋಚನೆ) ಆಲೋಚನೆ ಇಲ್ಲದೇ ಸರ್ವ ವಿಷಯುಕ ಜ್ಞಾನವೆಂದು ಹೇಳಬೇಕು. ಋಜುಯೋಗಿಗಳ ಜ್ಞಾನವು ಆಲೋಚನೆ ಮಾಡಿದಾಗ್ಗೆ ಮಾತ್ರ

ऋजुयोगिज्ञानेऽनालोचने सर्वविषयकत्वाभावान्नातिव्याप्तिः, अनालोचने सर्वविषयकं ज्ञानं लक्ष्मीज्ञानमित्युक्ते, ईश्वरे लक्ष्मीज्ञानस्यानालोचने सर्वविषयकत्वाभावादसंभवः. अतः ईश्वरे असार्वत्रिकं मिति देयं, ईश्वरे असार्वत्रिकं, अन्यत्रानालोचने सर्वविषयकत्त्वस्य लक्ष्मीज्ञाने सत्त्वान्नासंभवः, किंतु लक्षणसमन्वयः संभवत्येव । तदपि नियमेन यथार्थं तत्स्वरूपमनादिनित्त्यं च ।

**लक्ष्मीज्ञानस्य भावविवरणरीत्या लक्षणान्तरमुच्यते--**

ईश्वरैका - धीनं ज्ञानं लक्ष्मीज्ञानं । ज्ञानं लक्ष्मीज्ञानमित्युक्ते ईश्वरज्ञानेऽतिव्ययाप्तिः, अतः ईश्वराधीनमिति, ईश्वरज्ञानस्य ईश्वराधीनत्वेऽपि अधीनत्वस्य भेदघटित्वान्नातिव्याप्तिः, ईश्वराधीनज्ञानमित्युक्ते ब्रह्मादिज्ञाने अतिव्याप्तिः, अतः एकेति,

---

ಸರ್ವವಿಷಯಕವಿರುವದೇ ಹೊರತು ಆಲೋಚನೆ ಇಲ್ಲದೇ ಸರ್ವವಿಷಯಕವಾಗಲಾರದು. ಕಾರಣ ಅತಿವ್ಯಾಪ್ತಿ ಬರಲಾರದು. ಆಲೋಚನೆ ಇಲ್ಲದೇ ಸರ್ವ ವಿಷಯಕ ಜ್ಞಾನವು ಲಕ್ಷ್ಮೀಜ್ಞಾನವೆಂದು ಹೇಳಿದರೆ, ಲಕ್ಷ್ಮೀ ಜ್ಞಾನವು ಈಶ್ವರನ ವಿಷಯದಲ್ಲ ಆಲೋಚನೆ ಮಾಡಿದಾಗಲೂ ಸರ್ವವಿಷಯಕವಾಗಲಾರದರಿಂದ ( ಲಕ್ಷ್ಯದಲ್ಲಿ ಲಕ್ಷಣ ಬಾರದೇ ) ಅಸಂಭವ ದೋಷ ಬರುತ್ತದೆ. ಆದುದರಿಂದ ಈಶ್ವರನಲ್ಲಿ ಸರ್ವವಿಷಯಕವಾಗದೇ, ಈಶ್ವರನಿಂದ ಭಿನ್ನವಾದ ಪ್ರಪಂಚದ ವಿಷಯದಲ್ಲಿ, ಆಲೋಚನೆ ಇಲ್ಲದೇ ಸರ್ವವಿಷಯಕ ಜ್ಞಾನವೆಂದು ಹೇಳಬೇಕು. ಈ ಜ್ಞಾನವು ಲಕ್ಷ್ಮೀ ಜ್ಞಾನದಲ್ಲಿರುವದರಿಂದ ಲಕ್ಷಣವು ಸಮನ್ವಯವಾಗುತ್ತದೆ. ಲಕ್ಷ್ಮೀ ಜ್ಞಾನವು ನಿಯಮದಿಂದ ಯಥಾರ್ಥವು. ಲಕ್ಷ್ಮೀ ಸ್ವರೂಪ ಭೂತವೂ, ಅನಾದಿ ನಿತ್ಯವೂ ಆಗಿದೆ.

ಲಕ್ಷ್ಮೀ ಜ್ಞಾನದ ಇನ್ನೊಂದು ಲಕ್ಷಣವು 'ಭಾವವಿವರಣ' ದಲ್ಲಿ ಹೇಳಿದ ರೀತಿಯಲ್ಲಿ ಹೀಗಿದೆ– ಈಶ್ವರನಿಗೆ ಮಾತ್ರ ಅಧೀನವಾದ ಜ್ಞಾನವು ಲಕ್ಷ್ಮೀ ಜ್ಞಾನವು.

ದಲಕ್ಕೃತ್ಯವು ಜ್ಞಾನವು ಲಕ್ಷ್ಮೀ ಜ್ಞಾನವೆಂದರೆ, ಈಶ್ವರ ಜ್ಞಾನವೂ ಜ್ಞಾನವಾದುದರಿಂದ ಅತಿವ್ಯಾಪ್ತಿಯು, ಇದರ ಪರಿಹಾರಕ್ಕಾಗಿ "ಈಶ್ವರಾಧೀನ ಜ್ಞಾನ" ವೆನ್ನಬೇಕು. ಈಶ್ವರ ಜ್ಞಾನವು ಈಶ್ವರಾಧೀನವಾದರೂ, ಅಧೀನತ್ವದಲ್ಲಿ ಭೇಧವಿರುವದರಿಂದ, ಈಶ್ವರನಲ್ಲಿ ಸ್ವಭೇದವಿಲ್ಲದ ಕಾರಣ ಅತಿವ್ಯಾಪ್ತಿ ಬರುವದಿಲ್ಲ. ಈಶ್ವರಾಧೀನ ಜ್ಞಾನವೆಂದಿಷ್ಟೇ ಹೇಳಿದರೆ, ಬ್ರಹ್ಮಾದಿಗಳ ಜ್ಞಾನವೂ ಈಶ್ವರಾಧೀನವಾದುದರಿಂದ ಅವರ ಜ್ಞಾನದಲ್ಲಿ ಅತಿವ್ಯಾಪ್ತಿಯು ಇದರ ನಿವಾರಣೆಗೆ 'ಈಶ್ವರ ಮಾತ್ರ ಅಧೀನ ಜ್ಞಾನ' ವೆಂದು ಹೇಳಬೇಕು.

ब्रह्मादिज्ञानस्य ईश्वरैकाधीनत्वाभावान्नातिव्याप्तिः, ईश्वरैकाधीनमित्युक्ते लक्ष्म्यामतिव्याप्तिः, अतः ईश्वरैकाधीनज्ञानमिति सर्वं सार्थकं भगवद्ज्ञानापेक्षया जगद्विषये स्पष्टत्वे न्यूनम् ।

ननु एवं लक्ष्मीज्ञानं जगद्विषये ईशज्ञानापेक्षया अस्पष्टमित्युक्ते लक्ष्मीज्ञानं जगति किंचित्पदार्थविषयीकारीति प्राप्तं, ज्ञाने स्पष्टत्वस्य विषयोपाधिकत्वात् । तथा च अन्यत्र सर्वविषयकमित्युक्ते व्याघात इति चेन्न, स्पष्टत्वं च अपरोक्षत्ववत् ज्ञानगत एव जातिविशेषः, न तु सम्यगर्थविषयीकारित्वरूपः, तथा च न रेखोपरेखादियावद्धर्मविषयकत्वरूप इत्यर्थः, एवं च ज्ञानगतस्पष्टत्वे एव विशेषोऽवगंतव्य इति ।

॥ इति लक्ष्मीज्ञानस्वरूप कथनम् ॥

---

ಬ್ರಹ್ಮಾದಿಗಳ ಜ್ಞಾನವು ಈಶ್ವರ ಮಾತ್ರ ಅಧೀನವಾಗಿರದೇ ಲಕ್ಷ್ಮೀ ಅಧೀನವೂ ಆದುದರಿಂದ, ಅತಿವ್ಯಾಪ್ತಿಯಿಲ್ಲ. ಜ್ಞಾನವೆಂಬ ಪದವನ್ನು ಹಾಕದೇ, “ಈಶ್ವರ ಮಾತ್ರ ಅಧೀನವಾದುದು” ಎಂದಿಷ್ಟೇ ಲಕ್ಷಣ ಹೇಳಿದರೆ, ಲಕ್ಷ್ಮಿಯೂ ಈಶ್ವರನೊಬ್ಬನಿಗೇ ಅಧೀನಳಾದುದರಿಂದ, ಅವಳಲ್ಲಿ ಲಕ್ಷಣ ಬಂದು ಅತಿವ್ಯಾಪ್ತವಾಗುವದು. ಆದಕ್ಕಾಗಿ “ಈಶ್ವರ ಮಾತ್ರ ಅಧೀನ ಜ್ಞಾನ” ವೆಂದು ಲಕ್ಷಣ ಹೇಳಿದಲ್ಲಿ ಈ ಲಕ್ಷಣವು ಲಕ್ಷ್ಮೀ ಜ್ಞಾನದಲ್ಲಿ ಬಂದು ‘ಲಕ್ಷಣ ಸಮನ್ವಯವಾಗುವದು.

ಈ ಲಕ್ಷ್ಮೀ ಜ್ಞಾನವು ಭಗವಂತನ ಜ್ಞಾನಾಪೇಕ್ಷೆಯಿಂದ ಜಗತ್ತಿನ ವಿಷಯದಲ್ಲಿ ಸ್ಪಷ್ಟತೆಯಲ್ಲಿ ಕಡಿಮೆಯಾಗಿದೆ. ಶಂಕಾ -- ಲಕ್ಷ್ಮೀ ಜ್ಞಾನವು ಜಗತ್ತಿನ ವಿಷಯದಲ್ಲಿ ಭಗವಂತನ ಜ್ಞಾನಕ್ಕಿಂತ ಅಸ್ಪಷ್ಟವಾದುದೆಂದು ಹೇಳಿದೆ. ಇದರಿಂದ ಜಗತ್ತಿನ ವಿಷಯದಲ್ಲಿ ಲಕ್ಷ್ಮೀ ಜ್ಞಾನವು ಹಲವು ಪದಾರ್ಥಗಳನ್ನು ವಿಷಯೀಕರಿಸುವದೆಂದು ಅಭಿಪ್ರಾಯವಾಯಿತು. ಜ್ಞಾನದಲ್ಲಿ ಸ್ಪಷ್ಟತೆಯು ವಿಷಯ ನಿಮಿತ್ತಕವಾಗಿ ಬರುವದರಿಂದ ಜ್ಞಾನವು ಬಹುವಿಷಯಕವಾದಷ್ಟು ಸ್ಪಷ್ಟತೆಯು ಜ್ಞಾನದಲ್ಲಿ ಹೆಚ್ಚುವದೆಂಬ ಭಾವ, ಲಕ್ಷ್ಮೀ ಜ್ಞಾನವು ಈಶ್ವರ ಜ್ಞಾನಕ್ಕಿಂತ ಪ್ರಪಂಚದ ವಿಷಯದಲ್ಲಿ ಅಸ್ಪಷ್ಟವೆಂದುದರಿಂದ, [ಹಲವು ಪದಾರ್ಥ ವಿಷಯೀಕರಿಸುವುದರಿಂದ] ಸರ್ವಾರ್ಥ ವಿಷಯಕವೆಂದು ಮೇಲೆ ಹೇಳಿದ್ದು, ವಿರುದ್ಧ [ವ್ಯಾಹತ] ವಾಯಿತೆಂದು ಶಂಕೆ ತೆಗೆಯಕೊಳ್ಳಬೇಕಾಗಿಲ್ಲ, ಜ್ಞಾನದಲ್ಲಿರುವ ಅಪರೋಕ್ಷತೆಯೆಂಬ ಸ್ವಾಭಾವಿಕ ಧರ್ಮದಂತೆ ಸ್ಪಷ್ಟತೆಯೆಂಬುದೂ ಸ್ವಾಭಾವಿಕ ಧರ್ಮಕವಾಗಿದೆಯೇ ಹೊರತು ಸಮಸ್ತ ವಸ್ತು ವಿಷಯೀಕರಿಸುವದಾಗಲೀ,

३ ) योगप्रभावलब्धातिशयं ज्ञानं योगिज्ञानं ) समाधिप-रिपाको योगो नाम, तत्सामर्थ्यलब्धोत्कर्षइत्यर्थः । )

तत् त्रिविधं— १ ) ऋजुयोगिज्ञानं २ ) तात्त्विकयोगिज्ञानं ३ अतात्त्विकयोगिज्ञानमिति ।

१ ) ऋजवो नाम चतुर्मुखब्रह्मपदयोग्या जीवाः, तद्ज्ञानस्य लक्षणं तु ईश्वरादन्यत्रालोचने सर्वविषयकं ज्ञानं ऋजुयोगि-ज्ञानं ।

दलकृत्यं तु——ज्ञानं ऋजुयोगिज्ञानमित्युक्ते अस्मदादिज्ञानेऽति व्याप्तिः, तद्वारणाय सर्वविषयकमिति, अस्मदादिज्ञानस्यासर्ववि-षयकत्वान्नातिव्याप्तिः,

---

[ರೇಖೋಪರೇಖವಾಗಿ, ಸರ್ವ ಪದಾರ್ಥಗಳನ್ನು. ವಿಷಯೀಕರಿಸುವದಾಗಲೀ] ಸ್ಪಷ್ಟತೆಯೆಂಬುದರ ಅರ್ಥವಲ್ಲ. ಹೀಗೆ ಲಕ್ಷ್ಮೀಜ್ಞಾನ ಹಾಗೂ ಈಶ್ವರ ಜ್ಞಾನಗಳಿಗೆ ಸ್ಪಷ್ಟತೆಯಲ್ಲಿವಿಶೇಷ ವಿದೆಯೆಂದು ತಿಳಿಯಬೇಕು.

### ೩ ಯೋಗಿ ಜ್ಞಾನ ಸ್ವರೂಪವು

ಯೋಗ ಪ್ರಭಾವದಿಂದ ಸಂಪಾದಿಸಿದ ಅತಿಶಯ ಜ್ಞಾನವೇ ಯೋಗಿ ಜ್ಞಾನವು (ಸಮಾಧಿ ಪರಿಪಾಕದ ಅವಸ್ಥೆಯೇ ಯೋಗವೆಂದು ಕರೆಯಲ್ಪಡುತ್ತದೆ. ಇದರ ಪ್ರಭಾವ. ದಿಂದ ಸಂಪಾದಿಸಿದ ಉತ್ಕರ್ಷವಾದ ಜ್ಞಾನವು ) ಈ ಯೋಗಿ ಜ್ಞಾನವು ಮೂರು ಪ್ರಕಾರವಾಗಿದೆ.

೧) ಋಜುಯೋಗಿ ಜ್ಞಾನವು ೨) ತಾತ್ವಿಕಯೋಗಿ ಜ್ಞಾನವು ೩) ಅತಾತ್ವಿಕ ಯೋಗಿ ಜ್ಞಾನವು.

### ಋಜುಯೋಗಿ ಜ್ಞಾನ ಸ್ವರೂಪವು

ಋಜುಗಳೆಂದರೆ ಚತುರ್ಮುಖಬ್ರಹ್ಮ ಪದವಿಗೆ ಯೋಗ್ಯರಾದ ಜೀವರು. ಈ ಋಜುಯೋಗಿಗಳ ಜ್ಞಾನದ ಲಕ್ಷಣವು-ಈಶ್ವರನಿಂದ ಭಿನ್ನವಾದ ಪ್ರಪಂಚದ ವಿಷಯದಲ್ಲಿ ಆಲೋಚನೆಯೂ ಮಾಡಿದಾಗ ಸರ್ವ ವಿಷಯಕ ಜ್ಞಾನವು ಋಜುಯೋಗಿ ಜ್ಞಾನವು.

ದಲಕೃತ್ಯವು- ಜ್ಞಾನವು ಋಜುಯೋಗಿ ಜ್ಞಾನವೆಂದರೆ, [ಜೀವ ಸಾಮಾನ್ಯರ] ಜ್ಞಾನದಲ್ಲಿ ಜ್ಞಾನತ್ವವಿರುವದರಿಂದ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ ' ಸರ್ವ ವಿಷಯಕವೆಂದು ವಿಶೇಷಣ ಕೊಡಬೇಕು. ನಮ್ಮಂಥವರ (ಜೀವ ಸಾಮಾನ್ಯರ ಜ್ಞಾನವು ಸರ್ವ ವಿಷಯಕವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬಾರದು.

सर्वविषयकं ज्ञानं ऋजुयोगिज्ञानमित्युक्ते ईश्वरज्ञाने गतमतो आलोचनेति, ईश्वरज्ञानस्यालोचनेन सर्वविषयकत्वाभावान्नातिव्याप्तिः, आलोचने सर्वविषकं ज्ञानमित्युक्ते, ईश्वरे आलोचनेऽपि सर्वविषयकत्वाभावादसंभवः, अतः ईश्वरादन्यत्रेति वक्तव्यं । ईश्वरादन्यत्रालोचने सर्वविषयकत्वस्य तद्ज्ञाने सत्त्वान्नासंभवः, किं तु लक्षणसमन्वय इति ज्ञेयम् ।

ऋजुयोगिज्ञानं द्विविधं-स्वरूपं, बाह्यं चेति, ( बाह्यं मनोवृत्तिरूपं ), तत्र स्वरूपं अनादिनित्यं, योगप्रभावादामुक्तेरधिकभगवद्गुणकर्मविषयकं, मुक्तौ वृद्धिक्षयापेतरूपमेकप्रकारं, वृत्तिज्ञानं तु प्रवाहतो अनादि, योगप्रभावादामुक्तेर्व्यक्त्यतिशयोपेतं,

---

'ಸರ್ವ ವಿಷಯಕ ಜ್ಞಾನವು ಋಜುಯೋಗಿಜ್ಞಾನ' ವೆಂದಿಷ್ಟೇ ಹೇಳಿದರೆ, ಈಶ್ವರನ ಜ್ಞಾನವೂ ಸರ್ವ ವಿಷಯಕವಾದುದರಿಂದ, ಈಶ್ವರ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ 'ಆಲೋಚನೆ ಸರ್ವ ವಿಷಯಕ ಜ್ಞಾನ' ವೆನ್ನಬೇಕು. ಈಶ್ವರ ಜ್ಞಾನವು ಸರ್ವ ವಿಷಯಕ ಜ್ಞಾನವಾಗಿದ್ದು, ಆಲೋಚನೆ ಮಾಡಿದಲ್ಲಿ ಸರ್ವ ವಿಷಯಕವಾದುದಾಗಿಲ್ಲ. ಕಾರಣ ಅಲ್ಲಿ ಅತಿವ್ಯಾಪ್ತಿ ಇಲ್ಲ. ಇನ್ನು 'ಆಲೋಚನೆ ಸರ್ವ ವಿಷಯಕ ಜ್ಞಾನ' ವೆಂದಿಷ್ಟೇ ಲಕ್ಷಣ ಹೇಳಿದರೆ, ಈಶ್ವರ ವಿಷಯದಲ್ಲಿ ಆಲೋಚನೆ ಮಾಡಿದಾಗ್ಯೂ ಸರ್ವವಿಷಯಕ ಜ್ಞಾನವಾಗದ್ದರಿಂದ, ಲಕ್ಷ್ಯವಾದ ಋಜುಯೋಗಿ ಜ್ಞಾನದಲ್ಲಿ ಲಕ್ಷಣವೇ ಬಾರದಿರುವದರಿಂದ ಲಕ್ಷಣವು ಅಸಂಭವಿಯಾಗುವದು. ಈ ದೋಷ ನಿವಾರಿಸಲು 'ಈಶ್ವರನಿಂದ ಭಿನ್ನವಾದ ಇತರ ಪ್ರಪಂಚ ವಿಷಯದಲ್ಲಿ' ಎಂಬ ದಲವನ್ನು ಸೇರಿಸಬೇಕು. ಈಶ್ವರನಿಂದ ಭಿನ್ನವಾದ ಇತರ [ಪ್ರಪಂಚದ] ವಿಷಯದಲ್ಲಿ ಆಲೋಚನೆ ಮಾಡಿದಲ್ಲಿ ಸರ್ವ ವಿಷಯಕ ಜ್ಞಾನವು ಋಜುಯೋಗಿ ಜ್ಞಾನವೆಂದು ಲಕ್ಷಣ ಹೇಳಿದಲ್ಲಿ ಈ ಲಕ್ಷಣವು ಋಜುಯೋಗಿ ಜ್ಞಾನದಲ್ಲಿ ಬರುವದರಿಂದ ಸಮನ್ವಯವಾಗುವದು.

ಈ ಋಜುಯೋಗಿ ಜ್ಞಾನವು ಎರಡು ಪ್ರಕಾರ-ಅ] ಸ್ವರೂಪವು. ಆ] ಬಾಹ್ಯವು. ಅಂತಃಕರಣ ಜನ್ಯವು] ಇವೆರಡರಲ್ಲಿ ಸ್ವರೂಪ ಜ್ಞಾನವು ಅನಾದಿನಿತ್ಯವು ಯೋಗ ಪ್ರಭಾವದಿಂದ ಮುಕ್ತಿಪರ್ಯಂತವಾಗಿ ಅಧಿಕವಾಗುತ್ತ ಭಗವಂತನ ಗುಣಕರ್ಮಗಳನ್ನು ವಿಷಯೀಕರಿಸುವದು ಮುಕ್ತಿಯಲ್ಲಿ ವೃದ್ಧಿಕ್ಷಯವಿಲ್ಲದೇ ಏಕಪ್ರಕಾರದಿಂದ ಇರುವದು. ವೃತ್ತಿಜ್ಞಾನವು [ಅಂತಃಕರಣ ಜನ್ಯ ಜ್ಞಾನವು] ಪ್ರವಾಹದಂತೆ ಅನಾದಿಯಾಗಿದ್ದು. ಯೋಗ ಪ್ರಭಾವದಿಂದ ಮುಕ್ತಿ ಪರ್ಯಂತವಾಗಿ ಅತಿಶಯ ವ್ಯಕ್ತವಾಗುತ್ತ ಹೋಗುವದು.

मुक्तौ तु नास्त्येव, द्वयमपि नियमेन यथार्थं, ईश्वरे तु अन्यजीवेभ्योऽधिकविषयम् ।

॥ इति ऋजुयोगिज्ञानस्वरूप निरूपणम् ॥

( ४ ) तद्व्यतिरिक्तास्तत्त्वाभिमानिनो देवास्तात्त्विकाः ।

अत्र दलकृत्यं तु—तत्त्वाभिमानिनो देवास्तात्त्विका इत्युक्ते ऋजुयोगिषु अतिव्याप्तिः, अतस्तद्व्यतिरिक्ता इति. तद्व्यतिरिक्ता देवास्तात्त्विका इत्युक्ते अतात्त्विकदेवेष्वतिव्याप्तिः, तेषामपि तद्व्यतिरिक्तत्वात् देवत्वाच्च, अतस्तद्व्यतिरिक्तस्तत्त्वाभिमानिन इति, तेषु तत्वाभिमानित्वाभावान्नातिव्याप्तिः, तद्व्यतिरिक्तास्तत्त्वाभिमानिन इत्युक्ते ( देवपदानङ्गीकारे ) असुरेष्वतिव्याप्तिः, तेषामपि ऋजुव्यतिरिक्तत्वात्तत्वाभिमानित्वाच्च

---

ಆದರೆ ಮುಕ್ತಿಯಲ್ಲಿ ಈ ವೃತ್ತಿಜ್ಞಾನವಿರುವದಿಲ್ಲ. ಈ ಎರಡೂ ಜ್ಞಾನಗಳು ನಿಯಮವಾಗಿ ಯಥಾರ್ಥವೇ ಆಗಿದೆ, ಹಾಗೂ ಭಗವದ್ವಿಷಯದಲ್ಲಿ ಇತರ ಜೀವರಿಗಿಂತ ಅಧಿಕ ವಿಷಯುವಾಗಿದೆ.

ತಾತ್ವಿಕ ಯೋಗಿ ಜ್ಞಾನ ಸ್ವರೂಪವು :- ಅ) ತಾತ್ವಿಕ ಯೋಗಿಗಳ ಲಕ್ಷಣ- ಋಜುಯೋಗಿಗಳಿಂದ ಭಿನ್ನರಾದ ತತ್ವಾಭಿಮಾನಿ ದೇವತೆಗಳು, ತಾತ್ವಿಕ ಯೋಗಿಗಳು. ಈ ಲಕ್ಷಣದಲ್ಲಿ 'ತತ್ವಾಭಿಮಾನಿ ದೇವತೆಗಳು, ತಾತ್ವಿಕ ಯೋಗಿ' ಗಳೆಂದಷ್ಟೇ ಹೇಳಿದಲ್ಲಿ, ಋಜುಯೋಗಿಗಳೂ ತತ್ವಾಭಿಮಾನಿಗಳಾದ್ದರಿಂದ ಅವರಲ್ಲಿ ಅತಿವ್ಯಾಪ್ತಿ ಬರುವದು. ಅದನ್ನು ಪರಿಹರಿಸಲು, "ಋಜುಯೋಗಿಗಳಿಂದ ಭಿನ್ನರಾದ" ಎಂಬ ದಲವನ್ನು ಸೇರಿಸಬೇಕು. ಋಜುಯೋಗಿಗಳು ತಮ್ಮಿಂದ ತಾವೇ ಭಿನ್ನರಾಗಿಲ್ಲವಾದ್ದರಿಂದ ಅಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇನ್ನು 'ತತ್ವಾಭಿಮಾನಿ' ಎಂಬ ಪದವನ್ನು ಹಾಕದೇ 'ಋಜುಯೋಗಿಗಳಿಂದ ಭಿನ್ನರಾದ ದೇವತೆಗಳೆಂದಷ್ಟೇ' ಹೇಳಿದರೆ, ಅತಾತ್ವಿಕ ದೇವತೆಗಳೂ. ಋಜುಯೋಗಿ ವ್ಯತಿರಿಕ್ತರಾದ ದೇವತೆಗಳಾದ ಕಾರಣ, ಅವರಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ ಋಜುಯೋಗಿ ವ್ಯತಿರಿಕ್ತರಾದ ತತ್ವಾಭಿಮಾನಿ ದೇವತೆಗಳೆಂದು ಹೇಳಬೇಕು. ಅತಾತ್ವಿಕ ದೇವತೆಗಳು ತತ್ವಾಭಿಮಾನಿಗಳಾಗಿಲ್ಲವಾದಕಾರಣ ಅತಿವ್ಯಾಪ್ತಿ ಬಾರದು. ಇನ್ನು 'ದೇವತೆಗಳು' ಎಂಬ ಪದವನ್ನು ಹಾಕದೇ 'ಋಜುಯೋಗಿ ವ್ಯತಿರಿಕ್ತರಾದ ತತ್ವಾಭಿಮಾನಿಗಳು' ಎಂದು ಲಕ್ಷಣ ಹೇಳಿದರೆ ಅಸುರರೂ ಋಜು ವ್ಯತಿರಿಕ್ತರಾದ ತತ್ವಾಭಿಮಾನಿಗಳಾದ್ದರಿಂದ, ಅಸುರರಲ್ಲಿ ಅತಿವ್ಯಾಪ್ತಿ ಬರುವದು.

तद्वारणाय देवा इति, तेषु देवत्वाभावान्नातिव्याप्तिरिति ।

तात्त्विकानां ज्ञानलक्षणमित्थं—अनादित्वे सति ईश्वरादन्यत्रालोचनेऽपि असर्वविषयकं ज्ञानं तात्त्विकयोगिज्ञानम् ।

दलकृत्यं तु——ज्ञानं तात्त्विकयोगिज्ञानमित्युक्ते, ईश्वरज्ञाने अतिव्याप्तिः । अतोऽसर्वविषयकमिति, ईश्वरज्ञाने असर्वविषयकत्वाभावन्नातिव्याप्तिः, असर्वविषयकं ज्ञानमित्युक्ते लक्ष्मीज्ञानेऽतिव्याप्तिः, लक्ष्मीज्ञानस्य ईश्वरे असर्वविषयकत्वादत ईश्वरादन्यत्रेति, ईश्वरादन्यत्रासर्वविषयकमित्युक्ते ऋजुयोगिज्ञाने अतिव्याप्तिः, तस्यापि ईश्वरादन्यत्र, आलोचनाभावदशायामसर्वविषयकत्वात्, अत आलोचनेऽपीति, तद्ज्ञानस्यालोचने सर्वविषयकत्वान्नातिव्याप्तिः.

---

ಆದಕ್ಕಾಗಿ "ದೇವತೆಗಳು" ಎಂಬ ಪದವನ್ನು ಸೇರಿಸಬೇಕು. ಅಸುರರು ದೇವತೆಗಳಿಲ್ಲ-ವಾದುದರಿಂದ ಅತಿವ್ಯಾಪ್ತಿ ಬರುವದಿಲ್ಲ.

ಆ) ತಾತ್ವಿಕ ಯೋಗಿಗಳ ಜ್ಞಾನದ ಲಕ್ಷಣವು:- ಅನಾದಿಯಾಗಿದ್ದು, ಈಶ್ವರನಿಂದ ಭಿನ್ನವಾದ ಪ್ರಪಂಚದ ವಿಷಯದಲ್ಲಿ ಆಲೋಚನೆ ಮಾಡಿದಾಗಲೂ ಸರ್ವವನ್ನು ವಿಷಯೀಕರಿಸದ ಜ್ಞಾನವು ತಾತ್ವಿಕಯೋಗಿ ಜ್ಞಾನವು.

ದಲಕೃತ್ಯವು:- 'ಜ್ಞಾನವು ತಾತ್ವಿಕಯೋಗಿ ಜ್ಞಾನ' ವೆಂದರೆ, ಈಶ್ವರ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಕಾರಣ ಅಸರ್ವ ವಿಷಯಕಜ್ಞಾನವೆಂದು ಹೇಳಬೇಕು. ಈಶ್ವರ ಜ್ಞಾನವು ಸರ್ವವಿಷಯಕವಾಗಿದೆಯೇ ಹೊರತು ಅಸರ್ವವಿಷಯಕವಾಗದ್ದರಿಂದ ಅತಿವ್ಯಾಪ್ತಿಯಿಲ್ಲ. ಅಸರ್ವವಿಷಯಕಜ್ಞಾನವು ತಾತ್ವಿಕಯೋಗಿ ಜ್ಞಾನವೆಂದರೆ, ಲಕ್ಷ್ಮೀ ಜ್ಞಾನವು ಭಗವದ್ವಿಷಯದಲ್ಲಿ ಸರ್ವವಿಷಯೀಕಾರಿಯಾಗಿಲ್ಲದಿರುವದರಿಂದ ಲಕ್ಷ್ಮೀ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು. 'ಈಶ್ವರನಿಂದ ಅನ್ಯತ್ರದಲ್ಲಿ ಎಂದು ಸೇರಿಸಬೇಕು. ಲಕ್ಷ್ಮೀ ಜ್ಞಾನವು ಈಶ್ವರನಿಂದ ಅನ್ಯತ್ರದಲ್ಲಿ [ಪ್ರಪಂಚದ ವಿಷಯದಲ್ಲಿ] ಅಸರ್ವ ವಿಷಯಕವಾಗಿಲ್ಲ. ಕಾರಣ ಅತಿವ್ಯಾಪ್ತಿ ಬರಲಾರದು. ಆದರೆ ಈಶ್ವರನಿಂದ ಭಿನ್ನವಾದ ಜಗತ್ತಿನಲ್ಲಿ ಅಸರ್ವ ವಿಷಯಕ ಜ್ಞಾನ" ವೆಂದಿಷ್ಟೇ ಲಕ್ಷಣ ಮಾಡಿದರೆ, ಋಜುಯೋಗಿಗಳ ಜ್ಞಾನವು, ಆಲೋಚನೆ ಮಾಡದೇ ಇದ್ದಾಗ, ಜಗದ್ವಿಷಯದಲ್ಲಿ ಅಸರ್ವ ವಿಷಯಕವಾದುದರಿಂದ, ಋಜುಯೋಗಿ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ, 'ಈಶ್ವರನಿಂದ ಅನ್ಯತ್ರದಲ್ಲಿ ಆಲೋಚನೆ ಮಾಡಿದರೂ ಅಸರ್ವ

ईश्वरादन्यत्र आलोचने असर्वविषयकज्ञानमित्युक्ते अतात्त्विकयोगिज्ञाने अतिव्याप्तिस्तद्वारणार्थमनादित्वे सतीति वक्तव्यं, तथा च अतात्त्विकयोगिज्ञानस्य सादित्वेन, अनादित्वाभावान्नातिव्याप्तिः, ।

तद्ज्ञानमपि द्विविधं--स्वरूपं बाह्यं चेति । स्वरूपं यथार्थमेव, बाह्यं कदाचिदयथार्थं, तत्रापि, अयथार्थज्ञानमल्पमेव, बाह्यं प्रवाहतोऽनादि ।

॥ इति तात्त्विकयोगिज्ञानस्वरूपनिरूपणम् ॥

५ ) तद्व्यतिरिक्ता देवादियोगिनोऽतात्त्विकाः । ऋजुतात्विकव्यतिरिक्ता देवऋष्यादियोगिनोऽतात्विका इति यावत् ।

---

ವಿಷಯಕ ಜ್ಞಾನ' ವೆಂದು ಹೇಳಬೇಕು. ಋಜುಯೋಗಿಗಳ ಜ್ಞಾನವು ಆಲೋಚನೆ ಮಾಡಿದಲ್ಲಿ ಈಶ್ವರನಿಂದ ಅನ್ಯತ್ರದಲ್ಲಿ ಸರ್ವ ವಿಷಯಕವೇ ಆದುದರಿಂದ ಅವರ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

ಆದರೆ ಇಷ್ಟೇ ಲಕ್ಷಣ ಹೇಳಿದಲ್ಲಿ ಅತಾತ್ವಿಕ ಯೋಗಿ ಜ್ಞಾನವು ಈಶ್ವರನಿಂದ ಅನ್ಯತ್ರದಲ್ಲಿ ಆಲೋಚನೆ ಮಾಡಿದರೂ ಅಸರ್ವ ವಿಷಯಕವೇ ಆಗಿರುವದರಿಂದ, ಅತಾತ್ವಿಕ ಯೋಗಿ ಜ್ಞಾನದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು, ಅನಾದಿತ್ವದಿಂದ ಕೂಡಿದ್ದು [ಅನಾದಿಯಾಗಿದ್ದು]ಎಂದು ವಿಶೇಷಣ ಸೇರಿಸಬೇಕು. ಅತಾತ್ವಿಕ ಯೋಗಿ ಜ್ಞಾನವು ಸಾದಿಯಾಗಿದೆಯೇ ಹೊರತು ಅನಾದಿಯಾಗಿಲ್ಲವಾದುದರಿಂದ ಉಕ್ತಲಕ್ಷಣ ಅತಿವ್ಯಾಪ್ತ ಆಗಲಾರದು. ಹಾಗೂ ತಾತ್ವಿಕ ಯೋಗಿ ಜ್ಞಾನದಲ್ಲಿ ಲಕ್ಷಣ ಬಂದು ಸಮನ್ವಯವಾಗುವದು.

೩] ಈ ತಾತ್ವಿಕ ಯೋಗಿ ಜ್ಞಾನವು ಎರಡು ವಿಧವು. ಸ್ವರೂಪ ಹಾಗೂ ಬಾಹ್ಯವು. ಸ್ವರೂಪ ಜ್ಞಾನವು, ಯಾವಾಗಲೂ ಯಥಾರ್ಥವು ಬಾಹ್ಯ ಜ್ಞಾನವು ಕದಾಚಿತ್ ಅಯಥಾರ್ಥವು, ಹಾಗೂ ಅದು ಅತ್ಯಲ್ಪವು, ಸ್ವರೂಪ ಜ್ಞಾನವು ಅನಾದಿತ್ಯವು, ಆದರೆ ಬಾಹ್ಯ ಜ್ಞಾನವು [ಅಂತಃಕರಣಜನ್ಯ] ಪ್ರವಾಹದಂತೆ ಅನಾದಿಯು.

ಅತಾತ್ವಿಕ ಯೋಗಿ ಜ್ಞಾನ ಸ್ವರೂಪವು :— ಋಜು ಹಾಗೂ ತತ್ವಾಭಿಮಾನಿ ದೇವತೆಗಳಿಂದ ಭಿನ್ನರಾದ ದೇವಾದಿ ಯೋಗಿಗಳೇ ಅತಾತ್ವಿಕ ಯೋಗಿಗಳು [ಋಜು, ಹಾಗೂ ತಾತ್ವಿಕ ದೇವತೆಗಳಿಂದ ಭಿನ್ನರಾದ ದೇವ ಋಷ್ಯಾದಿಗಳೇ ಅತಾತ್ವಿಕ ದೇವತೆಗಳೆಂದು ತಿಳಿಯಬೇಕು]

सादित्वे सति ईश्वरादन्यत्राल्पाज्ञानयुक्तं तद्ज्ञानम्, इति लक्षणमुक्तं भवति ।

ज्ञानमतात्त्विकयोगिज्ञानमित्युक्ते, ईश्वरज्ञाने अतिव्याप्तिः— अतो, अज्ञानयुक्तमिति, ईश्वरज्ञानस्य, अज्ञानयुक्तत्वाभावान्नातिव्याप्तिः, अज्ञानयुक्तं ज्ञानमित्युक्ते अयोगिज्ञानेऽतिव्याप्तिः, अतो, अल्पाज्ञानयुक्तमिति, अयोगिज्ञानस्य अल्पाज्ञानायुक्तत्वाभावान्नातिव्याप्तिः, अल्पाज्ञानयुक्तज्ञानमित्युक्ते असंभवः, अतात्त्विकयोगिज्ञानस्य ईश्वरे बहुलाज्ञानयुक्तत्वादतः ईश्वरादन्यत्रेति, तथा चातात्त्विकयोगिज्ञाने ईश्वरादन्यत्राल्पाज्ञानयुक्तत्वस्य सत्त्वान्नासभवः, ईश्वरादन्यत्राल्पाज्ञानयुक्तं ज्ञानमित्युक्ते तात्त्विकयोगिज्ञाने अतिव्याप्तिस्तद्वारणाय सादित्वे सतीति वक्तव्यं.

---

ಅ] ಅವರ ಜ್ಞಾನ ಲಕ್ಷಣ- ಸರಿಯಾಗಿ, ಈಶ್ವರನಿಂದ ಭಿನ್ನವಾದ ಜಗತ್ತಿನ ವಿಷಯದಲ್ಲಿ ಅಲ್ಪ ಅಜ್ಞಾನಯುಕ್ತವಾದ ಜ್ಞಾನವು ಅತಾತ್ವಿಕಯೋಗಿ ಜ್ಞಾನವು.

ಆ] ದಲಕೃತ್ಯವು- "ಜ್ಞಾನವು ಅತಾತ್ವಿಕಯೋಗಿ ಜ್ಞಾನ" ವೆಂದಲ್ಲಿ ಈಶ್ವರ ಜ್ಞಾನದಲ್ಲಿ ಅತಿವ್ಯಾಪ್ತಿಯು. ಈಶ್ವರ ಜ್ಞಾನವೂ ಜ್ಞಾನವಾಗಿದೆ. ಈ ಅತಿವ್ಯಾಪ್ತಿ ಪರಿಹಾರಕ್ಕೆ 'ಅಜ್ಞಾನಯುಕ್ತ ಜ್ಞಾನ' ವೆನ್ನಬೇಕು. ಈಶ್ವರ ಜ್ಞಾನವು ಅಜ್ಞಾನಯುಕ್ತ ಜ್ಞಾನವಾಗಿಲ್ಲ ಕಾರಣ ಅಲ್ಲಿ ಅತಿವ್ಯಾಪ್ತಿಯಿಲ್ಲ. 'ಅಜ್ಞಾನಯುಕ್ತ ಜ್ಞಾನವೆಂದಿಷ್ಟೇ ಹೇಳಿದರೆ, ಅಯೋಗಿ ಜ್ಞಾನವು, ಅಜ್ಞಾನಯುಕ್ತವಾಗಿದ್ದು ಅದರಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು ಅಲ್ಪ ಅಜ್ಞಾನಯುಕ್ತ ಜ್ಞಾನವೆಂದು ವಿವಕ್ಷಾ ಮಾಡಬೇಕು. ಅಯೋಗಿ ಜ್ಞಾನವು ಬಹು ಅಜ್ಞಾನಯುಕ್ತವಾದ್ದುದರಿಂದ, ಅತಿವ್ಯಾಪ್ತಿಯಿಲ್ಲ. ಅಲ್ಪ ಅಜ್ಞಾನಯುಕ್ತ ಜ್ಞಾನವು ಅಯೋಗಿ ಜ್ಞಾನವು ಅತಾತ್ವಿಕ ಯೋಗಿ ಜ್ಞಾನ' ವೆಂದು ಲಕ್ಷಣ ಮಾಡಿದರೆ ಈಶ್ವರನ ವಿಷಯದಲ್ಲಿ ಅಲ್ಪ ಅಜ್ಞಾನಯುಕ್ತ ಜ್ಞಾನವು, ಅತಾತ್ವಿಕಯೋಗಿಗಳಿಗೆ ಇರಲಾರದು. ಅವರಿಗೆ ಈಶ್ವರ ವಿಷಯದಲ್ಲಿ ಬಹು ಅಜ್ಞಾನಯುಕ್ತ ಜ್ಞಾನವಿರುತ್ತದೆ. ಕಾರಣ ಲಕ್ಷ್ಯದಲ್ಲಿ [ಅತಾತ್ವಿಕರಲ್ಲಿ] ಈ ಲಕ್ಷಣವೇ ಇಲ್ಲದಿರುವದರಿಂದ. ಅಸಂಭವ ದೋಷ ಬರುತ್ತದೆ. ಈ ದೋಷ ಪರಿಹರಿಸಲು, 'ಈಶ್ವರನಿಂದ ಅನ್ಯತ್ರದಲ್ಲಿ' ಎಂಬ ದಲವನ್ನು ಸೇರಿಸಬೇಕು. ಈಗ ಅತಾತ್ವಿಕಯೋಗಿ ಜ್ಞಾನದಲ್ಲಿ ಲಕ್ಷಣ ಬರುವದರಿಂದ, ಲಕ್ಷಣವು ಸಮನ್ವಯವಾಗುವದಾದರೂ, ತಾತ್ವಿಕ ಯೋಗಿ ಜ್ಞಾನವು ಈಶ್ವರನಿಂದ ಅನ್ಯತ್ರದಲ್ಲಿ ಅಲ್ಪ ಅಜ್ಞಾನಯುಕ್ತ ಜ್ಞಾನವಾದುದರಿಂದ ಅದರಲ್ಲಿ

तात्त्विकयोगिज्ञानस्य सादित्वाभावान्नातिव्याप्तिः ।

एतदपि द्विविधं—स्वरूपं बाह्यमिति, स्वरूपं यथार्थं, बाह्यं कदाचिदयथार्थमपि, स्वरूपज्ञाने सादित्वं च अनादितोऽनभिव्यक्तत्वमेव, स्वरूपं वैदिकेश्वरादिविषये योगानुग्रहेण कदाचिदभिव्यज्यते, कदाचिन्नेति, अन्यस्य बाह्यज्ञानस्य सादित्वं, प्रवाहतोऽनादि, प्रवाहतोऽनादि, इत्यस्य, वैदिकेश्वरादिविषये वृत्तिप्रवाहोऽनादिकालेऽनुत्पन्नः कदाचिदुत्पद्यत इत्यर्थः ।

॥ इति अतात्त्विकयोगिज्ञानस्वरूपकथनम् ॥

६ ) योगिव्यतिरिक्ता जीवा अयोगिनः, ईशलक्ष्म्योरतिव್याप्तिनिरासाय जीव इति,

---

ಮತ್ತೇ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು, 'ಸಾದಿಯಾಗಿದ್ದು' [ಸಾದಿತ್ವೇಸತಿ] ಎಂದು ಇನ್ನೊಂದು ದಲವನ್ನು ಸೇರಿಸಬೇಕು. ತಾತ್ವಿಕ ಯೋಗಿ ಜ್ಞಾನವು ಅನಾದಿಯಾಗಿದೆಯಲ್ಲದೇ ಸಾದಿಯಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ.

ಅತಾತ್ವಿಕಯೋಗಿ ಜ್ಞಾನವೂ ಎರಡು ವಿಧ– ಸ್ವರೂಪ ಹಾಗೂ ಬಾಹ್ಯ [ಅಂತಃಕರಣ ಜನ್ಯ] ಸ್ವರೂಪ ಜ್ಞಾನವು, ಯಾವಾಗಲೂ ಯಥಾರ್ಥವು. ಬಾಹ್ಯ ಜ್ಞಾನವು ಕದಾಚಿತ್ ಅಯಥಾರ್ಥವು. ಸ್ವರೂಪ ಜ್ಞಾನವು ಸಾದಿಯಾಗಿದೆಯೋ ಎಂದರೆ ಅನಾದಿಯಾಗಿ ಅಭಿವ್ಯಕ್ತವಾಗದೇ ಇದ್ದು ವೇದಗಳಿಂದ ಪ್ರತಿಪಾದ್ಯವಾದ ಈಶ್ವರ ಮೊದಲಾದ ವಿಷಯದಲ್ಲಿ ಯೋಗ ಪ್ರಭಾವದಿಂದ ಕದಾಚಿತ್ ಅಭಿವ್ಯಕ್ತವಾಗುತ್ತದೆ. ಕದಾಚಿತ್ ಆಗುವದಿಲ್ಲ.

ಸ್ವರೂಪದಿಂದ ಭಿನ್ನವಾದ ಬಾಹ್ಯ ಜ್ಞಾನವೂ 'ಸಾದಿ' ಯಾಗಿದೆ. ಎಂದರೆ ಪ್ರವಾಹರೂಪವಾಗಿ ಅನಾದಿಯೆಂದರ್ಥವು. ಪ್ರವಾಹವಾದಂತೆ ಜ್ಞಾನವು ಅನಾದಿಯೆಂದರೆ ವೇದ ಪ್ರತಿಪಾದ್ಯ ಈಶ್ವರನ ವಿಷಯದಲ್ಲಿ ಅನಾದಿ ಕಾಲದಿಂದ ಉತ್ಪನ್ನವಾಗದೇ ಇದ್ದ ವೃತ್ತಿ ಜ್ಞಾನವು ಕದಾಚಿತ್ ಉತ್ಪನ್ನವಾಗುತ್ತದೆಂದು ಅರ್ಥವು. [ಉದಾಹರಣೆಗೆ- ಮುತ್ತಲದ ಹೂಗಳಂತೆ]

೬] ಅಯೋಗಿ ಜ್ಞಾನ ಸ್ವರೂಪ ಕಥನವು

ಅ] ಅಯೋಗಿಗಳ ಲಕ್ಷಣವು– ಯೋಗಿ ವ್ಯತಿರಿಕ್ತರಾದ ಜೀವರೇ ಯೋಗಿಗಳು ಯೋಗಿ ವ್ಯತಿರಿಕ್ತರು ಇಷ್ಟೇ ಎಂದಲ್ಲಿ ಈಶ್ವರ ಹಾಗೂ ಲಕ್ಷ್ಮೀದೇವಿಯರೂ ಸಹ ಯೋಗಿ ವ್ಯತಿರಿಕ್ತರು, ಅವರಲ್ಲಿ ಲಕ್ಷಣ ಒಂದು, ಅತಿವ್ಯಾಪ್ತಿ ಬರುವದು.

योगिष्वतिव्याप्तिनिरासाय योगिव्यतिरिक्ता इति । "ईश्वरादन्यत्राज्ञानप्रचुरं ज्ञानमयोगिज्ञानं", अज्ञानप्रचुरज्ञानमयोगिज्ञानमित्युक्ते योगिज्ञानेऽतिव्याप्तिः, तस्य ईश्वरे अज्ञानप्रचुरत्वादत ईश्वरदन्यत्रेति, ईश्वरादन्यत्र योगिज्ञानस्याज्ञानप्रचुरत्वाभावान्नातिव्याप्तिः ।

. तदपि स्वरूपं बाह्यं चेति द्विविधं, उत्पतिविनाशवच्च, स्वरूपज्ञानस्य व्यक्त्यपेक्षयोत्पत्तिविनाशवत्त्वं, वृत्तिज्ञानस्य तु प्रवाहापेक्षयोत्पत्तिविनाशवत्त्वं ज्ञेयं । अयोगिनोऽपि त्रिविधाः — (१) मुक्तियोग्याः (२) नित्यसंसारिणः (३) तमोयोग्याश्चेति, (१) तत्र मुक्तियोग्यस्वरूपं यथार्थमेव (२) नित्यसंसारिणां स्वरूपं यथार्थं अयथार्थं च

---

ಇದನ್ನು ನಿವಾರಿಸಲು 'ಜೀವರು' ಎಂದು ಹೇಳಬೇಕು. ಈಶ್ವರ ಹಾಗೂ ಲಕ್ಷ್ಮೀದೇವಿಯರು ಜೀವರಲ್ಲವಾದಕಾರಣ ಅತಿವ್ಯಾಪ್ತಿಯಿಲ್ಲ. "ಜೀವರು ಅಯೋಗಿಗಳು" ಎಂದಿಷ್ಟೇ ಲಕ್ಷಣ ಹೇಳಿದರೆ, ಯೋಗಿಗಳೂ ಜೀವರು ಅವರಲ್ಲಿ ಅತಿವ್ಯಾಪ್ತಿ ಬರುವದು. ಅದನ್ನು ಪರಿಹರಿಸಲು 'ಯೋಗಿ ವ್ಯತಿರಿಕ್ತರಾದ' ಎಂಬ ದಲವನ್ನು ಕೊಡಬೇಕು. ಯೋಗಿ ವ್ಯತಿರಿಕ್ತತ್ವ ಯೋಗಿಗಳಲ್ಲಿ ಬರಲಾರದು. ಆದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ.

ಆ] ಅಯೋಗಿ ಜ್ಞಾನ ಲಕ್ಷಣವು– ಈಶ್ವರನಿಂದ ಭಿನ್ನವಾದ ಜಗತ್ತಿನ ವಿಷಯದಲ್ಲಿ ಅಜ್ಞಾನ ಪ್ರಚುರ ಜ್ಞಾನವು ಅಯೋಗಿ ಜ್ಞಾನವು 'ಅಜ್ಞಾನ ಪ್ರಚುರ ಜ್ಞಾನ' ವೆಂದಿಷ್ಟೇ ಲಕ್ಷಣ ಹೇಳಿದರೆ, ಯೋಗಿ ಜ್ಞಾನವೂ ಈಶ್ವರನ ವಿಷಯದಲ್ಲಿ ಅಜ್ಞಾನ ಪ್ರಚುರ ಜ್ಞಾನವಾದುದರಿಂದ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ "ಈಶ್ವರನಿಂದ ಅನ್ಯತ್ರದಲ್ಲಿ" ಎನ್ನಬೇಕು. ಈಶ್ವರನಿಂದ ಅನ್ಯತ್ರವಾದ ಜಗದ್ವಿಷಯದಲ್ಲಿ ಯೋಗಿ ಜ್ಞಾನವು ಅಜ್ಞಾನ ಪ್ರಚುರವಾಗಿಲ್ಲ. ಅತಿವ್ಯಾಪ್ತಿಯಿಲ್ಲ. ಈ ಯೋಗಿ ಜ್ಞಾನವೂ ಎರಡು ಪ್ರಕಾರವಾಗಿದೆ ಸ್ವರೂಪ ಹಾಗೂ ಬಾಹ್ಯ. ಎರಡೂ ಉತ್ಪತ್ತಿ ಹಾಗೂ ನಾಶವುಳ್ಳದ್ದಾಗಿವೆ ಸ್ವರೂಪ ಜ್ಞಾನ ವ್ಯಕ್ತವಾಗುವದರಿಂದ ಉತ್ಪತ್ತಿಯುಳ್ಳದ್ದು, ಹಾಗೂ ವ್ಯಕ್ತತೆಯ ತಿರೋಧಾನವೇ ಅದರ ನಾಶವು. ವೃತ್ತಿ ಜ್ಞಾನವು ಪ್ರವಾಹದಂತೆ ಉತ್ಪತ್ತಿ ನಾಶವುಳ್ಳದ್ದು.

ಅಯೋಗಿಗಳು ಮೂರು ಪ್ರಕಾರ– ೧] ಮುಕ್ತಿಯೋಗ್ಯರು ೨] ನಿತ್ಯ ಸಂಸಾರಿಗಳು. ೩] ತಮೋಯೋಗ್ಯರು– ೧] ಮುಕ್ತಿಯೋಗ್ಯರ ಸ್ವರೂಪಜ್ಞಾನವು ಯಥಾರ್ಥವು. ೨] ನಿತ್ಯ ಸಂಸಾರಿಗಳ ಸ್ವರೂಪವು ಜ್ಞಾನ ಯಥಾರ್ಥವು ಹಾಗೂ ಅಯಥಾರ್ಥದಿಂದ

( ३ ) तमोयोग्यानां ज्ञानमयथार्थमेव ।

॥ इति अयोगिज्ञानस्वरूपतद्विभागनिरूपणम् ॥

७ ) उक्तरीत्या यथार्थज्ञानदृढीकरणाय परोक्त ज्ञानविभाग दूषयितुमनूद्यते--( १ ) इंद्रियजं ( २ ) लिंगजं ( ३ ) स्मृतिः ( ४ ) आर्षं चेति, चतुर्विधं यथार्थज्ञानमिति, वैशेषिकाः, तदसत् नित्यस्यागमजन्यस्य चासंग्रहात्. स्मृतेरिन्द्रियजन्यत्वेन, आर्षस्य ( ऋषीणां प्रतिभोत्पन्नं ज्ञानं आर्षं ) योगिज्ञानत्वेन, तस्य च योगसहकृतेन्द्रियजन्यज्ञानप्रभेदत्वस्य तैरेवोक्तत्वेन पृथग्ग्रहणायोगात्, यथार्थज्ञानस्योक्तरीत्या विभागोऽनपपन्न इति ध्येयम् ।

॥ इति परोक्तज्ञानविभागखंडनम् ॥

॥ इति केवलप्रमाणस्वरूपनिरूपणप्रकरणम् ॥

---

ಕೂಡಿದುದು. ೩] ತಮೋಯೋಗ್ಯರ ಸ್ವರೂಪ ಜ್ಞಾನವು ನಿಯಮೇನ ಅಯಥಾರ್ಥವು.

೭] ಪರವಾದಿಗಳ ಜ್ಞಾನ ವಿಭಾಗದಲ್ಲಿಯ ದೋಷಗಳು.

ಯಥಾರ್ಥ ಜ್ಞಾನದ ಲಕ್ಷಣ ಸ್ವರೂಪವನ್ನು ದೃಢಪಡಿಸಲು, ಹಾಗೂ ಅನ್ಯಮತೀಯರು ಹೇಳುವ ಜ್ಞಾನದ ವಿಭಾಗಗಳ ದೋಷವನ್ನು ತೋರಿಸಲು, ಅವರು ಹೇಳುವದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗುತ್ತದೆ-

ವೈಶೇಷಿಕರು ಯಥಾರ್ಥ ಜ್ಞಾನವು ೧] ಇಂದ್ರಿಯದಿಂದ ಹುಟ್ಟಿದುದು. ೨] ಲಿಂಗ [ಅನುಮಾನ] ದಿಂದ ಹುಟ್ಟಿದುದು. ೩] ಸ್ಮೃತಿಯು ಹಾಗೂ ೪] ಆರ್ಷವು ಹೀಗೆ ನಾಲ್ಕು ಪ್ರಕಾರವಾಗಿದೆಯೆಂದು ಹೇಳುತ್ತಾರೆ. ಇದು ಸರಿಯಲ್ಲ. ಈ ವಿಭಾಗದಲ್ಲಿ ಎಲ್ಲಿಯೂ ಆಗಮದಿಂದ ಹುಟ್ಟಿದ ಜ್ಞಾನವು ಸಂಗ್ರಹವಾಗಲಿಲ್ಲ. ಸ್ಮೃತಿಯು ಮನಸ್ಸೆಂಬ ಇಂದ್ರಿಯದಿಂದ ಹುಟ್ಟಿದ ಕಾರಣ, ಇಂದ್ರಿಯದಿಂದ ಹುಟ್ಟಿದುದೆಂಬ ವಿಭಾಗದಲ್ಲಿಯೇ ಅಂತರ್ಭಾವವಾಗುವದು. ಆದುದರಿಂದ "ಸ್ಮೃತಿಯನ್ನು" ಪ್ರತ್ಯೇಕವೆಂದು ಗಣಿಸುವದು ಯುಕ್ತವಲ್ಲ. ಹಾಗೆಯೇ ಆರ್ಷ ಜ್ಞಾನವು ಎಂದರೆ ಋಷಿಗಳ ಪ್ರತಿಭಾ ಬಲದಿಂದ ಹುಟ್ಟಿದ ಜ್ಞಾನವು, ಯೋಗ ಸಹಕೃತವಾದ ಇಂದ್ರಿಯದಿಂದಲೇ ಹುಟ್ಟಿದುದರಿಂದ ಇಂದ್ರಿಯ ಜನ್ಯದಲ್ಲಿಯೇ ಅಂತರ್ಭಾವವಾಗುತ್ತಿದ್ದು ಅದನ್ನು ಪ್ರತ್ಯೇಕವೆಂದು ಪರಿಗಣಿಸಿದ್ದು ಸರಿಯಲ್ಲ. ಹೀಗೆ ವೈಶೇಷಿಕರು ಮಾಡಿದ ಜ್ಞಾನದ ವಿಭಾಗವು ದೋಷಯುಕ್ತವಾದುದರಿಂದಲೇ, ಸಿದ್ಧಾಂತರೀತಿಯಿಂದ ಮಾಡಿದ ಜ್ಞಾನ ವಿಭಾಗವೇ ಸರಿಯೆಂದು ತಿಳಿಯಬೇಕು.

## १) अथ अनुप्रमाणप्रकरणम् ।

(१) क्रमप्राप्तमनुप्रमाणं निरूप्यते—

यथार्थज्ञानसाधनमनुप्रमाणं, इन्द्रियलिङ्गशब्दानां यथार्थज्ञानसाधनत्वात् तेष लक्षणसमन्यः ।

दलकृत्यं तु— यथार्थमित्युक्ते केवलेऽतिव्याप्तिस्तत्र यथावस्थितज्ञेयविषयीकारित्वरूपयथार्थ्यस्य सत्त्वात्, अतः ज्ञानसाधामिति, केवलप्रमाणे ज्ञानसाधनत्वाभावान्नातिव्याप्तिः, ज्ञानमित्युक्ते केवले संशयादौ च अतिव्याप्तिः, प्रत्यक्षभूतेन्द्रियेऽव्याप्तिश्च, तस्य ज्ञानत्वाभावात्, अतो ज्ञानसाधनमिति, तथा च संशयादौ ज्ञानसाधनत्वाभावान्नातिव्याप्तिः, इन्द्रियार्थसन्निकर्षरूपप्रत्यक्षे ज्ञानसाधनत्वस्य सत्वान्नाव्याप्तिः, साधनमित्येवोक्ते कुठारादौ अतिव्याप्तिः,

---

### ಅನುಪ್ರಮಾಣ ಪ್ರಕರಣವು.

೧) ಕ್ರಮ ಪ್ರಾಪ್ತವಾದ ಅನುಪ್ರಮಾಣವು ಇಲ್ಲಿ ನಿರೂಪಿಸಲ್ಪಡುತ್ತದೆ. ಯಥಾರ್ಥ ಜ್ಞಾನ ಸಾಧನವು ಅನುಪ್ರಮಾಣವು. ಇಂದ್ರಿಯ, ಲಿಂಗ, ಶಬ್ದಗಳು ಯಥಾರ್ಥಜ್ಞಾನ ಸಾಧನಗಳಾದ್ದರಿಂದ, ಅವುಗಳಲ್ಲಿ ಲಕ್ಷಣ ಸಮನ್ವಯವಾಗುವದು.

ದಲಕೃತ್ಯವು- "ಯಥಾರ್ಥಂ ಪ್ರಮಾಣಂ" ಎಂದರೆ ಕೇವಲ ಪ್ರಮಾಣವು ಯಥಾರ್ಥವಾದುದರಿಂದ ಅದರಲ್ಲಿ ಅತಿವ್ಯಾಪ್ತಿ ಬರುವದು. ಕಾರಣ ಜ್ಞಾನ ಸಾಧನ ಅನ್ನಬೇಕು.

ಕೇವಲ ಪ್ರಮಾಣವು ಯಥಾರ್ಥವಾಗಿದೆಯೇ ಹೊರತು ಸಾಧನವಾಗಿಲ್ಲ. ಕಾರಣ ಅತಿವ್ಯಾಪ್ತಿಯು ಇಲ್ಲ. "ಜ್ಞಾನವು ಅನುಪ್ರಮಾಣವು" ಎಂದು ಲಕ್ಷಣ ಹೇಳಿದರೆ ಕೇವಲ ಪ್ರಮಾಣದಲ್ಲಿಯೂ, ಹಾಗೂ ಸಂಶಯದಲ್ಲಿಯೂ ಅತಿವ್ಯಾಪ್ತಿಯು ಬರುವದಲ್ಲದೆ, ಪ್ರತ್ಯಕ್ಷರೂಪವಾದ ಇಂದ್ರಿಯದಲ್ಲಿ ಅವ್ಯಾಪ್ತಿ ಬರುವದು, ಪ್ರತ್ಯಕ್ಷವು ಜ್ಞಾನವಲ್ಲ. ಈ ಅವ್ಯಾಪ್ತಿ ಅತಿವ್ಯಾಪ್ತಿಗಳನ್ನು ಸರಿಪಡಿಸಲು 'ಜ್ಞಾನಸಾಧನ' ಅನ್ನಬೇಕು. ಸಂಶಯಾದಿಗಳು ಜ್ಞಾನಸಾಧನವಲ್ಲ. ಕಾರಣ ಅವುಗಳಲ್ಲಿ ಅತಿವ್ಯಾಪ್ತಿಯಾಗಲೀ, ಪ್ರತ್ಯಕ್ಷವು ಜ್ಞಾನಕ್ಕೆ ಸಾಧನವಾಗುವದರಿಂದ ಅದರಲ್ಲಿ ಅವ್ಯಾಪ್ತಿಯಾಗಲೀ ಬರಲಾರದು. ಕೇವಲ 'ಸಾಧನವು ಅನುಪ್ರಮಾಣ" ವೆಂದು ಲಕ್ಷಣ ಮಾಡಿದರೆ, ಕೊಡಲಿಯೂ ಸಹ ಕಡಿಯುವ ಕ್ರಿಯೆಯಾದುದರಿಂದ, ಕೊಡಲಿಯಲ್ಲಿ ಅತಿವ್ಯಾಪ್ತಿ ಬರುವದು.

तस्यापि छिदिक्रियां प्रति साधनत्वादतो ज्ञानसाधनमिति, तत्र ज्ञानसाधनत्वाभावात् नातिव्याप्तिः, यथार्थसाधनमित्युक्ते प्रत्यक्षसाधने, ( प्रत्यक्षं च चक्षुरादिकमिन्द्रियम् तत्साधनें तज्जनके ) अतिव्याप्तिः, अतो यथार्थज्ञानसाधनमिति, चक्षुरादिकरणजनके यथार्थज्ञानसाधनत्वाभावादतिव्याप्तेरभावः, ज्ञानसाधनमित्युक्ते संशयसाधने अतिव्याप्तिः, अतो यथार्थज्ञानसाधनमिति, संशयसाधने यथार्थज्ञानसाधनत्वाभावान्नातिव्याप्तिः, यथार्थज्ञानकारणमित्युक्ते प्रमात्रादौ अतिव्याप्तिः, अतो यथार्थसाधनमिति सर्वं सार्थकं भवति ।

ननु तावता कुतः प्रमात्रादौ अतिव्याप्तिव्यावृत्तिरित्यतः

---

ಇದನ್ನು ನಿವಾರಿಸಲು "ಜ್ಞಾನ ಸಾಧನ" ವೆಂದು ಹೇಳಬೇಕು. ಕೊಡಲಿಯಲ್ಲಿ ಕಡಿಯುವ ಕ್ರಿಯೆಯ ಸಾಧನತ್ವವಿದೆಯೇ ಹೊರತು, ಜ್ಞಾನ ಸಾಧನತ್ವವಿಲ್ಲ. ಕಾರಣ, ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇನ್ನು ಯಥಾರ್ಥ ಸಾಧನವು ಅನುಪ್ರಮಾಣ" ವೆಂದಿಷ್ಟೇ ಲಕ್ಷಣ ಮಾಡಿದರೆ, ಯಥಾರ್ಥವಾಗಿರುವ ಪ್ರತ್ಯಕ್ಷ ಸಾಧನೆಯಲ್ಲಿ (ಚಕ್ಷುರಾದಿ ಇಂದ್ರಿಯಗಳಿಗೆ ಜನಕವಾದುದರಲ್ಲಿ) ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು. "ಯಥಾರ್ಥ ಜ್ಞಾನ ಸಾಧನ" ವೆನ್ನಬೇಕು. ಚಕ್ಷುರಾದಿ ಇಂದ್ರಿಯ ಜನಕದಲ್ಲಿ [ತೈಜಸ ಅಹಂಕಾರದಲ್ಲಿ] ಯಥಾರ್ಥ ಜ್ಞಾನ ಸಾಧನತ್ವವಿಲ್ಲದ್ದರಿಂದ ಅತಿವ್ಯಾಪ್ತಿ ಇಲ್ಲ 'ಜ್ಞಾನ ಸಾಧನವು ಅನುಪ್ರಮಾಣ' ಲಕ್ಷಣವೆಂದು ಹೇಳಿದಲ್ಲಿ, ಸಂಶಯವೂ ಒಂದು ಜ್ಞಾನವಾದುದರಿಂದ, ಸಂಶಯ ಸಾಧನದಲ್ಲಿ ಅತಿವ್ಯಾಪ್ತಿ ಬರುವದು. ಆದನ್ನು ನಿವಾರಿಸಲು "ಯಥಾರ್ಥ ಜ್ಞಾನ ಸಾಧನ" ಹೇಳಬೇಕು. ಸಂಶಯ ಸಾಧನವು ಯಥಾರ್ಥ ಜ್ಞಾನ ಸಾಧನವಾಗಲಾರದು ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇನ್ನು "ಸಾಧನ" ಶಬ್ದಕ್ಕೆ ಬದಲು ಕಾರಣ ಶಬ್ದ ಹಾಕಿ, "ಯಥಾರ್ಥ ಜ್ಞಾನ ಕಾರಣ" ವೆಂದು ಅನುಪ್ರಮಾಣದ ಲಕ್ಷಣವನ್ನಾಗಿ ಹೇಳಿದರೆ, ಜ್ಞಾನ ಹೊಂದುವವನೂ [ಪ್ರಮಾತೃ] ಯಥಾರ್ಥ ಜ್ಞಾನಕ್ಕೆ ಕಾರಣನಾದುದರಿಂದ, ಆವನಲ್ಲಿ ಅತಿವ್ಯಾಪ್ತಿ ಬರುವದು ಇದನ್ನು ಪರಿಹರಿಸಲು 'ಯಥಾರ್ಥ ಜ್ಞಾನ ಸಾಧನ" ವೆಂದು ಹೇಳಬೇಕು. ಪ್ರಮಾತೃವಿನಲ್ಲಿ ಯಥಾರ್ಥ ಜ್ಞಾನ ಕಾರಣತ್ವವಿದ್ದರೂ, ಸಾಧನತ್ವವಿಲ್ಲವಾದ್ದರಿಂದ ಅತಿವ್ಯಾಪ್ತಿ ಬರಲಾರದು.

ಶಂಕಾ– ಅನುಪ್ರಮಾಣದ ಲಕ್ಷಣದಲ್ಲಿ ಸಾಧನ ಪದವನ್ನು ಹಾಕುವದರಿಂದ ಪ್ರಮಾತೃವಿನಲ್ಲಿ ಅತಿವ್ಯಾಪ್ತಿ ಬರುವದಿಲ್ಲವೆಂದು ಹೇಳಿದ್ದಾಯಿತು.

साधनपदस्यातिशयितकारणत्वार्थकत्वात्, अत्र साधने किमतिशयितत्वं विवक्षितमिति चेदुच्यते, यज्जातीयानन्तरं ( यद्धर्मावच्छिन्नसमवधानानन्तरं ) नियमेन ( अव्यभिचारेण ) कार्योत्पत्तिस्तदुच्यतेऽत्र साधनमिति विवक्षितं, तथा च प्रमात्रादौ कारणकलापे सति यदभावात्कार्याभावः, यस्मिन् सति अप्रतिबंधे भवत्येव कार्यं तदुच्यते साधनमिति यावत्, यथा व्यापारवान् कुठारः, सन्निकर्षरूपव्यापारवदिन्द्रियं च, तथा च सन्निकर्षरूपव्यापारवदिन्द्रियस्य सत्त्वे यथार्थज्ञानरूपकार्योत्पत्तिः, तदभावे तदभावः, तथा व्यापारवत्कुठारस्य सत्त्वे प्रतिबंधाभावे छिदिक्रियासत्त्वं, तदभावे छिदिक्रियाया अभावः, तस्मात् तत्साधनमुच्यते,

---

ಏಕೆಂದರೆ ಸಾಧನ ಪದವು ಅತಿಶಯ ಕಾರಣಾರ್ಥಕವಾಗಿದೆ. ಸಾಧನದಲ್ಲಿ ಅತಿಶಯತೆ ಎನ್ನುವದರಿಂದ ಏನು ವಿವಕ್ಷಿತವಾಗಿದೆಯೆಂಬುದನ್ನು ಹೀಗೆ ಹೇಳುತ್ತೇವೆ. ಯಾವ ಧರ್ಮದಿಂದ ಕೂಡಿದ ಮೇಲೆ ನಿಯಮವಾಗಿ ಕಾರ್ಯದ ಉತ್ಪತ್ತಿಯಾಗುವದೋ. ಆ ಧರ್ಮದಿಂದ ಕೂಡಿದ್ದು ಸಾಧನವಾಗುತ್ತದೆ. ಪ್ರಮಾತೃ ಮೊದಲಾದ ಕಾರಣ ಸಮೂಹವಿದ್ದು, ಯಾವುದು ಇಲ್ಲದಿರುವದರಿಂದ ಕಾರ್ಯವು ಉತ್ಪತ್ತಿಯಾಗುವದಿಲ್ಲವೋ, ಯಾವುದಿರುವದರಿಂದ ಪ್ರತಿಬಂಧಕವಿಲ್ಲದಿದ್ದಲ್ಲಿ, ಕಾರ್ಯವು ಹುಟ್ಟುತ್ತದೆಯೋ, ಅದೇ ಸಾಧನವೆಂದು ಕರೆಯಲ್ಪಡುತ್ತದೆ. ಹೇಗೆಂದರೆ ಮೇಲೆ ಎತ್ತಲ್ಪಟ್ಟು ಬೀಳುವ ವ್ಯಾಪಾರವುಳ್ಳ ಕೊಡಲಿಯು ಛೇದನಕ್ರಿಯೆಗೆ ಸಾಧನವಾಗಿದೆ ಅದರಂತೆ ಸನ್ನಿಕರ್ಷರೂಪ ವ್ಯಾಪಾರವುಳ್ಳ ಇಂದ್ರಿಯವು ಯಥಾರ್ಥ ಜ್ಞಾನದ ಉತ್ಪತ್ತಿಗೆ ಸಾಧನವು, ಸನ್ನಿಕರ್ಷರೂಪ ವ್ಯಾಪಾರದಿಂದ ಕೂಡಿದ ಇಂದ್ರಿಯವಿದ್ದರೆ ಮಾತ್ರ ಯಥಾರ್ಥ ಜ್ಞಾನವೆಂಬ ಕಾರ್ಯ ಹುಟ್ಟುತ್ತದೆ. ಅದಿಲ್ಲದಿದ್ದರೆ (ಇಂದ್ರಿಯವು ಸನ್ನಿಕರ್ಷರೂಪ ವ್ಯಾಪಾರದಿಂದ ಕೂಡದಿದ್ದರೆ) ಜ್ಞಾನರೂಪ ಕಾರ್ಯವೂ ಹುಟ್ಟುವದಿಲ್ಲ. (ಇಂದ್ರಿಯಗಳು ಸ್ವತಂತ್ರವಾಗಿ, ವಿಷಯಗಳ ಸನ್ನಿಕರ್ಷವಿಲ್ಲದೇ ಜ್ಞಾನವನ್ನು ಹುಟ್ಟಿಸಲಾರವು. ಸನ್ನಿಕರ್ಷದಿಂದ ಕೂಡಿದಾಗ ಸಾಧನಗಳೆನಿಸುವವು) ಇದರಂತೆ ವ್ಯಾಪಾರವುಳ್ಳ ಕೊಡಲಿಯಿದ್ದರೆ, ಪ್ರತಿಬಂಧಕವಿಲ್ಲದಿದ್ದಾಗ, ಕಟ್ಟಿಗೆಯಲ್ಲಿ ಛೇದನ ಕ್ರಿಯೆಯು ಹುಟ್ಟುತ್ತದೆ. ಅದೇ ಕೊಡಲಿಯು (ಮೇಲಿಂದ ಕೆಳಗೆ ಬೀಳುವ ಕ್ರಿಯೆ) ವ್ಯಾಪಾರದಿಂದ ಕೂಡಿರದಿದ್ದರೆ. ಛೇದನರೂಪ ಕಾರ್ಯವನ್ನು ಹುಟ್ಟಿಸಲಾರದು.

एवं च प्रतिबंधाभावे सति व्यापारविशिष्टकारणमेव साधनमित्युक्तं भवति, तेन प्रमात्रादौ कारणे नातिव्याप्तिः, तत्र व्यापारविशिष्टकारणत्वाभावादिति ज्ञेयम् ।

नन्वेवमपि यादृच्छिकसंवादिलिङ्गविभ्रमे, ज्ञातज्ञापकवाक्ये च, अतिव्याप्तिः, तेषामपि नियमेन यथार्थज्ञानसाधनत्वात्, आगमबहिर्भावस्य वक्ष्यमाणत्वेनालक्ष्यत्वाच्चेति चेदत्र **श्री वेदेशतीर्थकृतभावविवरणे एवमुच्यते--**

यादृच्छिकसंवादिलिङ्गविभ्रमेऽतिव्याप्तिवारणाभिप्रायेणैवं विवाक्षा कृता ( यज्जातीयानंतरं इत्यादि ) तत्र लिंगविभ्रमादौ '**यज्जातीयानन्तरं** नियमेन कार्योत्पत्त्यभावात्''--नातिव्याप्तिः ।

(ಈ ಕಾರಣದಿಂದ ವ್ಯಾಪಾರವುಳ್ಳ ಕೊಡಲಿಯು ಹಾಗೂ ವ್ಯಾಪಾರವುಳ್ಳ ಇಂದ್ರಿಯಗಳು ಸಾಧನಗಳೆಂದು ಕರೆಯಲ್ಪಡುತ್ತವೆ ಅಂತೂ ಪ್ರತಿಬಂಧಕವಿಲ್ಲದಿದ್ದರೆ ವ್ಯಾಪಾರ ವಿಶಿಷ್ಟ ಕರಣವೇ ಸಾಧನವೆಂದು ಹೇಳುತ್ತೇವೆ. ಹೀಗೆ ಸಾಧನ ಶಬ್ದಾರ್ಥ ಹೇಳಿದ ಮೇಲೆ, ಪ್ರಮಾತೃ ಮುಂತಾದ ಕಾರಣಗಳಲ್ಲಿ ಅತಿವ್ಯಾಪ್ತಿ ಬರುವದಿಲ್ಲ. ಏಕೆಂದರೆ ಅವು ವ್ಯಾಪಾರ ವಿಶಿಷ್ಟವಾಗಿಲ್ಲವೆಂದು ತಿಳಿಯಬೇಕು)

ಶಂಕಾ– ಹೀಗೆ ವಿವಕ್ಷೆ ಮಾಡಿದರೂ, (ಯಾದೃಚ್ಛಿಕ ಸಂವಾದಿ ಲಿಂಗ ವಿಭ್ರಮದಲ್ಲಿ) ಅನುಮಾನದಲ್ಲಿ ಲಿಂಗದ ವಿಪರೀತ ಜ್ಞಾನ ಹೊಂದಿದಾಗಲೂ (ಆಕಸ್ಮಿಕವಾಗಿ) ಯದೃಚ್ಛೆಯಿಂದ ಸಾಧ್ಯವು ಪಕ್ಷದಲ್ಲಿ ಕಾಣಲ್ಪಟ್ಟು, ಲಿಂಗ ಭ್ರಮೆಗೆ ಸಂವಾದಿಯಾದಾಗ, ಲಿಂಗದ ಭ್ರಮಾತ್ಮಕ ಜ್ಞಾನದಲ್ಲಿಯೂ, ಅದರಂತೆ ಜ್ಞಾತಜ್ಞಾಪಕ ವಾಕ್ಯದಲ್ಲಿಯೂ ಅತಿವ್ಯಾಪ್ತಿ ಬರುವದು, ಏಕೆಂದರೆ ಅವೂ ಕೂಡ ನಿಯಮದಿಂದ ಯಥಾರ್ಥ ಜ್ಞಾನ ಸಾಧನಗಳಾಗಿವೆ.

ಜ್ಞಾತಜ್ಞಾಪಕ ವಾಕ್ಯವು ಆಗಮದಲ್ಲಿ ಅಂತರ್ಭಾವವಾಗಲಾರದ್ದರಿಂದ ಲಕ್ಷಣವಾಗಲಾರದೆಂದು ಮುಂದೆ (ಆಗಮ ಪರಿಚ್ಛೇದದಲ್ಲಿ) ಹೇಳುತ್ತೇವೆ. ಯಾದೃಚ್ಛಿಕ ಸಂವಾದಿ ಲಿಂಗ ವಿಭ್ರಮವೂ ಲಕ್ಷ್ಯವಾಗಲಾರದ್ದರಿಂದ, ಅಲಕ್ಷ್ಯದಲ್ಲಿ ಲಕ್ಷಣವು ಬಂದು ಅತಿವ್ಯಾಪ್ತಿಯಾಗುವದೆಂಬ ಸಂಶಯ ಬಂದರೆ, ಈ ವಿಷಯದಲ್ಲಿ ಶ್ರೀ ವೇದೇಶತೀರ್ಥರು ರಚಿಸಿದ ಭಾವ ವಿವರಣೆಯಲ್ಲಿ ಹೀಗೆ ಸಮಾಧಾನ ಹೇಳಿದೆ. ಯಾದೃಚ್ಛಿಕ ಸಂವಾದಿ ಲಿಂಗ ವಿಭ್ರಮದಲ್ಲಿ ಅತಿವ್ಯಾಪ್ತಿ ಬರಬಾರದೆಂಬ ಅಭಿಪ್ರಾಯದಿಂದಲೇ, ಯಾವ ಧರ್ಮದಿಂದ ಕೂಡಿಯೇ ನಿಯಮೇನ ಕಾರ್ಯ ಹುಟ್ಟಿಸುವದೋ ಅದು ಸಾಧನವೆಂದು ಹೇಳಿದೆ. ಲಿಂಗ ವಿಭ್ರಮದಿಂದ ಹುಟ್ಟಿದ ಯಥಾರ್ಥ ಜ್ಞಾನವು ಕೇವಲ ಯಾದೃಚ್ಛಿಕವಾದದ್ದೇ

वस्तुतस्तु यथार्थपदमहिम्ना निर्दोषमिति साधनविशेष इह लक्ष्यते, तथा च निर्दोषज्ञानसाधनमनुप्रमाणमित्येवार्थः ।

( निर्दोषज्ञानसाधनमित्यत्र विग्रहस्तु --निर्दोषं च तत् ज्ञानसाधनं चेति विवक्षितः ) एवं च यादृच्छिकसंवादिलिङ्गविभ्रमादिषु ज्ञातज्ञापकवाक्येषु च नातिव्याप्तिः, तेषां लिङ्गविभ्रमत्वज्ञाताज्ञापकत्वादिदोषाणां सत्त्वादिति ।

ननु यादृच्छिकसंवादिलिङ्गविभ्रमे यथार्थज्ञानसाधनत्वसत्वादतिव्याप्तिरिति चेन्न, अत्र **अभिनवामृते** अतिव्याप्तिशङ्का, एवं परिहृता

---

**ಹೊರತು**, ನಿಯಮೇನ ಯಥಾರ್ಥ ಜ್ಞಾನವು ಹುಟ್ಟಿಸಲಾರದು. ಅಂದರೆ ಯಾದೃಚ್ಛಿಕ ಧರ್ಮದಿಂದ ಕೂಡಿ ಯಥಾರ್ಥ ಜ್ಞಾನ ಹುಟ್ಟಿಸಿರುವದೇ ಹೊರತು ವ್ಯಾಪಾರ ವಿಶಿಷ್ಟವಾಗಿ ಕರಣದಂತೆ ಜ್ಞಾನ ಹುಟ್ಟಿಸಲಾರದು. ಆದುದರಿಂದ ಅಲ್ಲಿ ಅತಿವ್ಯಾಪ್ತಿ ಬರಲಾರದ.

ಇಲ್ಲವೆ ವಾಸ್ತವಿಕವಾಗಿ ಅನುಪ್ರಮಾಣದ ಲಕ್ಷಣ ವಾಕ್ಯದಲ್ಲಿರುವ ‟ಯಥಾರ್ಥ" ಪದವು, ಸಾಧನವು ನಿರ್ದೋಷವಾಗಿರಬೇಕೆಂಬ ಅಭಿಪ್ರಾಯವನ್ನು ಸೂಚಿಸುತ್ತದೆಂದು ವಿವಕ್ಷಾ ಮಾಡಿದರೆ, (ಯಥಾರ್ಥ ಜ್ಞಾನ ಸಾಧನವೆಂದರೆ) ನಿರ್ದೋಷ ಜ್ಞಾನ ಸಾಧನವು ಅನುಪ್ರಮಾಣವು' ಎಂದು ಲಕ್ಷಣವಾಗುವದು. ನಿರ್ದೋಷ ಜ್ಞಾನ ಸಾಧನವೆಂಬಲ್ಲಿ ಕರ್ಮಧಾರಯ ಸಮಾಸ ಮಾಡಬೇಕು ಜ್ಞಾನ ಸಾಧನವು ನಿರ್ದೋಷವಾಗಬೇಕೆಂಬ ಅಭಿಪ್ರಾಯವು. ಅಂತೂ ಯಾದೃಚ್ಛಿಕ ಸಂವಾದಿ ಲಿಂಗ ವಿಭ್ರಮ ಮೊದಲಾದವು ಹಾಗೂ ಜ್ಞಾತಜ್ಞಾಪಕ ವಾಕ್ಯವು ನಿರ್ದೋಷವಾಗಿಲ್ಲವಾದ್ದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

ವಿವರಣೆ– ಲಿಂಗ ವಿಭ್ರಮವು ಯಾದೃಚ್ಛಿಕ ಸಂವಾದಿಯೆಂದರೆ, ಲಿಂಗ ಜ್ಞಾನವು ಭ್ರಮವೇ ಆಗಿರುತ್ತದೆ. ಆದರೆ ಅನಾಯಾಸವಾಗಿ ಅಲ್ಲಿ ಆ ವಸ್ತು ಇದ್ದಾಗ ಭ್ರಮಕ್ಕೆ ಸಂವಾದಿಯಾಗುತ್ತದೆ. ಉದಾಹರಣೆಗೆ- ಮಂಜನ್ನು ನೋಡಿ ಧೂಮವೆಂಬ ಭ್ರಮದಿಂದ ಅಲ್ಲಿ ಹೋದಾಗ, ಅಕಸ್ಮಾತ್ತಾಗಿ 'ಅಗ್ನಿ' ಜ್ಞಾನಕ್ಕೆ ಜನಕವಾದ ಲಿಂಗ ಭ್ರಮವು ಯಾದೃಚ್ಛಿಕ ಸಂವಾದಿಯಾಯಿತು.

ಯಾದೃಚ್ಛಿಕ ಸಂವಾದಿ ಲಿಂಗ ವಿಭ್ರಮ ಹಾಗೂ ಜ್ಞಾತ ಜ್ಞಾಪಕ ವಾಕ್ಯಗಳಲ್ಲಿಯು ಅತಿವ್ಯಾಪ್ತಿ ಪರಿಹರಿಸುವ ವಿಷಯದಲ್ಲಿ ಅಭಿನವಾಮೃತ ಗ್ರಂಥದಲ್ಲಿ ಹೀಗೆ ಹೇಳಲಾಗಿದೆ.

अत्र स्वाभाविकमेव सधनत्वं विविक्षितं, याद्दच्छिकसंवादिनस्तु न प्रमाजनकत्वं स्वभावः, किं तु भ्रमजनकत्वमेव प्रमाजनकत्वं तु दैववशात् विषयसत्ताप्रयुक्तमिति न तत्रातिव्याप्तिरिनि भावः।

**॥ इति अनुप्रमाणस्वरूपनिरूपणं, लक्षणघटकसाधनशब्दार्थविचारश्च ॥**

ननु त्रिविधं प्रमाणं केवलप्रमाणं, अनुअमाणं, अधिकरण-प्रमाणमिति वक्तव्य, ल्युटोऽधिकरणेऽप्यनुशासनात्, " ल्युट् च भावे करणाधिकरणयोश्चेति,, सूत्रात्, सत्यं, तथापि प्रमाणशब्दस्याधिकरणे, प्रयोगाभावात् तदसंग्रहः, ननु अत्रार्थे ज्ञानं प्रमाणमितिवत्, अत्रार्थे विप्राः प्रमाणमिति प्रयोगोऽस्तीति चेन्न, " अत्रार्थे विप्राः प्रमाणमिति प्रयोगस्तु तद्वाक्यस्य तद्ज्ञानस्य वा प्रमण्याभिप्रायेणौपचारिको ज्ञेयः।

---

ಇಲ್ಲಿ ಸಾಧನವು ಸ್ವಾಭಾವಿಕವಾಗಿರಬೇಕೆಂಬ ಅಭಿಪ್ರಾಯವಿದೆ. ಯಾದೃಚ್ಛಿಕ ಸಂವಾದಿಗಳಿಗೆ ಪ್ರಮಾಣ ಹುಟ್ಟಿಸುವದು ಸ್ವಭಾವವಲ್ಲ. ಭ್ರಮ ಹುಟ್ಟಿಸುವದೇ ಅವುಗಳ ಸ್ವಭಾವವು ದೈವವಶಾತ್ತಾಗಿ ವಸ್ತುವಿದ್ದಾಗ ಯಥಾರ್ಥ ಜ್ಞಾನ ಹುಟ್ಟಿಸುವದೇ ಹೊರತು ಸ್ವಾಭಾವಿಕವಾಗಿ ಹುಟ್ಟಿಸಲಾರವು. ಕಾರಣ ಅತಿವ್ಯಾಪ್ತಿ ಬರಲಾರದೆಂಬ ಭಾವವು

---

ವಾದಿಗಳು ಹೇಳುವ ಅನುಪ್ರಮಾಣ ವಿಭಾಗದ ಖಂಡನೆ ಹಾಗೂ ಉಪಾದಾನ ಮೊದಲಾದ ಕಾರಣಗಳ ನಿರೂಪಣೆಯು:-

ಪ್ರಮಾಣಗಳು ಕೇವಲ ಪ್ರಮಾಣ, ಅನುಪ್ರಮಾಣ, ಅಧಿಕರಣ ಪ್ರಮಾಣ ಎಂದು ಮೂರು ಪ್ರಕಾರಗಳಿವೆ ಎಂದು ಹೇಳಬೇಕಾಗಿತ್ತು. ಲ್ಯುಟ್ ಪ್ರತ್ಯಯವು ಅಧಿಕರಣದಲ್ಲಿಯೂ ಇರುವದೆಂದು ಅನುಶಾಸನವಿದೆ. " ಲ್ಯುಟ್ ಚಭಾವೇ ಕರಣಾಧಿಕರಣಯೋಶ್ಚ " ಎಂದು ವ್ಯಾಕರಣ ಸೂತ್ರವಿರುವದರಿಂದ ಮೂರು ಪ್ರಮಾಣಗಳನ್ನು ಹೇಳದೆ, ಎರಡು ಪ್ರಮಾಣವೆಂದು ಹೇಳಿದುದೇಕೆ ? ಎಂಬ ಸಂಶಯಕ್ಕೆ ಅವಕಾಶವಿಲ್ಲ. ಪ್ರಮಾಣ ಶಬ್ದವು ಅಧಿಕರಣವೆಂಬಲ್ಲಿ ಎಲ್ಲಿಯೂ ಪ್ರಯೋಗವಿಲ್ಲ. ಆದರೆ ' ಈ ವಿಷಯದಲ್ಲಿ ಜ್ಞಾನವು ಪ್ರಮಾಣವು ಎಂಬಂತೆ ಬ್ರಾಹ್ಮಣರು ಪ್ರಮಾಣರು ' ಎಂಬ ಪ್ರಯೋಗವಿರುವದರಿಂದ, ಈ ಪ್ರಯೋಗವೇ ಪ್ರಮಾಣವೆಂಬುದು ಸರಿಯಲ್ಲ. ಈ ಪ್ರಯೋಗವು ' ಬ್ರಾಹ್ಮಣರು ಹೇಳುವ ವಾಕ್ಯವು ಈ ವಿಷಯದಲ್ಲಿ ಪ್ರಮಾಣವು ಅಥವಾ ಅವರಿಗೆ ಇರುವ ಜ್ಞಾನವು ಪ್ರಮಾಣವು" ಎಂಬ ಅರ್ಥದಲ್ಲಿಯೇ ಇರುವ ಕಾರಣ,

१ ) परिणामित्वे सति यत्कारणं तदुपादानकारणं, यथा जगतः प्रकृतिः, घटस्य मृत्पिंडः ।

२ ) अपरिणामित्वे सति यत्करणं तन्निमित्तकारणं, यथा अदृष्टादिकं जगतः, दंडादिकं घटस्येति, कार्यं तु, प्रागभावप्रतियोगि ।

**इति अनुप्रमाणे वाद्युक्त -अधिकरणप्रमाणनिरसनपूर्वक-उपादानादिकारणनिरूपणम् ॥**

३ ) त्रिविधमनुप्रपाण– १ ) प्रत्यक्षं २ ) अनुमानं ३ ) आगमश्चेति, १ ) प्रत्यक्षं नाम निर्दोषार्थेंद्रियसन्निकर्षः ( निर्दोषे च ते अर्थेन्द्रिये च, तयोः सन्निकर्ष इति, अर्थशब्देनेन्द्रियविषयागृह्यन्ते ) प्रत्यक्षमित्यत्र विग्रहस्तु--प्रतिस्थितमक्षं प्रत्यक्षमिति प्रादिसमासोऽयं ( मध्यमपदलोपी समास इति यावत्

---

"ಬ್ರಾಹ್ಮಣರು ಪ್ರಮಾಣರ" ಎಂಬ ಪ್ರಯೋಗವು ಔಪಚಾರಿಕವೆಂದು ತಿಳಿಯಬೇಕು.

೧] ಉಪಾದಾನ ಕಾರಣವು – ವಿಕಾರ ಹೊಂದಿ ಯಾವುದು ಕಾರಣವೋ ಅದು ಉಪಾದಾನ ಕಾರಣವು ಉದಾಹರಣೆಗೆ ಪ್ರಕೃತಿಯು ಜಗತ್ತಿಗೆ, ಮಣ್ಣು ಘಟಕ್ಕೆ ಉಪಾದಾನ ಕಾರಣಗಳು. [ಪ್ರಕೃತಿಯೇ ಜಗತ್ತಾಗಿ ಪರಿಣಮಿಸುವದು. ಹಾಗೂ ಮಣ್ಣೇ ಘಟವಾಗಿ ಪರಿಣಮಿಸುವದು].

೨] ಪರಿಣಾಮ ಹೊಂದದೇ ಯಾವುದು ಕಾರಣವೋ ಅದು ನಿಮಿತ್ತ ಕಾರಣವು ಉದಾಹರಣೆಗೆ–ಅದೃಷ್ಟ ಮೊದಲಾದವು ಜಗತ್ತಿಗೆ, ಹಾಗೂ ದಂಡ ಮೊದಲಾದವು ಘಟಕ್ಕೆ ನಿಮಿತ್ತ ಕಾರಣಗಳು.

ಯಾವುದು ಪ್ರಾಗಭಾವಕ್ಕೆ ಪ್ರತಿಯಾಗಿ ಆಗಿದೆಯೋ ಅದು ಕಾರ್ಯವು.

[ಯಾವುದು ಅಭಾವವು ಕಾರ್ಯದ ಉತ್ಪತ್ತಿ ಪೂರ್ವದಲ್ಲಿ ಇದೆಯೋ ಆ ಅಭಾವಕ್ಕೆ ಯಾವುದು ಪ್ರತಿಯೋಗಿಯೋ ಅದೇ ಕಾರ್ಯವೆಂದು ತಿಳಿಯಬೇಕು.

೩] ಅನುಪ್ರಮಾಣವು ಮೂರು ಪ್ರಕಾರವಾಗಿದೆ. ೧] ಪ್ರತ್ಯಕ್ಷ ೨] ಅನುಮಾನ ೩] ಆಗಮವು. ೧) ಪ್ರತ್ಯಕ್ಷವೆಂದರೆ ನಿರ್ದೋಷವಾದ ಅರ್ಥ ಹಾಗೂ ಇಂದ್ರಿಯ ಸನ್ನಿಕರ್ಷವು. ನಿರ್ದೋಷಗಳಾದ ಅರ್ಥ ಹಾಗೂ ಇಂದ್ರಿಯಗಳು, ಅವುಗಳ ಸನ್ನಿಕರ್ಷವೆಂಬ ವಿಗ್ರಹವು. ಅರ್ಥ ಶಬ್ದದಿಂದ ಇಂದ್ರಿಯಗಳ ವಿಷಯಗಳನ್ನು ಗ್ರಹಿಸಬೇಕು. ಪ್ರತಿಷ್ಠಿತವಾದ ಅಕ್ಷವು ಪ್ರತ್ಯಕ್ಷವು ಎಂದು ಪ್ರಾದಿ ಸಮಾಸ ಮಾಡಬೇಕು

अत्र दलकृत्यं तु सन्निकर्षः प्रत्यक्षमित्युक्ते, घटपटसन्निकर्षेऽतिव्याप्तिः, अत इंद्रियसन्निकर्ष इति वक्तव्यं, तत्र-इंद्रियसन्निकर्षत्वाभावान्नातिव्याप्तिः, इन्द्रियसन्निकर्षः प्रत्यक्षमित्युक्ते चक्षुराकाशसन्निकर्षेऽतिव्याप्तिः, अतः-अर्थसन्निकर्ष इति वक्तव्यं, अर्थशब्देन तत्तदिंद्रियविषया ग्राह्याः, तथा चात्र आकाशपदेन भूताकाशग्रहणे तस्यातींद्रियत्वेन, चक्षुःसन्निकर्षाभावान्नातिव्याप्तिः, अव्याकृताकाशग्रहणे चक्षुर्विषयत्वाभावान्नातिव्याप्तिः।

निर्दोषपदकृत्यं तु-- दुष्टार्थानामदुष्टेंद्रियैः, अदुष्टार्थानां दुष्टेंद्रियैर्वा सन्निकर्षं व्यावर्तयितुं उभयत्र, (अर्थे – इन्द्रिये च) क्रमेण निर्दोषत्वविशेषणम्।

२) निर्दोषार्थप्रमापकमनुमानं, यद्वा प्रमाणांतरानुसारेणैव निर्दोषार्थप्रमापकं अनुमानम्।

---

ಎಂದರೆ ಮಧ್ಯಮ ಪದ ಲೋಪ ಸಮಾಸ ಮಾಡಬೇಕು.

ದಲಕೃತ್ಯವು- ಸನ್ನಿಕರ್ಷವು ಪ್ರತ್ಯಕ್ಷವೆಂದಲ್ಲಿ, ಘಟಪಟ ಮೊದಲಾದವುಗಳಲ್ಲಿಯೂ ಸನ್ನಿಕರ್ಷವಿರುವದರಿಂದ. ಅವುಗಳ ಸನ್ನಿಕರ್ಷದಲ್ಲಿ ಅತಿವ್ಯಾಪ್ತಿ ಬರುವದು ಕಾರಣ ಇಂದ್ರಿಯ ಸನ್ನಿಕರ್ಷವೆನ್ನಬೇಕು ಘಟಪಟ ಮೊದಲಾದ ವಸ್ತುಗಳ ಸನ್ನಿಕರ್ಷದಲ್ಲಿ ಇಂದ್ರಿಯ ಸನ್ನಿಕರ್ಷವಿರಲಾರದು, ಅಲ್ಲಿ ಅತಿವ್ಯಾಪ್ತಿಯಿಲ್ಲ. ಇಂದ್ರಿಯ ಸನ್ನಿಕರ್ಷವು ಪ್ರತ್ಯಕ್ಷವು ಎಂದು ಲಕ್ಷಣ ಹೇಳಿದಲ್ಲಿ, ಚಕ್ಷುರಿಂದ್ರಿಯ ಆಕಾಶಸನ್ನಿಕರ್ಷದಲ್ಲಿ ಇಂದ್ರಿಯ ಸನ್ನಿಕರ್ಷವಿರುವ ಕಾರಣ, ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಇಂದ್ರಿಯ ಅರ್ಥಸನ್ನಿಕರ್ಷವು' ಪ್ರತ್ಯಕ್ಷವೆಂದು ಹೇಳಬೇಕು. 'ಅರ್ಥ' ಶಬ್ದದಿಂದ ಆ ಇಂದ್ರಿಯ ವಿಷಯಗಳನ್ನು ಗ್ರಹಣ ಮಾಡಬೇಕು. ಈಗ ಆಕಾಶ ಪದದಿಂದ ಭೂತಾಕಾಶವನ್ನು ಗ್ರಹಣ ಮಾಡಿದಲ್ಲಿ, ಭೂತಾಕಾಶವು ಅತೀಂದ್ರಿಯವಾಗಿದ್ದು ಚಕ್ಷುರಿಂದ್ರಿಯಕ್ಕೆ ಸನ್ನಿಕರ್ಷವಾಗಲಾರದ ಕಾರಣ, ಚಕ್ಷುರಿಂದ್ರಿಯ ಆಕಾಶ ಸನ್ನಿಕರ್ಷದಲ್ಲಿ ಅತಿವ್ಯಾಪ್ತಿ ಬರಲಾರದು. 'ಆಕಾಶ' ಶಬ್ದಕ್ಕೆ "ಅವ್ಯಾಕೃತಕಾಶ" ವೆಂದು ಅರ್ಥ ಗ್ರಹಿಸಿದಲ್ಲಿ ಅದಕ್ಕೆ ಚಕ್ಷುರಿಂದ್ರಿಯ ವಿಷಯತ್ವವೇ ಕೂಡುವದಿಲ್ಲವಾದ್ದರಿಂದ ಸುತರಾಂ ಅತಿವ್ಯಾಪ್ತಿಗೆ ಅವಕಾಶವಿಲ್ಲ.

೨] ಅನುಮಾನ ಲಕ್ಷಣವು-ನಿರ್ದೋಷವಾದ ಅರ್ಥದ ಜ್ಞಾನವನ್ನು ಹುಟ್ಟಿಸುವದು ಅನುಮಾನವು. ಅಥವಾ ಪ್ರಮಾಣಾಂತರವನ್ನನುಸರಿಸಿ ನಿರ್ದೋಷವಾದ ಅರ್ಥ ಜ್ಞಾನವನ್ನು ಹುಟ್ಟಿಸುವದು-ಅನುಮಾನವು.

३)स्वातन्त्र्येणाशेषार्थविषयक आगमः (बृहदारण्यभावबोधे)

अर्थनिष्टदोषास्तु—१) अतिदूरत्वं—मेर्वादौ २) अतिसान्निध्यं—चक्षुःपक्ष्मादौ ३) सौक्ष्म्यं-किंचिद्दूरस्थकेशादौ ४) व्यवहितत्वं-कुड्यादिव्यवहिते घटे ५) समानाभिघातः बलवत्सजातीयसंबंधः क्षीरनीरादौ ६) अनभिव्यक्तत्वं-स्वाभिव्यंजकराहित्यं-अंधकारस्थघटादौ ७) सादृश्यं-रजतादिना चाकचक्यादिसादृश्यं शुक्त्यादौ, इति विषयनिष्टदोषा वक्तव्याः।

नन्वेतेषां दोषत्वं, न ज्ञानाजनकत्वं, अतिदूरत्वादिदोषे, ज्ञानजनकत्वेऽपि सादृश्यादौ विपरीतज्ञानजनके तदभावादव्याप्तेः, नापि विपरीतज्ञानजनकत्वं, सादृश्यादौ सत्वेऽपि, अतिदूरत्वादौ तदभावादव्याप्तेरिति चेत्,

३] ಆಗಮದ ಲಕ್ಷಣವು–ಸ್ವತಂತ್ರವಾಗಿ ಇಂದ್ರಿಯ ಗೋಚರವಾದ ಹಾಗೂ ಅತೀಂದ್ರಿಯಗಳಾದ ಸಕಲ ಪದಾರ್ಥ ವಿಷಯಕ ಜ್ಞಾನವನ್ನು ಹುಟ್ಟಿಸುವದು ಆಗಮವು–(ಹೀಗೆ ಬೃಹದಾರಣ್ಯ ಭಾವ ಬೋಧದಲ್ಲಿ ಹೇಳಿದೆ)

ಅರ್ಥನಿಷ್ಟ ದೋಷಗಳು– i) ಅತಿ ದೂರವಿರುವಿಕೆ–ಉದಾಹರಣೆಗೆ, ದೂರದ ಮೇರು ಪರ್ವತ ii) ಅತಿ ಸನ್ನಿಹಿತವಿರುವಿಕೆ–ಉದಾಹರಣೆಗೆ ಕಣ್ಣಿನ ರೆಪ್ಪೆಗಳು. iii) ಸೂಕ್ಷ್ಮತೆ-ಉದಾಹರಣೆಗೆ, ಕಿಂಚಿತ್ ದೂರದಲ್ಲಿರುವ ಕೂದಲಿನ ತುದಿ. iv)ವ್ಯವಹಿತತೆ–ಉದಾಹರಣೆಗೆ ಗೋಡೆಗೆ ಆಚೆಗಿರುವ (ಮರೆಯಾದ) ಪದಾರ್ಥ. v) ಸಮಾನಾಭಿಘಾತತೆ, ಎಂದರೆ ನಿಬಿಡವಾದ ಸಜಾತೀಯ ಪದಾರ್ಥಗಳ ಸಂಬಂಧ. ಉದಾಹರಣೆಗೆ–ಹಾಲು ನೀರುಗಳ ಬೆರಕೆ. iv) ಅನಭಿವ್ಯಕ್ತಿ-ಉದಾಹರಣೆಗೆ ಕಗ್ಗತ್ತಲೆಯಲ್ಲಿರುವ ಕೊಡ vii) ಸಾದೃಶ್ಯ-ಉದಾಹರಣೆಗೆ ಸಿಂಪಿನಲ್ಲಿ ಬೆಳ್ಳಿಯ ಚಾಕ ಚಕ್ಯರೂಪ ಸಾದೃಶ್ಯವು. ಈ ಪ್ರಕಾರ ವಿಷಯನಿಷ್ಟ ದೋಷಗಳೆಂದು ತಿಳಿಯಬೇಕು.

ಶಂಕಾ– ದೋಷವೆಂದರೆ ಜ್ಞಾನವನ್ನು ಹುಟ್ಟಿಸದೇ ಇರುವದು "ಎಂಬುದು ಸರಿಯಲ್ಲ" ಅತಿ ದೂರವಿರುವ ದೋಷವಿದ್ದಾಗ ಪದಾರ್ಥವು ಜ್ಞಾನವನ್ನು ಹುಟ್ಟಿಸುವದೇ ಇಲ್ಲ, ಜ್ಞಾನವನ್ನು ಹುಟ್ಟಿಸದಿರುವದೇ ದೋಷವೆಂದು ಹೇಳಲು ಬರುವದಿಲ್ಲ. ಸಾದೃಶ್ಯಾದಿ ದೋಷಗಳು ವಿಪರೀತ ಜ್ಞಾನವನ್ನು ಹುಟ್ಟಿಸುತ್ತದೆ. ಅವುಗಳಲ್ಲಿ ಜ್ಞಾನ ಜನಕತ್ವ ಲಕ್ಷಣ ಬರಲಾರದೇ ಅವ್ಯಾಪ್ತಿ ದೋಷ ಬರುತ್ತದೆ. ಅದರಂತೆ, ದೋಷವೆಂದರೆ ವಿಪರೀತ ಜ್ಞಾನವನ್ನು ಹುಟ್ಟಿಸುವದು ಎಂದರೆ, ಅತಿ ದೂರವಿರುವ ದೋಷದಿಂದ

**अयमत्र विचारः**- दोषत्वं नाम प्रमाप्रतिबंधकत्वमेव, तत्प्रतिबंधकत्वं द्वेधा-तदजनकत्वेन, तद्विपरीतकार्यजनकत्वेन च, तथा च अतिदूरत्वादौ ज्ञानाजनकत्वेन प्रमाप्रतिबन्धकत्वं, सादृश्ये प्रमाप्रतिबंधकत्वं च तद्विपरीतकार्यजनकत्वेन वर्तत इति नाव्याप्तिः ।

तथापि सादृश्यविषये, उदाहरणं रजतादिना चाकचक्यरूपसादृश्यं शुक्त्यादावस्तीति पूर्वमुक्तं, तदेव भ्रमहेतुरिति वक्तव्यं नेदमुदाहरणं संभवति कथमिति चेत्, निर्दोषार्थेन्द्रियसन्निकर्षः प्रत्यक्षमित्युक्तं, तल्लक्षणस्य इयं शुक्तिरिति ज्ञानहेतुसन्निकर्षेऽव्याप्तिः, शुक्तौ चाकचक्यरूपसादृश्यस्य सदातनत्वेन, तत्र निर्दोषार्थेन्द्रियसन्निकर्षत्वाभावात्,

---

ಜ್ಞಾನವೇ ಹುಟ್ಟದಿರುವಾಗ ವಿಪರೀತ ಜ್ಞಾನ ಹುಟ್ಟಲು ಅವಕಾಶವಿಲ್ಲ. ಅಲ್ಲಿ ವಿಪರೀತ ಜ್ಞಾನ ಜನಕತ್ವವು ಬರಲಾರದು. ಅತಿ ದೂರ ದೋಷದಲ್ಲಿ ಅವ್ಯಾಪ್ತಿಯೂ ಬರುವದು.

ಹಾಗಾದರೆ ದೋಷತ್ವವೆಂದರೆ ಪ್ರಮಾ ಪ್ರತಿಬಂಧಕತ್ವವು [ಪ್ರಮಾಕ್ಕೆ ಪ್ರತಿಬಂಧಕ ಮಾಡುವ ದೆಂದರ್ಥವು] ಈ ಪ್ರಮಾ ಪ್ರತಿಬಂಧಕತ್ವವು ಎರಡು ಪ್ರಕಾರವಾಗಿದೆ. ಅ] ಅತಿ ದೂರ ದೋಷದಲ್ಲಿ ಜ್ಞಾನವನ್ನೇ ಹುಟ್ಟಿಸದೇ ಪ್ರಮಾಕ್ಕೆ ಪ್ರತಿಬಂಧಕವಾಗುವದು. ಆ] ಸಾದೃಶ್ಯ ದೋಷದಲ್ಲಿ ವಿಪರೀತ ಜ್ಞಾನವನ್ನು ಹುಟ್ಟಿಸಿ ಪ್ರಮಾಕ್ಕೆ ಪ್ರತಿಬಂಧಕವಾಗುವದು. ಅತಿ ದೂರ ದೋಷದಿಂದಲೂ ಹಾಗೂ ಸಾದೃಶ್ಯ ದೋಷದಿಂದಲೂ ಪ್ರಮಾಕ್ಕೆ ಪ್ರತಿಬಂಧಕವಾಗುವದರಿಂದ ಎರಡರಲ್ಲಿಯೂ ಮೇಲಿನ ಲಕ್ಷಣ ಬಂದು ಅವ್ಯಾಪ್ತಿ ಬರಲಾರದು.

ಆದರೂ ಬೆಳ್ಳಿಯಲ್ಲಿಯ ಚಾಕಚಕ್ಯರೂಪ ಸಾದೃಶ್ಯವು ಶುಕ್ತಿಯಲ್ಲಿ ಉಂಟೆಂದು, ಸಾದೃಶ್ಯ ರೂಪ ದೋಷಕ್ಕೆ 'ಶುಕ್ತಿರಜತ' ದ ಉದಾಹರಣೆಯನ್ನು ಈಗಾಗಲೇ ಕೊಟ್ಟಿದ್ದಾಗಿದೆ. ಈ ಉದಾಹರಣೆ ಸಮಂಜಸವಲ್ಲ. ಹೇಗೆಂರೆ- "ನಿರ್ದೋಷ ಅರ್ಥ ಇಂದ್ರಿಯ ಸನ್ನಿಕರ್ಷವೇ · ಪ್ರತ್ಯಕ್ಷ" ವೆಂದ ಮೇಲೆ, "ಇದು ಶುಕ್ತಿಯು" ಎಂಬ ಜ್ಞಾನಕ್ಕೆ ಕಾರಣವಾದ ಸನ್ನಿಕರ್ಷದಲ್ಲಿ ಈ ಲಕ್ಷಣ ಬರಲಾರದ ಕಾರಣ ಪ್ರತ್ಯಕ್ಷ ಲಕ್ಷಣವು ಅವ್ಯಾಪ್ತವಾಗುವದು. ಶುಕ್ತಿಯಲ್ಲಿ ಚಾಕಚಕ್ಯರೂಪ ದೋಷವು ಯಾವಾಗಲೂ ಇದ್ದೇ ಇದೆ. ಹೀಗೆ ಸರ್ವದಾ ದೋಷದಿಂದ ಕೂಡಿದ ಶುಕ್ತಿಯ ಸನ್ನಿಕರ್ಷವು-ನಿರ್ದೋಷವಾದ ಅರ್ಥೇಂದ್ರಿಯ ಸನ್ನಿಕರ್ಷ, ಹೇಗಾದೀತು ? ಲಕ್ಷಣವು ಅವ್ಯಾಪ್ತವಾಗುವದು

तथा च चाकचक्यरूपसादृश्यस्य दोषत्वांगीकारे, इयंशुक्तिरिति ज्ञानहेतुसन्निकर्षे-उक्तप्रत्यक्षलक्षणस्याव्याप्तिः ।

अतः **कथं** सादृश्यस्य दोषत्वविषये, इदमुदाहरणं संभवतीति चेदत्र **अभिनवामृते**, एवं समाहितं । न ब्रूमो वयं सादृयं व्यवधानमिव स्वतंत्रदोष इति, येनोक्तदोषः स्यात्, किं तु सम्यक सन्निकर्षाभावेनाधिष्टानयाथात्म्यज्ञानाभावे आरोपोपयोगिस्मृतिहेतुत्वाद्दोष इति, तथा च सम्यक्सन्निकर्षाभावविशिष्टसादृश्यं दोषः, सन्निकर्षे सम्यक्त्वं च आरोपोपयोगिस्मृत्यहेतुत्वम्, प्रकृते, इयं शुक्तिरिति ज्ञानहेतुसन्निकर्षे निर्दोषार्थेन्द्रियसन्निकर्षत्वस्यैव सत्त्वान्नाव्याप्तिदोषावसर इति, भवत्येव पूर्वोक्तोदाहरणं सादृश्यविषय इति ध्येयम् ।

**॥ इति अनुप्रमाणविभागपूर्वकार्थनिष्टदोषविचारनिरूपणम् ॥**

---

ಕಾರಣ ಸಾದೃಶ್ಯ ದೋಷವನ್ನು ಹೇಳುವಲ್ಲಿ 'ಶುಕ್ತಿ ರಜತದ" ಉದಾಹರಣೆ ಹೇಗೆ ಕೂಡುವದೆಂದುಶಂಕೆ ಬಂದಲ್ಲಿ ಅಭಿನವಾಮೃತದಲ್ಲಿ ಇದರ ಸಮಾಧಾನವನ್ನು ಹೀಗೆ ಹೇಳಲಾಗಿದೆ. ಸಾದೃಶ್ಯವು ವ್ಯವಧಾನದಂತೆ [ಗೋಡೆಯ ಮರೆಯಂತೆ] ಸ್ವತಂತ್ರವಾದ ದೋಷವೆಂದು ಹೇಳಿದ್ದರೆ, ಪ್ರತ್ಯಕ್ಷದ ಮೇಲಿನ ಲಕ್ಷಣಕ್ಕೆ, ಅವ್ಯಾಪ್ತಿ ದೋಷವು ಬರಬಹುದಿತ್ತು. ಆದರೆ ಸಾದೃಶ್ಯವು ಸ್ವತಂತ್ರವಾದ ದೋಷವಲ್ಲ; ಶುಕ್ತಿಗೆ ಚಕ್ಷುರಿಂದ್ರಿಯದಿಂದ ಸಮೀಚೀನ ಸನ್ನಿಕರ್ಷವಾಗದೇ ಅಧಿಷ್ಠಾನದ [ಶುಕ್ತಿಯ] ಯಥಾರ್ಥ ಜ್ಞಾನವಾಗದೇ ಇದ್ದಾಗ ಬೆಳ್ಳಿಯ ಸ್ಮೃತಿಗೆ ಕಾರಣವಾಗಿ ದೋಷವಾಗುತ್ತದೆ.

[ವಿವರಣೆ–ಚಕ್ಷುರಿಂದ್ರಿಯದಿಂದ ಶುಕ್ತಿಗೆ ಸರಿಯಾದ ಸಂಬಂಧವಾಗದೇ, ಬಿಸಿಲಿನಲ್ಲಿ, ಹೊಳೆಯುವದರಿಂದ, ಈ ಹೊಳಪು ಬೆಳ್ಳಿಯ ಸ್ಮರಣೆಯನ್ನು ಉಂಟು ಕೊಟ್ಟು ದೋಷವಾಗುವದಲ್ಲದೇ ಸಾಕ್ಷಾತ್ತಾಗಿ ದೋಷವಾಗಲಾರದು] ಅಂತೂ ಸಮೀಚೀನ ಸನ್ನಿಕರ್ಷದ ಅಭಾವದಿಂದ ಕೂಡಿದ ಸಾದೃಶ್ಯವು ದೋಷವೆಂದಾಯಿತು. ಸನ್ನಿಕರ್ಷದಲ್ಲಿ "ಸಮ್ಯಕ್ತ್ವ" [ಸಮೀಚೀನತೆ] ಯೆಂದರೆ, ಬೆಳ್ಳಿಯ ಆರೋಪಕ್ಕೆ ಕಾರಣವಾದ ಸ್ಮೃತಿಯನ್ನು ಹುಟ್ಟಿಸದಿರುವದೆಂದರ್ಥವು. ಪ್ರಕೃತದಲ್ಲಿ "ಇದು ಶುಕ್ತಿಯು" ಎಂಬ ಜ್ಞಾನಕ್ಕೆ ಕಾರಣವಾದ ಸನ್ನಿಕರ್ಷದಲ್ಲಿ, ನಿರ್ದೋಷ ಇಂದ್ರಿಯ ಅರ್ಥಗಳ ಸನ್ನಿಕರ್ಷವೇ ಇರುವದರಿಂದ ಅವ್ಯಾಪ್ತಿ ದೋಷವು ಬರಲಾರದು. ಸಾದೃಶ್ಯಕ್ಕೆ ಶುಕ್ತಿ ರಜತದ ದೃಷ್ಟಾಂತವನ್ನು [illegible]

४ ) इन्द्रियशब्देन ज्ञानेन्द्रियं गृह्यते, तद्द्विविधं १ ) प्रमातृस्वरूपं २ ) प्राकृतं चं, प्रकृतिपरिणामाहंकारपंचभूतांशैरुपचितमिति यावत् । तत्र स्वरूपेन्द्रियं साक्षीत्युच्यते, स्वरूपेन्द्रियविषयाः—

आत्मस्वरूपं, तद्धर्माः सुखादयः, भावरूपाज्ञानं ( अविद्या ) मनः, तद्वृत्तयो बाह्येंद्रियज्ञानसुखाद्याः, कालः, दिक् ( आकाशः ) सुखाद्यभावप्रामाण्यादयः ।

साक्षिणो यथार्थज्ञानसाधनत्वेन अनुप्रमाणांतर्भावः कथमिति चेदुच्यते—साक्षिणः आत्मस्वरूपज्ञानव्यक्तिहेतुतया यथार्थज्ञानसाधनत्वेनानुप्रमाणांतर्भेदभिन्नप्रत्यक्षांतर्भावो युक्तः ।

श्रीनिवासतीर्थीये, अत्रेदं बोध्यं—स्वरूपेंद्रियमपि घ्राणादिभेदेन षड्विधं सत्

---

೩.] ಇಂದ್ರಿಯಗಳ ದ್ವೈವಿಧ್ಯ ಹಾಗೂ ಸಾಕ್ಷೀಂದ್ರಿಗಳ ನಿರೂಪಣೆಯು.

ಇಂದ್ರಿಯ ಶಬ್ದದಿಂದ ಜ್ಞಾನೇಂದ್ರಿಯವನ್ನು ತೆಗೆದುಕೊಳ್ಳಬೇಕು. ಈ ಜ್ಞಾನೇಂದ್ರಿಯವು ಎರಡು ಪ್ರಕಾರವಾಗಿದೆ. ೧] ಪ್ರಮಾತೃವಿನ ಸ್ವರೂಪಭೂತವಾದುದು ಹಾಗೂ ಪ್ರಾಕೃತವು, ಎಂದರೆ ಪ್ರಕೃತಿ ಪರಿಣಾಮವಾದ ಅಹಂಕಾರ ತತ್ವದಿಂದ ಹುಟ್ಟಿದ ಪಂಚ ಮಹಾ ಭೂತಗಳ ಅಂಶದಿಂದ ಅಭಿವೃದ್ಧಿ ಹೊಂದಿದವೆಂಬ ಅರ್ಥವು. ಈ ಎರಡರ ಮಧ್ಯದಲ್ಲಿರುವ "ಸ್ವರೂಪೇಂದ್ರಿಯವೇ" ಸಾಕ್ಷಿ ಎಂದು ಕರೆಯಲ್ಪಡುತ್ತದೆ. ಸಾಕ್ಷಿಗೆ ಕೆಳಗಿನ ಒಂಭತ್ತು ಪದಾರ್ಥಗಳು ವಿಷಯಗಳಾಗಿವೆ.

೧] ಆತ್ಮಸ್ವರೂಪವು ೨] ಆತ್ಮನ ಧರ್ಮಗಳಾದ ಸುಖಾದಿಗಳು ೩] ಅವಿದ್ಯ ಅಥವಾ ಭಾವರೂಪ ಅಜ್ಞಾನವು ೪] ಮನಸ್ಸು ವೃತ್ತಿ ಮನೋವೃತ್ತಿಗಳು ೫] ಬಾಹ್ಯೇಂದ್ರಿಯ ಜ್ಞಾನ ವಿಷಯಗಳಾದ ಸುಖಾದಿಗಳು ೬] ಕಾಲ ೭] ದಿಕ್ಕು ೮] ಸುಖಾದಿಗಳ ಅಭಾವ ೯] ಪ್ರಾಮಾಣ್ಯ ಅಪ್ರಾಮಾಣ್ಯಗಳು.

ಸಾಕ್ಷಿಯು ಯಥಾರ್ಥಜ್ಞಾನ ಸಾಧನವಾಗಿ, ಅನುಪ್ರಮಾಣದಲ್ಲಿ ಹೇಗೆ ಅಂತರ್ಭಾವವಾಗುವದೆಂದರೆ— ಸಾಕ್ಷಿಯು ಸ್ವರೂಪ ಜ್ಞಾನದ ಅಭಿವ್ಯಕ್ತಿಗೆ ಕಾರಣವಾಗುವದರಿಂದ, ಯಥಾರ್ಥಜ್ಞಾನ ಸಾಧನವಾಗಿ, ಅನುಪ್ರಮಾಣಗಳಲ್ಲೊಂದಾದ ಪ್ರತ್ಯಕ್ಷದಲ್ಲಿ ಅಂತರ್ಭಾವವಾಗುತ್ತದೆ.

ಸಾಕ್ಷೀಭೂತವಾದ ಸ್ವರೂಪೇಂದ್ರಿಯದ ವಿಷಯದಲ್ಲಿ ಶ್ರೀನಿವಾಸ ತೀರ್ಥರ ಪ್ರಮಾಣ

लिंगदेहस्थसूक्ष्मषडिंद्रियैः स्थूलशरीरस्थस्थूलेंद्रियैश्च मिश्रं तिष्ठति, क्षीरनिरवत्, तत्र स्पर्शेंद्रियं स्थूलशरीरे सर्वत्रव्याप्तं, चक्षुरादिचतुष्टयं स्वस्वगोलकवृत्ति, मनस्तु सर्वेन्द्रियाधिष्ठातृ सर्वशरीरसंचारि प्रायो हृत्कंठवृत्ति ।

तन्मनः पंचविधं--चित्तं, चेतना, अहंकारः, बुद्धिरन्तःकरणमिति । तत्र, केनचिद्रूपेण बाह्येंद्रियद्वारा घटादिबाह्यार्थज्ञानं जनयति, रूपांतरेण च तद्ज्ञानस्य तज्जन्येच्छाप्रयत्नसुखदुःखसंस्कारोपादानं भवति । तत्र साक्ष्याख्यमनोरूपेंद्रियाभिव्यक्तस्वरूपज्ञानं, बाह्यमनोरूपेंद्रियतत्परिणतज्ञानादिभिः सह विषयीकरोति,

---

ಪದ್ಧತಿಯ ಟಿಪ್ಪಣಿಯಲ್ಲಿ 'ಈ ವಿಷಯದಲ್ಲಿ ಹೀಗೆ ತಿಳಿಯಬೇಕು' ಎಂದು ಹೇಳಲಾಗಿದೆ. ಸ್ವರೂಪೇಂದ್ರಿಯವು ಘ್ರಾಣೇಂದ್ರಿಯ ಮೊದಲಾದ ಭೇದದಿಂದ ಆರು ಪ್ರಕಾರವಾಗಿದೆ ಈ ಆರು ಪ್ರಕಾರಗಳು ಲಿಂಗದೇಹದಲ್ಲಿರುವ ಸೂಕ್ಷ್ಮವಾದ ಆರು ಇಂದ್ರಿಯಗಳಿಂದಲೂ, ಸ್ಥೂಲ ಶರೀರದಲ್ಲಿರುವ ಇಂದ್ರಿಯಗಳಿಂದಲೂ, ಹಾಲು-ನೀರಿನಂತೆ ಪರಸ್ಪರ ಮಿಶ್ರವಾಗಿರುತ್ತವೆ. ಇವುಗಳಲ್ಲಿ ಸ್ವರೂಪ ಸ್ಪರ್ಶೇಂದ್ರಿಯವು ಮಾತ್ರ ಸ್ಥೂಲ ಶರೀರದಲ್ಲಿ ಸರ್ವತ್ರ ವ್ಯಾಪ್ತವಾಗಿದ್ದು, ಚಕ್ಷು, ಶ್ರೋತ್ರ, ಘ್ರಾಣ ಹಾಗೂ ರಸನ, ಈ ನಾಲ್ಕು ಇಂದ್ರಿಯಗಳು ತಮ್ಮ ತಮ್ಮ ಗೋಲಕಗಳಲ್ಲಿರುತ್ತವೆ. ಮನಸ್ಸು ಸರ್ವೇಂದ್ರಿಯಗಳಿಗೆ ಆಶ್ರಯವಾಗಿ ಶರೀರದಲ್ಲೆಲ್ಲ ಸಂಚಾರ ಮಾಡುತ್ತಿದ್ದು, ಪ್ರಾಯಶಃ ಹೃದಯ ಮತ್ತು ಕಂಠ ಪ್ರದೇಶದಲ್ಲಿರುತ್ತಿದೆ.

**ಮನಸ್ಸಿನ ಪ್ರಭೇಧಗಳು**- ಮನಸ್ಸು ಐದು ಪ್ರಕಾರವಾಗಿದೆ- ೧] ಚಿತ್ತ [ಸ್ಮರಣ] ೨] ಚೇತನಾ [ಬಹು ವಿಷಯಕ ಸ್ಮರಣ] ೩] ಅಹಂಕಾರ, ೪] ಬುದ್ಧಿ [ನಿಶ್ಚಯಾತ್ಮಕ ಜ್ಞಾನ ಹಾಗೂ ೫] ಅಂತಃಕರಣವು, ಈ ಮನಸ್ಸು ಒಂದು ರೂಪದಿಂದ ಬಾಹ್ಯೇಂದ್ರಿಯಗಳ ದ್ವಾರಾ ಘಟ ಮೊದಲಾದ ಹೊರಗಿನ ಪದಾರ್ಥಗಳ [ರೂಪ, ರಸ, ಗಂಧಾದಿಗಳ] ಜ್ಞಾನವನ್ನು ಹುಟ್ಟಿಸುತ್ತದೆ ಮತ್ತು ಅದೇ ಮನಸ್ಸು ರೂಪಾಂತರದಿಂದ ಆ, ಜ್ಞಾನಕ್ಕೆ ಹಾಗೂ ಆ ಆ, ಜ್ಞಾನದಿಂದ ಹುಟ್ಟುವ ಇಚ್ಛಾ, ಪ್ರಯತ್ನ, ಸುಖ, ದುಃಖ ಸಂಸ್ಕಾರಗಳಿಗೆ ಉಪಾದಾನ ಕಾರಣವೂ ಆಗುತ್ತದೆ. ಇದರಲ್ಲಿ ಸಾಕ್ಷೀಭೂತವಾದ ಮನೋರೂಪ ಇಂದ್ರಿಯದಿಂದ ಅಭಿವ್ಯಕ್ತವಾದ ಸ್ವರೂಪ ಜ್ಞಾನವು ಬಾಹ್ಯ ಮನೋರೂಪ ಇಂದ್ರಿಯವನ್ನೂ, ಅದರಿಂದ ಪರಿಣಾಮ ಹೊಂದಿದ ಜ್ಞಾನ, ಇಚ್ಛಾ, ಸುಖ, ದುಃಖಾದಿ-

तथा, आत्मकालाकाशाविद्याप्रकृत्यादिविषयीकार्यपि भवति । तदुक्तं बृहद्भाष्ये तत्रैव द्रष्टव्यम् ।

**इति इंद्रियद्वैविध्यकथनपूर्वकसाक्षींद्रियस्वरूपनिरूपणम् ।**

५ ) प्राकृतेंद्रियं षड्विधं--**घ्राण**, रसन, चक्षुः, त्वक्, **श्रो**त्र, मनो, भेदात् । काचकामलादयस्तेषां दोषाः, इंद्रियनिष्ठसमीचीनज्ञानानुकूलशक्तिविघटका इत्यर्थः ।

इंद्रियाणां विषयास्तु--**घ्राण**स्य, गंधस्तद्विशेषाश्च, रसनस्य, रसस्तद्विशेषाश्च, चक्षुस्त्वचोस्तु महान्ति रूपवंति द्रव्याणि, केचिद् गुणाः, कर्माणि, जातयश्च, वायुस्पर्शोऽपि त्वचो विषयः, वायुस्तु अप्रत्यक्षः, अनुमानगमचः, एतत्प्रमेयं **आदर्शे** स्पष्टं तत्रैव द्रष्टव्यं,

---

ಗಳನ್ನೂ ವಿಷಯೀಕರಿಸುತ್ತದೆ. ಅದೇ ರೀತಿ ಸ್ವರೂಪ ಭೂತ ಮನೋರೂಪ ಇಂದ್ರಿಯವು ಆತ್ಮ, ಕಾಲ, ಆಕಾಶ, ಅವಿದ್ಯಾ, ಪ್ರಕೃತಿ ಮೊದಲಾದವುಗಳನ್ನೂ ವಿಷಯೀಕರಿಸುತ್ತಿದೆ. ಈ ವಿಷಯುವನ್ನು ಬೃಹದಾರಣ್ಯ ಭಾಷ್ಯದಲ್ಲಿ ಹೇಳಲಾಗಿದ್ದು, ಅಲ್ಲಿ ನೋಡಬಹುದೆಂದು ಶ್ರೀನಿವಾಸತೀರ್ಥರೇ ಸೂಚಿಸಿದ್ದಾರೆ.

**೫] ಪ್ರಾಕೃತ ಇಂದ್ರಿಯುಗಳ ಪ್ರಭೇದಗಳು ಹಾಗೂ ಅವುಗಳ ವಿಷಯುಗಳು.**

ಪ್ರಕೃತಿ ನಿರ್ಮಿತವಾದ [ಪ್ರಾಕೃತ] ಇಂದ್ರಿಯುಗಳು ಆರು- ೧] ಘ್ರಾಣ ೨] ರಸನ, ೩] ಚಕ್ಷು, ೪] ತ್ವಕ್, ೫] ಶ್ರೋತ್ರ, ೬) ಮನಸ್ಸು.

ಅ) ಪ್ರಾಕೃತೇಂದ್ರಿಯ ದೋಷಗಳು- ಕಣ್ಣಲ್ಲಿ ಹೂ ಬೀಳುವದು, ಕಾಮಣಿ ಮೊದಲಾದವು ಇಂದ್ರಿಯ ದೋಷಗಳಾಗಿದ್ದು, ಇಂದ್ರಿಯುಗಳಲ್ಲಿಯ ಯಥಾರ್ಥ ಜ್ಞಾನ ಹುಟ್ಟಿಸುವ ಶಕ್ತಿಯನ್ನು ಹ್ರಾಸ ಮಾಡುವದು.

ಆ] ಪ್ರಾಕೃತೇಂದ್ರಿಯ ವಿಷಯುಗಳು-೧) ಘ್ರಾಣೇಂದ್ರಿಯಕ್ಕೆ ಗಂಧ ಹಾಗೂ ಗಂಧದ ವಿಶೇಷಗಳು- ೨) ರಸನೇಂದ್ರಿಯಕ್ಕೆರಸ ಹಾಗೂ ಅದರ ವಿಶೇಷಗಳು ೩) ಚಕ್ಷುರೇಂದ್ರಿಯ ಹಾಗೂ ತ್ವಗಿಂದ್ರಿಯುಗಳಿಗೆ ಮಹತ್ವ ಧರ್ಮವುಳ್ಳ ಹಾಗೂ ರೂಪವುಳ್ಳ ದ್ರವ್ಯಗಳು ಕೆಲವೊಂದು ಗುಣಗಳು (ಪರಿಮಾಣ ಸೂಕ್ಷ್ಮತೆ ಇತ್ಯಾದಿ), ಕರ್ಮಗಳು (ಚಲನಾದಿಗಳು] ಜಾತಿಗಳು [ಗೋತ್ವ, ಪಶುತ್ವಾದಿಗಳು] ವಿಷಯುಗಳಾಗಿವೆ. ೪] ತ್ವಗಿಂದ್ರಿಯಕ್ಕೆ ಮಾತ್ರ ವಾಯುಸ್ಪರ್ಶವು ವಿಷಯುವಾಗಿದೆ. ವಾಯುವು ಪ್ರತ್ಯಕ್ಷವಲ್ಲ, ಅನುಮಾನದಿಂದ ತಿಳಿಯಲ್ಪಡುವವನು ವಾಯುವಿನ ವಿಚಾರವು "ಆದರ್ಶ" ವೆಂಬ ಟಿಪ್ಪಣಿಯಲ್ಲಿ ಸ್ಪಷ್ಟವಿದ್ದು, ಅಲ್ಲಿ ನೋಡಬೇಕು.

श्रोत्रस्य शब्दः, मनसस्तु बाह्येंद्रियाधिष्टानेनैव ते र्वे विषयाः, तथा च मनइंद्रियलक्षणं तु--सर्वबाह्येंद्रियविष-विषयकेंद्रियत्वं ज्ञेयं, मनोदोषास्तु रागादयः (स्मृतिप्रयोजक-शक्तिविघटकाः)।

॥ **इति प्राकृतेंद्रियषड्विधत्वकथनपूर्वकं तद्विषयनिरूपणम्** ॥

६ ) मनइंद्रियलक्षणांतरमुच्यते--स्वातंत्र्येण स्मरणसाधनं (स्वातंत्र्यणेत्यस्य इंद्रियाधिष्ठानेनेत्यर्थः) मनः।

मनस्तु--तत्तदिंद्रियाधिष्ठातृत्वेन तत्तदिंद्रियविषयकज्ञानं, स्वातंत्र्येण स्मरणं च जनयति, तदुक्तं **प्रमाणलक्षणटीकायां** "द्विविधं ज्ञानं मनो जनयतीत्यादिना" ।

१ ) मनइंद्रियजन्या स्मृतिरित्युक्तं, तत्र प्रमाणं तु--"बालं मकुंदं मनसा स्मरामी ,, त्यनुभवस्य, तामेव मनसा स्मरामीति च लोकव्यवहारस्य स्थितिरेवेति ज्ञेयम्।

---

೫] ಶ್ರೋತ್ರೇಂದ್ರಿಯಕ್ಕೆ ಶಬ್ದವು ವಿಷಯವು- ಮನಸ್ಸು ಬಾಹ್ಯೇಂದ್ರಿಯಗಳನ್ನಾಶ್ರಯಿಸಿ ಈ ಎಲ್ಲ ವಿಷಯಗಳನ್ನು ಗ್ರಹಿಸುತ್ತದೆ.

೬] ಮನೋರೂಪ ಇಂದ್ರಿಯದ ಲಕ್ಷಣವು- ಬಾಹ್ಯ ಇಂದ್ರಿಯಗಳ ಎಲ್ಲ ವಿಷಯಗಳನ್ನು ವಿಷಯೀಕರಿಸುವ ಇಂದ್ರಿಯವು ಮನಸ್ಸು, ರಾಗಾದಿಗಳು ಮನಸ್ಸಿನ ದೋಷಗಳು ಇವು ಸ್ಮೃತಿಗೆ ಕಾರಣವಾದ ಶಕ್ತಿಯನ್ನು ಹ್ರಾಸ ಮಾಡುತ್ತವೆ.

**ಅನುಪ್ರಮಾಣ ಪ್ರಸಂಗದಲ್ಲಿ ಸ್ಮೃತಿಯ ವಿಸ್ತಾರವಾದ ನಿರೂಪಣೆಯು-**

'ಮನಸ್ಸೆಂಬ ಇಂದ್ರಿಯದ ಇನ್ನೊಂದು ಲಕ್ಷಣ ಹೀಗಿದೆ- ಇತರ ಇಂದ್ರಿಯಗಳ ಅನುಸರಣೆ ಇಲ್ಲದೇ ಸ್ವತಂತ್ರವಾಗಿ ಸ್ಮರಣಕ್ಕೆ ಸಾಧನವಾದ ಇಂದ್ರಿಯವು ಮನಸ್ಸು. ಮನಸ್ಸು ಆಯಾ ಇಂದ್ರಿಯಗಳನ್ನಾಶ್ರಯಿಸಿ, ಆಯಾ ಇಂದ್ರಿಯಗಳಿಗೆ ವಿಷಯಗಳಾದ ಪದಾರ್ಥ ಜ್ಞಾನವನ್ನು ಹುಟ್ಟಿಸುತ್ತದಲ್ಲದೇ, ಸ್ವತಂತ್ರವಾಗಿ ಸ್ಮರಣವನ್ನೂ ಹುಟ್ಟಿಸುತ್ತದೆ. 'ಮನಸ್ಸು ಎರಡು ವಿಧ ಜ್ಞಾನ ಹುಟ್ಟಿಸುವದೆಂದು ಮೊದಲಾಗಿ ಪ್ರಮಾಣ ಲಕ್ಷಣ ಟೀಕಾದಲ್ಲಿ ಈ ವಿಷಯವನ್ನೇ ಹೇಳಲಾಗಿದೆ.

೧] ಮನೋ ಇಂದ್ರಿಯದಿಂದ ಸ್ಮೃತಿಯು ಹುಟ್ಟುತ್ತದೆಂದು ಹೇಳಿದ್ದಾಯಿತು. ಈ ವಿಷಯದಲ್ಲಿ "ಬಾಲಕನಾದ ಮುಕುಂದನನ್ನು ಮನಸ್ಸಿನಿಂದ ಸ್ಮರಿಸುತ್ತೇನೆ" ಎಂಬ ಅನುಭವವು ಪ್ರಮಾಣವು. ಹಾಗೆಯೇ, "ನಾನು ಅವನನ್ನೇ ಮನಸ್ಸಿನಿಂದ ಸ್ಮರಣ

२ ) ननु स्मृतिरयथार्था, कथमिति चेत् "स घट इ
स्मृतिः,, तद्देशसंबंधित्वाख्यपूर्वावस्थाविशिष्टं घटं विषयीकरो
तद्देशकालसंबंधश्च नेदानीं, अतः स्मृतिः कथमयथार्था न भवे
अत्र भाववविवरणरीत्या उच्यते--ज्ञानोल्लिखितदेशकालयोः वि
षयासत्त्वमेव ज्ञानायथार्थत्वे तंत्रं, न तु उल्लिखितस्य विष
स्य ज्ञानकालेऽसत्त्वं, तथात्वे अतीतानागतप्रमयोरपि (प्रमाश
स्य षष्ठीद्विवचनं, प्रमारूपज्ञानयोरित्यर्थः ) अयथार्थत्वापत्त
स्मृत्युल्लिखितदेशकालयोश्च ( सप्तमी ) स्मृतिविषयः सन्निति
अतः, न स्मृतेरयथार्थत्वं भवति ।

३ ) ननु "आजन्मरणं स्मृत्वा मुक्ता हर्षमवाप्नुयु" रिति
छांदोग्यभाष्ये ( ६-१७ ) मुक्तानामपि स्मृतिः श्रूयते, तथा
भगवतो भक्तविषयकस्मृतिरुक्तान्यत्र, तथा च तेषामपि स्म
रणं यदुक्तं तत्कथं भवेत्,

---

ಮಾಡುತ್ತೇನೆ" ಎಂಬ ಲೋಕ ವ್ಯವಹಾರವೂ ಪ್ರಮಾಣವು.

೨ ಶಂಕಾ– ಸ್ಮೃತಿಯಲ್ಲಿ 'ಆ ಘಟವು' ಎಂದು ಸ್ಮರಣ ಬರುವದು. ಈ ಸ್ಮೃ
ತಿಯು ಹಿಂದಿನ ದೇಶಕಾಲ ಸಂಬಂಧವುಳ್ಳ ಪೂರ್ವ ಅವಸ್ಥೆಯಿಂದ ಕೂಡಿದ ಘಟವನ್ನು
ವಿಷಯೀಕರಿಸುತ್ತದೆ. ಆದರೆ ಪೂರ್ವ ದೇಶಕಾಲ ಅವಸ್ಥೆಗಳು ಈ ಸ್ಮರಣ ಕಾಲ
ಇರುವದಿಲ್ಲ. ಕಾರಣ ಸ್ಮೃತಿಯು ಯಥಾರ್ಥವಾಗದೇ, ಅಯಥಾರ್ಥವಾಗಬಾರದೇ
ಹೀಗೆ ಸಂಶಯ ಬಂದಲ್ಲಿ, ಅದಕ್ಕೆ ಭಾವ ವಿವರಣದಲ್ಲಿ ಪರಿಹಾರವನ್ನು ಹೇಳು
ಇಲ್ಲಿ ನಿರೂಪಿಸಲ್ಪಡುತ್ತದೆ. ಸ್ಮೃತಿ ರೂಪ ಜ್ಞಾನದಲ್ಲಿ ತೋರಿದ ದೇಶ ಕಾಲ
[ಸ್ಮೃತಿರೂಪ] ಜ್ಞಾನ ಬಂದ ಕಾಲದಲ್ಲಿ ಮಾತ್ರ ಇಲ್ಲದೇ ಇರುವದು. ಆ ಜ್ಞಾನ
ಅಯಥಾರ್ಥತೆಗೆ [ಅಪ್ರಮಾಣ್ಯಕ್ಕೆ] ಕಾರಣವಾಗಲಾರದು. ಹಾಗಾದ ಪಕ್ಷದಲ್ಲಿ ಅತೀ
ಹಾಗೂ ಅನಾಗತ ಜ್ಞಾನಗಳಲ್ಲಿಯೂ ವಿಷಯಗಳು ಇಲ್ಲದಿರುವದರಿಂದ ಅತೀ
ಅನಾಗತ ಜ್ಞಾನಗಳೂ ಅಪ್ರಮಾಣವಾಗಬೇಕಾದೀತು. ಆದರೆ, ಸ್ಮೃತಿಯಲ್ಲಿ ತೋ
ದೇಶಕಾಲಗಳು ಸ್ಮೃತಿ ವಿಷಯಗಳಾಗಿ ಸತ್ಯವಾಗಿವೆ ಕಾರಣ "ಸ್ಮೃತಿಯು" ಸರ್ವ
ಅಯಥಾರ್ಥವಾಗಲಾರದು.

೩] ಶಂಕಾ– "ಜನನ ಮರಣಗಳನ್ನು ಸ್ಮರಣ ಮಾಡಿಕೊಂಡು ಮುಕ್ತ
ಆನಂದವನ್ನು ಹೊಂದುತ್ತಾರೆಂದು ಛಾಂದೋಗ್ಯ ಭಾಷ್ಯೆಯಲ್ಲಿ ಹೇಳಿದೆ ತಾ

तदा स्मरणकारणसंस्कारादिनाभावादिति चेदत्र छांदोग्यभाष्य-विवरणपरवेदेशीये एवमुक्तं ।

अत्र मुक्तज्ञानस्य स्मरणत्वं नाम - पूर्वानुभूतार्थविषयीकरणोन्मुखत्वं, अत एवेशस्य भक्तविषयकस्मरणं निरुक्तमन्यत्र - " भक्तानां स्मरणं विष्णोः, नित्यज्ञप्तिस्वरूपतः । अनुग्रहोन्मुखत्वं तु नैवान्यत् किंचिदिष्यते ,, इति, अतस्तेषामप्युक्तरीत्या स्मरणं घटत इति ध्येयम् ।

४ ) संस्कारमात्रजन्यं ज्ञानं स्मृतिरिति केचिदाहुः, 'प्रत्यभिज्ञायामतिव्याप्तिवारणाय मात्रेति, तथा च प्रत्यभिज्ञायाः संस्कारचक्षुःसंयोगाभ्यां जायमानत्वेन संस्कारमात्रजन्यत्वाभावान्नातिव्याप्तिः, इति, चेन्न तथा सति यथार्थज्ञानमात्रस्य प्रमाणजन्यत्वनियमात्,

---

"ಪರಮಾತ್ಮನಿಗೆ ಭಕ್ತರ ಸ್ಮರಣವಿದೆ ಎಂದು ಈಶಾವಾಸ್ಯ ಭಾಷ್ಯ ಟೀಕೆಯಲ್ಲಿ ಹೇಳಿದೆ. ಮುಕ್ತರಿಗೂ, ಪರಮಾತ್ಮನಿಗೂ ಹೇಳಿದ ಸ್ಮರಣೆಯು ಹೇಗೆ ಕೂಡುವದು ? ಏಕೆಂದರೆ ಸ್ಮರಣಕ್ಕೆ ಕಾರಣವಾದ ಸಂಸ್ಕಾರ ಮೊದಲಾದವುಗಳು ಅವರಲ್ಲಿರುವದಿಲ್ಲ. ಈ ಶಂಕಾಕ್ಕೆ ಸಮಾಧಾನವನ್ನು ಛಾಂದೋಗ್ಯ ಭಾಷ್ಯ ವೇದೇಶಿಯ ಟಿಪ್ಪಣೆಯಲ್ಲಿ ಹೀಗೆ ಹೇಳಲಾಗಿದೆ.

ಮುಕ್ತರ ಜ್ಞಾನದಲ್ಲಿ ಸ್ಮರಣೆಯೆಂದರೆ, ಪೂರ್ವದಲ್ಲಿ ಅನುಭೂತವಾದ ವಿಷಯ-ಗಳನ್ನು ಗ್ರಹಿಸುವದೇ ಆಗಿದೆ. ಹಾಗೆಯೇ ಈಶರಿಗೆ ಭಕ್ತರ ಸ್ಮರಣೆಯೆಂದರೆ, 'ನಿತ್ಯ ಜ್ಞಾನ ಸ್ವರೂಪನಾದ ಶ್ರೀಹರಿಯು ಭಕ್ತರ ವಿಷಯದಲ್ಲಿ ಅನುಗ್ರಹ ಮಾಡಲಿಚ್ಛಿಸು-ವದೇ (ಅನುಗ್ರಹೋನ್ಮುಖವಾಗುವದೇ) ಭಕ್ತರ ಸ್ಮರಣೆಯೆನಿಸುವದೇ ಹೊರತು ಬೇರೆ ಹೇಳಲಾಗದು' ಎಂದು ಈಶಾವಾಸ್ಯ ಭಾಷ್ಯ ಟೀಕೆಯಲ್ಲಿ ಹೇಳಿದೆ. ಈಶನಿಗೂ, ಮು-ಕ್ತರಿಗೂ ಈ ಅರ್ಥದಲ್ಲಿ "ಸ್ಮರಣೆ" ಯು ಕೂಡುತ್ತದೆಂದು ಭಾವಿಸಬೇಕು.

೪) ತಾರ್ಕಿಕರು ಹೇಳುವ "ಸ್ಮರಣೆ"ಯ ಲಕ್ಷಣವು – ಸಂಸ್ಕಾರ ಮಾತ್ರದಿಂದ ಹುಟ್ಟಿದ ಜ್ಞಾನವು ಸ್ಮೃತಿಯು ಎಂದು ತಾರ್ಕಿಕರು ಹೇಳುತ್ತಾರೆ. 'ಅವನೇ ಈ ದೇವದತ್ತನು" ಎಂಬ ಪ್ರತ್ಯಭಿಜ್ಞಾ ರೂಪಜ್ಞಾನದಲ್ಲಿ ಬರುವ ಅತಿವ್ಯಾಪ್ತಿ ಪರಿಹರಿಸು-ವೋಸುಗ ಲಕ್ಷಣದಲ್ಲಿ "ಮಾತ್ರ" ಎಂಬ ಪದವಿಡಲಾಗಿದೆ. ಪ್ರತ್ಯಭಿಜ್ಞೆಯು ಸಂಸ್ಕಾರ ಹಾಗೂ ಇಂದ್ರಿಯ ಸನ್ನಿಕರ್ಷ ಎರಡರಿಂದ ಹುಟ್ಟುತ್ತದೆಯಲ್ಲವೇ ಕೇವಲ ಸಂಸ್ಕಾರ-ಜನ್ಯತ್ವವಿಲ್ಲದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. ಆದರೆ ಈ ಲಕ್ಷಣವು ಯೋಗ್ಯವಾಗದು.

स्मृतेश्च यथार्थज्ञानत्वात् तज्जनकसंस्कारस्यापि पृथक्प्रामाण्यापत्तेः।

तर्हि संस्कारजन्यत्वं स्मृतेः कथं? इति चेत् **अयमत्राभिप्रायः।** संस्कारस्तु पूर्वानुभूतार्थसन्निकर्ष एवोपयुज्यते, तथा च संस्कारसहकृतं मनः, अननुभूतामपि निवृत्तपूर्वावस्थां विषयीकुर्वत् सत् स्मरणं जनयतीति वर्तमानमात्रविषयाणींद्रियाणि सहकारिसामर्थ्यात् कालांतरसंबंधितामपि गोचरयंति, अतो मनः, संस्कारसन्निकर्षेण स्मृतिं जनयतीति यदुक्तं तद्युक्तमेवेति।

नन्विदं दूषणं भवतामपि समानं इति चेन्न, अस्माभिस्तु स्मृतेः संस्कारसहकृतमानसप्रत्यक्षजन्यत्वांगीकारेण केवलप्रमाणांतर्भावसंभवात् तत्कारणमनस अनुप्रमाणान्तर्भेदभिन्नप्रत्यक्षे, अन्तर्भावाच्च न अस्मदुक्त - अनुप्रमाणत्रित्वभंग इति।

**इति अनुप्रमाणप्रस्तावे स्मृतेर्विस्तरतो निरूपणम्।**

---

ಏಕೆಂದರೆ, ಎಲ್ಲ ಯಥಾರ್ಥ ಜ್ಞಾನಗಳು ಪ್ರಮಾಣ ಜನ್ಯಗಳೆಂದು ನಿಯಮವು. ಸ್ಮೃತಿಯು ಯಥಾರ್ಥವೆಂದ ಬಳಿಕ ಅದಕ್ಕೆ ಕಾರಣವಾದ [ಜನಕವಾದ] ಸಂಸ್ಕಾರವೂ ಪ್ರತ್ಯೇಕ ಪ್ರಮಾಣವಾಗಬೇಕಾದ ಪ್ರಸಂಗ ಬರುವದು.

ಹಾಗಾದರೆ ಸಂಸ್ಕಾರವು ಸ್ಮೃತಿಗೆ ಕಾರಣವಾಗುವದು ಹೇಗೆ ಎಂಬ ವಿಷಯದಲ್ಲಿ ಸಿದ್ಧಾಂತಿಗಳ ಅಭಿಪ್ರಾಯವು ಹೀಗಿದೆ—ಸಂಸ್ಕಾರವು ಪೂರ್ವದಲ್ಲಿ ಅನುಭೂತವಾದ ಅರ್ಥ ಸನ್ನಿಕರ್ಷದಲ್ಲಿ ಮಾತ್ರ ಉಪಯೋಗವಾಗುತ್ತದೆ, ಈ ಸಂಸ್ಕಾರ ಸಹಕೃತವಾದ ಮನಸ್ಸು ಅನುಭವಕ್ಕೆ ಬರಲಾರದ ವಿಷಯಗಳನ್ನೂ, ಎಂದರೆ ಸದ್ಯದಲ್ಲಿರಲಾರದ ದೇಶ ಕಾಲಾದಿಗಳನ್ನೂ ಸಹ ವಿಷಯೀಕರಿಸಿ ಸ್ಮರಣವನ್ನು ಹುಟ್ಟಿಸುತ್ತದೆ. ವರ್ತಮಾನ ಕಾಲೀನ ವಸ್ತು ಮಾತ್ರ ವಿಷಯೀಕರಿಸತಕ್ಕ ಇಂದ್ರಿಯಗಳು ಸಂಸ್ಕಾರವೆಂಬ ಸಹಕಾರಿ ಸಾಮರ್ಥ್ಯದಿಂದ ವಸ್ತುಗಳ ಕಾಲಾಂತರ ಸಂಬಂಧವನ್ನು ಗ್ರಹಿಸುತ್ತಿದೆ. ಕಾರಣ, ಮನಸ್ಸು ಸಂಸ್ಕಾರ ಸಹಕಾರದಿಂದ ಸ್ಮರಣವನ್ನು ಹುಟ್ಟಿಸುವದೆಂದು ಹೇಳಿದದು ಸಮಂಜಸವಾಗಿದೆ.

ಆದರೂ ಹೀಗೆ ಸಂಸ್ಕಾರದಿಂದ ಸ್ಮೃತಿಯು ಹುಟ್ಟುವದಾದರೆ, ಅದು ಪ್ರತ್ಯೇಕ ಪ್ರಮಾಣವಾಗಲೀ ಎಂಬ ಆಪತ್ತಿ ದೋಷವು ಸಿದ್ಧಾಂತಿಗಳಿಗೂ ಅನ್ವಯಿಸುವದಲ್ಲಾ ಎಂಬ ಸಂದೇಹ ಮಾಡಕೂಡದು. ಸಿದ್ಧಾಂತಿಗಳು ಸ್ಮೃತಿಯು ಸಂಸ್ಕಾರ ಸಹಕೃತ ಮನಸ್ಸಿನಿಂದ ಅಂದರೆ ಮಾನಸ ಪ್ರತ್ಯಕ್ಷದಿಂದ ಹುಟ್ಟುವದೆಂದು ಅಂಗೀಕಾರ ಮಾಡಿದ್ದಾರಲ್ಲದೇ, ಕೇವಲ

७) ननु धर्मिणः, इंद्रियस्यैव प्राधान्यात् स्वविषयसन्निकृष्टमिंद्रियं प्रत्यक्षमित्येव वक्तव्यं, कथं निर्दोषार्थेन्द्रियसन्निकर्षः प्रत्यक्षमित्युक्तं, इति चेदुच्यते - अत्रापि इंद्रीयं करणधर्मि, इंद्रियमेव करणमिति यावत्। तस्यार्थसन्निकर्षो, अवांतरव्यापारः, अवांतरप्राधान्यविवक्षया, अर्थेंद्रियसन्निकर्षः प्रत्यक्षमित्युक्तं। कचित्तु - धर्मिप्राधान्यविवक्षया स्वस्वविषयसन्निकृष्टेन्द्रियमेव प्रत्यक्षमिति गीयते, अत्रापि धर्मिभूतमिंद्रियमेव करणं न तु सन्निकृष्टेंद्रियं तेन तद्विशिष्टस्य सएवव्यापार इति आत्माश्रयःस्यात्, सन्निकर्षः अवांयरव्यापारत्वेन विवक्षितः, अतो नानुपपत्तिः।

---

ಸಂಸ್ಕಾರದಿಂದಲ್ಲ ಹೀಗೆ ಸ್ಮೃತಿಯು ಕೇವಲ ಪ್ರಮಾಣದಲ್ಲಿಯೇ ಅಂತರ್ಭಾವ ಹೊಂದುವದರಿಂದ, ನಮ್ಮಿಂದ ಹೇಳಲ್ಪಟ್ಟ ಅನುಪ್ರಮಾಣಗಳು ಮೂರು ಪ್ರಕಾರವೆಂಬುದಕ್ಕೆ ಯಾವ ವಿಧ ಚ್ಯುತಿಯು ಬರಲಾರದು. [ಸ್ಮೃತಿಗೆ ಕಾರಣವಾದ ಮನಸ್ಸು ಅನುಪ್ರಮಾಣದಲ್ಲಿ ಮಂದಾದ ಪ್ರತ್ಯಕ್ಷದಲ್ಲಿಯೇ ಅಂತರ್ಭಾವವಾಗುತ್ತದಲ್ಲದೇ ಪ್ರತ್ಯೇಕ ಪ್ರಮಾಣವಾಗುವದಿಲ್ಲವಾದ್ದರಿಂದ ನಾಲ್ಕು ಅನುಪ್ರಮಾಣವಾಗಲಾರದೆಂದು ಭಾವವು.]

**ಪ್ರತ್ಯಕ್ಷವು ಚತುರ್ವಿಧವೆಂದು ಪ್ರಕಾರಾಂತರದಿಂದ ವಿಭಾಗಿಸುವದು ಹಾಗೂ ಸಾಕ್ಷೀ ವಿಚಾರವು–**

ಶಂಕಾ– ಪ್ರತ್ಯಕ್ಷದಲ್ಲಿಯು ಇಂದ್ರಿಯ ಸನ್ನಿಕರ್ಷದಲ್ಲಿ ಧರ್ಮಿಯಾದ ಇಂದ್ರಿಯವು ಪ್ರಧಾನವಾದುದರಿಂದ. ಲಕ್ಷಣವನ್ನು ನಿರ್ದುಷ್ಟ ಸ್ವ ವಿಷಯ ಸನ್ನಿಕೃಷ್ಟವಾದ ಇಂದ್ರಿಯವು ಪ್ರತ್ಯಕ್ಷವೆಂದು ಹೇಳುವದು ಉಚಿತವಾಗಿದ್ದು, ಹಾಗೇ ಹೇಳದೇ ನಿರ್ದೋಷ ಅರ್ಥೇಂದ್ರಿಯ ಸನ್ನಿಕರ್ಷವು ಪತ್ಯಕ್ಷವೆಂದು ಹೇಳುವದು ಹೇಗೆ? ಎಂಬ ಶಂಕಗೆ ಸಮಾಧಾನ ಹೀಗಿದೆ. ಈ ಲಕ್ಷಣದಲ್ಲಿಯೂ ಇಂದ್ರಿಯವೇ ಕಾರಣವು. ಅರ್ಥ ಸನ್ನಿಕರ್ಷವು ಅದರ ಅವಾಂತರ ವ್ಯಾಪಾರವು. ಅವಾಂತರ ವ್ಯಾಪಾರವನ್ನು ಪ್ರಾಧಾನ್ಯವಾಗಿಟ್ಟುಕೊಂಡು ಅರ್ಥ ಹಾಗೂ ಇಂದ್ರಿಯಗಳ ಸನ್ನಿಕರ್ಷವು ಪ್ರತ್ಯಕ್ಷವೆಂದು ಲಕ್ಷಣವಾಗಿ ಹೇಳಲಾಗಿದೆ. ಕೆಲವೆಡೆ ಧರ್ಮಿಯಾದ ಇಂದ್ರಿಯವನ್ನೇ ಪ್ರಧಾನವಾಗಿಟ್ಟುಕೊಂಡು ಸ್ವ ವಿಷಯ ಸನ್ನಿಕೃಷ್ಟ ಇಂದ್ರಿಯವು ಪ್ರತ್ಯಕ್ಷವೆಂದು ಹೇಳಿದ್ದೆಂದು ತಿಳಿಯಬೇಕು. ಪ್ರತ್ಯಕ್ಷದಲ್ಲಿ ಧರ್ಮಿಯಾದ ಇಂದ್ರಿಯವೇ ಕಾರಣ ಹೊರತು ಸನ್ನಿಕೃಷ್ಟ ಇಂದ್ರಿಯವಲ್ಲ ಸನ್ನಿಕೃಷ್ಟ ಇಂದ್ರಿಯವು ಪ್ರತ್ಯಕ್ಷವೆಂದಲ್ಲಿ (ಸನ್ನಿಕೃಷ್ಟ ಇಂದ್ರಿಯವೇ ಕಾರಣವೆಂದಾದರೆ,)

तथा चास्मन्मते–इंद्रियमेव करणं, सन्निकर्षोऽवाँतरव्यापारः, क्वचित् अवान्तरप्राधान्यविवक्षया, क्वचित् धर्मिप्राधान्यविवक्षया, " इंद्रियसन्निर्षः प्रत्यक्षमिति ,, " स्वस्वविषयसन्निकृष्टमिंद्रियं प्रत्यक्षमिति च वैचित्र्येण व्यवहार इति न कोपि दोषः ।

२ ) पूर्वं ' ' प्रत्यक्षं सप्तविधं, इति विभाग उक्तः, इदानीं अन्यथापि विभाग उच्यते - प्रत्यक्षं चतुर्विधं– १ ) ईशप्रत्यक्षं २ ) लक्ष्मीप्रत्यक्षं ३ ) योगीप्रत्यक्षं ४) अयोगिप्रत्यक्षंचेति ।

तत्राद्यं द्वयं स्वरूपेंद्रियात्मकमेव, उत्तरद्वयं द्विविधेंद्रियात्मकं, विषयास्तु तत्तद्ज्ञानविषयवद्विवेक्तव्याः ।

---

ಆದಕ್ಕೊಂದು ಅವಾಂತರ ವ್ಯಾಪಾರ ಬೇಕಾಗುವದು. ಹೀಗೆ ಆತ್ಮಾಶ್ರಯ ದೋಷ ಬರುವದು. ಇಲ್ಲಿ ಸನ್ನಿಕರ್ಷವು ಅವಾಂತರ ವ್ಯಾಪಾರವೆಂದು ವಿವಕ್ಷಿತವಾದ್ದರಿಂದಲೇ ಯಾವ ವಿಧವಾದ ಆತ್ಮಾಶ್ರಯಾದಿ ದೋಷಗಳಿಲ್ಲ.

[ವಿವರಣೆ–ಅವಾಂತರ ವ್ಯಾಪಾರವೆಂದರೆ, ಇಂದ್ರಿಯದಿಂದ ಜನ್ಯವಾಗಿ ಇಂದ್ರಿಯ ಜನ್ಯ ಜ್ಞಾನಕ್ಕೆ ಜನಕವಾಗಿರುವದು, ಸನ್ನಿಕರ್ಷವು ಇಂದ್ರಿಯದಿಂದ ಜನ್ಯವಾಗಿದ್ದು ಇಂದ್ರಿಯ ಜನ್ಯ ಜ್ಞಾನಕ್ಕೆ ಜನಕವಾಗಿದೆ.]

ನಮ್ಮ ಸಿದ್ಧಾಂತದಲ್ಲಿ ಇಂದ್ರಿಯವೇ ಕರಣವು ಸನ್ನಿಕರ್ಷವು ಅವಾಂತರ ವ್ಯಾಪಾರವು. ಅವಾಂತರ ವ್ಯಾಪಾರದ ಪ್ರಾಧಾನ್ಯ ದೃಷ್ಟಿಯಿಂದ, ಇಂದ್ರಿಯ ಸನ್ನಿಕರ್ಷವು ಪ್ರತ್ಯಕ್ಷವೆಂದೂ, ಇನ್ನು ಕೆಲವೆಡೆ ಧರ್ಮಿ ಪ್ರಾಧಾನ್ಯ ದೃಷ್ಟಿಯಿಂದ ಸ್ವವಿಷಯ ಸನ್ನಿಕೃಷ್ಟ ಇಂದ್ರಿಯವು ಪ್ರತ್ಯಕ್ಷವೆಂದೂ, ಹೀಗೆ ಬೇರೆ ಬೆರೆಯಾಗಿ ವ್ಯವಹಾರವನ್ನು ಮಾಡಲಾಗಿದ್ದು ಯಾವ ದೋಷವೂ ಇಲ್ಲವೆಂದು ತಿಳಿಯಬೇಕು.

೨) ಪೂರ್ವದಲ್ಲಿ ಪ್ರತ್ಯಕ್ಷವು ಏಳು ವಿಧವೆಂದು ವಿಭಾಗ ಮಾಡಿದ್ದಾಗಿದೆ. ಈಗ ಬೇರೆ ರೀತಿಯಿಂದ ವಿಭಾಗ ಮಾಡಲಾಗುತ್ತಿದೆ. ಪ್ರತ್ಯಕ್ಷವು ನಾಲ್ಕು ವಿಧವು. ೧) ಈಶ ಪ್ರತ್ಯಕ್ಷ ೨) ಲಕ್ಷ್ಮೀ ಪ್ರತ್ಯಕ್ಷ. ೩) ಯೋಗಿ ಪ್ರತ್ಯಕ್ಷ. ೪) ಅಯೋಗಿ ಪ್ರತ್ಯಕ್ಷ.

ಇವುಗಳಲ್ಲಿ ಮೊದಲಿನ ಎರಡು (ಈಶ ಹಾಗೂ ಲಕ್ಷ್ಮೀ ಪ್ರತ್ಯಕ್ಷಗಳು) ಸ್ವರೂಪೇಂದ್ರಿಯಗಳಿಂದ ಅಭಿನ್ನವಾಗಿವೆ. ಇನ್ನುಳಿದ ಎರಡು (ಯೋಗಿ ಹಾಗೂ ಅಯೋಗಿ ಪ್ರತ್ಯಕ್ಷಗಳು) ಸ್ವರೂಪ ಹಾಗೂ ಪ್ರಾಕೃತವೆಂದು ಎರಡು ಪ್ರಕಾರವಾಗಿವೆ. ಅವುಗಳ ವಿಷಯಗಳು ಆ ಜ್ಞಾನಗಳ ವಿಷಯಗಳಂತೆ ಇರುವವೆಂದು ತಿಳಿಯಬೇಕು.

३ ) ननु स्वरूपेंद्रियस्य प्रत्यक्षत्वं यदुक्तं, तन्नोपपद्यते । स्वरूपेंद्रियस्य आत्मतद्धर्मभूतस्वरूपसुखादिभिर्विषयैरभेदेन सन्निकर्षस्यैवाभावादिति चेदुच्यते - आत्मतद्धर्मभूतस्वरूपसुखादिविषयैरभिन्नस्यापि साक्षिणः आत्मतद्धर्मैः स्वरूपसुखादिभिः सन्निकर्षोऽस्त्येव अभिन्नेऽपि भेदकार्यकारी विशेषः, तच्छक्त्या सन्निकर्षसद्भावात् स्वरूपेंद्रियस्य प्रत्यक्षत्वमुपपद्यत इति बोध्यम् ।

४ ) प्राकृतेंद्रियमपि न सर्वेषामेकरूपम् किं तु तत्र विशेषोऽस्तीति ज्ञापनाय प्रकारांतरेण तद्विभागो निरूप्यते--

बाह्येंद्रियं त्रिविधं १ ) दैवं २ ) आसुरं ३ ) मध्यमं चेति ।

१ ) बाहुल्येनायथार्थज्ञानजनकमिंद्रियं दैवम् ।

२ ) बाहुल्येना यथार्थज्ञानजनकमिंद्रियमासुरम् ।

३ ) यथार्थायथार्थज्ञानजनकमिंद्रियं मध्यमम् ।

---

೩) ಶಂಕಾ- ಸ್ವರೂಪೇಂದ್ರಿಯಕ್ಕೂ, ಆತ್ಮ ಹಾಗೂ ಆತ್ಮನ ಧರ್ಮಗಳಾದ ಸುಖ ದುಃಖಾದಿ ವಿಷಯಗಳಿಗೂ ಅಭೇದವಿರುವದರಿಂದ ಸನ್ನಿಕರ್ಷವೇ ಕೂಡಲಾರದು. ಆದುದರಿಂದ ಸ್ವರೂಪೇಂದ್ರಿಯವು ಪ್ರತ್ಯಕ್ಷವೆಂದು ಹೇಳಿದುದು ಸರಿಯಲ್ಲ. [ವಿವರಣೆ- ಪ್ರತ್ಯಕ್ಷವಾದದ್ದು ಸನ್ನಿಕರ್ಷರೂಪ ಅವಾಂತರ ವ್ಯಾಪಾರ ಸಹಿತವಾಗಿ ಜ್ಞಾನವನ್ನು ಹುಟ್ಟಿಸುತ್ತದೆ ಆದರೆ ಇಲ್ಲಿ ಸ್ವರೂಪಭೂತ ಇಂದ್ರಿಯಕ್ಕೂ ಅವುಗಳ ವಿಷಯಗಳಿಗೂ ಅಭೇದವಿರುವದರಿಂದ ಅವೆರಡೂ ಒಂದೇ ಆಗಿದ್ದು. ಸನ್ನಿಕರ್ಷವೆಂಬ ಅವಾಂತರ ವ್ಯಾಪಾರವಿಲ್ಲದಾಗ. ಜ್ಞಾನವನ್ನು ಹುಟ್ಟಿಸಲಾರದು. ಕಾರಣ ಅದು ಪ್ರತ್ಯಕ್ಷ ಹೇಗಾದೀತು? ಎಂಬ ಭಾವ] ಹೀಗೆ ಶಂಕೆ ಬಂದರೆ ಅದಕ್ಕೆ ಈ ರೀತಿ ಸಮಾಧಾನ ಹೇಳುತ್ತೇವೆ. ಆತ್ಮಭೂತ ಸ್ವರೂಪೇಂದ್ರಿಯಕ್ಕೂ ಅದರ ಧರ್ಮವಾದ [ವಿಷಯುಗಳಾದ] ಸುಖಾದಿಗಳಿಗೂ ಅಭೇದ ಸಂಬಂಧವಿದ್ದರೂ, ಸನ್ನಿಕರ್ಷವು ಕೂಡುತ್ತದೆ ಅಭೇದವಿದ್ದಲ್ಲಿಯೂ ಭೇದ ಕಾರ್ಯವನ್ನು ಮಾಡತಕ್ಕ ವಿಶೇಷವನ್ನು ನಾವು ಒಪ್ಪಿದ್ದೇವೆ. ಈ ವಿಶೇಷ ಶಕ್ತಿಯಿಂದ ಸನ್ನಿಕರ್ಷವು ಇದ್ದು, ಅದು ಜ್ಞಾನಜನಕವಾಗುತ್ತದೆ ಆದ್ದರಿಂದ ಸ್ವರೂಪೇಂದ್ರಿಯವು ಪ್ರತ್ಯಕ್ಷವೆಂದು ಹೇಳಿದ್ದು ಸಮಂಜಸವಾಗಿದೆ.

೪] ಸರ್ವ ಜೀವರ ಪ್ರಾಕೃತ ಇಂದ್ರಿಯಗಳೂ ಒಂದೇ ಪ್ರಕಾರವಾಗಿಲ್ಲ. ಅವುಗಳಲ್ಲಿಯೂ ಪ್ರಕಾರಾಂತರಗಳಿವೆಯೆಂಬುದು ಇಲ್ಲಿ ನಿರೂಪಿಸಲ್ಪಡುತ್ತದೆ.

೫] ಬಾಹ್ಯ ಇಂದ್ರಿಯಗಳು ಮೂರು [ಪ್ರಕಾರವಾಗಿವೆ. ೧] ದೈವ ೨] ಅಸುರ ೩] ಮಧ್ಯಮ.

१ ) उत्तमानां स्वरूपेंद्रियमपि विषयस्वरूपे धर्मिणि, प्रकारे सत्यत्वपारतंत्र्यादितद्धर्मे यथार्थमेव, साक्षिविषयात्मादिधर्मतया प्रतीयमानाः स्वातंत्र्यादिप्रकारास्तु मनोविषया एव !

२ ) अधममध्यमानां तु स्वरूपमात्रे यथार्थमेव, प्रकारे स्वातंत्र्यादौ अयथार्थं मिश्रं च !

नन्वेवं तर्हि साक्षिणः प्रामाण्याभावात् साक्षिगृहीते ज्ञानप्रामाण्ये पुनः संदेहापत्त्या निश्शंकप्रवृत्तिर्न स्यात् इति चेत्,

---

೧] ದೈವವು-ಬಹಳವಾಗಿ ಯಥಾರ್ಥ ಜ್ಞಾನವನ್ನೇ ಹುಟ್ಟಿಸತಕ್ಕ ಇಂದ್ರಿಯವು ದೈವವು.

೨] ಅಸುರವು- ಬಹಳವಾಗಿ ಅಯಥಾರ್ಥವಾದ ಜ್ಞಾನವನ್ನೇ ಹುಟ್ಟಿಸತಕ್ಕ ಇಂದ್ರಿಯವು ಅಸುರವು.

೩] ಯಥಾರ್ಥ ಅಯಥಾರ್ಥಜ್ಞಾನ ಹುಟ್ಟಿಸತಕ್ಕ ಇಂದ್ರಿಯವು ಮಧ್ಯಮವು.

೧] ಉತ್ತಮರ ಸ್ವರೂಪೇಂದ್ರಿಯವು ಧರ್ಮಿಯಲ್ಲಿ ಅಂದರೆ ಆತ್ಮ ವಿಷಯದಲ್ಲಿ ಹಾಗೂ ಅಲ್ಲಿರತಕ್ಕ ಸತ್ಯತ್ವ.ಪಾರತಂತ್ರ್ಯ ಮೊದಲಾದ ಧರ್ಮಗಳಲ್ಲಿ ಯಥಾರ್ಥವಾಗಿಯೇ ಇರುತ್ತದೆ. ಸ್ವಾತಂತ್ರ್ಯಾದಿ ಧರ್ಮಗಳು ಮಾತ್ರ [ನಾನು ಸ್ವತಂತ್ರನು ಎನ್ನುವ ಜ್ಞಾನವು] ಸಾಕ್ಷಿಗೆ ವಿಷಯಗಳಾದಂತೆ ತೋರಿದರೂ, ಅವು ಮನಸ್ಸಿಗೆ ವಿಷಯಗಳಾಗುತ್ತವೆ [ವಿವರಣೆ-ಉತ್ತಮ ಜೀವರ ಸ್ವಾತಂತ್ರ್ಯಜ್ಞಾನಕ್ಕೆ ಉಪದೇಶಾನಂತರ ಬಾಧೆ ಬಂದು, ಅದರಲ್ಲಿ ಪ್ರಾಮಾಣ್ಯ ಗ್ರಹಣವಾಗದೇ ಇರುವದರಿಂದ, ತತ್ಪೂರ್ವದಲ್ಲಿ ಅವರ ಸ್ವಾತಂತ್ರ ಜ್ಞಾನವು ಮನೋ ವಿಷಯವೇ ಹೊರತು ಸ್ವರೂಪೇಂದ್ರಿಯ ವಿಷಯವಲ್ಲ. ಉತ್ತಮ ಜೀವರ ಸ್ವರೂಪದಲ್ಲಿಯೇ ಸ್ವಾತಂತ್ರ್ಯವಿಲ್ಲ.]

೨] ಅಧಮ, ಮಧ್ಯಮರ ಸ್ವರೂಪೇಂದ್ರಿಯವು ತನ್ನ ಸ್ವರೂಪ ವಿಷಯದಲ್ಲಿ ಯಥಾರ್ಥವಾದರೂ ಸ್ವಾತಂತ್ರ್ಯ ಮೊದಲಾದ ಪ್ರಕಾರಗಳಲ್ಲಿ ಅಯಥಾರ್ಥವಾಗಿದೆ.

೩] ಮಧ್ಯಮರ ಸ್ವರೂಪೇಂದ್ರಿಯವು, ತಮ್ಮ ಸ್ವರೂಪ ವಿಷಯದಲ್ಲಿ ಯಥಾರ್ಥವು ಸ್ವಾತಂತ್ರ್ಯಾದಿ ಪ್ರಕಾರಗಳಲ್ಲಿ ಮಿಶ್ರವೂ (ಯಥಾರ್ಥ ಅಯಥಾರ್ಥದಿಂದ ಕೂಡಿದ್ದು) **ಆಗಿದೆ.**

ಶಂಕಾ– ಹೀಗೆ ಹೇಳುವದಾದಲ್ಲಿ ಸಾಕ್ಷಿಗೆ ಪ್ರಾಮಾಣ್ಯವು ಕೂಡದೇ, ಸಾಕ್ಷಿಯಿಂದ ಗ್ರಹಿಸಿದ ಪ್ರಮಾಣದಲ್ಲಿ ಪುನಃ ಸಂದೇಹ ಬಂದು, ನಿಶ್ಶಂಕ ಪ್ರವೃತ್ತಿಯು ಹುಟ್ಟದೇ ಹೋಗಬೇಕಾದೀತು.

सत्यं, अप्रमाणमेव तमयोग्यानां साक्षी, किं तु तमःपतनांनरमेव, न तु संसारदशायां, एवं मध्यमानां साक्षी, लिंगभंगानंतरमेव यथार्थायथार्थज्ञानं व्यनक्ति, न तु संसारदशायां इदानीं जगत्प्रवृत्तिनिवृत्त्यनुकूलं, ईश्वरसंकल्पानुसारेण, प्रमाणमेव साक्षी, यथार्थत्वेन मनोवृत्तिरूपं विज्ञानं जनयति, एवं साक्षिगृहीतेऽर्थे संसारदशायां विसंवाददर्शनाभावेन प्रामाण्यनिश्चये, पुनः प्रामाण्यसंदेहाभावेन निश्शंका प्रवृत्तिरुपपन्नैवेति बोध्यम् ।

॥ **इति प्रकारांतरेण प्रत्यक्षस्य चातुर्विध्यकथनं साक्षीविचारश्च** ॥

---

ವಿವರಣೆ- ಸ್ವರೂಪೇಂದ್ರಿಯರೂಪ ಸಾಕ್ಷಿಯು ಯಥಾರ್ಥ, ಅಯಥಾರ್ಥ, ಮಿಶ್ರ ಹೀಗೆ ಮೂರು ಪ್ರಕಾರವೆಂದು ಹೇಳಿದ ಪಕ್ಷದಲ್ಲಿ, ಅಧಮ ಹಾಗೂ ಮಧ್ಯಮಜೀವರ ಸ್ವರೂಪೇಂದ್ರಿಯವಾದ ಸಾಕ್ಷಿಯು ಪ್ರಮಾಣವಾಗುವದು ಹೇಗೆ? ಅದಕ್ಕೆ ಪ್ರಾಮಾಣ್ಯವಿಲ್ಲವೆಂದಾಗ, ಆ ಸಾಕ್ಷಿ ಗ್ರಹಿತವಾದ ಸುಖ, ದುಃಖ, ಪ್ರಾಮಾಣ್ಯ ಮೊದಲಾದವುಗಳಲ್ಲಿ ಸಂಶಯ ಬಂದು, ಅವುಗಳಿಂದಾಗತಕ್ಕ ಪ್ರವೃತ್ತಿಯೇ ಇಲ್ಲದೇ ಹೋಗಬೇಕಾದಿತೆಂಬ ಭಾವವು. ಹೀಗೆ ಶಂಕಿಸುವದು ಸರಿಯಲ್ಲ.

ತಮೋಯೋಗ್ಯರ ಸಾಕ್ಷಿಯು ಅಪ್ರಮಾಣವೇ ಆಗಿದೆ. ಆದರೆ ಇದು ತಮಸ್ಸನ್ನು ಹೊಂದಿದ ಮೇಲಲ್ಲದೇ, ಸಂಸಾರ ದೆಶೆಯಲ್ಲಲ್ಲ. ಇದರಂತೆಯೇ ಮಧ್ಯಮ ಜೀವರ (ನಿತ್ಯ ಸಂಸಾರಿಗಳ ಸಾಕ್ಷಿಯು ಅವರ ಲಿಂಗಭಂಗಾನಂತರವೇ ಯಥಾರ್ಥ ಅಯಥಾರ್ಥದಿಂದ ಕೂಡಿದ ಜ್ಞಾನವನ್ನು ವ್ಯಕ್ತ ಮಾಡುತ್ತದೆ. ಸಂಸಾರ ದೆಶೆಯಲ್ಲಿ ಪ್ರಪಂಚದಲ್ಲಿ ಪ್ರವೃತ್ತಿ ಹುಟ್ಟುವದಕ್ಕಾಗಿ, ಪರಮಾತ್ಮನ ಸಂಕಲ್ಪದಂತೆ, ಮಧ್ಯಮ ಹಾಗೂ ಅಧಮ ಜೀವರ ಸಾಕ್ಷಿಯು ಪ್ರಮಾಣವೇ ಆಗಿದ್ದು, ಅದು ಮನೋವೃತ್ತಿ ರೂಪ ವಿವಿಧ ಜ್ಞಾನವನ್ನು ಹುಟ್ಟಿಸುತ್ತದೆ. ಹೀಗೆ ಸಂಸಾರ ದೆಶೆಯಲ್ಲಿ ಸಾಕ್ಷಿಯಿಂದ ಗ್ರಹಿಸಿದ ಸುಖ ದುಃಖಾದಿಗಳ ವಿಷಯಗಳಲ್ಲಿ ವಿಸಂವಾದ ಇಲ್ಲದಿರುವದರಿಂದ, ಎಂದರೆ ವಿಫಲ ವೃತ್ತಿಯಾಗದಿರುವದರಿಂದ ಜ್ಞಾನದಲ್ಲಿ ಪ್ರಾಮಾಣ್ಯ ನಿಶ್ಚಯವಾಗಿ, ಮತ್ತೇ ಪ್ರಾಮಾಣ್ಯ ಸಂದೇಹ ಬರದಿರುವದರಿಂದ. ನಿಶ್ಶಂಕ ಪ್ರವೃತ್ತಿಯು ಕೂಡುತ್ತದೆ. (ಮಧ್ಯಮ ಅಧಮರ ಸಾಕ್ಷಿಯು ಅಪ್ರಮಾಣವಾದರೂ. ಸಂಸಾರದಲ್ಲಿ ಈಶ್ವರೇಚ್ಛಾನುಸಾರವಾಗಿ ಪ್ರಮಾಣವೇ ಆಗುವದು. ಕಾರಣ ಸಾಕ್ಷೀ ಗ್ರಹಿತಕ್ಕ ಸುಖ ದುಃಖ ಮೊದಲಾದವುಗಳು ಪ್ರಮಾಣವಾಗಿ ಅನುಭೂತವಾಗಿರುತ್ತವೆ, ಪ್ರವೃತ್ತಿಯೂ ಹುಟ್ಟುತ್ತದೆ)

---

(८) स्वमते प्रत्यक्षं निरूप्येंद्रियार्थयोः सर्वत्र साक्षादेव सन्निकर्षः, न तु क्वचित्साक्षात् क्वचित्परंपरया, इति व्यवस्थापयितुं तावत्परमतमनूद्य निराक्रियते—

(१) साक्षात्कारप्रमाहेतुरिंद्रियार्थयोः सन्निकर्षः षड्विध इत्येके प्राहुः । तद्यथा—(१) संयोगः (२) संयुक्तसमवायः (३) संयुक्तसमवेतसमवायः (४) समवायः (५) समवेतसमवायः (६) विशेषणविशेष्यभावश्च, इति । तथा हि--

(१) चक्षुषो घटादिद्रव्यैः संयोगः (२) रूपकर्मसामान्यैः संयुक्तसमवायः (३) गुणकर्मगतसामान्यैः संयुक्तसमवेतसमवायः,

---

**ಇಂದ್ರಿಯ ಅರ್ಥಗಳ ಸನ್ನಿಕರ್ಷ ವಿಷಯದಲ್ಲಿ ವಾದವಿವಾದ ನಿರಾಕರಣೆಯು ಹಾಗೂ ಸ್ವಮತದ ರೀತಿಯಿಂದ ಸನ್ನಿಕರ್ಷದ ಸಮರ್ಥನೆಯು.**

೮. ನಮ್ಮ ಸಿದ್ಧಾಂತದಂತೆ ಪ್ರತ್ಯಕ್ಷದ ಸ್ವರೂಪವನ್ನು ಹೇಳಿದ್ದಾಯಿತು. ಈಗ ಇಂದ್ರಿಯ ಹಾಗೂ ಅರ್ಥಗಳಿಗಿರುವ ಸನ್ನಿಕರ್ಷವು ಎಲ್ಲೆಡೆಗೂ ಸಾಕ್ಷಾತ್ತಾಗಿರುವದೇ ಹೊರತು ಕೆಲವೆಡೆ ಸಾಕ್ಷಾತ್ತಾಗಿ, ಇನ್ನು ಕೆಲವೆಡೆ ಪರಂಪರೆಯಾಗಿ ಇರಲಾರದೆಂಬುದನ್ನು ನಿಶ್ಚಯ ಮಾಡುವದಕ್ಕಾಗಿ, ಪರಮತವನ್ನು ಅನುವಾದ ಮಾಡಿ ನಿರಾಕರಿಸಲಾಗುತ್ತದೆ.

೧] ನೈಯಾಯಿಕರ ಮತವು:- ನೈಯಾಯಿಕರು ಸಾಕ್ಷಾತ್ಕಾರ ಜ್ಞಾನಕ್ಕೆ ಕಾರಣವಾದ, ಅರ್ಥ ಹಾಗೂ ಇಂದ್ರಿಯ ಸನ್ನಿಕರ್ಷವು ಆರು ಪ್ರಕಾರವೆಂದು ಹೇಳುತ್ತಾರೆ. ಅವೆಂದರೆ, ೧) ಸಂಯೋಗ ೨) ಸಂಯುಕ್ತ ಸಮವಾಯ, ೩) ಸಂಯುಕ್ತ ಸಮವೇತ ಸಮವಾಯ, ೪) ಸಮವಾಯ ೫) ಸಮವೇತ ಸಮವಾಯ, ಹಾಗೂ ವಿಶೇಷಣ-ವಿಶೇಷ್ಯ ಭಾವ. ಇವುಗಳ ವಿವರಣೆ ಹೀಗೆ- ೧] ಚಕ್ಷುರೀಂದ್ರಿಯಕ್ಕೂ ಘಟ ಮೊದಲಾದ ವಸ್ತುಗಳಿಗೂ ಪರಸ್ಪರವಿರುವ ಸನ್ನಿಕರ್ಷವು ಸಂಯೋಗವು

೨] ಚಕ್ಷುರೀಂದ್ರಿಯಕ್ಕೂ, ಘಟದಲ್ಲಿರುವ ಅದರ ರೂಪಕ್ಕೂ, ಇರುವ ಸನ್ನಿಕರ್ಷವು ಸಂಯುಕ್ತ ಸಮವಾಯ ಸನ್ನಿಕರ್ಷವು. ವಿವರಣೆ- ಚಕ್ಷುರೀಂದ್ರಿಯಕ್ಕೂ ಘಟಕ್ಕೂ ಸಂಯೋಗವು ಆದರೆ ಘಟದ ರೂಪವು ಘಟದಲ್ಲಿ ಸಮವಾಯ ಸಂಬಂಧದಿಂದಿರುವದರಿಂದ ಚಕ್ಷುರೀಂದ್ರಿಯಕ್ಕೂ ಘಟದ ರೂಪಕ್ಕೂ ಸಂಯುಕ್ತ ಸಮವಾಯ ಸನ್ನಿಕರ್ಷವು

೩] ಚಕ್ಷುರೀಂದ್ರಿಯಕ್ಕೂ ಘಟದ ರೂಪ, ಕ್ರಿಯಾದಿಗಳಲ್ಲಿರುವ ರೂಪತ್ವ ಮೊದಲಾದ ಧರ್ಮಗಳಿಗೂ ಇರುವ ಸನ್ನಿಕರ್ಷವು. ಸಂಯುಕ್ತ ಸಮವೇತ ಸಮವಾಯ

एवमेव त्वग्घ्राणरसनानामपि, तत्तद्विषयगुणकर्मसामान्यैः संबंधोज्ञेयः । (४) श्रोत्रस्य शब्देन समवायः, कर्णशष्कुल्यवच्छिन्ननभसः श्रोत्रत्वात्, शब्दस्याकाशगुणत्वाच्च, तद्गतशब्दत्वादिसामान्यैः समवेतसमवायः संबंधो ज्ञातव्यः (६) चक्षुषा घटाभावेन विशेषणविशेष्यभावः सन्निकर्षः, भूतले घटो नास्तीत्यत्र, चक्षुःसंयुक्तस्य भूतलस्य विशेषणत्वात् घटाभावस्य विशेष्यत्वाच्च । घटाभाववद्भूतलमित्यत्र चक्षुःसंयुक्तस्य भूतलस्य विशेष्यत्वं घटाभावस्य विशेषणत्वं चेति ।

तदेतदप्यसत्—(२) गुणादीनां गुण्यादिभिरभेदांगीकारेण तथा समवायस्य अभावात्,

---

ಸನ್ನಿಕರ್ಷವು- [ ವಿವರಣೆ— ಘಟದಲ್ಲಿ ರೂಪವು ಸಮವಾಯ ಸಂಬಂಧದಿಂದ ಇರುತ್ತದೆ. ಕಾರಣ ಚಕ್ಷುರಿಂದ್ರಿಯಕ್ಕೂ ರೂಪಕ್ಕೂ ಸಂಯುಕ್ತ ಸಮವೇತ ಸಮವಾಯ ಸಂಬಂಧವಿರುವದು]·

೪] ಶಬ್ದದಿಂದ ಶ್ರೋತ್ರೇಂದ್ರಿಯಕ್ಕಿರುವ ಸನ್ನಿಕರ್ಷವು ಸಮವಾಯ ಸನ್ನಿಕರ್ಷವು. [ಶ್ರೋತ್ರದಲ್ಲಿ ಶಬ್ದವು ಸಮವಾಯ ಸಂಬಂಧದಿಂದ ಇವೆ] ಏಕೆಂದರೆ ಚಕ್ಕುಲಿಯಂತಿರುವ ಕಿವಿಯ ಒಳಗಿರುವ ಆಕಾಶವೇ ಶ್ರೋತ್ರವಾಗಿರುವದರಿಂದ, ಹಾಗೂ ಶಬ್ದವು ಆಕಾಶದ ಗುಣವಾದುದರಿಂದ, ಅವುಗಳಿಗೆ ಸಮವಾಯ ಸಂಬಂಧವೆಂದು ತಿಳಿಯಬೇಕು.

೫] ಶ್ರೋತ್ರೇಂದ್ರಿಯಕ್ಕೂ ಶಬ್ದದಲ್ಲಿರುವ '' ಶಬ್ದತ್ವ''ಕ್ಕೂ ಸಮವೇತ ಸಮವಾಯ ಸನ್ನಿಕರ್ಷವು [ ಗುಣ-ಗುಣಿಗಳಲ್ಲಿ ಸಮವಾಯವೆಂಬ ನಿಯಮದಂತೆ] ಶಬ್ದಕ್ಕೂ ಅದರಲ್ಲಿಯ ''ಶಬ್ದತ್ವ'' ಧರ್ಮಕ್ಕೂ ಸಮವಾಯ ಸಂಬಂಧವಿರುವದರಿಂದ ಶ್ರೋತ್ರೇಂದ್ರಿಯಕ್ಕೂ ಶಬ್ದತ್ವಕ್ಕೂ ಸಮವೇತ ಸಮವಾಯ ಸಂಬಂಧವಾಗುವದು.

೬] ಚಕ್ಷುರಿಂದ್ರಿಯಕ್ಕೂ ಘಟದ ಅಭಾವಕ್ಕೂ ಇರುವ ಸನ್ನಿಕರ್ಷವು, ವಿಶೇಷಣ-ವಿಶೇಷ್ಯಭಾವ ಸನ್ನಿಕರ್ಷವು ''ನೆಲದ ಮೇಲೆ ಘಟವಿಲ್ಲ'' ಎಂಬ ಜ್ಞಾನದಲ್ಲಿ ಚಕ್ಷುರಿಂದ್ರಿಯಕ್ಕೆ ಸಂಬಂಧ ಹೊಂದಿದ ಭೂತಲವು ವಿಶೇಷ್ಯವು. ಘಟದ ಅಭಾವವು ವಿಶೇಷಣವು ಆದರೆ 'ಭೂತಲವು ಘಟಾಭಾವವುಳ್ಳದ್ದು' ಎಂಬ ಜ್ಞಾನದಲ್ಲಿ, ಭೂತಲವು ವಿಶೇಷ್ಯವು, ಘಟಾಭಾವವು ವಿಶೇಷಣವು. ಇದೇ - ವಿಶೇಷಣ-ವಿಶೇಷ್ಯ ಭಾವ ಸನ್ನಿಕರ್ಷವು.

ಆದರೆ ನೈಯಾಯಿಕರು ಹೀಗೆ ಹೇಳಿದ್ದು ಸರಿಯಲ್ಲ. ಗುಣ-ಗುಣಿಗಳಿಗೆ ಅಭೇದವಿರುವದರಿಂದ, [ಎಂದರೆ ಘಟಕ್ಕೂ ಅದರ ರೂಪಕ್ಕೂ ಅಭೇದವಿರುವದರಿಂದ ಸಮವಾಯ

समवायसम्भावे प्रमाणाभावाच्च आत्मनस्तद्धर्माणां साक्षिविषयत्वेन मनोविषयत्वाभावात् आत्ममनसोः नसंयोगसन्निकर्षः तद्धर्मैश्चनसंयुक्तसमवाय सन्निकर्ष इतिभावः

४ ) वर्णात्मकशब्दस्य द्रव्यत्वेनाकाशगुणत्वाभावाच्च, तथा च इंद्रियाणां तैजसत्वात्, वस्तुप्राप्यप्रकाशकारित्वनियमेन, सर्वेषामिंद्रियाणां स्वस्वविषयैः सह स्वस्वविषयप्रतियोगिकाभावेन च साक्षादेक एव सन्निकर्षः, न तु पूर्वोक्तरीत्या परंपरयेति । अत्र भावविवरणे -- " रश्मिद्वारेति " इंद्रियाणां तैजसत्वादुक्तं

---

ಸಂಬಂಧವೇ ಇಲ್ಲವಾಗಿ, ಸಮವಾಯ ಸಂಬಂಧವೆಂಬುದು ಅಪ್ರಮಾಣಿಕವಾಗಿದೆ. ಹಾಗೆಯೇ ಸಂಯುಕ್ತ ಸಮವಾಯ ಹಾಗೂ ಸಮವೇತ ಸಂಬಂಧಗಳೂ [ಅಭೇಧವಿರುವದರಿಂದ] ಕೂಡುವದಿಲ್ಲ.

೩] ಇನ್ನೂ "ಸಂಯೋಗ"ವು ಸಂಬಂಧ ಸಾಮಾನ್ಯವೆಂದು ಹೇಳಿದರೂ ಸಾಕ್ಷಿ ಪ್ರತ್ಯಕ್ಷದಲ್ಲಿ ಆತ್ಮ ಹಾಗೂ ಆತ್ಮನ ಧರ್ಮಗಳಾದ ಸುಖ ದುಃಖಾದಿಗಳು ಸಾಕ್ಷೀ ವಿಷಯಗಳೇ ಹೊರತು ಮನೋ ವಿಷಯಗಳಲ್ಲದ್ದರಿಂದ, ಅಲ್ಲಿ 'ಸಂಯೋಗ'ವೇ ಕೂಡುವದಿಲ್ಲ. ಅದರಂತೆ, ಆತ್ಮಕ್ಕೂ ಆತ್ಮನ ಧರ್ಮಗಳಿಗೂ ಅಭೇದ ಸಂಬಂಧವಿರುವ ಕಾರಣ, ಸಂಯುಕ್ತ ಸಮವಾಯ ಸನ್ನಿಕರ್ಷವೂ ಕೂಡುವದಿಲ್ಲ. ಆದ್ದರಿಂದ ಸಂಯುಕ್ತ ಸಮವಾಯ ಸನ್ನಿಕರ್ಷಗಳೂ ಅಪ್ರಮಾಣಿಕವಾದವುಗಳು.

೪] ಧ್ವನ್ಯಾತ್ಮಕ ಶಬ್ದವು ಆಕಾಶ ವಿಶೇಷ ಗುಣವಾದರೂ, ವರ್ಣಾತ್ಮಕ ಶಬ್ದವು ದ್ರವ್ಯವಾದ್ದರಿಂದ ಅದು ಆಕಾಶ ವಿಶೇಷ ಗುಣವಾಗಲಾರದು. ಕಾರಣ ಶ್ರೋತ್ರೇಂದ್ರಿಯಕ್ಕೂ ಶಬ್ದತ್ವಕ್ಕೂ' ಸಮವೇತ ಸಮವಾಯ ಸನ್ನಿಕರ್ಷ ಕೂಡುವದಿಲ್ಲ. ಹೀಗೆ ಅದೂ ಅಪ್ರಮಾಣಿಕವು. ಅಲ್ಲದೇ, ಇಂದ್ರಿಯಗಳು ತೈಜಸಾಹಂಕಾರದಿಂದ ಹುಟ್ಟಿದುದರಿಂದ ಅವು ವಸ್ತುವಿರುವಲ್ಲಿ ತೇಜಸ್ಸಿನ ಮೂಲಕ ಹೋಗಿ ಗ್ರಹಿಸುವದು ಆದ್ದರಿಂದ, ಇಂದ್ರಿಯಗಳಿಗೂ ಅವುಗಳ ವಿಷಯಗಳಿಗೂ, [ಸ್ವವಿಷಯ] ಆದರಂತೆ ಇಂದ್ರಿಯಗಳಿಗೂ ಅವುಗಳ ವಿಷಯ [ಸ್ವವಿಷಯ] ಪ್ರತಿಯೋಗಿಕ ಅಭಾವಕ್ಕೂ, ಸಾಕ್ಷಾತ್ ಸನ್ನಿಕರ್ಷವೇ ಹೊರತು, ಮೇಲಿನಂತೆ ಪರಂಪರೆಯಾದ ಸನ್ನಿಕರ್ಷವಿಲ್ಲ.

ಈ ವಿಷಯದಲ್ಲಿ ಪ್ರಮಾಣ ಪದ್ಧತಿಯಲ್ಲಿ ಹೇಳುವ "ರಶ್ಮಿದ್ವಾರಾ" ಎಂಬ ವಾಕ್ಯಕ್ಕೆ, ಶ್ರೀ ವೇದೇಶ ತೀರ್ಥರು ತಮ್ಮ "ಭಾವ ವಿವರಣೆ" ಎಂಬ ಟಿಪ್ಪಣೆಯಲ್ಲಿ ಹೀಗೆ ಹೇಳುತ್ತಾರೆ- ಇಂದ್ರಿಯಗಳು ತೈಜಸಗಳಾದುದರಿಂದ 'ರಶ್ಮಿದ್ವಾರಾ' ಎಂದು

तथा च १) वीचीतरंगन्यायेन २) कदंबमुकुलन्यायेन वा शब्दः शब्दांतरमारभते, यस्तु कर्णशष्कुल्यवच्छिन्नशब्दः, स एव **श्रोत्रेण** गृह्यत इति यन्मतं तदसमंजसमित्युक्तं भवति, श्रोत्रस्यैव रश्मिद्वारा गमनोपपत्तेः। विस्तरस्तु, अन्यत्रानुसन्धेयः। रश्मिद्वारा इत्यत्र तत्तदिंद्रियैकदेशद्वारा इत्यर्थ इति केचित् (**विजयीन्द्र०**) अन्ये तु चक्षुरभिप्रायेणेदमुक्तमित्याहुः ) **राघवेंद्र०** )

**॥ इति इंद्रियार्थयोः सन्निकर्षविषये वादिविवादनिराकरणपूर्वकं स्वमते सन्निकर्षसमर्थनम् ॥**

१) एवं सन्निकर्षविषये वादिविवादं निरस्य परोक्तप्रत्यक्षविभागं दूषयितुं अनूद्यते--

---

ಹೇಳಲಾಗಿದೆ. ಒಟ್ಟಿನಲ್ಲಿ ಶ್ರೋತ್ರೇಂದ್ರಿಯವೇ ತನ್ನ ಕಿರಣಗಳ ಮೂಲಕ ಶಬ್ದವಿದ್ದಲ್ಲಿ ಹೋಗಿ ಗ್ರಹಿಸುವದರಿಂದ 'ವೀಚೀತರಂಗ ನ್ಯಾಯದಿಂದ', ಹಾಗೂ 'ಕದಂಬಮುಕುಲ ನ್ಯಾಯದಿಂದ' ಶಬ್ದವು ಶಬ್ದಾಂತರಗಳನ್ನು ಹುಟ್ಟಿಸಿ, ಕರ್ಣಪಟಲಗಳಿಗೆ ಶಬ್ದ ಸಂಬಂಧವಾದಾಗ್ಗೆ, ಆ ಶಬ್ದವನ್ನೇ ಶ್ರೋತ್ರೇಂದ್ರಿಯವು ಗ್ರಹಣ ಮಾಡುತ್ತದೆಂದು ಹೇಳತಕ್ಕ ಮತವು ಅಸಮಂಜಸವೆಂದು ಹೇಳಿದಂತಾಯಿತು. [ವಿವರಣೆ-'ವೀಚಿತರಂಗ ನ್ಯಾಯ'ವೆಂದರೆ ನೀರಿನಲ್ಲಿ ಕಲ್ಲು ಒಗೆದಾಗ, ನೀರಿನತರಂಗಗಳು ಒಂದು ಇನ್ನೊಂದನ್ನು ಹುಟ್ಟಿಸುತ್ತ ದಂಡೆಯವರೆಗೆ ಹೋಗುವದು 'ಕದಂಬ ಮುಕುಲ ನ್ಯಾಯ'ವೆಂದರೆ ನೀರಿನಲ್ಲಿ ಕಮಳದ ಮೊಗ್ಗು ಬಿದ್ದಾಗ, ಅದೇ ತೇಲುತ್ತ ತೇಲುತ್ತ ದಂಡೆಯವರೆಗೆ ಹೋಗುವದು] ಇದರ ವಿಸ್ತಾರವು ಬೇರೆಡೆಗೆ [ವಿಷ್ಣುತತ್ವ ನಿರ್ಣಯದಲ್ಲಿ] ಇದ್ದು, ಅಲ್ಲಿ ನೋಡಬಹುದು.

ಶ್ರೀ ಮಜ್ಜಯತೀರ್ಥರು [ಪ್ರಮಾಣ ಪದ್ಧತಿಯಲ್ಲಿ] ಹೇಳಿದ "ರಶ್ಮಿದ್ವಾರಾ" ಎಂಬ ಪದಗಳ ವಿಷಯದಲ್ಲಿ ಶ್ರೀ ವಿಜಯೀಂದ್ರ ತೀರ್ಥ ಶ್ರೀ ಪಾದಂಗಳವರು, ಆ ಆ ಇಂದ್ರಿಯಗಳು ತಮ್ಮ ಏಕದೇಶದಿಂದ ಹೋಗುವದಾಗಿಯೂ, ಶ್ರೀ ರಾಘವೇಂದ್ರ ತೀರ್ಥ ಶ್ರೀ ಪಾದಂಗಳವರು ಚಕ್ಷುರಿಂದ್ರಿಯವು ಮಾತ್ರ ರಶ್ಮಿದ್ವಾರಾ ಹೋಗುವದೆಂಬ ಅಭಿಪ್ರಾಯದಿಂದ ಹೇಳಿದುದು ಎಂದು ಅಭಿಪ್ರಾಯ ಪಟ್ಟಿದ್ದಾರೆ.

**ಪರವಾದಿಗಳು ಹೇಳುವ ನಿರ್ವಿಕಲ್ಪ ಪ್ರತ್ಯಕ್ಷ ವಿಭಾಗದ ನಿರಾಕರಣೆ ಹಾಗೂ ಸವಿಕಲ್ಪಕ ಪ್ರತ್ಯಕ್ಷದ ಸಮರ್ಥನೆ–**

೧] ಸನ್ನಿಕರ್ಷ ವಿಷಯದಲ್ಲಿ ವಾದಿಗಳ ವಿವಾದವನ್ನು ಈ ರೀತಿ ಪರಿಹರಿಸಿದ ಬಳಿಕ, ಪರವಾದಿಗಳಿಂದ ಹೇಳಿದ ಪ್ರತ್ಯಕ್ಷ ವಿಭಾಗವನ್ನು ದೂಷಿಸಲು,

निर्विकल्पकसविकल्पकभेदेन च द्विविधं प्रत्यक्षमित्याचक्षते। तथा हि। १) तत्र वस्तुस्वरूपमात्रावभासकं निर्विकल्पकं, तथा च गुणगुण्यादिसंबंधमगृहीत्वा द्रव्यस्वरूपं गुणकर्मादिस्वरूपमात्रं वा यद् ज्ञानं विषयीकरोति तदित्यर्थः ।

२) विशिष्टगोचरं-सविकल्पकं, गुणगुण्यादिसंबंधावगाहिज्ञानमिति यावत् ! तत्सविकल्पकमष्टविधं, तथा हि--

१) द्रव्यविकल्पः--यथा दंडीति, २) गुणविकल्पः--यथा शुक्लः, ३) क्रियाविकल्पः,-यथा गच्छति, ४) जातिविकल्पः,-यथा गौरिति. ५) विशेषविकल्पः, यथा विशिष्टः परमाणुः, (योगिनामिदं ज्ञानमिति द्रष्टव्यं) ६) समवायविकल्पः--यथा पटसमवायवंतस्तंतवः, ७) नामविकल्पः--यथा देवदत्तः, ८) अभावविकल्पः-यथा घटाभाववद् भूतलम् ।

---

ಅವನ್ನು ಅನುವಾದಿಸಲಾಗುತ್ತದೆ. [ನೈಯಾಯಿಕರಂತೆ] ಪ್ರತ್ಯಕ್ಷವು ನಿರ್ವಿಕಲ್ಪಕ ಹಾಗೂ ಸವಿಕಲ್ಪಕವೆಂದು ಎರಡು ವಿಧ. ೧] ವಸ್ತುವಿನ ಸ್ವರೂಪ ಮಾತ್ರವನ್ನು ಗ್ರಹಿಸತಕ್ಕ ಜ್ಞಾನವು (ಗುಣಾದಿಗಳನ್ನು ಗ್ರಹಿಸದೇ ಇದ್ದುದು) ನಿರ್ವಿಕಲ್ಪವು. ಈ ಜ್ಞಾನವು ಗುಣ ಗುಣಿಗಳ ಸಂಬಂಧವನ್ನು ಗ್ರಹಿಸಲಾರದೇ , ಕೇವಲ ದ್ರವ್ಯ ಸ್ವರೂಪವನ್ನೇ, ಮತ್ತು ಗುಣ, ಕರ್ಮಗಳ ಸ್ವರೂಪ ಮಾತ್ರವನ್ನು ಗ್ರಹಿಸುವದೆಂದು ಅರ್ಥವು.

೨) ಗುಣ-ಗುಣಿಗಳ ಸಂಬಂಧವನ್ನು ಗ್ರಹಿಸತಕ್ಕ ಜ್ಞಾನವು ಸವಿಕಲ್ಪಕವು. ಈ ಸವಿಕಲ್ಪಕವು ಎಂಟು ಪ್ರಕಾರವಾಗಿರುವದು. ಅವೆಂದರೆ.

೧) ದ್ರವ್ಯವಿಕಲ್ಪ-ಉದಾಹರಣೆ-''ದಂಡವುಳ್ಳವನು''

೨) ಗುಣವಿಕಲ್ಪ-ಉದಾಹರಣೆ-'ಇದು ಶುಕ್ಲವು [ಬಿಳಿಯದು]

೩) ಕ್ರಿಯಾವಿಕಲ್ಪ-ಉದಾ:-'ಹೋಗುತ್ತಾನೆ'

೪) ಜಾತಿವಿಕಲ್ಪ-ಉದಾ:-ಆಕಳು [ಗೋವು]

೫) ವಿಶೇಷವಿಕಲ್ಪ-ಉದಾ:- ಪರಮಾಣು ವಿಶೇಷವು [ಯೋಗಿಗಳಿಗೆ ಈ ಜ್ಞಾನವುಂಟು]

೬) ಸಮವಾಯವಿಕಲ್ಪ-ಉದಾ:- ಬಟ್ಟೆಯೊಂದಿಗೆ ಸಮವಾಯ ಸಂಬಂಧವುಳ್ಳವು ತಂತುಗಳು,

೭) ನಾಮವಿಕಲ್ಪ-ಉದಾ:- ಇವನು ದೇವದತ್ತನು.

೮) ಅಭಾವವಿಕಲ್ಪ-ಉದಾ:-ಭೂತಲವು ಘಟದ ಅಭಾವವುಳ್ಳದ್ದು.

एवं प्रत्यक्षद्वैविध्यं, तथा सविकल्पकेऽष्टविधत्वं च यदुक्तं, तदसत्। १) प्रतिवाद्यंगीकृतविशेषसमवाययोरप्रमाणिकत्वात्। विशेषविकल्पः, समवायविकल्पश्चेति द्वौ विकल्पौ अयुक्तौ। तथा च अष्टविधत्वमनुपपन्नम्

ननु समानगुणकर्मजातिमत्सु पृथिवीत्वाद्यवान्तरजातिरहितेषु परमाणुषु परस्परं व्यावृत्तिबुद्धिः योगिनामुदेति, सा च, तेषु व्यावर्तकधर्माभावे न भवितुमर्हति, अतः, तेषु व्यावृत्तिबुद्ध्यन्यथानुपपत्त्या व्यावर्तकधर्माः स्वीकार्याः, त एव विशेषा इति, कथं विशेषो अप्रामाणिक इति चेन्मैवं - विशेषेष्विव परमाणुष्वपि स्वरूपेणैवासंकीर्णतया व्यावृत्तिबुद्ध्युपपत्तेः।

---

ಈ ರೀತಿ ಪ್ರತ್ಯಕ್ಷ ಎರಡು ವಿಧವೆಂದು ಹೇಳಿದುದೂ, ಹಾಗೂ ಸವಿಕಲ್ಪಕ ಎಂಟು ಪ್ರಕಾರವೆಂದು ಹೇಳಿದುದೂ ಅಯುಕ್ತವು.

೧) ಮೊದಲಿನವುಗಳಲ್ಲಿಯ ವಿಶೇಷವಿಕಲ್ಪ ಹಾಗೂ ಸಮವಾಯ ವಿಕಲ್ಪಗಳೆರಡೂ, ಪ್ರತಿವಾದಿಗಳಿಂದ ಅಂಗೀಕೃತವಾದ "ವಿಶೇಷ" ಹಾಗೂ 'ಸಮವಾಯ'ಗಳೇ ಅಪ್ರಮಾಣಿಕವೆಂದಾದ, ಮೇಲೆ ಕೂಡುವದೆಂತು? ಅವು ಅಯುಕ್ತವೆಂದಾದ ಬಳಿಕ ಎಂಟು ಪ್ರಕಾರವೆಂಬ ವಿಭಾಗವು ಕೂಡುವದಿಲ್ಲ.

ಶಂಕಾ–ಪರಮಾಣುಗಳು ಸಮಾನ ಗುಣಕರ್ಮ ಜಾತಿಯುಳ್ಳವಾಗಿದ್ದು, ಪೃಥಿವಿತ್ವ ಮುಂತಾದ ಅವಾಂತರ ಜಾತಿರಹಿತವಾಗಿವೆ. (ಪೃಥಿವೀ ಪರಮಾಣುವಿನಲ್ಲಿ ಗಂಧ, ಕ್ರಿಯಾ, ಪೃಥಿವಿತ್ವ ಜಾತಿಯಿದ್ದರೂ, ಅವು ಕಾರ್ಯರೂಪವಾಗಿಲ್ಲ. ಕಾರಣ ಕಾರ್ಯರೂಪವಾದ ಪೃಥಿವೀತ್ವವೆಂಬ ಅವಾಂತರ ಜಾತಿ ಪರಮಾಣುವಿನಲ್ಲಿ ಇಲ್ಲವೆಂಬ ಭಾವವು) ಈ ಪರಮಾಣುಗಳ ಪರಸ್ಪರ ಭೇದ ಜ್ಞಾನವು ಯೋಗಿಗಳಿಗೆ ಆಗುತ್ತದೆ. ಈ ಭೇದ ಜ್ಞಾನವಾಗಬೇಕಾದರೆ, ಪರಮಾಣುಗಳಲ್ಲಿಯೇ ವ್ಯಾವರ್ತಕ ಧರ್ಮಗಳಿರಬೇಕು. ಆ ವ್ಯಾವರ್ತಕ ಧರ್ಮಗಳೇ ಅವುಗಳ ವಿಶೇಷಗಳು. ಹೀಗೆ ಅನ್ಯಥಾ ಅನುಪಪತ್ತಿ ಎಂಬ ಅರ್ಥಾಪತ್ತಿ ಪ್ರಮಾಣದಿಂದ "ವಿಶೇಷವು" ಸಿದ್ಧವಾಗಲು ಅದು ಅಪ್ರಮಾಣವು ಹೇಗೆ? ಎಂಬ ಸಂಶಯ ಸರಿಯಲ್ಲ ಏಕೆಂದರೆ, ವಿಶೇಷಗಳಲ್ಲಿ ಸ್ವಾಭಾವಿಕವಾಗಿ ಪರಸ್ಪರ ಅವುಗಳಿಗೆ ಭೇದ ಜ್ಞಾನ ಹೇಗೆ ಆಗುವದೋ, ಹಾಗೆಯೇ ಪರಮಾಣುಗಳಲ್ಲಿಯೂ ಸ್ವಾಭಾವಿಕವಾಗಿ ಸಂಕೀರ್ಣವಾಗದೇ ಪರಸ್ಪರ ಭೇದ ಜ್ಞಾನ ಹುಟ್ಟುತ್ತವೆಂಬುದೂ ಸಿದ್ಧಿಸುತ್ತದೆ.

अन्यथा विशेषेष्वपि व्यावृत्तिबुद्धिजनकतया विशेषांतरकल्पनापत्त्या अनवस्थापत्तेः, तथा च विशेषोऽप्रामाणिक इति ।

२ ) एवं समवायोऽप्यप्रामाणिक एव, 'इमौ संयुक्तौ' इतिवत् इमौ समवेतौ इति प्रत्यक्षेणाननुभवात्, तथा समवायं जानामिति अनुव्यवसायाभावाच्च, तस्मात्तयोर्विकल्पयोरप्रामाणिकत्वं युक्तम् ।

३ ) ननु द्रव्यादिविकल्पानां विशिष्टज्ञानत्वेन, तस्य च विशेषणज्ञानजन्यत्वावश्यंभावादेव तज्जनकं यद्विशेषणज्ञानं तदेव निर्विकल्पकमंगीकार्यमिति चेन्न-युगपद् विशेष्यविशेषणेंद्रियसन्निकर्षेणैव विशिष्टज्ञानोपपत्तौ विशेषणज्ञानस्यापि तत्र करणत्वे मानाभावात् ।

---

ಇದನ್ನು ಒಪ್ಪದಿದ್ದಲ್ಲಿ , ವಿಶೇಷಗಳಲ್ಲಿ ಕೂಡ ಭೇಧ ಜ್ಞಾನ ಹುಟ್ಟಿಸುವದಕ್ಕಾಗಿ ಮತ್ತೊಂದು ವಿಶೇಷವನ್ನು ಹೇಳಬೇಕು. ಆ ವಿಶೇಷದಲ್ಲಿ ಭೇದ ಜ್ಞಾನ ಹುಟ್ಟಲು ಇನ್ನೊಂದು ವಿಶೇಷವನ್ನು ಹೇಳಬೇಕು. ಹೀಗೆ ವಿಶೇಷಾಂತರಗಳ ಕಲ್ಪನೆ ಮಾಡುತ್ತ ಹೋಗಿ ಅನವಸ್ಥಾದೋಷ ಬರುತ್ತದೆ ಆದ್ದರಿಂದ 'ವಿಶೇಷ' ವೆಂಬುದು ಅಪ್ರಮಾಣಿಕವೇ ಸರಿ.

೨) ನೈಯಾಯಿಕರು ಹೇಳುವ ಸಮವಾಯವೂ ಇದೇ ರೀತಿ ಅಪ್ರಮಾಣಿಕವೇ ಆಗಿದೆ. ಏಕೆಂದರೆ, "ಇವೆರಡೂ ಸಂಯೋಗವುಳ್ಳವು" ಎಂಬ ಅನುಭವ ಬಂದಂತೆ, "ಇವು ಸಮವಾಯವುಳ್ಳವು" ಎಂಬ ಅನುಭವ ನಮಗೆ ಬರುವದಿಲ್ಲ. ಅದರಂತೆಯೇ, "ನಾನು ಸಮವಾಯವನ್ನು ತಿಳಿಯುತ್ತೇನೆಂಬ ಸಾಕ್ಷೀ ಜ್ಞಾನವೂ ಬರಲಾರದು. ಕಾರಣ "ಸಮವಾಯ ವಿಕಲ್ಪ" ಹಾಗೂ "ವಿಶೇಷ ವಿಕಲ್ಪ " ವೆಂದು ಹೇಳಿದ್ದು ಸರಿಯಲ್ಲ.

೩) ಶಂಕಾ– ದ್ರವ್ಯಾದಿ ವಿಕಲ್ಪಗಳು ವಿಶಿಷ್ಟ ಜ್ಞಾನ ಸ್ವರೂಪಗಳು (ಎಂದರೆ ವಿಶೇಷಣ–ವಿಶೇಷ್ಯಗಳ ಸಂಬಂಧ ಗ್ರಹಿಸತಕ್ಕ ಜ್ಞಾನ ರೂಪಗಳು) ಈ ವಿಶಿಷ್ಟ ಜ್ಞಾನವು ವಿಶೇಷಣ ಜ್ಞಾನದಿಂದಲೇ ಹುಟ್ಟಬೇಕು. ವಿಶಿಷ್ಟ ಜ್ಞಾನದ ಉತ್ಪತ್ತಿಗೆ ಕಾರಣವಾದ ವಿಶೇಷಣ ಜ್ಞಾನವೇ "ನಿರ್ವಿಕಲ್ಪಜ್ಞಾನ" ವೆಂದು ಹೇಳಿದ್ದು ಅಪ್ರಾಮಾಣಿಕವಾಗಲಾರದೆಂದು ಶಂಕೆ ಮಾಡಿದಲ್ಲಿ, ಅದು ಸರಿಯಲ್ಲ. ಏಕಕಾಲದಲ್ಲಿಯೇ ವಿಶೇಷಣ ವಿಶಿಷ್ಯಗಳ ಸನ್ನಿಕರ್ಷವು ಇಂದ್ರಿಯಗಳಿಗಾಗಿ 'ವಿಶಿಷ್ಟ ಜ್ಞಾನವು' ಹುಟ್ಟುವದರಿಂದ, ವಿಶೇಷಣ ಜ್ಞಾನವು ವಿಶಿಷ್ಟ ಜ್ಞಾನೋತ್ಪತ್ತಿಗೆ ಕಾರಣವೆಂಬಲ್ಲಿ ಪ್ರಮಾಣವಿಲ್ಲ. (ಕಾರಣ "ನಿರ್ವಿಕಲ್ಪಕ"ವೆಂದು ಪ್ರತ್ಯಕ್ಷ ಪ್ರಭೇದ ಮಾಡಿದ್ದು ಸರಿಯಲ್ಲ.

४) ननु द्रव्यादिविकल्पापेक्षयापूर्वं वस्तुदर्शनाभावेपि नामाभावविकल्पयोः पूर्वं वस्तुमात्रावगाहि ज्ञानमङ्गीकार्यं, न हि नाम्यधिकरणयोर्दर्शने नामप्रतियोगिनोः स्मृतिः, एवं च उभयविकल्पयोः, पूर्वं वस्तुमात्रावगाहि, नामप्रतियोगिस्मरणजनक ज्ञानमङ्गीकार्यं, तदेव निर्विकल्पकमिति, कथं तदसिद्धिरिति चेत्, सत्यं, तथापि निर्विकल्पकानुपपत्तिरेव, नामप्रतियोगिस्मरणजनकनाम्यधिकरणज्ञानयोरपि यत्किंचित्प्रकारावगाहित्वेन निर्विकल्पकत्वाभावादिति ध्येयम् ।

इति निर्विकल्पकनिराकरणेन सविकल्पकज्ञानसमर्थनम् ।

१०) हानोपादानोपेक्षाबुद्धयः प्रत्यक्षफलमिति केचिदाहुः,

---

೪] ಶಂಕಾ- ದ್ರವ್ಯ ಮೊದಲಾದ ಆರು ವಿಕಲ್ಪಗಳಿಗೆ ಪೂರ್ವದಲ್ಲಿ ವಸ್ತು ಮಾತ್ರಾವಗಾಹಿ ಜ್ಞಾನವು ಬೇಕಾಗಿಲ್ಲವೆಂದರೂ, "ನಾಮ ವಿಕಲ್ಪ" ಹಾಗೂ "ಅಭಾವವಿಕಲ್ಪ" ಗಳ ಜ್ಞಾನವಾಗಬೇಕಾದರೆ, ಪೂರ್ವದಲ್ಲಿ ವಸ್ತು ಮಾತ್ರ ಗ್ರಹಿಸತಕ್ಕ ಜ್ಞಾನವು ಬೇಕು ಏಕೆಂದರೆ, ನಾಮವುಳ್ಳವನೇ ನಾಮಿಯು' ಹಾಗೂ ಅಭಾವಕ್ಕೆ ಆಶ್ರಯವಾದುದೇ ಅಧಿಕರಣವು ಆಗಿದ್ದು, ಇವೆರಡರ ಜ್ಞಾನವಾಗದೇ ನಾಮ ಹಾಗೂ ಅಭಾವ ಪ್ರತಿಯೋಗಿಯ ಸ್ಮರಣೆ ಬರಲಾರದ ಕಾರಣ, ಪೂರ್ವದಲ್ಲಿ "ನಾಮಿ" ಹಾಗೂ "ಅಧಿಕರಣ" ಜ್ಞಾನವು ಅವಶ್ಯಕವು [ಎಂದರೆ, ದೇವದತ್ತನೆಂಬ ನಾಮವುಳ್ಳ 'ವ್ಯಕ್ತಿಯ ಜ್ಞಾನ' ಹಾಗೂ "ಭೂತಲ ಜ್ಞಾನ"ವು ಬಂದ ನಂತರವೇ "ಇವನು ದೇವದತ್ತನು" ಎಂಬ ನಾಮ ವಿಕಲ್ಪ ಜ್ಞಾನವು, ಹಾಗೂ "ಭೂತಲವು ಘಟಾಭಾವವುಳ್ಳ"ದ್ದೆಂಬ ಅಭಾವ ವಿಕಲ್ಪ ಜ್ಞಾನವು ಬರುತ್ತದೆಂಬ ಭಾವವು] ಆದ್ದರಿಂದ ಈ "ನಾಮಿ" ಹಾಗೂ "ಅಧಿಕರಣ" ಗಳ 'ಜ್ಞಾನವೇ' "ನಿರ್ವಿಕಲ್ಪಕ ಜ್ಞಾನ"ವಾಗಿದ್ದು ಅಪ್ರಮಾಣಿಕವು ಹೇಗೆ ? ಎಂದು ಶಂಕೆ ಮಾಡಬಹುದು- ಆದರೂ "ನಿರ್ವಿಕಲ್ಪವು" ಸಿದ್ಧಿಸಲಾರದು. ನಾಮ ಪ್ರತಿಯೋಗಿ ಸ್ಮರಣಕ್ಕೆ ಕಾರಣವಾದ 'ನಾಮಿ' ಜ್ಞಾನವೂ ಹಾಗೂ ಅಭಾವ ಜ್ಞಾನಕ್ಕೆ ಕಾರಣವಾದ ಅಧಿಕರಣ ಜ್ಞಾನವೂ ಒಂದಿಲ್ಲೊಂದು ಧರ್ಮವುಳ್ಳ [ಕಿಂಚಿತ್ ಪ್ರಕಾರವುಳ್ಳ] ಜ್ಞಾನಗಳೇ ಆಗಿದ್ದು, ಸವಿಕಲ್ಪಕವೇ ಆಗುವವಲ್ಲದೇ ನಿರ್ವಿಕಲ್ಪಕ [ ನಿರ್ಧರ್ಮಿಕ ] ವಾಗಿಲ್ಲ. ಹೀಗಾಗಿ 'ನಿರ್ವಿಕಲ್ಪಕ' ವಿಷಯದಲ್ಲಿ ಈ ಜ್ಞಾನವು ಪ್ರಮಾಣವಾಗಲಾರದು.

೧೦ ಅನುಪ್ರಮಾಣಗಳಲ್ಲೊಂದಾದ ಪ್ರತ್ಯಕ್ಷದ ಫಲವು

तदप्यसत् - तथा हि—कंटकादिस्वरूपं प्रदर्श्य प्रत्यक्षं चरितार्थं भवति, ततः कंटकादिसाक्षात्कारोऽयानंतरं पूर्वानुभूतस्य कंटकादेः अनिष्टसाधनत्वमनुभूतं स्मृत्वा अस्य च कंटकादित्वेन तदनुमिमानस्य हानादिबुद्धिरुपजायते. विमतं कंटकादि, अनिष्टसाधनं, कंटकादित्वात् प्रागनुभूतकंटकादिवत्, एवं कदलीफलादौ इष्टसाधनत्वानुमानानतरमुपादानबुद्धिः, तृणादौ औदासीन्यं चानुमाय उपेक्षाबुद्धिरुत्पद्यत इति ।

तथा च हानोपादानोपेक्षाबुद्धिनामनुमानफलत्वेन प्रत्यक्षफलत्वं न संभवति, तस्मात् द्रव्यादिगुणविशिष्टविषयकसाक्षात्कार एव प्रत्यक्षफलमित्युक्तं भवतीति ध्येयम् ।

इति अनुप्रमाणप्रस्तावे प्रत्यक्षफलनिरूपणम् ।

इति अनुप्रमाणप्रकरणम्

श्री प्रातःस्मरणीय-श्री १००८ श्रीसत्यध्यानतीर्थशिष्य हुलगीत्युपाव्हपं. हुच्चाचार्यान्तेवासिना अग्निहोत्रीत्युपाव्ह-भीमाचार्यसुतेन वादिराजेन विरचिते प्रमाणसंग्रहे प्रथमः परिच्छेदः

---

ಬಿಡುವ [ ಹಾಗೂ ], ಸ್ವೀಕರಿಸುವ [ ಉಪಾದಾನ ], ಹಾಗೂ ಉಪೇಕ್ಷಿಸುವ ಬುದ್ಧಿಯು ಪ್ರತ್ಯಕ್ಷದ ಫಲವೆಂದು ಕೆಲವರು ಹೇಳುತ್ತಾರೆ. ಆದರೆ ಹೀಗೆ ಹೇಳುವದು ಸಮಂಜಸವಲ್ಲ. ಪ್ರತ್ಯಕ್ಷವು ಮುಳ್ಳು ಮೊದಲಾದ ವಸ್ತು ಸ್ವರೂಪವನ್ನು ಮಾತ್ರ ತಿಳಿಸಿ ತನ್ನ ಕಾರ್ಯವನ್ನು ಮುಗಿಸುತ್ತದೆ ಮುಳ್ಳು ಮೊದಲಾದವುಗಳ ಸಾಕ್ಷಾತ್ಕಾರವಾದ ಮೇಲೆ, ಈ ಮುಳ್ಳು ದುಃಖ ಸಾಧನವಾದುದೆಂಬ ತನ್ನ ಮೊದಲಿನ ಅನುಭವವು ಸ್ಮರಣೆಗೆ ಬಂದು, ಹೀಗೆ ಅನುಮಾನ ಮಾಡುತ್ತಾನೆ– "ಮುಳ್ಳು, ದುಃಖ ಸಾಧನವು ಅದು ಮುಳ್ಳಾಗಿರುವ ಕಾರಣ. ಪೂರ್ವದಲ್ಲಿ ಅನುಭೂತವಾದ ಮುಳ್ಳಿನಂತೆ" ಈ ಅನುಮಾನಾನಂತರ ಅದನ್ನು ಬಿಟ್ಟು ಬಿಡುವ ಬುದ್ಧಿಯು ಹುಟ್ಟುತ್ತದೆ. ಇದೇ ರೀತಿಯಾಗಿ ಬಾಳೇ ಹಣ್ಣು ಮೊದಲಾದವುಗಳಲ್ಲಿ ಇಷ್ಟಸಾಧನವಾದುದೆಂಬ ಅನುಮಾನಾನಂತರ ಸ್ವೀಕಾರ ಬುದ್ಧಿಯು, ಹಾಗೆಯೇ ತೃಣಾದಿಗಳಲ್ಲಿ ಉದಾಸೀನ ಬುದ್ಧಿಯು ಹುಟ್ಟುತ್ತದೆ. ಸ್ವೀಕಾರ, ಪರಿತ್ಯಾಗ, ಉಪೇಕ್ಷಾ ಬುದ್ಧಿಗಳು ಅನುಮಾನದ ಫಲಗಳು ಹೊರತು ಪ್ರತ್ಯಕ್ಷದ ಫಲವಲ್ಲ. ದ್ರವ್ಯ ಮೊದಲಾದ ಗುಣ ವಿಶಿಷ್ಟ ವಸ್ತುವಿನ ಸಾಕ್ಷಾತ್ಕಾರವೇ ಪ್ರತ್ಯಕ್ಷದ ಫಲವೆಂದು ತಿಳಿಯಬೇಕು.

॥ श्रीवेदव्यासाय नमः ॥

## ॥ अथानुमानपरिच्छेदः ॥

### १. तत्र अनुमानप्रकरणम् ।

१ ) अथ क्रमप्राप्तमनुमानं निरूप्यते-निर्दोषोपपत्तिरनुमानं, अस्य लक्षणस्य, 'पर्वतो वन्हिमान् धूमादित्यत्र सद्धेतौ सत्त्वाल्लक्षणसमन्वयः, उपपत्तिरनुमानमित्युक्ते आश्रयासिद्धे बाधिते चातिव्याप्तिः, तयोर्व्याप्त्याश्रयत्वेनोपपत्तित्वादतो निर्दोषेति,

---

## ಅನುಮಾನ ಪರಿಚ್ಛೇದವು

### ೧) ಅನುಮಾನ ಪ್ರಕರಣವು

**೧) ಯುಕ್ತಿ ಇಲ್ಲವೇ ಉಪಪತ್ತಿಯ ಸ್ವರೂಪ-**

ಕ್ರಮಾನುಗುಣವಾಗಿ ಈಗ ಅನುಮಾನವು ನಿರೂಪಿಸಲ್ಪಡುತ್ತದೆ ಅನುಮಾನದ ಲಕ್ಷಣವು 'ನಿರ್ದೋಷವಾದ ಉಪಪತ್ತಿಯೇ (ಯುಕ್ತಿಯೇ) ಅನುಮಾನವು' ಈ ಲಕ್ಷಣವು ಪರ್ವತವು, ಬೆಂಕಿಯುಳ್ಳದ್ದು ಹೊಗಿಯಿರುವ ಕಾರಣ, [ಮಹಾನಸವತ್] ಅಡುಗೆಯ ಮನೆಯಂತೆ, ಎಂಬ ಅನುಮಾನದ ಸದ್-ಹೇತುವಾದ ಹೊಗೆಯಲ್ಲಿ [ಧೂಮದಲ್ಲಿ] ಸಮನ್ವಯವಾಗುತ್ತದೆ. ಧೂಮವು ನಿರ್ದೋಷವಾದ ಉಪಪತ್ತಿಯಾಗಿದೆ. ಈ ಧೂಮದಲ್ಲಿ ನಿರ್ದೋಷ ಉಪಪತಿತ್ವ ಬಂದು ಲಕ್ಷಣ ಸಮನ್ವಯವಾಗುತ್ತದೆ.

ಲಕ್ಷಣದ ದಲಕೃತ್ಯವು-

'ಉಪಪತ್ತಿಯು ಅನುಮಾನವು' ಎಂದು ಲಕ್ಷಣ ಮಾಡಿದರೆ, ಆಶ್ರಯಾಸಿದ್ಧ ಹೇತುವಿನಲ್ಲಿ ಹಾಗೂ ಬಾಧಿತ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. ಅದು ಹೇಗೆಂದರೆ-'ಆಕಾಶ ಕುಸುಮವು, ಸುವಾಸನೆಯುಳ್ಳದ್ದು, ಕುಸುಮವಾದುದರಿಂದ' ಎಂಬಲ್ಲಿ ಆಕಾಶ ಕುಸುಮವೆಂಬುದೇ ಇಲ್ಲವಾದ್ದರಿಂದ "ಕುಸುಮವಾದ್ದರಿಂದ" ಎಂಬ ಹೇತು ಆಶ್ರಯಾಸಿದ್ಧವಾಗಿದೆ. ಆದರೆ ವ್ಯಾಪ್ತಿಗೆ ಆಶ್ರಯವಾದುದರಿಂದ "ಉಪಪತ್ತಿ"ಯಾಗಿದೆ ಹೀಗೆ ಆಶ್ರಯಸಿದ್ಧವಾದ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು.

ಅದರಂತೆಯೇ, 'ಸರೋವರವು ಬೆಂಕಿಯುಳ್ಳದ್ದು, ಧೂಮವಿರುವದರಿಂದ', ಎಂಬಲ್ಲಿ ಪಕ್ಷವಾದ ಸರೋವರದಲ್ಲಿ ಬೆಂಕಿಯಿರಲಾರದು. ಇದರಿಂದ ಸಾಧ್ಯಾಭಾವವುಳ್ಳದ್ದೋ— "ಧೂಮವಿರುವದರಿಂದ" ಎಂಬ ಹೇತುವು ಬಾಧಿತವಾಗಿದೆ. [ಯಾವ ಹೇತುವಿನ ಪಕ್ಷವು ಆ ಹೇತುವು ಬಾಧಿತವು] ಆದರೆ ಈ ಹೇತುವು ವ್ಯಾಪ್ತಿಯಿಂದ ಕೂಡಿ ಉಪಪತ್ತಿಯಾಗಿದೆ. ಹೀಗೆ ಬಾಧಿತ ಹೇತುವಿನಲ್ಲಿಯೂ ಅತಿವ್ಯಾಪ್ತಿ ಬರುವದು.

तावत्युक्ते प्रत्यक्षादावतिव्याप्तिस्तत्र निर्दोषत्वस्य सत्वात्, अत उपपत्तिरिति, तस्योपपत्तित्वाभावान्नातिव्याप्तिः, उपपत्तिः, व्याप्यं, युक्तिः, लिंगमिति च पर्यायः ।

इति उपपत्तिस्वरूपकथनम्

( २ ) उपपत्तिर्व्याप्यमित्युक्तं, व्याप्यस्य व्याप्तिघटितत्वेन व्याप्तिलक्षणं निरूप्यते-" अविनाभावो ,, व्याप्तिः, स च साध्येन विना, साधनस्य भावः=सत्ता न, इत्यनेन, साध्याभाववन्निष्ठाभावप्रतियोगित्वं व्याप्तेः, स्वरूपं व्याप्यस्य च लक्षणमित्युक्तं भवति ।

---

ಈ ಎರಡೂ ಅತಿವ್ಯಾಪ್ತಿಗಳನ್ನು ಪರಿಹರಿಸಲು. ಲಕ್ಷಣದಲ್ಲಿ 'ನಿರ್ದೋಷವಾದ' ಎಂಬ ವಿಶೇಷಣ ಕೊಡಬೇಕು. ಈಗ ಆಶ್ರಯಾಸಿದ್ಧ ಹಾಗೂ ಬಾಧಿತ ಹೇತುಗಳು, 'ಆಶ್ರಯಾಸಿದ್ಧಿ' ಹಾಗೂ 'ಬಾಧೆ' ಎಂಬ ದೋಷವುಳ್ಳವಾದ್ದರಿಂದ, ಅವು ನಿರ್ದೋಷ ಉಪಪತ್ತಿಗಳಾಗಲಾರವು. ಅಲ್ಲಿ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಇನ್ನು ''ನಿರ್ದೋಷವಾದುದು ಅನುಮಾನವೆಂದು ಲಕ್ಷಣ ಮಾಡಿದರೆ, ಪ್ರತ್ಯಕ್ಷಾದಿಗಳಲ್ಲಿ ಅತಿವ್ಯಾಪ್ತಿಯು ಏಕೆಂದರೆ ಅವೂ ನಿರ್ದೋಷಗಳಾಗಿವೆ. ಇದನ್ನು ನಿವಾರಿಸಲು 'ಉಪಪತ್ತಿ' ಪದವನ್ನು ಸೇರಿಸಬೇಕು. [ಉಪಪತ್ತಿಎಂದರೆ ವ್ಯಾಪ್ತಿಗೆ ಆಶ್ರಯವಾದ ಯುಕ್ತಿಯು] ಪ್ರತ್ಯಕ್ಷವು ನಿರ್ದೋಷವಾಗಿದ್ದರೂ, ಯುಕ್ತಿಯಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. ಉಪಪತ್ತಿ, ವ್ಯಾಪ್ತಿ, ಯುಕ್ತಿ, ಲಿಂಗ- ಈ ಶಬ್ದಗಳು ಪರ್ಯಾಯ ಪದಗಳೆಂದು ತಿಳಿಯಬೇಕು.

೨] ನೈಯಾಯಿಕರು ಹೇಳುವ "ವ್ಯಾಪ್ತಿ" ಲಕ್ಷಣ ನಿರಾಕರಣ ಪೂರ್ವಕ, ವ್ಯಾಪ್ತಿ ಹಾಗೂ ವ್ಯಾಪ್ಯ, ವ್ಯಾಪಕಗಳ ಸ್ವರೂಪ ನಿರೂಪಣೆಯು-

ಉಪಪತ್ತಿಯೆಂದರೆ ವ್ಯಾಪ್ಯವು ಎಂದು ಹೇಳಿತಷ್ಟೇ. ವ್ಯಾಪ್ಯವು ವ್ಯಾಪ್ತಿ ಘಟಕವಾದ್ದರಿಂದ 'ವ್ಯಾಪ್ತಿ' ಎಂದರೇನು ತಿಳಿಯಲು, ಅದರ ಲಕ್ಷಣವು ಹೇಳಲ್ಪಡುತ್ತದೆ.- "ಅವಿನಾಭಾವವೇ ವ್ಯಾಪ್ತಿಯು ಎಂದರೆ "ಸಾಧ್ಯವಿಲ್ಲದೇ ಸಾಧನ ಅಸ್ತಿತ್ವವು ಇಲ್ಲದಿರುವದು' [ವಿವರಣೆಯು- ಅನುಮಾನದಲ್ಲಿ ಪಕ್ಷ, ಸಾಧ್ಯ, ಹೇತು, ದೃಷ್ಟಾಂತಗಳಿರುತ್ತವೆ. ಉದಾಹರಣೆಗೆ, "ಪರ್ವತವು' ಬೆಂಕಿಯುಳ್ಳದ್ದು, ಧೂಮವಿರುವದರಿಂದ ಅಡುಗೆಮನೆಯಂತೆ' ಎಂಬಲ್ಲಿ ಪರ್ವತವು ಪಕ್ಷವು, ಬೆಂಕಿಯು ಸಾಧ್ಯವು, ಧೂಮವು ಹೇತು ಹಾಗೂ ಅಡುಗೆ ಮನೆಯು ದೃಷ್ಟಾಂತವು ಇದರಲ್ಲಿ ಹೇತು ಸಾಧ್ಯಗಳು ಒಂದನ್ನೊಂದು ಬಿಟ್ಟು ಇರಲಾರವು. ಇದೇ ಅವುಗಳ ಅವಿನಾಭಾವವು, ಅಥವಾ ವ್ಯಾಪ್ತಿಯು ಎಂದು ತಿಳಿಯಬೇಕು). ಹೀಗೆ ಹೇಳುವದರಿಂದ, ಸಾಧ್ಯದ ಅಭಾವವಿರುವಲ್ಲಿ ಯಾವ ಹೇತುವಿನ

पर्वतो वन्हिमान् धूमादित्यत्र धूमरूपव्याप्ये लक्षणसमन्वयः । यथा साध्यं वन्हिः, साध्याभावो वन्ह्यभावः, साध्याभाववान् ह्रदः, तन्निष्टाभावो धूमाभावः, तत्प्रतियोगी धूमः. धूमे प्रतियोगित्वस्य सत्त्वाल्लक्षणसमन्वयः ।

न चैतत् संभवति-"इदं ज्ञेयं, वाच्यत्वादि,,त्यत्र, (केवलान्वयित्वेन) साध्याभावाप्रसिद्ध्या उक्तलक्षणाभावादव्याप्तिरतोऽविनाभावो नाम-साहचर्यनियमः, स च, सहचरत इति सहचरौ समानाधिकरणौ, एकाधिकरणवृत्ती तयोर्भावः सामानाधिकरण्यं, तस्य नियमो नाम हेत्वधिकरणनिष्टात्यंताभावाप्रतियोगिसाध्यसामानाधिकरण्यं, इदमेव व्याप्तेः स्वरूपं व्याप्यस्य च लक्षणमित्युक्तं भवति,

---

ಅಭಾವವಿರುವದೋ, ಈ ಹೇತುವಿನ ಅಭಾವಕ್ಕೆ ಪ್ರತಿಯೋಗಿಯಾಗಿರುವದೇ ವ್ಯಾಪ್ತಿಯ ಸ್ವರೂಪವು. ಹಾಗೂ ವ್ಯಾಪ್ಯದ ಲಕ್ಷಣವೆಂದು ತಿಳಿಯಬೇಕು. 'ಪರ್ವತವು ಬೆಂಕಿಯುಳ್ಳದ್ದು ಧೂಮವಿರುವದರಿಂದ' ಎಂಬ ಅನುಮಾನದಲ್ಲಿ "ಧೂಮವು ವ್ಯಾಪ್ಯವಾಗಿದ್ದು, ಅದರಲ್ಲಿ ಲಕ್ಷಣ ಸಮನ್ವಯವಾಗುವದು. ಹೇಗೆಂದರೆ, ಸಾಧ್ಯವು ಬೆಂಕಿಯು ಸಾಧ್ಯದ ಅಭಾವವೆಂದರೆ ಬೆಂಕಿಯ ಅಭಾವವು. ಬೆಂಕಿಯ ಅಭಾವವಿರುವಂಥಹವು ಸರೋವರವು ಇದರಲ್ಲಿರುವ ಅಭಾವವೆಂದರೆ ಧೂಮದ ಅಭಾವವು. ಈ ಧೂಮಾಭಾವಕ್ಕೆ ಪ್ರತಿಯೋಗಿಯು ಧೂಮವು, ಧೂಮದಲ್ಲಿ ಲಕ್ಷಣ ಬರುವದು.

ಆದರೆ ಮೇಲಿನ ಲಕ್ಷಣವು ಸರಿಯಲ್ಲ. ಇದು, ಜ್ಞಾನವಿಷಯವು, ವಾಚ್ಯವಾದುದರಿಂದ ಎಂಬ ಕೇವಲಾನ್ವಯಿ "ವಾಚ್ಯ' ಹಾಗೂ 'ಜ್ಞಾನ' ವಿಷಯಗಳ [ಹೇತು, ಸಾಧ್ಯಗಳ] ಅಭಾವವೇ ಪ್ರಸಿದ್ಧವಿಲ್ಲದ್ದರಿಂದ, ಮೇಲಿನ ಲಕ್ಷಣವು ಈ ಅನುಮಾನದಲ್ಲಿ ಬಾರದೇ, ಅವ್ಯಾಪ್ತವಾಗುವದು [ಲಕ್ಷಣವು ಎಲ್ಲ ಲಕ್ಷ್ಯಗಳಲ್ಲಿ ಬಾರದೇ ಕೆಲವು ಲಕ್ಷ್ಯಗಳಲ್ಲಿ ಮಾತ್ರ ಬಂದರೆ ಅವ್ಯಾಪ್ತಿ ದೋಷವುಳ್ಳದ್ದೆಂದು ತಿಳಿಯಬೇಕು] ಈ ದೋಷ ಪರಿಹರಿಸಲು 'ಅವಿನಾಭಾವವೆಂದರೆ 'ಒಂದೇ ಅಧಿಕರಣದಲ್ಲಿರುವಿಕೆಯು, ಈ ಸಮಾನಾಧಿಕರಣ ನಿಯಮವೇ ವ್ಯಾಪ್ತಿಯ ಸ್ವರೂಪವು, ಹಾಗೂ ವ್ಯಾಪ್ಯದ ಲಕ್ಷಣವು. ಈ ಸಮಾನಾಧಿಕರಣ ನಿಯಮವೆಂದರೆ, "ಹೇತುವಿನ ಅಧಿಕರಣದಲ್ಲಿರುವ ಅತ್ಯಂತಾಭಾವಕ್ಕೆ ಅಪ್ರತಿಯೋಗಿಯಾದ ಸಾಧ್ಯದ ಅಧಿಕರಣ ವೃತ್ತಿಯು ಇದೇ ವ್ಯಾಪ್ತಿಯ ಸ್ವರೂಪ ಹಾಗೂ ವ್ಯಾಪ್ಯದ ಲಕ್ಷಣವೆಂದಾಯಿತು.

यथा-पर्वतो वन्हिमान् धूमादित्यत्र धूमे लक्षणसमन्वयः-हेतुः धूमः, हेत्वधिकरणं महानसं, तद्वृत्यंताभावः, जलाभावः, न तु वन्हयभावः, वन्हेः सत्त्वात्, जलाभावप्रतियोगि जलं, अप्रतियोगि साध्यं वन्हिः, तदधिकरणं महानसं, तद्वृत्तिः धूमः, तद्वृत्तित्वम् धूमे, इति लक्षणसमन्वयः ।

इदमपि लक्षणमयुक्तं ऊर्ध्वदेशो वृष्टिमान्, अधोदेशे नदीपूरादित्यत्र, व्यधिकरणानुमाने हेतुसाध्ययोः सामानाधिकरण्याभावादव्याप्तिः ।

---

ಈ ನಿಯಮದ ಲಕ್ಷಣ ಸಮನ್ವಯವು- "ಪರ್ವತವು" ಬೆಂಕಿಯುಳ್ಳದ್ದು, ಧೂಮವಿದ್ದ ಕಾರಣ' ಎಂಬ ಅನುಮಾನದ ಹೇತುವಾದ 'ಧೂಮ'ದಲ್ಲಿ ಲಕ್ಷಣ ಸಮನ್ವಯವಾಗುವದು. ಹೇತು, ಧೂಮವು, ಹೇತು ಅಧಿಕರಣವು [ಆಶ್ರಯ] ಅಡುಗೆ ಮನೆ, ಅದರಲ್ಲಿರುವ ಅತ್ಯಂತಾಭಾವವೆಂದರೆ ಜಲದ ಅಭಾವವೇ ಹೊರತು ಬೆಂಕಿಯ ಅಭಾವವಲ್ಲ. ಜಲಾಭಾವಕ್ಕೆ ಪ್ರತಿಯೋಗಿಯು ಜಲವು. ಅಪ್ರತಿಯೋಗಿಯಾದ ಸಾಧ್ಯವು ಬೆಂಕಿಯು ಇದಕ್ಕೆ ಅಧಿಕರಣ [ಆಶ್ರಯ] ವಾದುದು ಅಡುಗೆ ಮನೆ. ಈ ಅಧಿಕರಣದಲ್ಲಿರುವದು ಧೂಮವು. ಧೂಮದಲ್ಲಿ "ಸಾಧ್ಯ ಸಮಾನಾಧಿಕರಣ್ಯವು' ಎಂದರೆ "ಸಾಧ್ಯಾಧಿಕರಣ ವೃತ್ತಿತ್ವ'ವು ಬರುವದರಿಂದ ಲಕ್ಷಣದ ಸಮನ್ವಯವಾಗುವದು. [ವಿವರಣೆ-"ಅವಿನಾಭಾವ' ವೆಂದರೆ ಸಾಹಚರ್ಯ ನಿಯಮವು. ಹಾಗೆಂದರೆ ಹೇತು ಸಾಧ್ಯಗಳು ಒಂದೇ ಅಧಿಕರಣದಲ್ಲಿರುವದು. ಧೂಮ ಹಾಗೂ ಬೆಂಕಿ ಎರಡೂ ಒಂದೇ ಅಧಿಕರಣದಲ್ಲಿ ಕೂಡಿಕೊಂಡೇ ಇರುತ್ತವೆ. ಇದೇ ವ್ಯಾಪ್ತಿ ಎಂಬ ಭಾವವು]

ಆದರೆ ಈ ರೀತಿ ಮಾಡಿದ ಲಕ್ಷಣವೂ ಸರಿಯಲ್ಲ. 'ಮೇಲಿನ ಪ್ರದೇಶವು. ವೃಷ್ಟಿಯುಳ್ಳದ್ದು, ಕೆಳಗಿನ ಪ್ರದೇಶದಲ್ಲಿ ನದೀಪೂರ ಇರುವದರಿಂದ' ಎಂಬ ವ್ಯಧಿಕರಣ ಅನುಮಾನದಲ್ಲಿ, ಒಂದೇ ಅಧಿಕರಣದಲ್ಲಿರಬೇಕೆಂಬ ಸಾಹಚರ್ಯನಿಯಮವು ಬಾರದೇ, ಲಕ್ಷಣವು ಅವ್ಯಾಪ್ತವಾಗುತ್ತದೆ. [ಈ ಅನುಮಾನದಲ್ಲಿ ಸಾಧ್ಯವಾದ ವೃಷ್ಟಿಯು ಮೇಲಿನ ದೇಶದಲ್ಲಿ, ಹೇತುವಾದ ನದೀಪೂರವು ಕೆಳಗಿನ ದೇಶದಲ್ಲಿ, ಎಂದು ಹೇಳಿದ್ದರಿಂದ ಹೇತು ಸಾಧ್ಯಗಳು ಒಂದೇ ಅಧಿಕರಣದಲ್ಲಿ ಬರಲಿಲ್ಲ. ಕಾರಣ 'ಹೇತು. ಸಾಧ್ಯಗಳು ಒಂದೇ ಅಧಿಕರಣದಲ್ಲಿ ನಿಯಮದಿಂದ ಇರುವದು, ಎಂಬ ವ್ಯಾಪ್ತಿಯ ಲಕ್ಷಣ ಬರಲಿಲ್ಲವಾದ್ದರಿಂದ ಅವ್ಯಾಪ್ತಿ ದೋಷವು]

---

"अतो व्याप्तिर्नाम साहचर्यनियमः, साहचर्यं च स्वदेशकालगतस्य हेतोः, स्वदेशकालविशेषगतेन साध्येन संबंधमात्रं, न तु सामानाधिकरण्यं विवक्षितं, तादृशसंबंधस्य नियमो नाम-अव्यभिचरितत्वं, तथा चाव्यभिचरितसाध्यसंबंधो व्याप्तिरित्युक्तं भवति, **संबंधस्याव्याभिचरितत्वं च स्वाभाविकत्वं,** अतो हेतुधर्मस्य, अव्यभिचारस्य, कथं (साध्य) संबंधविशेषणत्वमिति चोद्यानवकाशः। अव्यभिचरितेत्यस्य स्वाभाविकत्वार्थकथनेनैवेति ज्ञेयम्" इति **वेदेशीये भावाविवरणे उक्तम्** ।

एवमंगीकारेण व्यधिकरणानुमाने, कार्यकारणभावरूपस्याव्यभिचरितसंबंधस्य सत्त्वात्, पूर्वोक्तमव्याप्तिदूषणं भवतामपि समानमिति चोद्यमपि निरस्तम् ।

---

ಆದ್ದರಿಂದ ನಮ್ಮ ಸಿದ್ಧಾಂತಕ್ಕೆ ವ್ಯಾಪ್ತಿಯೆಂದರೆ ಸಾಹಚರ್ಯ ನಿಯಮವು ಸಾಹಚರ್ಯವೆಂದರೆ, ತನಗೆ ಯೋಗ್ಯವಾದ, ದೇಶ ಕಾಲದಲ್ಲಿರುವ ಹೇತುವು, ತನಗೆ ಯೋಗ್ಯವಾದ ದೇಶ ಕಾಲದಲ್ಲಿರುವ ಸಾಧ್ಯದ ಸಂಬಧವನ್ನು ಹೊಂದಿರುವದೇ ಆಗಿದೆ. ಹೊರತು ಒಂದೇಸ್ಥಳದಲ್ಲಿ ಕೂಡಿ ಇರಬೇಕೆಂಬ ಅರ್ಥವಲ್ಲ. ಇಂತಹ ಹೇತು ಸಂಬಂಧವುಳ್ಳ 'ನಿಯಮ' ವೆಂದರೆ, ವ್ಯಭಿಚರಿತವಾಗದೇ ಇರುವದೆಂದು ಅರ್ಥವು. ಹೀಗೆ ಹೇತುವಿಗೆ ಅವ್ಯಭಿಚರಿತವಾದ ಸಾಧ್ಯದ ಸಂಬಧವೇ 'ವ್ಯಾಪ್ತಿ'ಯೆಂದು ತಿಳಿಯಬೇಕು, ಹೇತು ಸಾಧ್ಯಗಳ ಸಂಬಂಧವು ಅವ್ಯಭಿಚರಿತವಾಗಿರುವದೆಂದರೆ, ಸ್ವಾಭಾವಿಕ ಸಂಬಂಧ ಇರಬೇಕೆಂಬ ಭಾವವು ಹೀಗೆ ಹೇಳುವದರಿಂದ 'ಅವ್ಯಭಿಚರಿತ' ವೆಂಬುವದು ( ತನ್ನ ಸಾಧ್ಯಬಿಟ್ಟು ಬೇರೆಡೆಗೆ ಹೋಗದಿರುವದು ) ಹೇತುವಿನ ಧರ್ಮವಾಗಿದ್ದು, ಈ ಅವ್ಯಭಿಚರಿತ ಧರ್ಮವು ಸಾಧ್ಯಕ್ಕೆ ವಿಶೇಷಣ ಹೇಗಾಗುವದೆಂಬ ಚೋದ್ಯಕ್ಕೆ ಅವಕಾಶವಿಲ್ಲ. ಏಕೆಂದರೆ, ಅವ್ಯಭಿಚರಿತವೆಂದರೆ ಸ್ವಾಭಾವಿಕ ವೆಂಬ ಅರ್ಥ ಹೇಳುವದರಿಂದ ಮೇಲಿನ ದೋಷಾಪತ್ತಿ ಮಾಡಲು ಬರುವದಿಲ್ಲವೆಂಬುದಾಗಿ ಶ್ರೀ ವೇದೇಶತೀರ್ಥರು ತಮ್ಮ ಭಾವ ವಿವರಣ ಟಿಪ್ಪಣಿಯಲ್ಲಿ ಸ್ಪಷ್ಟಪಡಿಸಿದ್ದಾರೆ

ಮೇಲಿನಂತೆ ( ನಮ್ಮ ಸಿದ್ಧಾಂತದಲ್ಲಿ ವ್ಯಾಪ್ತಿಯ ಲಕ್ಷಣ ಮಾಡಿದ್ದರಿಂದ ವ್ಯಧಿಕರಣ ಅನುಮಾನದಲ್ಲಿಯೂ, ಮೇಲಿನ ದೇಶದಲ್ಲಿ ಮಳೆಯಾಗಿದೆ, ಕೆಳಗಿನ ದೇಶದಲ್ಲಿ ನದೀಪೂರವಿರುವದರಿಂದ ಎಂಬಲ್ಲಿ) ಹೇತು ಸಾಧ್ಯಗಳಿಗೆ ಕಾರ್ಯ ಕಾರಣ ರೂಪ ಸ್ವಾಭಾವಿಕ ಸಂಬಂಧವಿರುವದರಿಂದ ನೈಯಾಯಿಕರ ಲಕ್ಷಣಕ್ಕೆ ಹೇಳಿದ ಅವ್ಯಾಪ್ತಿ ದೋಷವು ಇಲ್ಲಿಯೂ ಬರಲಿ ( ಸಿದ್ಧಾಂತಗಳಿಗೂ ಸಮಾನವಾಗಲಿ ) ಎಂಬ ಆಪತ್ತಿಯೂ ನಿರಸ್ತವಾಯಿತು.

यदर्थं व्याप्तिनिरूपणं कृतं तदिदानीं व्याप्यस्वरूपं निरूप्यते-व्याप्तेः कर्म व्याप्यं, व्याप्तेः कर्तृ व्यापकम् 'वन्हिः' धूमं व्याप्नोतीति व्यवहारात्, एवं च व्यापनक्रियायाः कर्म व्याप्यं, व्यापनक्रियायाः कर्तृ व्यापकं, यथा--धूमस्याग्निना व्याप्तिर्नाम अव्यभिचरितसंबंधः (स्वाभाविकसंबंधः), यत्र धूमस्तत्राग्निरिति नियमात्, अत्र धूमो व्याप्यः, अग्निर्व्यापक इति ज्ञेयम् ।

**॥ इति नैयायिकोक्तव्याप्तिभंगपूर्वकव्याप्तिस्वरूपव्याप्यव्यापक स्वरूपनिरूपणम् ॥**

३ ) धर्माणामानन्त्यात् तेषु कयोरन्योन्यव्याप्यव्यापकभावः, कयोः व्याप्यव्यापकभावमात्रं, कयोर्व्याप्यव्यापकभाव एव नास्तीति जिज्ञासायामुच्यते ।

चतुष्टयी धर्माणां स्थितिः १ ) केचित् समव्याप्ताः २ ) केचित् विषमव्याप्ताः,

---

ವ್ಯಾಪ್ತಿ ನಿರೂಪಣೆ ನಂತರ, ವ್ಯಾಪ್ಯ ಸ್ವರೂಪವು ಹೇಳಲ್ಪಡುತ್ತದೆ ವ್ಯಾಪ್ತಿಗೆ ಕರ್ಮವು ವ್ಯಾಪ್ಯವು, ವ್ಯಾಪ್ತಿಗೆ ಕರ್ತೃ ವ್ಯಾಪಕವು. ಏಕೆಂದರೆ ಅಗ್ನಿಯು ಧೂಮವನ್ನು ವ್ಯಾಪಿಸುತ್ತದೇ ಯೆಂಬ ವ್ಯವಹಾರವಿರುತ್ತದೆ. ಒಟ್ಟಿನಲ್ಲಿ ವ್ಯಾಪನ ಕ್ರಿಯೆಗೆ ಕರ್ಮವಾದುದು ವ್ಯಾಪ್ಯವು, ಹಾಗೂ ಕರ್ತೃವಾದದು ವ್ಯಾಪಕವು, ಮತ್ತೆ ಹಾಗೇ ಧೂಮಕ್ಕೆ ಅಗ್ನಿಯಿಂದ ವ್ಯಾಪ್ತಿಯಿದೆಯೆಂದರೆ, ಎಲ್ಲಿ ಧೂಮವೋ ಅಲ್ಲಿ ಅಗ್ನಿಯೆಂಬ ನಿಯಮವಿರುವದರಿಂದ ಅವ್ಯಭಿಚರಿತವಾದ [ಸ್ವಾಭಾವಿಕವಾದ] ಸಂಬಂಧವಿದೆಂದು ಅರ್ಥವು. ಈ ವ್ಯಾಪ್ತಿ ನಿಯಮದಲ್ಲಿ ಧೂಮವು ವ್ಯಾಪ್ಯವು ಹಾಗೂ ಅಗ್ನಿಯು ವ್ಯಾಪಕವೆಂದು ತಿಳಿಯಬೇಕು.

೩] ವ್ಯಾಪ್ಯ ವ್ಯಾಪಕ ಭಾವಗಳನ್ನು ಹೊಂದಿರುವ ಹಾಗೂ ಹೊಂದದೇ ಇರುವ ಧರ್ಮಗಳ ನಿರೂಪಣೆ–

ಧರ್ಮಗಳು ಅನಂತವಾಗಿವೆ. ಅವುಗಳಲ್ಲಿ ಯಾವ ಧರ್ಮಗಳಿಗೆ ಅನ್ಯೋನ್ಯವಾಗಿ ವ್ಯಾಪ್ಯ ವ್ಯಾಪಕ ಭಾವವಿದೆ, ಯಾವ ಧರ್ಮಗಳಿಗೆ ವ್ಯಾಪ್ಯ ವ್ಯಾಪಕ ಭಾವವೇ ಇಲ್ಲವೆಂಬುದನ್ನು ತಿಳಿಯಬೇಕು.

ಧರ್ಮಗಳು ನಾಲ್ಕು ಪ್ರಕಾರವಾಗಿವೆ.

i] ಹಲವು ಸಮಾನ್ಯ ವ್ಯಾಪ್ತಿಯುಳ್ಳ ಧರ್ಮಗಳು. ii] ಹಲವು ವಿಷಮ ವ್ಯಾಪ್ತಿಯುಳ್ಳ ಧರ್ಮಗಳು.

३ ) केचित् व्यभिचारिण: ४ ) केचित् विरुद्धाश्चेति ।

१ ) समव्याप्ता यथा–निषिद्धत्वपापसाधनत्वे, यत्र निषिद्धत्वं तत्र पापसाधनत्वम्, यत्र पापसाधनत्वं तत्र निषिद्धत्वमिति द्वयोरन्योन्यं व्याप्यव्यापकभाव:, एवं विहितत्वधर्मसाधनत्वादय:

२ ) विषमव्याप्ता यथा, धूमवत्त्वाग्निमत्त्वे, यत्र धूमत्त्वं तत्राग्निमत्त्वं, न्यूनवृत्ति धूमवत्त्वं व्याप्यम्, अधिकवृत्त्यग्निमत्त्वं व्यापकमेवेति, तयोर्विषमव्याप्तत्त्वम्. ( न च यत्राग्निमत्त्वं तत्र धूमत्त्वमिति वर्तते, अयोगोलकादौ व्यभिचारात्, अतो विषमव्याप्तत्वमेव तयोर्ज्ञेयं), एवं कृतकत्वानित्यत्वादय: ।

३ ) केचिद्व्यभिचारिण:—यथा पाचकत्वपुरुषत्वे,

---

iii ] ಹಲವು ವ್ಯಭಿಚಾರವುಳ್ಳ ಧರ್ಮಗಳು. iv ] ಹಲವು ಪರಸ್ಪರವಾಗಿ ವಿರುದ್ಧವಾದ ಧರ್ಮಗಳು. ಸಮವ್ಯಾಪ್ತಿಯುಳ್ಳ ಧರ್ಮಗಳಿಗೆ ಉದಾಹರಣೆ– 'ನಿಷಿದ್ಧತ್ವ' ಹಾಗೂ "ಪಾಪ ಸಾಧನತ್ವ" ವೆಂಬ ಧರ್ಮಗಳು. ಎಲ್ಲಿ ನಿಷಿದ್ಧತ್ವವಿದೆಯೋ ಅಲ್ಲಿ ಪಾಪ ಸಾಧನತ್ವವಿದೆ, ಅದರಂತೆ ಎಲ್ಲಿ ಪಾಪ ಸಾಧನತ್ವವಿದೆಯೋ ಅಲ್ಲಿ ನಿಷಿದ್ಧತ್ವವಿದೆ. [ಪ್ರಾಣಿ ಹಿಂಸೆಯಲ್ಲಿ] ಈ ಎರಡೂ ಧರ್ಮಗಳಿಗೆ ಅನ್ಯೋನ್ಯ ವ್ಯಾಪ್ಯ ವ್ಯಾಪಕಭಾವವಿದೆ. ಕಾರಣ ಈ ಎರಡೂ ಧರ್ಮಗಳು ಸಮವ್ಯಾಪ್ತ ಧರ್ಮಗಳು. ಇದರಂತೆಯೇ, ವಿಹಿತತ್ವ ಹಾಗೂ ಧರ್ಮಸಾಧನತ್ವಗಳಿಗೂ ಅನ್ಯೋನ್ಯ ವ್ಯಾಪ್ಯ ವ್ಯಾಪಕ ಭಾವವಿದೆಯೆಂದು ತಿಳಿಯಬೇಕು.

ii] ವಿಷಮ ವ್ಯಾಪ್ತಿಯುಳ್ಳ ಧರ್ಮಗಳಿಗೆ ಉದಾಹರಣೆ–'ಧೂಮವತ್ತ್ವ' ಹಾಗೂ "ಅಗ್ನಿಮತ್ತ್ವ" ಧರ್ಮಗಳು. ಎಲ್ಲಿ ಧೂಮವಿದೆ ಅಲ್ಲಿ ಅಗ್ನಿಯಿದೆ. ಇವುಗಳಲ್ಲಿ ಕಡಿಮೆ ಪ್ರದೇಶದಲ್ಲಿರುವ ಧೂಮವು [ನ್ಯೂನವೃತ್ತಿಯಾದುದು] ವ್ಯಾಪ್ಯವು, ಹೆಚ್ಚಿನ ದೇಶದಲ್ಲಿರುವ ಅಗ್ನಿಯು [ಅಧಿಕವೃತ್ತಿಯಾದುದು] ವ್ಯಾಪಕವು, ಈ ಎರಡು ಧರ್ಮಗಳು ವಿಷಮ ವ್ಯಾಪ್ತಿಯುಳ್ಳವು- 'ಕಾಯ್ದ ಕಬ್ಬಿಣ' ದಲ್ಲಿ ಅಗ್ನಿಯಿದ್ದರೂ ಧೂಮವಿಲ್ಲದ್ದರಿಂದ, ಎಲ್ಲಿ ಅಗ್ನಿಯೋ ಅಲ್ಲಿ ಧೂಮವು ಎಂದು ಹೇಳಲು ಬರುವದಿಲ್ಲ. ಹಾಗೆ ಹೇಳಿದಲ್ಲಿ ವ್ಯಭಿಚಾರ ಬರುತ್ತದೆ. [ಸಾಧ್ಯವಿಲ್ಲದಿದ್ದಲ್ಲಿ ಹೇತು ಬಂದರೆ ವ್ಯಭಿಚಾರವು] ಕಾರಣ ಎರಡು ಧರ್ಮ ಅನ್ಯೋನ್ಯವಾಗಿ ವ್ಯಾಪ್ಯ ವ್ಯಾಪಕ ಭಾವಗಳನ್ನು ಹೊಂದಲಾರವೇ, ವಿಷಮ ವ್ಯಾಪ್ತಗಳಾಗಿವೆ ಇದರಂತೆಯೇ, ಕೃತಕತ್ವ–ಅನಿತ್ಯತ್ವ ಧರ್ಮಗಳು.

iii] ವ್ಯಭಿಚಾರವುಳ್ಳ ಧರ್ಮಗಳಿಗೆ ಉದಾಹರಣೆ–'ಪಾಚಕತ್ವ' ಹಾಗೂ 'ಪುರುಷತ್ವ' ಧರ್ಮಗಳು.

पाचकत्वं, पुरुषत्वं विहाय स्त्रीषु वर्तते, पुरुषत्वमपि पाचकत्वपरिहारेण, अपचति पुरुषे वर्तते, ते अपि नान्योन्यं व्याप्यव्यापकभावं अर्हतः, सत्यपि संबन्धे परस्परव्यभिचारित्वात् । एवं भूतत्वमूर्तत्वादयः ।

४) विरुद्धाः—परस्परपरिहारेणैव वर्तमाना इति यावत्, यथा—गोत्वाश्वत्वे, यत्र गोत्वं, न तत्र सर्वथाऽश्वत्वं, यत्राश्वत्वं, न तत्र सर्वथा गोत्वं, तत्र नानोन्यं व्याप्यव्यापकभावः, संबंधस्यैवाभावात् । एवं गजत्वसिंहत्वादयोऽपि ।

॥इति व्याप्यव्यापकभावापन्नतदनापन्नधर्मनिरूपणम् ॥

४) उपपत्तिशब्दोक्तव्याप्यस्यानुमानत्वं निरूप्यते—अनुमानं नाम अनुमीयतेऽनेनेत्यनुमानं, अनुमितिकरणत्वं अनुमानस्य लक्षणं,

---

'ಪಾಚಕ' ಧರ್ಮವು ಪುರುಷರಲ್ಲಿದೆಯಲ್ಲದೇ ಸ್ತ್ರೀಯರಲ್ಲಿಯೂ ಇದೆ. ಅದರಂತೆ "ಪುರುಷ" ಧರ್ಮವು ಪಾಚಕರಾದವರಲ್ಲಿರುವದಲ್ಲದೇ, ಅಪಾಚಕರಾದವರಲ್ಲಿಯೂ [ಅಡುಗೆ ಮಾಡಲು ಬಾರದವರಲ್ಲಿಯೂ] ಇದೆ. ಹೀಗಾಗಿ ಈ ಎರಡೂ ಧರ್ಮಗಳು ವ್ಯಾಪ್ಯವ್ಯಾಪಕ ಭಾವವನ್ನು ಹೊಂದಿಲ್ಲ. ಸಂಬಂಧವಿದ್ದರೂ ಪರಸ್ಪರ ವ್ಯಭಿಚಾರವುಳ್ಳವಾಗಿವೆ. ಇದರಂತೆಯೇ "ಭೂತತ್ವ"-"ಮೂರ್ತತ್ವ" ಧರ್ಮಗಳು ಪರಸ್ಪರ ವ್ಯಭಿಚಾರವುಳ್ಳದ್ದಾಗಿ ವ್ಯಾಪ್ಯವ್ಯಾಪಕ ಭಾವ ಹೊಂದಿರುವದಿಲ್ಲ.

iv] ವಿರುದ್ಧ ಧರ್ಮಗಳು–ವಿರುದ್ಧ ಧರ್ಮಗಳೆಂದರೆ ಪರಸ್ಪರ ಪರಿಹಾರದಿಂದಿರುವ ಧರ್ಮಗಳು. ಉದಾಹರಣೆಗೆ – "ಗೋತ್ವ" "ಅಶ್ವತ್ವ" [ಆಕಳು–ಕುದುರೆ ಧರ್ಮಗಳು] ಆಕಳಿನಲ್ಲಿ ಕುದುರೆ ಧರ್ಮವಿಲ್ಲ. ಕುದುರೆಯಲ್ಲಿ ಆಕಳ ಧರ್ಮವಿಲ್ಲ. [ಒಂದು ಧರ್ಮವಿರುವಲ್ಲಿ ಇನ್ನೊಂದು ಧರ್ಮವಿರಲಾರದು] ಹೀಗೆ ಧರ್ಮಗಳಿಗೆ ಸಂಬಂಧವೇ ಇಲ್ಲದ್ದರಿಂದ, ವ್ಯಾಪ್ಯವ್ಯಾಪಕ ಭಾವವೂ ಇರುವದಿಲ್ಲ. ಇದರಂತೆ "ಗಜತ್ವ", "ಸಿಂಹತ್ವ" ಮೊದಲಾದ ಧರ್ಮಗಳು ವ್ಯಾಪ್ಯ–ವ್ಯಾಪಕ ಭಾವ ಹೊಂದಲಾರದ ಧರ್ಮಗಳು.

iv] ಅನುಮಾನ ಸ್ವರೂಪ ಕಥನವು ಹಾಗೂ ಅದಕ್ಕೆ ಅನುಮಿತಿ ಜನಕತ್ವ ಸಮರ್ಥನೆಯು.

ಉಪಪತ್ತಿ ಶಬ್ದದಿಂದ ಕರೆಯಲ್ಪಡುವ ವ್ಯಾಪ್ಯವು "ಅನುಮಾನ"ವೆಂದು ಹೇಳಲ್ಪಡುತ್ತದೆ. ಯಾವುದರಿಂದ ಅನುಮಿತಿ ಹುಟ್ಟುತ್ತದೆಯೋ ಅದೇ ಅನುಮಾನವು. ಅದರ ಲಕ್ಷಣ. 'ಅನುಮಿತಿಗೆ ಕರಣವು ಅನುಮಾನವು'

तच्च व्याप्य एव आस्ति, तथा च व्याप्यो धर्मो, व्यापकप्रमितिसाधनं भवन्नेवामानमित्युच्यत इति ज्ञेयम् । व्यापकश्चानुमेय इति ।

१) ननु व्याप्यो धूमो व्यापकप्रमितिं जनयन्ननुमामानं भवति चेत् व्यवहितधूमोऽपि अग्निप्रमां जनयेत्, न हि जनयति, अनुभवविरोधात्, तथाच व्यवहितधूमे अनुमानरूपे निर्दोषोपपत्तित्वसत्त्वादतिव्याप्तिरिति चेदुच्यते ।

न प्रत्यक्षवदनुमानमज्ञातं सत् साध्यप्रमितिं जनयति, किंतु सम्यक् ज्ञातमेव, तथा च व्याप्यो धूमः, इन्द्रियवत् न सत्तामात्रेण प्रमाकरणं, किंतु प्रमित एवं तथा, एवं च व्यवहितव्याप्यरूपधूमे, अज्ञातत्वरूपदोषस्यैव सत्त्वान्नातिव्याप्तिरिति ध्येयम् ।

---

ಈ ಲಕ್ಷಣವು ವ್ಯಾಪ್ಯದಲ್ಲಿ [ಎಂದರೆ, ಅನುಮಾನಕ್ಕೆ ಹೇತುವಾದುದರಲ್ಲಿ] ಇರುತ್ತದೆ. ಹೀಗೆ ವ್ಯಾಪ್ಯ ಧರ್ಮವು ವ್ಯಾಪಕ ಜ್ಞಾನಕ್ಕೆ ಸಾಧನವಾಗಿ ಅನುಮಾನವೆಂದು ಕರೆಯಲ್ಪಡುತ್ತದೆ. ವ್ಯಾಪಕವು ಅನುಮೇಯ ಎಂದರೆ, ಅನುಮಿತಿ ವಿಷಯವಾಗಿರುತ್ತದೆ.

ಶಂಕಾ– ವ್ಯಾಪ್ಯವಾದ ಧೂಮವು ವ್ಯಾಪಕವಾದ ಅಗ್ನಿಯ ಪ್ರಮಿತಿಯನ್ನು ಹುಟ್ಟಿಸಿ ಅನುಮಾನವಾದಲ್ಲಿ, ಕಣ್ಣಿಗೆ ಕಾಣದೇ ಇದ್ದ ಧೂಮವು ಸಹ ಅಗ್ನಿಯ ಪ್ರಮಿತಿಯನ್ನು ಹುಟ್ಟಿಸಲಿ. ಆದರೆ ಇದು ಅನುಭವ ವಿರುದ್ಧವಾಗಿದೆ. ಕಾಣದ ಧೂಮವು ಅಗ್ನಿಜ್ಞಾನವನ್ನು ಹುಟ್ಟಿಸಲಾರದು. [ಧೂಮ ಜ್ಞಾನವೇ ಅನುಮಿತಿ ಜನಕವೆಂದು ಹೇಳಿದ್ದರಿಂದ] ಕಾಣದಿರುವ ಧೂಮವೂ ನಿರ್ದೋಷವಾದ ಉಪಪತ್ತಿಯಾದುದರಿಂದ, ಅನುಮಾನ ಲಕ್ಷಣವು ಅಲ್ಲಿ ಬಂದು, ಅತಿವ್ಯಾಪ್ತವಾಗುವದೆಂದು ಶಂಕಾ ಮಾಡಿದರೆ, ಅದಕ್ಕೆ ಉತ್ತರವು ಹೀಗಿದೆ– ಪ್ರತ್ಯಕ್ಷದಂತೆ ಅನುಮಾನವೂ [ಧೂಮವೂ] ಅಜ್ಞಾತವಾಗಿ ಸಾಧ್ಯ ಪ್ರಮಿತಿಯನ್ನು ಹುಟ್ಟಿಸುವದಿಲ್ಲ. ಚನ್ನಾಗಿ ಜ್ಞಾತವಾಗಿಯೇ ಸಾಧ್ಯ ಪ್ರಮಿತಿಯನ್ನು ಹುಟ್ಟಿಸುತ್ತದೆ. ಅಲ್ಲದೇ, ವ್ಯಾಪ್ಯವಾದ ಧೂಮವು ಇಂದ್ರಿಯಗಳಂತೆ ಕೇವಲ ಸತ್ತಾ [ಇರುವಿಕೆ] ಮಾತ್ರದಿಂದ ಜ್ಞಾನಕ್ಕೆ ಸಾಧನವಾಗಲಾರದು. ಆದರೆ ಜ್ಞಾತವಾಗಿಯೇ ಬೆಂಕಿ [ವಹ್ನಿ]ಯ ಜ್ಞಾನಕ್ಕೆ ಸಾಧನವಾಗುತ್ತದೆ. ಎಂದ ಮೇಲೆ "ಕಾಣದ ಧೂಮವು" ಜ್ಞಾನಕ್ಕೆ ವಿಷಯವಾಗದೇ ಅಜ್ಞಾತವಾಗಿ, ವ್ಯಾಪ್ಯವಾಗಿದ್ದರೂ ಅಜ್ಞಾತತ್ವೆಂಬ ದೋಷವಿರುವ ಕಾರಣ. ಅಲ್ಲಿ

२ ) तथापि नारिकेलद्विपवासिनोऽज्ञातधूमाग्निव्याप्तिमतः पुरुषस्य, देशांतरगतस्यधूमप्रमितावपि कस्मान्नाग्निप्रमोदयः, उच्यते---तस्य धूमस्वरूपज्ञानेऽपि अग्निव्याप्ततया धूमज्ञानाभावादिती ।

३ ) ज्ञातव्याप्तिकस्यापि कदाचिदग्निप्रमाया अनुपपत्तिः, कुत इति चेत्-व्याप्तिस्मरणाभावादेव तत्प्रमानुदयः ।

---

'ನಿರ್ದೋಷ ಉಪಪತ್ತಿ" ಎಂಬ ಅನುಮಾನದ ಲಕ್ಷಣವು ಬರಲಾರದ್ದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲವು. [ವಿವರಣೆ-ಕಾಣಲಾರದ [ಅಜ್ಞಾತವಾದ] ಧೂಮವು ಉಪಪತ್ತಿಯಾದರೂ, ಅಜ್ಞಾತರೂಪ ದೋಷದಿಂದ ಕೂಡಿದ್ದರಿಂದ, ನಿರ್ದೋಷವಾದ ಉಪಪತ್ತಿಯಾಗಲಾರದು ಎಂಬ ಭಾವವು.

೨] ಆದರೂ, ಬೆಂಕಿಯನ್ನೇ ಅರಿಯದ, ಹಾಗೂ ಧೂಮ-ಅಗ್ನಿಗಳ ವ್ಯಾಪ್ತಿಜ್ಞಾನವೇ ಇಲ್ಲದ ತೆಂಗಿನದ್ವೀಪ ನಿವಾಸಿಯಾದ ಪುರುಷನೊಬ್ಬನು, ದೇಶಾಂತರಕ್ಕೆ ಬಂದಾಗ 'ಧೂಮ'ವನ್ನು ನೋಡಿ ಧೂಮ ಜ್ಞಾನವನ್ನು ಹೊಂದಿದರೂ, ಅಗ್ನಿ ಜ್ಞಾನವನ್ನು ಹೊಂದುವದಿಲ್ಲ. ಎಂದ ಮೇಲೆ ವ್ಯಾಪ್ಯಜ್ಞಾನವು ಅನುಮತಿ ಹುಟ್ಟಿಸುತ್ತದೆಯೆಂದು ಹೇಳಿದುದು ಹೇಗೆ ಸರಿ ? ಹೀಗೆ ಆಕ್ಷೇಪಿಸಿದಲ್ಲಿ ಅದಕ್ಕೆ ಉತ್ತರ ಹೀಗಿದೆ- ತೆಂಗಿನ ದ್ವೀಪ ನಿವಾಸಿಗೆ ದೇಶಾಂತರದಲ್ಲಿ ಧೂಮ ಜ್ಞಾನವಾದರೂ, ಆ ಧೂಮವು ಅಗ್ನಿಯಿಂದ ವ್ಯಾಪ್ಯವಾಗಿದೆಯೆಂಬ ಜ್ಞಾನವಾಗಿಲ್ಲ. ಇದರಿಂದ ಅವನಿಗೆ ಅಗ್ನಿಜ್ಞಾನ ಹುಟ್ಟುವದಿಲ್ಲ. [ವಿವರಣೆ-ಕೇವಲ ವ್ಯಾಪ್ಯದ ಜ್ಞಾನದಿಂದ ಅನುಮಿತಿ ಹುಟ್ಟುವದಿಲ್ಲ. ಧೂಮವು ವಹ್ನಿಗೆ ವ್ಯಾಪ್ಯವು ಎಂಬ ವ್ಯಾಪ್ತಿ ಜ್ಞಾನದಿಂದ ಕೂಡಿದ ವ್ಯಾಪ್ಯ ಜ್ಞಾನವು, ಅನುಮತಿ ಜನಕವಾಗುವದೆಂದು ತಿಳಿಯಬೇಕು.]

೩] ವ್ಯಾಪ್ತಿ ಜ್ಞಾನವುಳ್ಳವನಿಗೂ ಸಹ ಕದಾಚಿತ್ ಅಗ್ನಿ ಪ್ರಮಾ ಹುಟ್ಟದೇ ಇರುವದು ಕಂಡಿದೆ. ಎಂದ ಮೇಲೆ, ವ್ಯಾಪ್ತಿ ಜ್ಞಾನವುಳ್ಳವನಿಂದ ಜ್ಞಾತವಾದ ವ್ಯಾಪ್ಯವು [ಉಪಪತ್ತಿಯು] ಅನುಮಿತಿಯನ್ನು ಹುಟ್ಟಿಸುವದೆಂಬುದು ಹೇಗೆ ? ಈ ಶಂಕೆಯೂ ಕೂಡುವದಿಲ್ಲ- ಧೂಮದ ಜ್ಞಾನ ಹೊಂದಿದ ಪುರುಷನಿಗೆ ವ್ಯಾಪ್ತಿ ಜ್ಞಾನವಿದ್ದರೂ ವ್ಯಾಪ್ತಿಯು ಸ್ಮರಣೆ ಬಾರದೇ ಇದ್ದಾಗ ವ್ಯಾಪಕನಾದ 'ಅಗ್ನಿ'ಯ ಅನುಮತಿ ಹುಟ್ಟುವದಿಲ್ಲ. ವ್ಯಾಪ್ತಿಯ ಸ್ಮರಣೆಯಿಂದ ಕೂಡಿದ ವ್ಯಾಪ್ಯ ಜ್ಞಾನವು ಅನುಮತಿ ಜನಕವಾಗುವದೆಂದು ತಿಳಿಯಬೇಕು.

---

४ ) व्याप्तिस्मरणवतः, पर्वते धूमं दृष्टवतोऽपि कथं पर्वतादन्यत्राग्निप्रमानुद्भव इति चेत् व्याप्तिप्रकारमपेक्ष्य लिंगज्ञानस्य लिंगिज्ञानजनकत्वनियमात्, इदमुक्तं भवति-यदि, व्याप्तिः, यस्य लिंगस्य, व्यधिकरणेनैव साध्येन विनाऽवस्थानरूपा तर्हि व्याप्तिस्वभावानुसारेण तस्य लिंगस्य स्वानधिकरणे पक्षे साध्यप्रमितिजनकत्वं, सा व्याप्तिर्यदि यस्य लिंगस्य स्वसमानाधिकरणेनैव साध्येन विना अनवस्थानरूपा तर्हि तदनुसारेण लिंगस्य स्वाधिकरण एव पक्षे साध्यानुमितिजनकत्वं, धूमस्य तु व्याप्तिः स्वसमानाधिकरणेनैव साध्येन ( वन्हिना ) विनाऽनवस्थानरूपा इति, तस्य धूमस्य स्वाधिकरणे पक्ष एव साध्यानुमितिजनकत्वात् न पर्वतादन्यत्र वन्हिप्रमोद्भव इति,

---

೪] ಪರ್ವತದಲ್ಲಿ ಧೂಮವನ್ನು ನೋಡಿ ವ್ಯಾಪ್ತಿ ಸ್ಮರಣೆಯುಳ್ಳವನಿಗೂ, ಪರ್ವತ ಬಿಟ್ಟು ಬೇರೆಡೆಗೆ ವಹ್ನಿಪ್ರಮಾ ಏಕೆ ಹುಟ್ಟುವದಿಲ್ಲ? ಇದಕ್ಕೆ ಹೀಗೆ ಉತ್ತರವಿದೆ. ವ್ಯಾಪ್ತಿ ಪ್ರಕಾರಗಳನ್ನಪೇಕ್ಷಿಸಿ ಲಿಂಗ ಜ್ಞಾನವು ಲಿಂಗಿ ಜ್ಞಾನವನ್ನು ಹುಟ್ಟಿಸುತ್ತದೆ. [ಈ ಅನುಮಾನದಲ್ಲಿ ಧೂಮ ಜ್ಞಾನವು ಅಗ್ನಿ ಜ್ಞಾನವನ್ನು ಹುಟ್ಟಿಸುತ್ತದೆ] ಇದರ ಅಭಿಪ್ರಾಯವು ಹೀಗಿದೆ- ಯಾವ ಲಿಂಗವು ತನ್ನಿಂದ ಭಿನ್ನವಾದ ಅಧಿಕರಣದಲ್ಲಿದ್ದು ಸಾಧ್ಯದಿಂದ ತಾನು ಬಿಟ್ಟು ಇರುತ್ತದೆಯೋ, ಆ ಲಿಂಗವು ತನ್ನ ಸಾಧ್ಯದ ಸ್ವಾಭಾವಿಕ ಸಂಬಂಧ ರೂಪ ವ್ಯಾಪ್ತಿಗನುಸರಿಸಿ ತನ್ನಿಂದ ಭಿನ್ನವಾದ ಅಧಿಕರಣದಲ್ಲಿ [ಪಕ್ಷದಲ್ಲಿ] ಸಾಧ್ಯ ಪ್ರಮಿತಿಯನ್ನು ಹುಟ್ಟಿಸುತ್ತದೆ. [ಉದಾಹರಣೆಗೆ, ಕೆಳಗಿನ ದೇಶದಲ್ಲಿಯ ನದೀಪೂರವು, ತನ್ನಿಂದ ಭಿನ್ನವಾದ ಅಧಿಕರಣದಲ್ಲಿ ಅಂದರೆ ಮೇಲಿನ ದೇಶದಲ್ಲಿ ವೃಷ್ಟಿ ಜ್ಞಾನವನ್ನು ಹುಟ್ಟಿಸುತ್ತದೆ. ಅವುಗಳಿಗೆ ಸ್ವಾಭಾವಿಕ ಸಂಬಂಧವೇ ಹಾಗಿದೆ] ಇನ್ನು ಯಾವ ಲಿಂಗವು ತನಗೆ ಸಮನಾಧಿಕರಣದಲ್ಲಿದ್ದ (ಒಂದೇ ಸ್ಥಳದಲ್ಲಿದ್ದ) ಸಾಧ್ಯ ಬಿಟ್ಟು ಇರಲು ಶಕ್ಯವಿಲ್ಲವೋ, ಆ ಲಿಂಗವು ತಾನು ಇದ್ದ ಅಧಿಕರಣದಲ್ಲಿಯೇ ಸಾಧ್ಯ ಪ್ರಮಿತಿಯನ್ನು ಹುಟ್ಟಿಸುತ್ತದೆ ಪ್ರಕೃತ ಧೂಮವು ತನ್ನ ಸಮನಾಧಿಕರಣವುಳ್ಳ (ಒಂದೇ ಅಧಿಕರಣವನ್ನು ಹೊಂದಿರುವ) ಸಾಧ್ಯವಾದ ಅಗ್ನಿಯನ್ನು ಬಿಟ್ಟು ಇರುವದು ಸಾಧ್ಯವಿಲ್ಲದ್ದರಿಂದ, ಆ ವ್ಯಾಪ್ತಿಗನುಸಾರವಾಗಿ, ತನಗೆ ಅಧಿಕರಣ (ಆಶ್ರಯ) ವಾದ ಪಕ್ಷದಲ್ಲಿಯೇ. ಅಂದರೆ ಪರ್ವತದಲ್ಲಿಯೇ 'ಅಗ್ನಿ' ಅನುಮಿತಿಯನ್ನು (ಜ್ಞಾನವನ್ನು) ಹುಟ್ಟಿಸುತ್ತದೆ ಹೊರತು ಬೇರೆಡೆಗೆ ಅಗ್ನಿ ಜ್ಞಾನವನ್ನು ಹುಟ್ಟಿಸುವದಿಲ್ಲ.

एवं च लिंगस्य साध्यप्रमाजनकत्वं व्याप्तिप्रकारसंबन्धमपेक्ष्य वक्तव्यमित्युक्तं भवति ।

**इति अनुमानस्वरूपकथनेन तस्यानुमितिजनकत्व समर्थनम्**

५) तत्र के व्याप्तिप्रकारा इति चेत्-व्याप्तिप्रकारो नवधा निरूप्यते—

१) कयोश्चित् समानदेशकालयोर्व्याप्तिः, यथा-रसस्य रूपेण, (देशे) यत्र रसः तत्र रूपम्, (काले) यदा रसः तदा रूपमिति व्याप्तिः, पृथिवीजलयोर्ज्ञेया ।

२) कयोश्चित् समानदेशत्वेऽपि भिन्नकालयोर्यथा-धूमस्याग्निना, यत्र धूमस्तत्राग्निरितिवन् न समानकालत्वम्, कार्यकारणभावापन्नत्वेन, धूमाग्न्योः पूर्वापरकालिकत्वनियमात् ।

३) कयोश्चित् समानकालत्वेऽपि भिन्नदेशयोः, यथा-कृत्तिकोदयस्य रोहिण्युदयसान्निध्येन ।

---

ಹೀಗೆ ವ್ಯಾಪ್ತಿ ಪ್ರಕಾರವು ಹೇಗಿರುವದೋ, ಅದರಂತೆ ಲಿಂಗವು ಸಾಧ್ಯ ಪ್ರಮಾವನ್ನು ಹುಟ್ಟಿಸುವದೆಂದು ತಿಳಿಯಬೇಕು.

**೫] ಒಂಬತ್ತು ವ್ಯಾಪ್ತಿ ಪ್ರಕಾರಗಳ ನಿರೂಪಣೆ ಪೂರ್ವಕ ಅನುಮಾನ ಸಮರ್ಥನೆ–**

ವ್ಯಾಪ್ತಿ ಪ್ರಕಾರಗಳು ಎಷ್ಟು ಎಂದರೆ, ಅವು ಒಂಬತ್ತು ಪ್ರಕಾರವಾಗಿ ವಿಭಾಗಿಸಲ್ಪಟ್ಟವೆ

೧) ಕೆಲವು ಧರ್ಮಗಳಿಗೆ ಸಮಾನ ದೇಶ ಹಾಗೂ ಸಮಾನ ಕಾಲದಲ್ಲಿ ವ್ಯಾಪ್ತಿಯುಂಟು. ಉದಾಃ– ರಸಕ್ಕೆ ರೂಪದಿಂದ ವ್ಯಾಪ್ತಿಯು ಎಲ್ಲಿ ರಸವೋ ಅಲ್ಲಿ ರೂಪವು. ಹಾಗೆಯೇ ಯಾವ ಕಾಲದಲ್ಲಿ ರಸವೋ ಆ ಕಾಲದಲ್ಲಿಯೇ ರೂಪವು. ಪೃಥಿವೀ, ನೀರುಗಳಲ್ಲಿ ಈ ವ್ಯಾಪ್ತಿ ಕಂಡಿದೆ.

೨) ಕೆಲವು ಧರ್ಮಗಳು ಸಮಾನ ದೇಶದಲ್ಲಿದ್ದರೂ ಭಿನ್ನಕಾಲಗಳಲ್ಲಿರುತ್ತವೆ. ಉದಾಃ ಧೂಮಕ್ಕೆ ಅಗ್ನಿಯಿಂದ ವ್ಯಾಪ್ತಿಯು ಯಾವ ದೇಶದಲ್ಲಿ ಧೂಮವಿರುವದೋ ಅದೇ ದೇಶದಲ್ಲಿ ಅಗ್ನಿಯಿರುವದು. ಈ ಧರ್ಮಗಳಿಗೆ ಸಮಾನ ಕಾಲವಿಲ್ಲ. ಏಕೆಂದರೆ ಧೂಮಾಗ್ನಿಗಳು ಕಾರ್ಯಕಾರಣ ರೂಪ ಸಂಬಂಧ ಹೊಂದಿದ್ದರಿಂದ ಪೂರ್ವಾಪರ ಕಾಲೀನಗಳೇ ಹೊರತು ಸಮಾನ ಕಾಲೀನಗಳಲ್ಲ.

४) कयोश्चित् भिन्नदेशकालयोर्व्याप्तिः, यथा अधो देशे नदीपूरस्य, ऊर्ध्वदेशवृष्टया ।

५) कस्यचिद् अयावद्धर्मभाविनः, समानदेशत्वेऽपि यावद्धर्मभाविना व्याप्तिः ( एवं सर्वत्र), यथा पतनस्य गुरुत्वेन व्याप्तिः अत्रायावद्धर्मभावि पतनं, यावद्धर्मभावि गुरुत्वम् ) ।

६) कस्यचित् एकदेशसंबंधेऽपि यावद्धर्मभाविनः धर्म्युत्तरकालीनेन, यथा-शरीरत्वस्य विनाशेन ( विनश्यदवस्था ग्राह्या ) यच्छरीरं तद्विनाशीति व्याप्तिः ।

---

೩) ಕೆಲವು ಧರ್ಮಗಳಿಗೆ ಸಮಾನ ಕಾಲೀನತ್ವವಿದ್ದರೂ ಭಿನ್ನದೇಶಗಳಲ್ಲಿ ವ್ಯಾಪ್ತಿಯಿರುತ್ತದೆ. ಉದಾ:- ಕೃತ್ತಿಕಾ ನಕ್ಷತ್ರದ ಉದಯಕ್ಕೆ ರೋಹಿಣೀ ನಕ್ಷತ್ರದ ಸಾನಿಧ್ಯವು. [ಕೃತ್ತಿಕಾ ಹಾಗೂ ರೋಹಿಣೀ ನಕ್ಷತ್ರಗಳು ಸಮಾನ ಕಾಲಕ್ಕೆ ಉದಯವಾದರೂ ಭಿನ್ನ ದೇಶದಲ್ಲಿರುತ್ತವೆ ಹೀಗೆ ಇವುಗಳಿಗೆ ಸಂಬಂಧ ರೂಪ ವ್ಯಾಪ್ತಿಯುಂಟು]

೪) ಕೆಲವು ಧರ್ಮಗಳು ಭಿನ್ನ ದೇಶ ಹಾಗೂ ಭಿನ್ನ ಕಾಲದಿಂದ ವ್ಯಾಪ್ತಿಯುಳ್ಳವುಗಳಾಗಿವೆ. ಉದಾ:- ಕೆಳಗಿನ ದೇಶದಲ್ಲಿ ನದೀಪೂರಕ್ಕೆ ಮೇಲಿನ ದೇಶದಲ್ಲಿಯ ವೃಷ್ಟಿಯಿಂದ ವ್ಯಾಪ್ತಿಯಿದೆ. [ಇಲ್ಲಿ ದೇಶ ಭೇದ ಹಾಗೂ ಕಾಲ ಭೇದವಿದ್ದರೂ ಸ್ವಾಭಾವಿಕ ಸಂಬಂಧ ರೂಪ ವ್ಯಾಪ್ತಿಯಿದೆ]

೫) ಯಾವುದೊಂದು ಅಯಾವದ್ಧರ್ಮಿಯಾದ ಧರ್ಮಕ್ಕೆ ಸಮಾನ ದೇಶದಲ್ಲಿ [ಒಂದೇ ಆಶ್ರಯದಲ್ಲಿ] ಯಾವದ್ಧರ್ಮಿಯಾದ ವ್ಯಾಪ್ತಿಯು, ಉದಾ:- ಪತನಕ್ಕೆ ಗುರುತ್ವ (ಭಾರ) ದಿಂದ ವ್ಯಾಪ್ತಿಯು. [ವಿವರಣೆ-ಧರ್ಮಿ [ಪದಾರ್ಥ] ಇರುವವರೆಗೆ ಧರ್ಮವಿದ್ದರೆ ಅದು ಅಯಾವದ್ಧರ್ಮಿ ಧರ್ಮವು ಪ್ರಕೃತ ಫಲದಲ್ಲಿ ಗುರುತ್ವವು ಯಾವದ್ಧರ್ಮಿ ಧರ್ಮವು, ಪತನವು ಅಯಾವದ್ಧರ್ಮಿ ಧರ್ಮವು. ಎರಡೂ ಒಂದೇ ದೇಶದಲ್ಲಿವೆ ಕಾರಣ ಅವುಗಳಿಗೆ ಅನ್ಯೋನ್ಯವ್ಯಾಪ್ತಿಯಿದೆ]

೬) ಯಾವುದೊಂದು ಯಾವದ್ಧರ್ಮಭಾವಿಯಾದ ಧರ್ಮಕ್ಕೆ ಒಂದೇ ಆಶ್ರಯದಲ್ಲಿ ಧರ್ಮಿಯ ಉತ್ತರ ಕಾಲೀನ ಧರ್ಮದಿಂದ ವ್ಯಾಪ್ತಿಯು. ಉದಾ:- ಶರೀರಕ್ಕೆ ವಿನಾಶದಿಂದ ವ್ಯಾಪ್ತಿಯು. ಯಾವುದು ಶರೀರವೋ ಅದು ವಿನಾಶಿಯು ಎಂಬ ವ್ಯಾಪ್ತಿ ಇದೆ. (ಯಾವದ್ಧರ್ಮ ಭಾವಿಯಾದ ಶರೀರತ್ವಕ್ಕೆ, ಧರ್ಮಿಯಾದ ಶರೀರದ ಉತ್ತರ ಕಾಲೀನದಲ್ಲಿ ಒಂದೇ ಆಶ್ರಯದಲ್ಲಿ ವಿನಾಶದ ಅವಸ್ಥೆ ಬರುವದರಿಂದ, ವ್ಯಾಪ್ತಿ ಇದೆ)

७) कस्यचित् प्रदेशवर्तिनः (धर्म्येकदेशवर्तिनः) व्याप्यैकवर्तिना, (सर्वावच्छेदेन धर्मिणा वर्तमानेन, यथा संयोगस्य द्रव्यत्वेन, यत्र संयोगः तत्र द्रव्यत्वं, इति व्याप्तिः।

८) कस्यचित् सर्वावच्छेदेन धर्मिणि वर्तमानस्य धर्म्येकदेशवर्तिना, यथा - रूपस्य संयोगेन यत्र रूपं तत्र संयोग इति पृथिव्यादिषु त्रिषु व्याप्तेः।

९) कयोश्चिदेकावयववर्तिनोऽपि, अवयवभेदेन, यथा - तुलोन्नमनावनमनयोः यथा - एकस्मिन् तुलावयवे, ऊर्ध्वगमनं तदा तदवयवोत्तरे अधोगमनमित्यादि व्याप्तिप्रकाराः।

अस्त्येव व्याप्तिरनेकप्रकारा, तथापि किं प्रकृत इति चेदनेनानुमानस्वरूपयुक्तं भवति,

---

೭) ಯಾವುದೊಂದು ಧರ್ಮಿಯ ಏಕದೇಶದಲ್ಲಿದ್ದ ಧರ್ಮಕ್ಕೆ ಧರ್ಮಿಯ ಎಲ್ಲ ಭಾಗದಲ್ಲಿರುವ ಧರ್ಮದಿಂದ ವ್ಯಾಪ್ತಿಯು. ಉದಾ:- ಸಂಯೋಗಕ್ಕೆ ದ್ರವ್ಯತ್ವದಿಂದ ವ್ಯಾಪ್ತಿಯು. ಎಲ್ಲಿ ಸಂಯೋಗವಿದೆಯೋ ಅಲ್ಲಿ ದ್ರವ್ಯತ್ವವಿದೆ. (ವಿವರಣೆ-ಸಂಯೋಗವು ಧರ್ಮದ ಏಕದೇಶದಲ್ಲಿದೆ. ಅದೇ ಧರ್ಮಿಯಲ್ಲಿ ದ್ರವ್ಯತ್ವವು ಎಲ್ಲ ಕಡೆಗೆ ಇದೆ. ಸಂಯೋಗವು ವಸ್ತುವಿನ ಒಂದು ಭಾಗಕ್ಕೆ ಆಗುವದು. ದ್ರವ್ಯತ್ವ ಧರ್ಮವು ವಸ್ತುವಿನಲ್ಲೆಲ್ಲ ಇರುವದು. ಕಾರಣ ಅವುಗಳಿಗೆ ಅನ್ಯೋನ್ಯ ವ್ಯಾಪ್ತಿಯಿರುವದು]

೮) ಧರ್ಮಿಯ ಎಲ್ಲ ಭಾಗಗಳಲ್ಲಿರುವ [ಸರ್ವತ್ರವಾಗಿರುವ] ಯಾವುದೊಂದು ಧರ್ಮಕ್ಕೆ ಧರ್ಮಿಯ ಏಕದೇಶದಲ್ಲಿರುವ ಧರ್ಮದಿಂದ ವ್ಯಾಪ್ತಿಯು. ಉದಾ:- ರೂಪಕ್ಕೆ ಸಂಯೋಗದಿಂದ ವ್ಯಾಪ್ತಿಯು. ಎಲ್ಲಿ ರೂಪವೋ ಅಲ್ಲಿ ಸಂಯೋಗವು. ಪೃಥಿವಿ, ಜಲ ಹಾಗೂ ತೇಜಸ್ಸುಗಳಲ್ಲಿ ಈ ವ್ಯಾಪ್ತಿ ಇದೆ. [ವಿವರಣೆ-ರೂಪವು ಧರ್ಮಿಯ ಎಲ್ಲೆಡೆಗೆ ಇರುವ ಧರ್ಮವು. ಸಂಯೋಗವು ಧರ್ಮಿಯ ಏಕದೇಶದಲ್ಲಿರುವ ಧರ್ಮವು. ಕಾರಣ ಅವುಗಳಿಗೆ ವ್ಯಾಪ್ತಿಯಿದೆ.

೯) ಒಂದೇ ಅವಯವದಲ್ಲಿರುವ ಯಾವ ಎರಡು ಧರ್ಮಗಳಿಗೆ ಅವಯವ ಭೇದದಿಂದ ವ್ಯಾಪ್ತಿಯು. ಉದಾ:- ತಕ್ಕಡಿಯ ಪರಡಿಗಳ ಏರಿಕೆ ಹಾಗೂ ಇಳಿಕೆಗಳು. ಒಂದೇ ತಕ್ಕಡಿಯ ಒಂದು ಅವಯವವು [ಒಂದು ಪರಡಿ] ಯಾವಾಗ ಮೇಲೇರುವದು, ಆಗ ಇನ್ನೊಂದು ಅವಯವವು [ಇನ್ನೊಂದು ಪರಡಿ] ಕೆಳಗಿಳಿಯುವದು. ಈ ಅವಯವಗಳಲ್ಲಿಯ ಭಿನ್ನಧರ್ಮಗಳಿಗೆ ವ್ಯಾಪ್ತಿಯಿದೆ. ಹೀಗೆ ವ್ಯಾಪ್ತಿ ಪ್ರಕಾರಗಳಿವೆ.

किं तदनुमानस्वरूपं? उच्यते - व्याप्तिज्ञाननत्स्मरणसहितं लिंगस्य सम्यग्ज्ञानं, सम्यग्ज्ञातं लिंगं वा, व्याप्तिप्रकारानुसारेण समुचितदेशादौ लिंगिप्रमां जनयत् अनुमानमित्युक्तं भवतीति ज्ञेयम् ।

ननु व्याप्तिग्रहदशायमेव वन्ह्यादिसाध्यस्य ज्ञातत्वात् किमनुमानेन कृत्यमिति चेत्, अत्र समाधानं तु - अनुमानस्य समुचितदेशकाले लिंगिप्रमाजनकत्वस्योक्तत्वादेव लिंगिस्वरूपस्य ज्ञातत्वेऽपि देशविशेषादिसंसृष्टतया अज्ञातत्वात् तादृशज्ञानजनकत्वेनानुमानस्य सार्थक्यं भवतीति न वैयर्थ्यं ज्ञेयम् ।

**इति नवधा व्याप्तिप्रकारकथनपूर्वकं विस्तरेण अनुमानस्वरूपसमर्थनम्**

६) अनुमानस्यानुमितिजनने द्विविधं सामर्थ्यं, व्याप्तिः समुचितदेशादौ सिद्धिश्च,

---

ಈ ರೀತಿ ವ್ಯಾಪ್ತಿ ಪ್ರಕಾರಗಳು ಇರಲಿ. ಪ್ರಕೃತ ಅದರಿಂದೇನು ಪ್ರಯೋಜನ? ಹೇಗೆಂದರೆ, ಇದರಿಂದ ಅನುಮಾನದ ಸ್ವರೂಪವು ಹೇಳಿದಂತೆಯೇ ಆಯಿತು. ಈ ಅನುಮಾನದ ಸ್ವರೂಪವೇನೆಂಬುದನ್ನು ಹೀಗೆ ಹೇಳಬಹುದು– ವ್ಯಾಪ್ತಿ ಜ್ಞಾನ ಹಾಗೂ ಅದರ ಸ್ಮರಣೆಯಿಂದ ಕೂಡಿದ ಲಿಂಗ ಜ್ಞಾನವು [ಲಿಂಗದ ಸಮ್ಯಕ್ ಜ್ಞಾನವು] ಅಥವಾ ಸಮ್ಯಕ್ ಜ್ಞಾತವಾದ ಲಿಂಗವು, ವ್ಯಾಪ್ತಿ ಪ್ರಕಾರಾನುಸಾರವಾಗಿ ಸಮುಚಿತ ದೇಶಾದಿಗಳಲ್ಲಿ ಲಿಂಗಿ ಜ್ಞಾನವನ್ನು [ಸಾಧ್ಯ ಜ್ಞಾನವನ್ನು] ಹುಟ್ಟಿಸುವದೇ ಅನುಮಾನವೆಂದು ಕರೆಯಲ್ಪಡುತ್ತದೆಯೆಂದು ತಿಳಿಯಬೇಕು.

ಶಂಕಾ– ವ್ಯಾಪ್ತಿ ಗ್ರಹಣ ಕಾಲದಲ್ಲಿಯೇ ಸಾಧ್ಯವಾದ ಅಗ್ನಿಜ್ಞಾನವಾಗುವದರಿಂದ, ಅನುಮಾನದ ಕೃತ್ಯವೇನು? [ಅಗ್ನಿ ಜ್ಞಾನದ ಸಲುವಾಗಿ ಅನುಮಾನವು, ಆ ಜ್ಞಾನವು ವ್ಯಾಪ್ತಿ ಗ್ರಹಣಾ ಕಾಲದಲ್ಲಿಯೇ ಆಗುವದರಿಂದ, ಅನುಮಾನದ ಪ್ರಯೋಜನವಿಲ್ಲವೆಂಬ ಭಾವವು] ಈ ಶಂಕಾಕ್ಕೆ ಸಮಾಧಾನವು ಹೀಗಿದೆ– ಅನುಮಾನವು ಸಮುಚಿತ ದೇಶದಲ್ಲಿ, ಲಿಂಗಿ ಜ್ಞಾನವನ್ನು ಹುಟ್ಟಿಸುತ್ತದೆಯೆಂದು ಹೇಳಿದ್ದರಿಂದ ಉತ್ತರ ಬಂದಂತಾಯಿತು. ಹೇಗೆಂದರೆ, ಲಿಂಗಿ [ಅಗ್ನಿ] ಜ್ಞಾನವು, ವ್ಯಾಪ್ತಿ ಗ್ರಹಣ ದಶಾದಲ್ಲಾದರೂ ದೇಶ ವಿಶೇಷ ಸಂಬಂಧವಾಗಿ ಆಗದೇ ಇದ್ದುದರಿಂದ. ಅಂಥ ಜ್ಞಾನವನ್ನು ಅನುಮಾನವು ಹುಟ್ಟಿಸುತ್ತದೆ. ಕಾರಣ ಅನುಮಾನವು ಸಾರ್ಥಕವೇ ಆಗುವದಲ್ಲದೇ ವ್ಯರ್ಥವಲ್ಲವು.

೬) ಅನುಮಾನಕ್ಕೆ ಸಾಮರ್ಥ್ಯದ್ವಯ ನಿರೂಪಣೆ ಹಾಗೂ **ಪಕ್ಷಧರ್ಮತಾ** ನಿಯಮ ನಿರಾಕರಣೆ–

न तु पक्षधर्मतानियमः, अधोदेशे प्रमितस्य नदीपूरस्य ऊर्ध्वदेशे (पक्षे) कालांतरवृष्ट्यनुमितिहेतुत्व-स्यानुभवात् ।

ननु अधोदेशगतनदीपूरकत्वात् ऊर्ध्वदेशो वृष्टिमानित्यादिप्रयोगेण सर्वत्र पक्षधर्मता संपादयितुं शक्या, अतः कथं पक्षधर्मत्वानियम इति चेत् किमेवं प्रयोगविपरिणामो लौकिकरीतिमाश्रित्य, उत स्वप्रक्रियासंरक्षणार्था । नाद्यः, लौकिकाहि, ऊर्ध्वदेशे वृष्टिः कुत इति पृष्टाः, अधोदेशे नदीपूरादित्येव, वदंति; न द्वितीयः, सिद्धे प्रयोगविपरिणामे व्यभिचाराभावेन प्र-

---

ಅನುಮಾನಕ್ಕೆ ಅನುಮಿತಿಯನ್ನು ಹುಟ್ಟಿಸುವಲ್ಲಿ ಎರಡು ವಿಧ ಸಾಮರ್ಥ್ಯವುಂಟು. i] ವ್ಯಾಪ್ತಿಯು ಹಾಗೂ ii] ಸಮುಚಿತ ದೇಶದಲ್ಲಿ ಸಿದ್ಧಿಯು [ವಿವರಣೆ–ಲಿಂಗ ಜ್ಞಾನವು ವ್ಯಾಪ್ತಿಯುಳ್ಳದ್ದಾಗಬೇಕು. ಹಾಗೂ ತನಗೆ ಯೋಗ್ಯವಾದ ದೇಶದಲ್ಲಿರಬೇಕು. ಹೀಗೆ ಎರಡು ಸಾಮರ್ಥ್ಯಗಳಿದ್ದರೆ, ಮಾತ್ರ ಅನುಮಿತಿಯನ್ನು ಹುಟ್ಟಿಸುತ್ತದೆ. ಹೇತುವು ಪಕ್ಷದಲ್ಲಿರಬೇಕೆಂಬ ನಿಯಮವಿಲ್ಲ. ಏಕೆಂದರೆ ಕೆಳಗಿನ ದೇಶದಲ್ಲಿರುವ ನದೀಪೂರವು ಮೇಲಿನ ದೇಶದಲ್ಲಿ [ಪಕ್ಷದಲ್ಲಿ] ಕಾಲಾಂತರದಲ್ಲಾದ ವೃಷ್ಟಿಯ ಅನುಮಿತಿಯನ್ನು ಹುಟ್ಟಿಸುವದು ಅನುಭವ ಸಿದ್ಧವಾಗಿದೆ.

ಶಂಕಾ– ಕೆಳಗಿನ ದೇಶವು, ನದೀಪೂರವುಳ್ಳದ್ದರಿಂದ, ಮೇಲಿನ ದೇಶವು ವೃಷ್ಟಿಯುಳ್ಳದೆಂದು ಪ್ರಯೋಗ ಮಾಡಿದಲ್ಲಿ, ಹೇತುವು ಪಕ್ಷದಲ್ಲಿ ಬರುವದು. ಹೀಗೆಯೇ ಪಕ್ಷ ಧರ್ಮತಾವನ್ನು [ಎಂದರೆ ಹೇತುವು ಪಕ್ಷದಲ್ಲಿರುವದನ್ನು] ಎಲ್ಲೆಡೆಗೆ ಸಂಪಾದನೆ ಮಾಡಲು ಬರುತ್ತದೆ. ಕಾರಣ ಪಕ್ಷ ಧರ್ಮತಾ ನಿಯಮವನ್ನು ಏಕೆ ಬಿಡಬೇಕು? ಹೀಗೆ ಶಂಕಾ ಮಾಡಿದರೆ, ಅದಕ್ಕೆ ಪ್ರತಿಯಾಗಿ ಮೇಲಿನಂತೆ ವಿಪರೀತವಾದ ಪ್ರಯೋಗವನ್ನು ಲೌಕಿಕರೀತಿಯಿಂದ ಹೇಳುವಿರೋ? ಅಥವಾ ನಿಮ್ಮ ಪ್ರಕ್ರಿಯಾ ಸಂರಕ್ಷಣೆಗಾಗಿ ಹೇಳುವಿರೋ? ಎಂದು ಕೇಳಬೇಕು ಮೊದಲನೆಯ ಪಕ್ಷವು ಕೂಡದು. ಲೌಕಿಕರು ಮೇಲಿನ ದೇಶದಲ್ಲಿ ಮಳೆ ಏಕೆ? ಎಂದು ಪ್ರಶ್ನಿಸಿದಲ್ಲಿ ಕೆಳಗಿನ ದೇಶದಲ್ಲಿ ನದೀಪೂರ ಇರುವದರಿಂದ ಎಂದು ಹೇಳುತ್ತಾರೆ. (ಕಾರಣ ಲೌಕಿಕ ರೀತಿಯಿಂದ ಹೇಳಲು ಬರುವದಿಲ್ಲ) ಎರಡನೆಯ ಪಕ್ಷವೂ ಸರಿಯಲ್ಲ. (ಪ್ರಯೋಗ ಪರಿಣಾಮ ಸಿದ್ಧವಾದ ಮೇಲೆ, ಉಕ್ತ ನಿಯಮಕ್ಕೆ ವ್ಯಭಿಚಾರವು ಬರದೇ ಹೋದರೆ, ವಾದಿಯ ಪ್ರಕ್ರಿಯಾಕ್ಕೆ ಪ್ರಾಮಾಣ್ಯ ಸಿದ್ಧಿಯಾಗುತ್ತದೆ. ಪ್ರಕ್ರಿಯಾ ಪ್ರಾಮಾಣ್ಯ ಸಿದ್ಧಿಯಾದ ಮೇಲೆ ಪ್ರಯೋಗ ಪರಿಣಾಮ ಸಿದ್ಧಿಯಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುವದರಿಂದ ಎಲ್ಲೆಡೆಗೆ ಪಕ್ಷ ಧರ್ಮತಾ ನಿಯಮವು ಸಿದ್ಧಿಸುವದಿಲ್ಲವೆಂದು ತಿಳಿಯಬೇಕು.

क्रियाप्रामाण्यसिद्धिः, तत्सिद्धौ च प्रयोगविपरिणामसिद्धिरित्यन्योन्याश्रयात् न सर्वत्र पक्षधर्मतानियम इति ध्येयम् ।

**इति अनुमानस्य सामर्थ्यद्वयनिरूपणपूर्वकपक्षधर्मतानियमभंगः ।**

७) ननु व्याप्तिप्रमितिरनुमानसामर्थ्यमित्युक्तं, सा च व्याप्तिप्रमितिः केन प्रमाणेन जायते? यथायथं प्रत्यक्षानुमानागमैर्जायत इति ब्रूमः, तत्र तावत् धूमस्याग्निना व्याप्तिः प्रत्यक्षगम्या।

ननु प्रत्यक्षस्य स्वसन्निकृष्टमात्रग्राहितया साहचर्यनियमरूपव्याप्तिग्रहे कथं सामर्थ्यमिति चेदत्र एवं परिहारो वक्तव्यः— **न** केवलं प्रत्यक्षस्य नियमघटितसाहचर्यरूपव्याप्तिग्रहे सामर्थ्यं किं तु भूयोदर्शनव्यभिचाराभावनिश्चयोपाध्यभावनिश्चयरूपसहकारीसामर्थ्ययुक्तात् व्याप्तिग्रहः प्रत्यक्षात् व्याप्तिज्ञानं जायत इति ।

अत्र भूयोदर्शनव्यभिचारादर्शने द्वे एव सहकारिणी, उपाध्यभावनिश्चयस्तु व्यभिचाराभावनिश्चये हेतुरिति कृत्वा सोऽप्यत्र सहकारित्वेनोपात्तः तथा च भूयोदर्शनादिसहकारिसचिवप्रत्यक्षेणैव व्याप्तिप्रमितिरुत्पद्यत इति ध्येयम्

---

೭) **ಸಹಕಾರಿಗಳಿಂದ ಕೂಡಿದ ಪ್ರತ್ಯಕ್ಷದಿಂದ ವ್ಯಾಪ್ತಿಜ್ಞಾನ ಹುಟ್ಟುವದೆಂಬುದರ ಸಮರ್ಥನೆ**–

ವ್ಯಾಪ್ತಿ ಪ್ರಮಿತಿಯು ಅನುಮಾನದ ಸಾಮರ್ಥ್ಯವೆಂದು ಹೇಳಿದ್ದಾಯಿತು. ಈ ವ್ಯಾಪ್ತಿ ಪ್ರಮಿತಿಯು ಯಾವ ಪ್ರಮಾಣದಿಂದ ಹುಟ್ಟುತ್ತದೆ? ಅಂದರೆ, ಯಥಾಪ್ರಕಾರ ವ್ಯಾಪ್ತಿ ಜ್ಞಾನವೂ ಪ್ರತ್ಯಕ್ಷ, ಅನುಮಾನ, ಆಗಮಗಳಿಂದ ಹುಟ್ಟುತ್ತದೆಯೆಂದು ಹೇಳುತ್ತೇವೆ. ಧೂಮಕ್ಕೆ ಅಗ್ನಿಯಿಂದಿರುವ ವ್ಯಾಪ್ತಿಜ್ಞಾನವು ಪ್ರತ್ಯಕ್ಷದಿಂದ ಹುಟ್ಟುತ್ತದೆ.

ಶಂಕಾ- ಪ್ರತ್ಯಕ್ಷವು [ಇಂದ್ರಿಯವು] ತನಗೆ ಸನ್ನಿಕೃಷ್ಟವಾದ ಪದಾರ್ಥವನ್ನು ಮಾತ್ರ ಗ್ರಹಿಸುವದರಿಂದ, 'ಸಾಹಚರ್ಯ ನಿಯಮ' ರೂಪ ವ್ಯಾಪ್ತಿಯನ್ನು ಗ್ರಹಿಸುವಲ್ಲಿ ಅದಕ್ಕೆ ಸಾಮರ್ಥ್ಯವು ಹೇಗೆ? ಇದಕ್ಕೆ ಪರಿಹಾರವು ಹೀಗೆ– ಕೇವಲ ಪ್ರತ್ಯಕ್ಷವು ಸಾಹಚರ್ಯ ನಿಯಮವಾದ ವ್ಯಾಪ್ತಿ ಗ್ರಹಣದಲ್ಲಿ ಸಾಮರ್ಥ್ಯವುಳ್ಳದೆಂದು ಹೇಳುವದಿಲ್ಲ. ಆದರೆ ಪುನಃ ಪುನಃ ದರ್ಶನ, ವ್ಯಭಿಚಾರಾಭಾವದ ನಿಶ್ಚಯ, ಉಪಾಧಿ ಅಭಾವದ ನಿಶ್ಚಯ,–ಈ ಸಹಕಾರಿಗಳ ಸಾಮರ್ಥ್ಯದಿಂದ ಕೂಡಿದ ಪ್ರತ್ಯಕ್ಷದಿಂದ ವ್ಯಾಪ್ತಿಗ್ರಹ ಹಾಗೂ ವ್ಯಾಪ್ತಿ ಜ್ಞಾನ ಹುಟ್ಟುದದೆಂದು ಹೇಳುತ್ತೇವೆ. ಪುನಃ ಪುನಃ ದರ್ಶನ, ಹಾಗೂ ವ್ಯಭಿಚಾರ ದರ್ಶನದ ಅಭಾವ, ಇವೆರಡೂ ಸಹಕಾರಿಗಳು. ಉಪಾಧಿಯ ಅಭಾವದ ನಿಶ್ಚಯವೂ,

१) ननु भूयोदर्शनोपाध्यभावनिश्चयायत्तव्यभिचाराभावनिर्णयसहकृतप्रत्यक्षस्य, व्याप्तिज्ञानजनकत्वांगीकारे सति केवलं प्रत्यक्षं न व्याप्तिजनकं, किं तु भूयोदर्शनादिकमेव व्याप्तिज्ञानजनकं भवतु। मैवं, यतः साहचर्यनियमग्राहिणः प्रत्यक्षस्य भूयोदर्शनव्यभिचारादर्शनोपाध्यभावनिश्चयाः सहकारिण एव न तु व्याप्तिज्ञानजनकाः, तज्जनकं तु प्रत्यक्षमेव।

२) ननु भूयोदर्शनव्यभिचाराभावदर्शयोः क्वापि प्रत्यक्षसहकारित्वाभावात् तत्सहकृतस्य साहचर्यग्राहिणः प्रत्यक्षस्य प्रमाणांतरत्वमेवांगीकार्यं, न प्रत्यक्षत्वेन प्रामाण्यमिति चेन्न, यथा संस्काररूपसहकारिभेदेन चक्षुर्जन्यप्रत्यभिज्ञायां कार्यं न प्रमाणांतरता,

---

ವ್ಯಭಿಚಾರದ ನಿಶ್ಚಯಕ್ಕೆ ಕಾರಣವಾದುದರಿಂದ ಅದನ್ನೂ ಸಹಕಾರಿಯಾಗಿ ಇಲ್ಲಿ ಅಂಗೀಕರಿಸಲಾಗಿದೆ. ಅಂತೂ, ಭೂಯೋ-ದರ್ಶನಾದಿ ಸಹಕಾರಿಗಳಿಂದ ಕೂಡಿದ ಪ್ರತ್ಯಕ್ಷದಿಂದ ವ್ಯಾಪ್ತಿ ಪ್ರಮಿತಿಯು ಹುಟ್ಟುತ್ತದೆಂದು ತಿಳಿಯಬೇಕು.

೧) ಭೂಯೋ ದರ್ಶನ ಹಾಗೂ ಉಪಾಧಿಯ ಅಭಾವ ನಿಶ್ಚಯದಿಂದ ಪ್ರಾಪ್ತವಾಗುವ ವ್ಯಭಿಚಾರಾಭಾವ ನಿಶ್ಚಯಗಳ ಸಹಕಾರದಿಂದ ಕೂಡಿದ ಪ್ರತ್ಯಕ್ಷವು ವ್ಯಾಪ್ತಿ ಜ್ಞಾನಜನಕವೆಂದು ಅಂಗೀಕರಿಸಿದಲ್ಲಿ, ಕೇವಲ ಪ್ರತ್ಯಕ್ಷವು ವ್ಯಾಪ್ತಿ ಜ್ಞಾನ ಜನಕವಲ್ಲ. ಆದರೆ ಭೂಯೋದರ್ಶನಾದಿಗಳೇ ವ್ಯಾಪ್ತಿ ಜ್ಞಾನ ಜನಕಗಳೆಂದು ಹೇಳಿದಂತಾಯಿತು. ಎಂದು ಹೀಗೆ ಶಂಕಿಸಕೂಡದು. ವ್ಯಾಪ್ತಿ ಗ್ರಾಹಿಯಾದ ಪ್ರತ್ಯಕ್ಷಕ್ಕೆ, ಭೂಯೋ ದರ್ಶನ ವ್ಯಭಿಚಾರದ ಆದರ್ಶನ [ಅಭಾವ], ಉಪಾಧಿ ಅಭಾವ ನಿಶ್ಚಯಗಳು ಸಹಕಾರಿಗಳೇ [ಉತ್ತೇಜಕಗಳೇ] ಹೊರತು ವ್ಯಾಪ್ತಿ ಜ್ಞಾನಜನಕಗಳಲ್ಲ. ವ್ಯಾಪ್ತಿ ಜ್ಞಾನ ಹುಟ್ಟಿಸತಕ್ಕದ್ದು ಪ್ರತ್ಯಕ್ಷವೇ. [ವಿವರಣೆ– ಪ್ರತ್ಯಕ್ಷವು, ಇಂದ್ರಿಯಗಳು] ಪುನಃ ಪುನಃ ದರ್ಶನ, ವ್ಯಭಿಚಾರಾಭಾವ, ಉಪಾಧ್ಯಭಾವ ನಿಶ್ಚಯಗಳಿಂದ ಉತ್ತೇಜಿತವಾಗಿ ವ್ಯಾಪ್ತಿ ಜ್ಞಾನವನ್ನು ಹುಟ್ಟಿಸುತ್ತವೆ.

**ಶಂಕಾ**– ಭೂಯೋ ದರ್ಶನ, ಹಾಗೂ ವ್ಯಭಿಚಾರಾಭಾವ ದರ್ಶನಗಳು ಪ್ರತ್ಯಕ್ಷಕ್ಕೆ ಸಹಕಾರಿಗಳಾಗಿ ಎಲ್ಲಿಯೂ ಕಂಡಿಲ್ಲ. ಎಂದ ಮೇಲೆ ಅವುಗಳಿಂದ ಸಹಕೃತವಾದ ವ್ಯಾಪ್ತಿ [ಸಾಹಚರ್ಯನಿಯಮ] ಯನ್ನು ಗ್ರಹಿಸತಕ್ಕ ಪ್ರತ್ಯಕ್ಷವು ಪ್ರಮಾಣಾಂತರವಾಗಬೇಕೆ ಹೊರತು ಪ್ರತ್ಯಕ್ಷವೆಂಬ ಪ್ರಮಾಣವಾಗಲಾರದೆಂಬ ಶಂಕೆಯೂ ಸರಿಯಲ್ಲ. ಹೇಗೆ ಸಂಸ್ಕಾರ ರೂಪ ಸಹಕಾರಿಯಿಂದ ಕೂಡಿದ ಚಕ್ಷುರಿಂದ್ರಿಯದಿಂದ ಹುಟ್ಟಿದ ಪ್ರತ್ಯಭಿಜ್ಞಾ

तथा साहचर्यादिसंबंधग्राहिणः प्रत्यक्षस्य भूयोदर्शनादिसहकारिविशेषसद्भावेऽपि न प्रमाणांतरत्वम् ।

३) ननु भूयोदर्शनादेः सहकारित्वेऽपि न प्रत्यक्षं व्याप्तिग्राहकं, कुत इति चेत् प्रत्यक्षस्य वर्तमानसन्निकृष्टमात्रग्राहकत्वात्, तथा च सन्निकृष्टकतिपयधूमादिषु व्याप्तिग्रहेऽपि कथं देशकालव्यवहितव्यक्तिषु व्याप्तिग्रहः? न्यायमत इव सामान्यलक्षणप्रत्यासत्तेरभावेन तत्र चक्षुषोऽसामर्थ्यादिति चेन्न, सहकारिसामर्थ्येन करणानां शक्त्यंतराविर्भावस्य बहुलमुपलंभात् । तथाहि— संस्काररूपसहकारिसामर्थ्याहितशक्तिकस्य चक्षुषः, अतीतवर्तमानविषयप्रत्यभिज्ञाजनकत्वदर्शनात् तथा गंधानुभवजन्यसंस्काराहितशक्तिकस्य चक्षुषः चंदनखंडे, सुरभिश्चंदनखंड इति साक्षात्कारजनकत्वदर्शनात्,

---

ರೂಪ ಕಾರ್ಯದಲ್ಲಿ, ಆ ಚಕ್ಷುರಿಂದ್ರಿಯವು ಪ್ರತ್ಯೇಕ ಪ್ರಮಾಣಾಂತರವಾಗುವದಿಲ್ಲವೋ, ಅದರಂತೆ ವ್ಯಾಪ್ತಿಯನ್ನು ಗ್ರಹಿಸತಕ್ಕ ಭೂಯೋ ದರ್ಶನಾದಿ ಸಹಕಾರಿ ವಿಶೇಷವಿದ್ದರೂ, ಆ ಪ್ರತ್ಯಕ್ಷವು ಪ್ರಮಾಣಾಂತರವಾಗುವದಿಲ್ಲ.

ಪ್ರತ್ಯಕ್ಷವು ವರ್ತಮಾನ ಕಾಲದಲ್ಲಿದ್ದ ವಸ್ತುವನ್ನು ಮಾತ್ರ ಗ್ರಹಣ ಮಾಡುವದರಿಂದ, ಭೂಯೋದರ್ಶನಾದಿ ಸಹಕಾರಿಯುಳ್ಳದ್ದಾದರೂ, ವ್ಯಾಪ್ತಿಯನ್ನು ಗ್ರಹಿಸಲಾರದು. ಅಲ್ಲದೆ, ಪ್ರತ್ಯಕ್ಷವು [ಇಂದ್ರಿಯಗಳು] ಸನ್ನಿಕೃಷ್ಟವಾದ ಕೆಲವು ಧೂಮ ಮೊದಲಾದವುಗಳಲ್ಲಿ ಮಾತ್ರ, ವ್ಯಾಪ್ತಿಗ್ರಹಣ ಮಾಡುವದಲ್ಲದೇ ಹೊರತು, ದೇಶ ಕಾಲದಿಂದ ಮರೆಯಾದ [ವ್ಯವಹಿತವಾದ] ಧೂಮಾದಿಗಳಲ್ಲಿ ವ್ಯಾಪ್ತಿ ಗ್ರಹಣ ಹೇಗೆ ಮಾಡಬಲ್ಲದು ? ಹಾಗೂ ನೈಯಾಯಿಕರಂತೆ ಸಾಮಾನ್ಯ ಲಕ್ಷಣ ಪ್ರತ್ಯಾಸತ್ತಿಯು [ಸಂಬಂಧ ಸಾಮಾನ್ಯವು] ಇರಲಾರದ್ದರಿಂದ ಕಣ್ಣಿಗೆ ಕಾಣದ ಧೂಮಾದಿಗಳ ಗ್ರಹಣದಲ್ಲಿ ಚಕ್ಷುರಿಂದ್ರಿಯಕ್ಕೆ ಸಾಮರ್ಥ್ಯವಿಲ್ಲವೆಂದು ಶಂಕಿಸಕೂಡದು. ಇಂದ್ರಿಯಗಳಿಗೆ ಸಹಕಾರಿ ಸಾಮರ್ಥ್ಯದಿಂದ ವಿಶೇಷ ಶಕ್ತಿಯ ಆವಿರ್ಭಾವವಾಗುತ್ತದೆಯೆಂಬುದು ಅನೇಕ ಕಡೆಗಳಲ್ಲಿ ಕಂಡಿದೆ. ಹೇಂದರೆ, ಸಂಸ್ಕಾರ ರೂಪ ಸಹಕಾರಿ ಸಾಮರ್ಥ್ಯದಿಂದ ಕೂಡಿದ ಚಕ್ಷುರಿಂದ್ರಿಯಕ್ಕೆ ಅತೀತ ಹಾಗೂ ವರ್ತಮಾನ ಕಾಲಗಳಿಗೆ ಸಂಬಂಧಿಸಿದ ಪ್ರತ್ಯಭಿಜ್ಞಾ ಹುಟ್ಟಿಸುವ ಸಾಮರ್ಥ್ಯವು ಕಂಡಿದೆ. [ಅವನೇ ಈ ದೇವದತ್ತನ ಎಂಬ ಜ್ಞಾನವು ಪ್ರತ್ಯಭಿಜ್ಞೆಯು] ಅದರಂತೆ ಗಂಧದ ಅನುಭವದಿಂದ ಹುಟ್ಟಿದ ಸಂಸ್ಕಾರದಿಂದ ಕೂಡಿದ

वेत्रबीजस्य भर्जनलक्षणसहकारिसामर्थ्येन कदलीकांडजननसामर्थ्यदर्शनात् तथा प्रकृतेऽपि, उपाध्यभावनिश्चयव्यभिचाराभावनिश्चयभूयोदर्शनजन्यसंस्काराविर्भूतशक्तिकस्य चक्षुषः अतीतादिधूमनिष्ठव्याप्तिग्राहकत्वोपपत्तेर्न कोऽपि दोषः ।

४ ) ननु लिंगप्रमितिव्याप्तिस्मृत्योः अनुमितिहेतुत्वं, भूयोदर्शनादेः व्याप्तिधीहेतुत्वं, व्याप्तिप्रकारमपेक्ष्यानुमितिजनकत्वं शक्त्यन्तरकल्पनादिकं सर्वं कुतः कल्प्यते? इति चेदनुमितिरूपकार्यदर्शनादेव, तथाहि, अस्ति तावद् धूमदर्शनानतरमग्निज्ञानं न तदयथार्थं, बाधकाभावरूप-संवादित्वात्, न चान्यदर्शनेनान्यज्ञानं निर्निमित्तं भवितुमर्हति, घटज्ञानेन पटधीरपि स्यादित्यतिप्रसंगात् ।

---

ಶಕ್ತಿಯುಳ್ಳ ಚಕ್ಷುರಿಂದ್ರಿಯವು 'ಗಂಧದ ಕೊರಡಿನಲ್ಲಿ ಇದು ಗಂಧವುಳ್ಳದ್ದೆಂಬ ಜ್ಞಾನವನ್ನೂ ಹುಟ್ಟಿಸುವದು ಕಂಡಿದೆ. ಬಿದಿರು ಬೀಜವು ಹುರಿಯುವಿಕೆಯೆಂಬ ಸಹಕಾರಿ ಸಾಮರ್ಥ್ಯದಿಂದ ಬಾಳೆಯ ಕಾಂಡವನ್ನು ಹುಟ್ಟಿಸುವದು ಕಂಡಿದೆ. ಹಾಗೆಯೇ ಇಲ್ಲಿ ಕೂಡ ಭೂಯೋ ದರ್ಶನ, ವ್ಯಭಿಚಾರಭಾವ ದರ್ಶನ, ಉಪಾದಿ ಅಭಾವ ನಿಶ್ಚಯಗಳಿಂದ ಹುಟ್ಟಿದ ಸಂಸ್ಕಾರದಿಂದ ಚಕ್ಷುರಿಂದ್ರಿಯಕ್ಕೆ ವಿಶೇಷ ಶಕ್ತಿಯು ಆವಿರ್ಭಾವವಾಗಿ. ಅದರಿಂದ ಅತೀತ ಕಾಲದ [ಕಣ್ಣಿಗೆ ಕಾಣದ] ಧೂಮದಲ್ಲಿ ವ್ಯಾಪ್ತಿ ಗ್ರಹಣವು ಕೊಡುತ್ತದೆ ಆದ್ದರಿಂದ ಯಾವ ದೋಷವೂ ಇಲ್ಲ.

೪) ಲಿಂಗಜ್ಞಾನ ಹಾಗೂ ವ್ಯಾಪ್ತಿ ಸ್ಮರಣೆಗಳು ಅನುಮಿತಿಗೆ ಕಾರಣಗಳೆಂದೂ, ಭೂಯೋ ದರ್ಶನಾದಿ ಸಹಕಾರಿಗಳು ವ್ಯಾಪ್ತಿ ಜ್ಞಾನಕ್ಕೆ ಕಾರಣಗಳೆಂದೂ, ವ್ಯಾಪ್ತಿ ಪ್ರಕಾರಗಳನ್ನಪೇಕ್ಷಿಸಿ ಅನುಮಿತಿ ಹುಟ್ಟುವದೆಂದೂ, ಶಕ್ತ್ಯಂತರ ಕಲ್ಪನೆ ಮೊದಲಾದವುಗಳನ್ನು ಏಕೆ ಕಲ್ಪನೆ ಮಾಡಬೇಕು? ಹೀಗೆಂದರೆ ಅನುಮಿತಿ ಕಾರ್ಯದರ್ಶನದಿಂದಲೇ ಹೀಗೆ ಕಲ್ಪನೆ ಮಾಡಬೇಕಾದುದ್ದು ಸೂಕ್ತವು. ಹೇಗೆಂದರೆ, ಧೂಮ ದರ್ಶನವಾದ ಮೇಲೆ ಅಗ್ನಿಜ್ಞಾನವು ಹುಟ್ಟುತ್ತದೆ ಭಾಧಕ ಜ್ಞಾನದ ಅಭಾವವೆಂಬ ಸಂವಾದ ಇದ್ದುದರಿಂದ ಆ ಜ್ಞಾನ ಅಯಥಾರ್ಥವಲ್ಲವು. ಹಾಗೂ ಒಂದು ವಸ್ತು ದರ್ಶನದಿಂದ ಇನ್ನೊಂದು ವಸ್ತುವಿನ ಜ್ಞಾನವು ನಿರ್ನಿಮಿತ್ತವಾಗಿ ಬರಲು ಸಾಧ್ಯವಿಲ್ಲ. ಹಾಗಾದಲ್ಲಿ ಘಟದ ಜ್ಞಾನದಿಂದ ಪಟದ [ಬಟ್ಟೆಯ] ಜ್ಞಾನ ಬರಬೇಕಾದೀತೆಂಬ ಅತಿ ಪ್ರಸಂಗ ಬರುವದು [ಧೂಮ ಜ್ಞಾನದಿಂದ ಅಗ್ನಿ ಜ್ಞಾನವೇ ಬರಬೇಕಲ್ಲದೇ ಬೇರೆ ಜ್ಞಾನ ಬರಲಾರದು]

न च व्याप्तित्वेन, समुचितदेशवृत्तित्वेन च धूमप्रमितिं परित्यज्य निमित्तांतरमस्तीति हेतोः, अनुमितिरूपं कार्यं, व्याप्तिसमुचितदेशवत्तया धूमज्ञानमनुमितिकरणं, भूयोदर्शनादिसहकृतप्रत्यक्षं, व्याप्तिप्रमितिजनकमित्येनत्सर्वं कल्पयति, यथा खलु शिलाशकलादावनुपलब्धामपि क्षितिसलिलादिसहकारिसमुद्भूतां बीजस्य शक्ति अंरकुदर्शनं कल्पयति तथेति ज्ञेयम् ।

॥ इति सहकारिसचिवप्रत्यक्षेण व्याप्तिज्ञानजनकत्वसमर्थनम् ॥

८ ) एवं प्रत्यक्षगम्यां व्याप्तिमुदाहृत्यानुमानगम्यां व्याप्तिमुत्तरत्र '' प्राणादिमत्त्वं सात्मकत्वेन व्याप्तं ,, इत्यत्रोदाहरिष्यामः । न च तस्याप्यनुमानस्य व्याप्तिसापेक्षतया, अनवस्था इति चेन्न, अंततः प्रत्यक्षागममूलत्वेनानवस्थाया अभावात् ।

---

ವ್ಯಾಪ್ತಿ ಸಹಿತವಾದ, ಸಮುಚಿತ ದೇಶ ವೃತ್ತಿಯಾದ ಧೂಮ ಜ್ಞಾನವನ್ನು ಬಿಟ್ಟರೆ, ಅಗ್ನಿ ಜ್ಞಾನಕ್ಕೆ ಬೇರೆ ಕಾರಣವಿಲ್ಲದ್ದರಿಂದ, ಆ ಅಗ್ನಿ ಅನುಮಿತಿ ಎಂಬ ಕಾರ್ಯದಿಂದ, ವ್ಯಾಪ್ತಿಯಿಂದ ಕೂಡಿದ ಸಮುಚಿತ ದೇಶವುಳ್ಳ ಲಿಂಗ ಜ್ಞಾನವು, [ಧೂಮ ಜ್ಞಾನವು] ಅನುಮಿತಿಗೆ ಕಾರಣವೆಂದೂ, ಭೂಯೋ ದರ್ಶನಾದಿ ಸಹಕೃತ ಪ್ರತ್ಯಕ್ಷವು ವ್ಯಾಪ್ತಿ ಜ್ಞಾನಕ್ಕೆ ಕಾರಣವೆಂದೂ'ಇವೇ ಮೊದಲಾದ ಕಲ್ಪನೆ ಮಾಡುವದು ಕೂಡುತ್ತದೆ. ಉದಾಹರಣೆ- ಶಿಲಾ ಪ್ರದೇಶದಲ್ಲಿ, ಮಣ್ಣು ಹಾಗೂ ನೀರಿನ ಸಹಕಾರದಿಂದ ಹುಟ್ಟಿದ ಕಣ್ಣಿಗೆ ಕಾಣದ ಅಂಕುರದ ದರ್ಶನವು, ಬೀಜದ ಶಕ್ತಿಯನ್ನು ಕಲ್ಪನೆ ಮಾಡಿಕೊಡುತ್ತದೆ. ಹಾಗೆಯೇ ಅನುಮಿತಿ ರೂಪ ಕಾರ್ಯವು ಸಮುಚಿತ ದೇಶ ವೃತ್ತಿತ್ವ, ಹಾಗೂ ವ್ಯಾಪ್ತಿಗಳನ್ನು ಕಲ್ಪನೆ ಮಾಡುತ್ತದೆ.

೮) **ಅನುಮಾನ ಹಾಗೂ ಆಗಮದಿಂದ ತಿಳಿಯುವ ವ್ಯಾಪ್ತಿ ಪ್ರಕಾರಗಳು–**

ಮೇಲೆ ಪ್ರತ್ಯಕ್ಷದಿಂದ ತಿಳಿಯುವ ವ್ಯಾಪ್ತಿಯನ್ನು ಉದಾಹರಿಸಲಾಯಿತು. ಅನುಮಾನಗಮ್ಯ ವ್ಯಾಪ್ತಿಯನ್ನು 'ಪ್ರಾಣಾದಿ ಧರ್ಮಗಳು. ಆತ್ಮವುಳ್ಳದ್ದರಿಂದ ವ್ಯಾಪ್ತವು' ಎಂದು ಮುಂದೆ ಉದಾಹರಿಸಲಾಗುತ್ತಿದೆ. ಆದರೆ ಅನುಮಾನದಿಂದ ವ್ಯಾಪ್ತಿಜ್ಞಾನವಾಗುವದೆಂದರೆ, ಆ ಅನುಮಾನವೂ ವ್ಯಾಪ್ತಿ ಸಾಪೇಕ್ಷಿತವಾದ ಕಾರಣ, ಆ ವ್ಯಾಪ್ತಿಗೂ ಇನ್ನೊಂದು ಅನುಮಾನ ಮಾಡಬೇಕಾಗಿ ಅನವಸ್ಥಾದೋಷ ಬರುವದರಿಂದ, ಅನುಮಾನಗಮ್ಯ ವ್ಯಾಪ್ತಿಯೇ ಕೂಡುವದಿಲ್ಲ. ಈ ರೀತಿ ಶಂಕಾ ಮಾಡುವದು ಸರಿಯಲ್ಲ. ಏಕೆಂದರೆ ವ್ಯಾಪ್ತಿ ಸಾಧಕವಾದ ಅನುಮಾನವು ಪ್ರತ್ಯಕ್ಷ, ಇಲ್ಲವೇ ಆಗಮ ಮೂಲಕವಾದುದರಿಂದ

आगमगम्या व्याप्तिस्तु —"ब्राह्मणो न हंतव्यः" "गौः पदा न स्प्रष्टव्या" इति, अत्रानुमानादिवत् दृष्टांतापेक्षा नास्ति येन तस्याप्यागमांतरवेद्यत्वे अनवस्था स्यादिति शंकानवकाशः

॥ इति अनुमानागमगम्यव्याप्तिप्रकारनिरूपणम् ॥

९ ) अनुमानं त्रिविधं--१ ) कार्यानुमानं २) कारणानुमानं ३ )अकार्यकारणानुमानं चेति ।

१ ) यत् कार्यं सत् कारणस्यानुमापकं तत्कार्यानुमानं, यथा धूमो अग्नेः अनुमापकम्

२ ) कारणानुमानं–यत् कारणं सत् कार्यानुमापकं तत्कारणानुमानं, यथा विशिष्टमेघोन्नतिः वृष्टेः, (विशिष्टमेघोन्नतिः उदकपूर्णमेघस्यौन्नत्यमिति यावत् ) ।

---

ಅನವಸ್ಥಾ ಬರಲಾರದು.

ಆಗಮಗಳಿಂದ ತಿಳಿಯಲ್ಪಡುವ ವ್ಯಾಪ್ತಿಯು 'ಬ್ರಾಹ್ಮಣನನ್ನು ಕೊಲ್ಲಬಾರದು' 'ಆಕಳನ್ನು ಪಾದದಿಂದ ಸ್ಪರ್ಶ ಮಾಡಬಾರದು' ಮುಂತಾದ ಆಗಮ ವಾಕ್ಯಗಳಿಂದಲೇ ಸಿದ್ಧವಾಗುವದು. ಈ ವ್ಯಾಪ್ತಿಗೆ ದೃಷ್ಟಾಂತದ ಅಪೇಕ್ಷೆಯಿಲ್ಲ. ಇದರಿಂದ ಒಂದು ಆಗಮ ಜ್ಞಾನವು, ಆಗಮಾಂತರದ ಅಪೇಕ್ಷೆ ಮಾಡಲಿ, ಎಂಬ ಅನವಸ್ಥಾದೋಷ ಶಂಕೆಗೆ ಅವಕಾಶವಿಲ್ಲವು.

೯) **ಕಾರ್ಯಕಾರಣ ಭೇದದಿಂದ ಅನುಮಾನ ತ್ರೈವಿಧ್ಯ ನಿರೂಪಣೆ-**

ಅನುಮಾನವು ಮೂರು ಪ್ರಕಾರವಾಗಿವೆ. i] ಕಾರ್ಯಾನುಮಾನವು ii] ಕಾರಣಾನುಮಾನವು. iii] ಅಕಾರ್ಯ ಕಾರಣಾನುಮಾನವು.

i] ಕಾರ್ಯಾನುಮಾನವು- ಯಾವುದು ಕಾರ್ಯವಾಗಿ ಕಾರಣಕ್ಕೆ ಅನುಮಾಪವಾಗಿದೆಯೋ ಅದು ಕಾರ್ಯಾನುಮಾನವು. ಉದಾ:- ಧೂಮವು ಅಗ್ನಿಗೆ ಅನುಮಾಪಕವು ಹಾಗೂ ಧೂಮವು ವಹ್ನಿಯ ಕಾರ್ಯವು.

ii] ಕಾರಣಾನುಮಾನವು- ಯಾವುದು ಕಾರಣವಾಗಿ ಕಾರ್ಯಕ್ಕೆ ಅನುಮಾಪಕವಾಗಿದೆಯೋ ಅದು ಕಾರಣಾನುಮಾನವು. ಉದಾ:- ಜಲಭರಿತ ಮೋಡವು ಆಕಾಶದಲ್ಲಿ ಮೇಲೆ ಇರುವದು. [ಇಲ್ಲಿ ಜಲಭರಿತ ಮೋಡದ ಉನ್ನತಿಯು ಕಾರಣವು. ವೃಷ್ಟಿಯು ಕಾರ್ಯವು]

ननु कार्यात्कारणानुमाने धूमो, अग्नेरित्येवोक्तं, न तु आर्द्रेन्धनाग्नेरिति विशेषणमुपात्तं, कारणात्कार्यानुमाने तु विशिष्टमेघोन्नतिरिति, कारणे विशेषणमुपात्तं कुत एवमिति चेदत्र एवं समाधानं --कार्यं कारणमात्रमनुमापयति न तत्र व्यापकीभूते समग्रत्वविशेषणं, कारणमात्रेणापि व्याप्तिसत्त्वेन विशेषणकृत्याभावात्। कारणं तु कृत्स्नकलापयुक्तमेव कार्यमनुमापयति, नत्वेकदेशे, कारणमात्रस्य कार्यव्यभिचरितत्वेऽपि सामग्रीयुक्तकारणस्य तद्भावात् कारणानुमाने विशेषणं देयमेव।

३) अकार्यकारणानुमानं, यथा—रसो रूपस्य (परस्परं) कार्यकारणाभावादिदमकार्यकारणानुमानम्।

**इति कार्यकारणादिभेदेन अनुमानत्रैविध्यनिरूपणम्।**

---

ಶಂಕಾ- ಕಾರ್ಯದಿಂದ ಕಾರಣಾನುಮಾನ ಮಾಡುವಾಗ್ಗೆ ಧೂಮವು ಅಗ್ನಿಯ ಕಾರ್ಯವೆಂದು ಹೇಳಿದ್ದಾಯಿತು. ಆದರೆ 'ಹಸಿ ಉರವಲ ಸಂಬಂಧವುಳ್ಳ ಅಗ್ನಿ' ಎಂದು (ಹಸಿ ಉರವಲ ಸಂಬಂಧವೆಂದು ವಿಶೇಷಣವನ್ನು ಕೊಟ್ಟು) ಹೇಳಲಿಲ್ಲ. ಆದರೆ ಕಾರಣದಿಂದ ಕಾರ್ಯವನ್ನು ಅನುಮಾನ ಮಾಡುವಾಗ್ಗೆ, ವೃಷ್ಟಿಗೆ 'ವಿಶಿಷ್ಟ ಮೋಡದ ಉನ್ನತಿ' ಎಂದು 'ವಿಶಿಷ್ಟ'ವೆಂಬ (ಜಲಭರಿತವೆಂಬರ್ಥವಲ್ಲಿ) ವಿಶೇಷಣ ಕೊಡಲಾಯಿತು. ಈ ವ್ಯತ್ಯಾಸವೇಕೆ? ಇದಕ್ಕೆ ಸಮಾಧಾನವು ಹೀಗಿದೆ- ಕಾರ್ಯವು ಕಾರಣ ಮಾತ್ರವನ್ನು ಅನುಮೇಯಿಸುತ್ತದೆ, ಹೊರತು ವ್ಯಾಪಕವಾದ ಅಗ್ನಿಯಲ್ಲಿ ವಿಶೇಷಣವನ್ನಪೇಕ್ಷಿಸುವದಿಲ್ಲ ಕಾರಣ ಮಾತ್ರವಿದ್ದರೆ ವ್ಯಾಪ್ತಿಯಿರುತ್ತದೆ. ಅಲ್ಲಿ ವಿಶೇಷಣದ ಕೃತ್ಯ ಬೇಕಾಗಿಲ್ಲ. (ವಿವರಣೆ- ಕಾರ್ಯವು ಕಂಡ ಮೇಲೆ ಕಾರಣವಿದೆಯೆಂಬುದು ಸಿದ್ಧವಾಗುವದರಿಂದ ಕಾರಣದಲ್ಲಿ ಬೇರೆ ವಿಶೇಷಣ ಕೊಡಬೇಕಾಗಿಲ್ಲ) ಆದರೆ ಕಾರಣವು ಕಾರ್ಯವನ್ನು ಅನುಮೇಯಿಸುವಲ್ಲಿ, ಸಮಗ್ರ ಕಾರಣಕಲಾಪಯುಕ್ತವಾಗಿಯೇ ಅನುಮಿತಿಯನ್ನು ಹುಟ್ಟಿಸುವದಲ್ಲದೇ ಏಕದೇಶಕಾರಣವು [ಕಾರಣ ಸಮೂಹಗಳಲ್ಲಿ ಯಾವುದೋ ಒಂದು] ಕಾರ್ಯಾನುಮಿತಿಯನ್ನು ಹುಟ್ಟಿಸಲಾರದು. ಅಲ್ಲದೇ ಕಾರಣ ಮಾತ್ರವು [ಒಂದು ಕಾರಣವು] ಕಾರ್ಯದಿಂದ ವ್ಯಭಿಚರಿತವಾಗಬಹುದು ಆದರೆ ಸಮಗ್ರ ಕಾರಣವು ವ್ಯಭಿಚರಿತವಾಗಲಾರದು. ಆದ್ದರಿಂದ ಕಾರಣಾನುಮಾನದಲ್ಲಿ ಕಾರಣದಲ್ಲಿ ವಿಶೇಷಣದ ಅಪೇಕ್ಷೆ ಇರುತ್ತದೆಯೆಂದು ತಿಳಿಯಬೇಕು.

iii) ಅಕಾರ್ಯ ಕಾರಣಾನುಮಾನವು- ಎಲ್ಲಿ ವ್ಯಾಪ್ಯ ವ್ಯಾಪಕಗಳಿಗೆ

१०) पुनरनुसानं द्विविधं--१)दृष्टं २) सामान्यतो दृष्टं चेति। **नैयायिकमतानुसारेणानुमानद्वयं**, अनयोर्लक्षणमित्थम्।

१) प्रत्यक्षयोग्यार्थानुमापकं दृष्टं, यथा–पर्वतो, वन्हिमान्, धूमात्।

२) प्रत्यक्षायोग्यार्थानुमापकं सामान्यतो दृष्टं, यथा–अयं, चक्षुष्मान्, रूपादिज्ञानवत्त्वात् संमतवत्।

**अथ भाट्टमतानुसारेण लक्षणं** तु--१) यद्धर्मविच्छिन्नयोः व्याप्यव्यापकभावः तद्धर्मपुरस्कारेणैव साध्यसाधनभावे दृष्टानुमानं, यथा-धूमो अग्नेः।

---

ಕಾರ್ಯ-ಕಾರಣ ಭಾವವಿರುವದಿಲ್ಲವೋ, ಅಂತಹ ಅನುಮಾನವು ಅಕಾರ್ಯ ಕಾರಣಾನುಮಾನವು ಉದಾಹರಣೆಗೆ- ರಸವುರೂಪಕ್ಕೆ ಅನುಮಾಪಕವು. ಇಲ್ಲಿ ಪರಸ್ಪರ ಕಾರ್ಯ-ಕಾರಣಭಾವವಿಲ್ಲದಿರುವದರಿಂದ, ರಸದಿಂದ ರೂಪಾನುಮಿತಿ ಹೊಂದಿದಲ್ಲಿ ಈ ಅನುಮಾನವು ಅಕಾರ್ಯಕಾರಣಾನುಮಾನವು.

೧೦) **ನೈಯಾಯಿಕರು ಹಾಗೂ ಮೀಮಾಂಸಕರ ಪ್ರಕಾರ ಅನುಮಾನದ ಪ್ರಭೇದಗಳು.**

ಅ] ಪುನಃ ಅನುಮಾನವು ಎರಡು ಪ್ರಕಾರವು. i] ದೃಷ್ಟಾನುಮಾನವು. ii] ಸಾಮಾನ್ಯವಾದ ದೃಷ್ಟಾನುಮಾನವು. ಹೀಗೆ ನೈಯಾಯಿಕ ಮತಾನುಸಾರವಾಗಿ ಅನುಮಾನವು ಎರಡು ಪ್ರಕಾರವಾಗಿವೆ. ಅವುಗಳ ಲಕ್ಷಣವು ಹೀಗಿದೆ–

i] ಪ್ರತ್ಯಕ್ಷಕ್ಕೆ ಯೋಗ್ಯವಾದ ಅರ್ಥವಿಷಯಕ ಅನುಮತಿ ಹುಟ್ಟಿಸುವ ಅನುಮಾನವು ದೃಷ್ಟಾನುಮಾನವು. ಉದಾಹರಣೆ–'ಪರ್ವತವು ಅಗ್ನಿಯುಳ್ಳದ್ದು, ಧೂಮವಿರುವದರಿಂದ' ಎಂಬ ಅನುಮಾನವು.

ii] ಪ್ರತ್ಯಕ್ಷಕ್ಕೆ ಅಯೋಗ್ಯವಾದ ಅರ್ಥವಿಷಯಕ ಅನುಮಿತಿಯನ್ನು ಹುಟ್ಟಿಸುವದು. ಸಾಮಾನ್ಯತಃ ದೃಷ್ಟಾನುಮಾನವು. ಉದಾ–'ಇವನು, ಚಕ್ಷುರಿಂದ್ರಿಯವುಳ್ಳವನು, ರೂಪಾದಿ ಜ್ಞಾನವುಳ್ಳವನಾದ್ದರಿಂದ, ಸಮ್ಮತಿಯುಳ್ಳ ಪುರುಷನಂತೆ'

**ಆ] ಭಾಟ್ಟ [ಮೀಮಾಂಸಕರ] ಮತದಂತೆ ಈ ಅನುಮಾನಗಳ ಲಕ್ಷಣಾಂತರವು**

i] ಯಾವ ಧರ್ಮಗಳಿಂದ ಕೂಡಿದ್ದಾಗಿ ವ್ಯಾಪ್ಯ ವ್ಯಾಪಕ ಭಾವ ಇದೆಯೋ ಅಧರ್ಮಗಳಿಂದ ಕೂಡಿದ್ದಾಗಿ ಸಾಧ್ಯ–ಸಾಧನಭಾವ [ಲಿಂಗ-ಲಿಂಗೀಭಾವ] ಹೊಂದಿದಲ್ಲಿ ದೃಷ್ಟಾನುಮಾನವು. ಉದಾಃ–ಧೂಮವು ಅಗ್ನಿಗೆ ಅನುಮಾಪಕವು.

२ ) यद्धर्मपुरस्कारेण व्याप्तिग्रहः, तद्धर्मभिन्नधर्मपुरस्कारेण लिंगलिंगिभावे सामान्यतो दृष्टं-यथा यज्ञादिप्रवृत्तिः, सस्यादिफलवती, प्रवृत्तित्वात्, कृष्यादिप्रवृत्तिवत्, (कृषीवलस्यधान्यादिफलकर्षणादिप्रवृत्तिवत्), अस्मिन्ननुमाने दृष्टांते कृष्यादिप्रवृतौ (स्वर्गाद्युद्देशेन प्रेक्षावत्प्रवृतित्व-स्वर्गादिफलकत्वरूपलिंगलिंगिनोर-सत्त्वेऽपि तत्सामान्याकारयोः प्रेक्षावत्प्रवृत्तित्वफलवत्त्वयोः व्याप्यव्यापकभावसत्त्वादस्य लिंगस्य स्वर्गादिफलवत्त्वानुमापकत्वं युक्तमिति ।

॥ इति भट्टनैयायिकरित्या दृष्ट-सामान्यतोदृष्टानुमानलक्षणभेदकथनम्

११) तर्कोऽनुमानमेवेति वक्ष्याम इति पूर्वमुक्तं, तदिदानींनिरूप्यते-

---

[ವಿವರಣೆ-ಧೂಮತ್ವ ಅಗ್ನಿಮತ್ವ ಧರ್ಮಗಳಿಂದ ಕೂಡಿಕೊಂಡೇ ಧೂಮ-ಅಗ್ನಿಗಳಿಗೆ ವ್ಯಾಪ-ವ್ಯಾಪಕ ಭಾವವಿದೆ. ಆ ಧರ್ಮಗಳಿಂದ ಕೂಡಿಯೇ ಲಿಂಗಿ-ಲಿಂಗೀಭಾವ ಹೊಂದಿವೆ ಎಂದು ತಿಳಿಯಬೇಕು]

ii] ಯಾವ ಧರ್ಮಗಳ ಮೂಲಕ ವ್ಯಾಪ್ತಿ ಗ್ರಹಣವೋ, ಆ ಧರ್ಮಗಳಿಂದ ಭಿನ್ನವಾದ ಧರ್ಮಗಳ ಮೂಲಕ ಲಿಂಗ-ಲಿಂಗೀಭಾವ [ಸಾಧನ-ಸಾಧ್ಯಭಾವ] ಕಂಡಲ್ಲಿ, ಸಾಮಾನ್ಯವಾದ ದೃಷ್ಟಾನುಮಾನವು ಉದಾ:-ಯಜ್ಞಾದಿ ಪ್ರವೃತ್ತಿಯು, ಸ್ವರ್ಗಾದಿ ಫಲವುಳ್ಳದ್ದು, ಪ್ರವೃತ್ತಿಯಾಗಿರುವದರಿಂದ, ಕೃಷಿ ಮೊದಲಾದ ಪ್ರವೃತ್ತಿಯಂತೆ [ಒಕ್ಕಲಿಗನಿಗೆ ಧಾನ್ಯ ಫಲಕ ಊಳುವದೇ ಮುಂತಾದ ಪ್ರವೃತ್ತಿಯಂತೆ] ಈ ಅನುಮಾನದಲ್ಲಿ ದೃಷ್ಟಾಂತವಾದ ಕೃಷಿ ಮುಂತಾದ ಪ್ರವೃತ್ತಿಯಲ್ಲಿ, ಸ್ವರ್ಗಾದಿಗಳ ಉದ್ದೇಶದಿಂದ ಜ್ಞಾನಿಗಳ ಪ್ರವೃತ್ತಿತ್ವ ಫಲವತ್ವಗಳಿಗೆ ಹಾಗೂ ಸ್ವರ್ಗಾದಿಗಳಿಗೆ ಲಿಂಗ ಲಿಂಗೀ ಭಾವವಿಲ್ಲ. ದಿದ್ದರೂ ಸಾಮಾನ್ಯವಾಗಿ ಪ್ರವೃತ್ತಿತ್ವ ಫಲವತ್ವಗಳಿಗೆ ವ್ಯಾಪ್ಯ ವ್ಯಾಪಕ ಭಾವವಿದೆ. ಕಾರಣ ಪ್ರವೃತ್ತಿತ್ವಲಿಂಗಕ್ಕೆ ಸ್ವರ್ಗಾದಿ ಫಲವುಳ್ಳದ್ದೆಂಬ ಅನುಮಾಪಕತ್ವವು ಕೂಡುತ್ತದೆ. [ವಿವರಣೆ- 'ಜ್ಞಾನಿಗಳ ಪ್ರವೃತ್ತಿ' ಹಾಗೂ 'ಸ್ವರ್ಗಾದಿಫಲಗಳು' ದೃಷ್ಟಾಂತದಲ್ಲಿ ವ್ಯಾಪ್ಯ ವ್ಯಾಪಕವಾಗಿಲ್ಲ. ಕೇವಲ ಸಾಮಾನ್ಯಾಕಾರವಾದ ಪ್ರವೃತ್ತಿ ಹಾಗೂ ಫಲಗಳಿಗೆ ವ್ಯಾಪ್ಯವ್ಯಾಪಕ ಭಾವವಿದೆ ಅದ್ದರಿಂದ ಇದು ಸಾಮಾನ್ಯತೋ ದೃಷ್ಟಾನುಮಾನವು]

೧೧] ಅನುಮಾನದಲ್ಲಿ ಸಾಧನಾನುಮಾನ ದೂಷಣಾನುಮಾನವೆಂಬ ವಿಭಾಗದ ನಿರೂಪಣೆ-

ತರ್ಕವು ಅನುಮಾನವೇ ಎಂದು ತಿಳಿಸುವದಾಗಿ ಆಗಲೇ ಹೇಳಿದೆ.

पुनरनुमानं द्विविधं--१ ) साधनानुमानं २ ) दूषणानुमानं चेति। १ ) साधनानुमानं--( साध्यते अनेनेति व्युत्पत्त्या ) साधनं च-तत् अनुमानं चेति (कर्मधारयः ) स्वपक्षसाधकमनुमानमिति यावत्, यथा–धूमप्रमित्या अग्निप्रमितिसाधनं "पर्वतोऽग्निमान् धूमात्" इति

२ ) दूषणानुमानं--पूर्वोक्त एव समासः )-द्विविधं दुष्टप्रमितिसाधनं, तर्कश्च । दुष्टप्रमितिसाधनं यथा-नेदं स्वसाध्यसाधनसमर्थं प्रमाणबाधितत्वादिति, तथा च वन्हिः अनुष्णः पदार्थत्वादित्युक्ते परो वक्ति, इदं (पदार्थत्वं) स्वसाध्यसाधनसमर्थं न, प्रमाणबाधितप्रतिज्ञातार्थवत्त्वादिति, इदमेव हि दूषणानुमानम् ।

---

ಈಗ ಅದನ್ನು ನಿರೂಪಿಸುತ್ತೇವೆ.

ಪುನಃ ಅನುಮಾನವನ್ನು ಎರಡು ಪ್ರಕಾರ ವಿಭಾಗಿಸಲಾಗಿದೆ. i) ಸಾಧನಾನುಮಾನವು. ii) ದೂಷಣಾನುಮಾನವು.

i) ಸಾಧನಾನುಮಾನವು- ಸಾಧನಾನುಮಾನದಲ್ಲಿ 'ಹೇತುವಿನಿಂದ ಸಾಧ್ಯವು ಸಾಧನ ಮಾಡಲ್ಪಡುತ್ತದೆ.' ಎಂಬ ವ್ಯುತ್ಪತ್ತಿಯಿಂದಲೂ 'ಸಾಧನದಿಂದ ಅಭಿನ್ನ ಅನುಮಾನ' ವೆಂದು ಕರ್ಮಧಾರಯ ಸಮಾಸದಿಂದಲೂ, ಸ್ವಪಕ್ಷ ಸಾಧಕವಾದ ಅನುಮಾನವೆಂದು ತಿಳಿಯಬೇಕು. ಉದಾ:-'ಪರ್ವತವು ಅಗ್ನಿಯುಳ್ಳದ್ದು, ಧೂಮವಿರುವದರಿಂದ' ಹೀಗೆ ಧೂಮ ಜ್ಞಾನದಿಂದ ಅಗ್ನಿ ಪ್ರಮಿತಿಯನ್ನು ಸಾಧನ ಮಾಡತಕ್ಕ ಅನುಮಾನವು.

ii) ದೂಷಣಾನುಮಾನವು:- ಮೇಲಿನಂತೆ ಕರ್ಮಧಾರಯ ಸಮಾಸದಿಂದ ವ್ಯುತ್ಪತ್ತಿಯು (ದೂಷಣ ರೂಪವಾಗಿರುವ ಅನುಮಾನವು] ಈ ದೋಷಣಾನುಮಾನವು ಎರಡು ಪ್ರಕಾರವು. ಅ] ದುಷ್ಟಪ್ರಮಿತಿ ಸಾಧನವು. ಆ] ತರ್ಕವು.

ಅ] ದುಷ್ಟ ಪ್ರಮಿತಿ ಸಾಧನವಾದ ದೂಷಣಾನುಮಾನಕ್ಕೆ ಉದಾಹರಣೆ:- 'ಇದು, ಸ್ವಸಾಧ್ಯಸಾಧನ ಸಮರ್ಥವಾಗಿಲ್ಲ, ಪ್ರಮಾಣ ಬಾಧಿತವಾಗಿರುವ ಕಾರಣ' ಹೀಗೆಯೇ 'ಅಗ್ನಿಯು ಉಷ್ಣವಲ್ಲ ಪದಾರ್ಥವಾಗಿರುವದರಿಂದ' ಎಂದು ಅನುಮಾನ ಮಾಡಿದ ಪಕ್ಷದಲ್ಲಿ, ಅದಕ್ಕೆ ಪ್ರತಿಯಾಗಿ, ಪ್ರತಿವಾದಿಯು ಬಾಧಕ ಜ್ಞಾನ ಮಾಡಿಕೊಡುವ ಅನುಮಾನವನ್ನು ಹೀಗೆ ಮಾಡುತ್ತಾನೆ. 'ಈ ಪದಾರ್ಥತ್ವ ಹೇತು, ಸ್ವಸಾಧ್ಯಸಾಧನ ಸಮರ್ಥವಲ್ಲ, ಪ್ರಮಾಣ ಬಾಧಿತವಾಗಿ ಸಿದ್ಧವಾದ್ದರಿಂದ' ಇದೇ ದೂಷಣಾನುಮಾನವು.

ननु यद्यपि दुष्टप्रमितिसाधनत्वं तर्केऽप्यस्ति, तर्कादपि परपक्षायुक्ततताप्रमितिरुत्पद्यते, तथा च दूषणानुमानद्वैविध्यकथनं कथं संगच्छेत? इति चेदुच्यते, तथापि आपादनरूपेण तर्कस्यायुक्तताप्रमितिजनकत्वं, दूषणानुमानस्य तु साधनरूपेणेति भेद इति बोध्यम् ।

॥ इति अनुमाने साधनानुमानदूषणानुमानविभागनिरूपणम् ॥

॥ इति अनुमानप्रकरणम् ॥

## २. अथतर्कप्रकरणम्

१) तर्को नाम––व्याप्यस्यांगीकारे अनिष्टव्यापकप्रसंजनं तर्कः। (प्रसंजनं नाम अंगीकार्यताज्ञापनं) यथा-यदि वन्हिर्न स्यात् तर्हि धूमोऽपि न स्यादिति । यदि वन्हिसद्भावेऽपि वन्ह्यभावः, आरोप्यते वन्हिर्न स्यादिति, तदा भवदनिष्टधूमाभावोऽप्यंगीकार्यः स्यादिति ज्ञापनमिति भावः ।

---

ಶಂಕಾ–ತರ್ಕವೂ ಕೂಡ ದುಷ್ಟ ಪ್ರಮಿತಿ ಸಾಧನವಾಗಿದ್ದರಿಂದ ತರ್ಕದಿಂದಲೂ ಪರಪಕ್ಷವು ಅಯುಕ್ತವೆಂಬ ಜ್ಞಾನವು ಹುಟ್ಟುತ್ತದೆ. ಎಂದ ಮೇಲೆ ದೂಷಣಾನುಮಾನವು ಎರಡು ವಿಧವೆಂದು ಹೇಳಿದ್ದು ಹೇಗೆ ಕೂಡುತ್ತದೆ? ಇದಕ್ಕೆ ಉತ್ತರವು ತರ್ಕವು ದುಷ್ಟ ಪ್ರಮಿತಿಯನ್ನು ಹುಟ್ಟಿಸುವದಾದರೂ ಆಪಾದನರೂಪದಿಂದ ಪರಪಕ್ಷವು ಅಯುಕ್ತವೆಂಬ ಜ್ಞಾನ ಹುಟ್ಟಿಸುತ್ತದೆ, ದೂಷಣಾನುಮಾನವು ಸಾಧನರೂಪದಿಂದ ದುಷ್ಟ ಪ್ರಮಿತಿಯನ್ನು ಹುಟ್ಟಿಸುತ್ತದೆ. ಇದರಿಂದ ಅವುಗಳ ಭೇದ ತಿಳಿಯಬೇಕು.

## ೨. ತರ್ಕ ಪ್ರಕರಣವು

೧] ತರ್ಕ ಸ್ವರೂಪ ನಿರೂಪಣೆ–

ತರ್ಕದ ಲಕ್ಷಣ– ವ್ಯಾಪ್ಯವನ್ನು ಅಂಗೀಕರಿಸಿದಲ್ಲಿ ಅನಿಷ್ಟ ವ್ಯಾಪಕದ ಪ್ರಸಂಗ ತಂದುಕೊಡುವದೇ ತರ್ಕವು. (ಪ್ರಸಂಗ ತರುವದೆಂದರೆ, ಅಂಗೀಕಾರ ಮಾಡಬೇಕಾದೀತೆಂದು ತಿಳಿಸುವದು) ಉದಾ; 'ಪರ್ವತದಲ್ಲಿ ಬೆಂಕಿ ಇದ್ದರೂ ಅದನ್ನು ಅಂಗೀಕಾರ ಮಾಡದೇ ಹೋದರೆ, ಅಲ್ಲಿ ಧೂಮವೂ ಅಂಗೀಕೃತವಾಗದೇ ಹೋಗಲಿ' ಎಂದು ತಿಳಿಸುವದು. (ವಿವರಣೆ–ಪರ್ವತದಲ್ಲಿ ಅಗ್ನಿ ಇದ್ದರೂ, ಅಗ್ನಿಯ ಅಭಾವವನ್ನು ಎಂದರೆ ವ್ಯಾಪ್ಯವನ್ನು ಅಂಗೀಕರಿಸದಲ್ಲಿ, ಆದಕ್ಕೆ ವ್ಯಾಪಕವಾದ ಧೂಮಾಭಾವವನ್ನು ಅಂಗೀಕರಿಸಬೇಕಾಗುವದು. ಆದರೆ ಧೂಮವು ಪ್ರತ್ಯಕ್ಷ ಸಿದ್ಧವಾಗುವದರಿಂದ ಆದರ ಅಭಾ-

अत्र दलकृत्यं तु--व्याप्यंगीकारे व्यापकप्रसंजनं तर्क इत्यु (अनिष्टपदत्यागे) यद्ययं पर्वतो निर्वन्हिः स्यात् तर्हि निर्घ स्यादिति इष्टापादनेऽतिव्याप्तिवारणायानिष्टस्येत्युक्तं । व्याप्यां कारे अनिष्टप्रसंजनं तर्क इत्युक्ते (व्यापकपदपरित्यागे) यद्य निर्वन्हिः स्यात् तर्हि वृक्षरहितः स्यादिति अनिष्टापादनव्य च्छेदाय व्यापकस्येत्युक्तं, एवमपि न तद्व्यवच्छेदः, वृक्षरहि त्वादेरपि व्यापकत्वात्, न हि वृक्षरहितत्वं कस्याप्यव्यापकं सं भवति, अतस्तदापादनेऽपि अतिव्याप्तिस्तदवस्था, तद्वारणाय व्या प्यस्यंगीकारेत्युक्तं, उक्तातिव्याप्तिः कथं वा परिहृता इति चेदित्थम्--

---

ವವನ್ನು ಅಂಗೀಕರಿಸಲು ಬರುವದಿಲ್ಲ. ಇಲ್ಲಿ ವಹ್ನಿ ಆಭಾವದಿಂದ, ಧೂಮಾಭಾವ ಸಾಧಿಸುವಾಗ್ಗ, 'ವಹ್ನಿ ಅಭಾವವು' ವ್ಯಾಪ್ಯವೂ, 'ಧೂಮಾಭಾವವು' ವ್ಯಾಪಕವೂ ಆಗುತ್ತದೆ.

ಲಕ್ಷಣದ ದಲಕೃತ್ಯವು:- 'ವ್ಯಾಪ್ಯದ ಅಂಗೀಕಾರ ಮಾಡಿದಲ್ಲಿ ವ್ಯಾಪಕದ ಅಂಗೀಕಾರ ಮಾಡಬೇಕಾದೀತೆಂಬ ಜ್ಞಾಪನೆಯು ತರ್ಕವು,' ಎಂದು ಲಕ್ಷಣ ಮಾಡಿದರೆ [ಅನಿಷ್ಟಪದ ಬಿಟ್ಟರೆ] 'ಈ ಪರ್ವತವು' ಅಗ್ನಿಯ ಅಭಾವವುಳ್ಳದ್ದಾದರೆ, ಘಟಾಭಾವವುಳ್ಳದ್ದಾಗಲೀ, ಎಂಬ ಇಷ್ಟಾಪಾದನ ರೂಪ ತರ್ಕದಲ್ಲಿ ಅತಿವ್ಯಾಪ್ತಿ ಬರುತ್ತದೆ. ಈ ಅತಿವ್ಯಾಪ್ತಿ ಪರಿಹರಿಸಲು 'ಅನಿಷ್ಟ' ಪದವನ್ನು ಸೇರಿಸಬೇಕು. 'ವ್ಯಾಪ್ಯದ ಅಂಗೀಕಾರ ಮಾಡಿದಲ್ಲಿ ಅನಿಷ್ಟ ಪ್ರಸಂಗವು ತರ್ಕವು' ಎಂದು ಲಕ್ಷಣ ಮಾಡಿದರೆ, [ವ್ಯಾಪಕ ಪದ ಬಿಟ್ಟರೆ], 'ಈ ಪರ್ವತವು, ವಹ್ನಿ ಅಭಾವವುಳ್ಳದ್ದಾದರೆ, ವೃಕ್ಷರಹಿತವಾದರೂ ಆಗಲಿ' ಎಂಬ ಅನಿಷ್ಟಾಪಾದನ ರೂಪ ತರ್ಕದಲ್ಲಿ ಅತಿವ್ಯಾಪ್ತಿಯು ಈ ಅತಿವ್ಯಾಪ್ತಿ ಪರಿಹರಿಸಲು 'ವ್ಯಾಪಕ' ಪದವನ್ನು ಸೇರಿಸಬೇಕು. ಆದರೂ [ಅನಿಷ್ಟವ್ಯಾಪಕ ಪ್ರಸಂಜನವೆಂದು 'ವ್ಯಾಪಕ' ಪದ ಸೇರಿಸಿದರೂ] ಮೇಲಿನ ತರ್ಕದಲ್ಲಿ ಬರುವ ಅತಿವ್ಯಾಪ್ತಿ ನಿವಾರಣೆಯಾಗಲಿಲ್ಲ. ವೃಕ್ಷರಹಿತತ್ವವೂ ಅಗ್ನಿಯ ಅಭಾವಕ್ಕೆ ವ್ಯಾಪಕವಾಗಿದೆ. ವೃಕ್ಷಾಭಾವವು ಯಾವುದೇ ವಸ್ತುವಿಗೆ ಅವ್ಯಾಪಕವಾಗಲಾರದು. ಹೀಗಾಗಿ ಅತಿವ್ಯಾಪ್ತಿ ಉಳಿದೇ ಉಳಿಯುತ್ತದೆ.

ಈ ಅತಿವ್ಯಾಪ್ತಿ ನಿವಾರಿಸಲು ವ್ಯಾಪ್ಯವನ್ನು ಅಂಗೀಕರಿಸಿದಲ್ಲಿ' ಎಂದು ಹೇಳಿದ್ದು. ಹೀಗೆ ಹೇಳಿದರೂ, ಅತಿವ್ಯಾಪ್ತಿ ಹೇಗೆ ಪರಿಹಾರವಾಯಿತೆಂದು ಶಂಕಿಸಿದರೆ, ಅದಕ್ಕೆ ಸಮಾಧಾನವು ಹೀಗಿದೆ–

पितुर्धनं पुत्रो गृण्हियादित्यत्र पुत्रशब्दस्य तत्पुत्र एव पर्यवसनात्, व्याप्यांगीकारे व्यापकप्रसंजनमित्यत्रापि व्यापकशब्दस्य तद्व्यापके पर्यवसनादुक्तातिव्याप्तिव्यवच्छेद इति सर्वं सार्थकं ज्ञेयम् ।

२ ) ननु तर्कस्यानुमानांतर्गतिः कथं? इति चेत्, व्याप्तिबलेन अर्थगमकत्वादिति ज्ञेयम् ।

तस्य पंचांगानि—१ ) आपादकस्य आपाद्येन व्याप्तिः २) प्रतितर्केणाप्रतिघातः ३ ) आपाद्यस्य अनिष्टत्वं ४ ) विपर्यये पर्यवसानं ५ ) परस्य अननुकूलत्वं चेति ।

अत्र दलकृत्यं तु—१ ) यदि घटोऽत्र स्यात् तर्हि पटोऽपि स्यात् इत्यादौ तर्कत्ववारणाय, आपादकस्य, आपाद्येन व्याप्तिरित्युक्तं

---

'ತಂದೆಯ ಧನವನ್ನು ಮಗನು ತೆಗೆದುಕೊಳ್ಳಲಿ' ಎಂಬ ತರ್ಕದಲ್ಲಿ 'ಮಗ'ನೆಂದರೆ ಅವನ ಮಗನೇ ಹೊರತು ಬೇರೆಯವರ ಮಗನಲ್ಲವೆಂದು ಹೇಗೆ ಪರ್ಯವಸಾನವಾಗುವದೋ, ಹಾಗೆಯೇ, 'ವ್ಯಾಪ್ಯದ ಅಂಗೀಕಾರ ಮಾಡಿದಲ್ಲಿ ಅನಿಷ್ಟ ವ್ಯಾಪಕ ಪ್ರಸಂಗ' ವೆಂದು ಹೇಳುವ ತರ್ಕದಲ್ಲಿ ಕೂಡ, 'ವ್ಯಾಪಕ' ಶಬ್ದದಿಂದ 'ವ್ಯಾಪ್ಯಕ್ಕೆ ಯೋಗ್ಯವಾದ ವ್ಯಾಪಕವು' ಎಂದು ಅರ್ಥವು. [ಹೊರತು, ಎಲ್ಲದಕ್ಕೂ ವ್ಯಾಪಕವೆಂದಲ್ಲ] ಇದರಿಂದ ಅತಿವ್ಯಾಪ್ತಿ ಬಾರದು. ಹೀಗೆ ಎಲ್ಲ ಪದಗಳು ಸಾರ್ಥಕವಾಗಿವೆ.

೨] ತರ್ಕವು ಅನುಮಾನದಲ್ಲಿ ಹೇಗೆ ಅಂತರ್ಗತವಾಗುತ್ತದೆ ? ಅಂದರೆ ತರ್ಕವು ವ್ಯಾಪ್ತಿಯ ಬಲದಿಂದ ವಸ್ತುಜ್ಞಾನ [ಅರ್ಥಾನುಮಿತಿ] ಹುಟ್ಟಿಸುವದರಿಂದ, ಕರಣರೂಪ ಅನುಮಾನದಲ್ಲಿ ಅಂತರ್ಭೂತವಾಗುತ್ತದೆ.

ಈ ತರ್ಕಕ್ಕೆ ಐದು ಅಂಗಗಳು:- ೧] ಆಪಾದ್ಯದಿಂದ ಆಪಾದಕಕ್ಕೆ ವ್ಯಾಪ್ತಿ [ಬೆಂಕಿಯಿಲ್ಲದಿದ್ದಲ್ಲಿ, ಎಂಬಲ್ಲಿ •ಬೆಂಕಿಯ ಅಭಾವವು ಆಪಾದಕವು. 'ಧೂಮವು ಇಲ್ಲದೇ ಹೋದಲ್ಲಿ' ಎಂಬಲ್ಲಿ ಧೂಮಾಭಾವವು ಆಪಾದ್ಯವು] ೨] ಪ್ರತಿ ತರ್ಕದಿಂದ ಪ್ರತಿಘಾತವಿಲ್ಲದುದು ೩] ಆಪಾದ್ಯಕ್ಕೆ ಅನಿಷ್ಟತೆಯು ೪] ವಿಪರ್ಯದಲ್ಲಿ ಪರ್ಯವಸಾನವು ೫] ಪರರಿಗೆ ಅನುಕೂಲವಾಗದಿರುವದು.

ಅ] ಈ ಐದು ಅಂಗಗಳ ದಲಕೃತ್ಯವು:-೧) 'ಒಂದು ವೇಳೆ ಇಲ್ಲಿ ಘಟವಿದ್ದರೆ ಬಟ್ಟೆಯೂ [ಪಟವೂ] ಇರಲಿ' ಎಂಬ ತರ್ಕಕ್ಕೆ, ತರ್ಕದ ಲಕ್ಷಣ ಬರಬಾರದೆಂಬ ಉದ್ದೇಶದಿಂದ 'ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿ' ಎಂಬ ಅಂಗವು ಬೇಕು,

( २ ) यदि शब्दो नित्यः स्यात् तर्हि अश्रावणः स्यादित्यादेः, यदि शब्दोऽनित्यो न स्यात् तर्हि कृतकोऽपि न स्यादिति प्रतितर्केण पराहतस्यातर्कत्वायोक्तं प्रतितर्केणाप्रतिघात इति । ३ ) यदि धूमः स्यात् तर्हि वन्हिः स्यादित्यादेरतर्कत्वायोक्तमापाद्यस्यानिष्टत्वमिति । ४ ) यदि तेजोजातं प्रकाशकं स्यात् तर्हि अनुष्णं न स्यादित्यादेरतर्कत्वायोक्तं विपर्यये पर्यवसानमिति । ५) यदि शब्दो नित्यः स्यात् तर्हि कृतको न स्यात्, भवति च कृतकः, अतोऽनित्य इत्युक्ते परो वक्ति यदि कृतकः, तर्हि अनित्य एव भवेत्, घटादौ तथा दृष्टत्वादिति परानुकूलस्यातर्कत्वाय परानुकूलेत्युक्तम् ।

---

[ಮೇಲಿನ ತರ್ಕದಲ್ಲಿ
ಆಪಾದ್ಯ–ಆಪಾದಕಗಳಿಗೆ ವ್ಯಾಪ್ತಿಯಿಲ್ಲ. ಘಟವಿದ್ದಲ್ಲಿ ಪಟವಿರಬೇಕೆಂಬ ನಿಯಮವಿಲ್ಲ. ಕಾರಣ ಅದು ತರ್ಕವಾಗಲಾರದು. ೨] ಒಂದು ವೇಳೆ ಶಬ್ದವು ನಿತ್ಯವಾದಲ್ಲಿ, ಅದು ಶ್ರವಣೇಂದ್ರಿಯಕ್ಕೆ ವಿಷಯವಾಗದೇ ಹೋಗಲಿ' ಎಂಬ ತರ್ಕಕ್ಕೆ 'ಶಬ್ದವು ಅನಿತ್ಯವಾ-ವಾಗದಿದ್ದಲ್ಲಿ (ನಿತ್ಯವಾದರೆ) ಅದು ಕೃತಕವಾಗದೇ ಹೋಗಲಿ ? ಎಂಬ ಪ್ರತಿತರ್ಕದಿಂದ ವಿರೋಧ ಬರುತ್ತದೆ. (ಹೀಗೆ ಪ್ರತಿ ತರ್ಕದಿಂದ ಪರಾಹತವಾದ ತರ್ಕಕ್ಕೆ ತರ್ಕತ್ವವಾರಣ ಮಾಡಲು 'ಪ್ರತಿತರ್ಕದಿಂದ ಅಪ್ರತಿಘಾತವೆಂಬ ಅಂಗವು ಬೇಕು,

೩] 'ಒಂದು ವೇಳೆ ಧೂಮವಿದ್ದರೆ, ಬೆಂಕಿಯೂ ಇರಲಿ' ಎಂಬ ಈ ತರ್ಕವಾಕ್ಯವು ಸರಿಯಾದ ತರ್ಕವಲ್ಲವೆಂದು ತಿಳಿಸಲು, 'ಆಪಾದ್ಯಕ್ಕೆ ಅನಿಷ್ಟತೆ' ಇರಬೇಕೆಂಬ ಅಂಗ ಬೇಕು. [ಮೇಲಿನ ವಾಕ್ಯದಲ್ಲಿ ಆಪಾದ್ಯವು ಅನಿಷ್ಟವಾಗಿಲ್ಲ]

೪] 'ಒಂದು ವೇಳೆ ತೇಜಃ ಸಮೂಹವು ಪ್ರಕಾಶವಾದಲ್ಲಿ, ಅದು ಶೀತವಾಗದೇ ಹೋಗಲಿ,' ಎಂಬ ವಾಕ್ಯವು ಸರಿಯಾದ ತರ್ಕವಲ್ಲವೆಂದು ತಿಳಿಸಲು, 'ವಿಪರ್ಯ ಪರ್ಯವಸಾನ' ಎಂಬ ಅಂಗವನ್ನು ಹೇಳಲಾಗಿದೆ. [ಇಲ್ಲಿ ಹೇಳಿದ ತರ್ಕದಲ್ಲಿ ವಿಪರ್ಯಯದಲ್ಲಿ ಪರ್ಯವಸಾನಕ್ಕೆ ಅವಕಾಶವಿಲ್ಲ. 'ತೇಜ ಸಮೂಹವು ಶೀತವಾಗಿದೆ ಕಾರಣ ಅದು ಪ್ರಕಾಶವಾಗದೇ ಹೋಗಲೀ' ಎಂದು ಹೇಳಲು ಬರುವದಿಲ್ಲ. ಕಾರಣ ಮೇಲಿನ ತರ್ಕದಲ್ಲಿ ತರ್ಕಲಕ್ಷಣ ಬಾರದೇ ತರ್ಕವಾಗಲಾರದು.

೫] 'ಒಂದು ವೇಳೆ ಶಬ್ದವು ನಿತ್ಯವಾದರೆ, ಅದು ಕೃತಕವಾಗದೇ ಹೋಗಲಿ' ಅಂದಲ್ಲಿ ಪ್ರತಿವಾದಿಯು ಪ್ರತಿ ತರ್ಕವನ್ನು ಮಾಡಬಹುದು 'ಶಬ್ದವು ಕೃತಕವಾದಲ್ಲಿ

तर्कपंचांगानां विवरणम्--

१ ) आपादकस्यापाद्येन व्याप्तिः--यथा यद्यग्निर्न स्यात् तर्हि धूमोऽपि न स्यादिति तर्के, यत्राग्न्यभावः तत्र धूमाभाव इति व्याप्तिः ( अत्र आपादकस्यापादनकर्तुरापाद्येन आपादनकर्मणा इत्यर्थः )

५ ) प्रतितर्केणाप्रतिघातः, यथाह बौद्धः-यदि जगतः क्षणिकत्वं न स्यात् तर्हि अर्थक्रियाकारित्वरूपं सत्त्वं न स्यात्, तदेतस्य तर्कस्य यदि क्षणिकं स्यात्, तर्हि तदेवेदमिति प्रत्यभिज्ञाविरोधः- स्यादिति प्रतितर्केण विरोधेऽस्ति, तथा सत्तर्के नैवं—यद्यग्निः स्यात् तर्हीदं स्यादित्यभावात्

---

ಅದು ಅನಿತ್ಯವೇ ಆಗಲೀ' ಘಟವೇ ಮೊದಲಾದವುಗಳಲ್ಲಿ ಹಾಗೇ ಕಂಡದ್ದರಿಂದ, ಎಂಬ ಪ್ರತಿ ತರ್ಕವು ಕೃತಕತ್ವವಾದಿಗೆ ಅನುಕೂಲವೇ ಆಗಿದೆ. ಹೀಗೆ ಪರಾನುಕೂಲ ತರ್ಕವು ಸರಿಯಾದ ತರ್ಕವಾಗಲಾರದೆಂದು ತಿಳಿಯಲು. 'ಪರನಿಗೆ ಅನನುಕೂಲವಾಗಬೇಕೆಂಬ' ಅಂಗವನ್ನು ಸೇರಿಸಲಾಗಿದೆ.

ತರ್ಕದಲ್ಲಿಯ ಐದು ಅಂಗಗಳ ನಿರೂಪಣೆಯು

೧) ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿಗೆ, ಉದಾಹರಣೆ-'ಒಂದು ವೇಳೆ ಪರ್ವತದಲ್ಲಿ ಅಗ್ನಿ ಇಲ್ಲವೆಂದಾದರೆ. [ಅಂಗೀಕೃತವಾದ] ಧೂಮವೂ ಇಲ್ಲದೇ ಹೋಗಲೀ' ಎಂಬ ತರ್ಕದಲ್ಲಿ 'ಎಲ್ಲಿ ಅಗ್ನಿ ಅಭಾವವೋ ಅಲ್ಲಿ ಧೂಮದ ಅಭಾವ' ವೆಂಬ ವ್ಯಾಪ್ತಿಯಿದೆ. (ಇಲ್ಲಿ ಆಪಾದಕವೆಂದರೆ ಆಪಾದನೆಗೆ ಕರ್ತೃವಾದ ಅಗ್ನಿ ಅಭಾವವು. ಆಪಾದ್ಯವೆಂದರೆ ಆಪಾದನೆಗೆ ಕರ್ಮವಾದ ಧೂಮಾಭಾವವು) ಧೂಮಾಭಾವದಿಂದ ಅಗ್ನಿ ಅಭಾವಕ್ಕೆ ವ್ಯಾಪ್ತಿಯಿದೆಯೆಂದರ್ಥವು.

೨) ಪ್ರತಿ ತರ್ಕದಿಂದ ಅಪ್ರತಿಘಾತಕ್ಕೆ ಉದಾಹರಣೆ- ಬೌದ್ಧರು ಹೇಳುತ್ತಾರೆ. ಒಂದು ವೇಳೆ ಜಗತ್ತು ಕ್ಷಣಿಕವಾಗದೇ ಹೋದರೆ, ಅದು ಸತ್ವವಿಲ್ಲದೇ ಹೋಗಲಿ' ಎಂಬ ತರ್ಕಕ್ಕೆ ಪ್ರತಿಯಾಗಿ 'ಒಂದು ವೇಳೆ ಜಗತ್ತು ಕ್ಷಣಿಕವಾದಲ್ಲಿ, ಆ ಘಟವೇ ಇದು ಎಂಬ ಪ್ರತ್ಯಭಿಜ್ಞಾ ವಿರೋಧವು ಬರಬೇಕಾದೀತು' ಎಂಬ ಪ್ರತಿತರ್ಕದಿಂದ ವಿರೋಧ ಬರುತ್ತದೆ. ಆದರೆ ಸರಿಯಾದ ತರ್ಕದಲ್ಲಿ ಇಂಥ ವಿರೋಧ ಬರುವದಿಲ್ಲ. (ಅಗ್ನಿ ಇಲ್ಲವೆಂದರೆ ಧೂಮವೂ ಇಲ್ಲದೇ ಹೋಗಲಿ, ಎಂಬ ತರ್ಕದಲ್ಲಿ ಒಂದು ವೇಳೆ ಅಗ್ನಿಯಿದ್ದರೆ ಹೀಗೆ ಆಗಲಿ ಎಂಬ ಪ್ರತಿ ತರ್ಕವು ಹೇಳಲು ಬರುವದಿಲ್ಲ)

( २ ) यदि शब्दो नित्यः स्यात् तर्हि अश्रावणः स्यादित्यादेः, यदि शब्दोऽनित्यो न स्यात् तर्हि कृतकोऽपि न स्यादिति प्रतितर्केण पराहतस्यातर्कत्वायोक्तं प्रतितर्केणाप्रतिघात इति । ( ३ ) यदि धूमः स्यात् तर्हि वन्हिः स्यादित्यादेरतर्कत्वायोक्तमापाद्यस्यानिष्टत्वमिति । ( ४ ) यदि तेजोजातं प्रकाशकं स्यात् तर्हि अनुष्णं न स्यादित्यादेरतर्कत्वायोक्तं विपर्यये पर्यवसानमिति । ( ५ ) यदि शब्दो नित्यः स्यात् तर्हि कृतको न स्यात्, भवति च कृतकः, अतोऽनित्य इत्युक्ते परो वक्ति यदि कृतकः, तर्हि अनित्य एव भवेत्, घटादौ तथा दृष्टत्वादिति परानुकूलस्यातर्कत्वाय परानुकूलेत्युक्तम् ।

---

[ಮೇಲಿನ ತರ್ಕದಲ್ಲಿ
ಆಪಾದ್ಯ–ಅಪಾದಕಗಳಿಗೆ ವ್ಯಾಪ್ತಿಯಿಲ್ಲ. ಘಟವಿದ್ದಲ್ಲಿ ಪಟವಿರಬೇಕೆಂಬ ನಿಯಮವಿಲ್ಲ. ಕಾರಣ ಅದು ತರ್ಕವಾಗಲಾರದು. ೨] ಒಂದು ವೇಳೆ ಶಬ್ದವು ನಿತ್ಯವಾದಲ್ಲಿ, ಅದು ಶ್ರವಣೇಂದ್ರಿಯಕ್ಕೆ ವಿಷಯವಾಗದೇ ಹೋಗಲಿ' ಎಂಬ ತರ್ಕಕ್ಕೆ 'ಶಬ್ದವು ಅನಿತ್ಯವಾಗದಿದ್ದಲ್ಲಿ (ನಿತ್ಯವಾದರೆ) ಅದು ಕೃತಕವಾಗದೇ ಹೋಗಲಿ ? ಎಂಬ ಪ್ರತಿತರ್ಕದಿಂದ ವಿರೋಧ ಬರುತ್ತದೆ. (ಹೀಗೆ ಪ್ರತಿ ತರ್ಕದಿಂದ ಪರಾಹತವಾದ ತರ್ಕಕ್ಕೆ ತರ್ಕತ್ವವಾರಣ ಮಾಡಲು 'ಪ್ರತಿತರ್ಕದಿಂದ ಅಪ್ರತಿಘಾತವೆಂಬ ಅಂಗವು ಬೇಕು,

೩] 'ಒಂದು ವೇಳೆ ಧೂಮವಿದ್ದರೆ, ಬೆಂಕಿಯೂ ಇರಲಿ' ಎಂಬ ಈ ತರ್ಕವಾಕ್ಯವು ಸರಿಯಾದ ತರ್ಕವಲ್ಲವೆಂದು ತಿಳಿಸಲು, 'ಆಪಾದ್ಯಕ್ಕೆ ಅನಿಷ್ಟತೆ' ಇರಬೇಕೆಂಬ ಅಂಗ ಬೇಕು. [ಮೇಲಿನ ವಾಕ್ಯದಲ್ಲಿ ಆಪಾದ್ಯವು ಅನಿಷ್ಟವಾಗಿಲ್ಲ]

೪] 'ಒಂದು ವೇಳೆ ತೇಜಃ ಸಮೂಹವು ಪ್ರಕಾಶವಾದಲ್ಲಿ, ಅದು ಶೀತವಾಗದೇ ಹೋಗಲಿ,' ಎಂಬ ವಾಕ್ಯವು ಸರಿಯಾದ ತರ್ಕವಲ್ಲವೆಂದು ತಿಳಿಸಲು, 'ವಿಪರ್ಯಪರ್ಯವಸಾನ' ಎಂಬ ಅಂಗವನ್ನು ಹೇಳಲಾಗಿದೆ. [ಇಲ್ಲಿ ಹೇಳಿದ ತರ್ಕದಲ್ಲಿ ವಿಪರ್ಯದಲ್ಲಿ ಪರ್ಯವಸಾನಕ್ಕೆ ಅವಕಾಶವಿಲ್ಲ. 'ತೇಜ ಸಮೂಹವು ಶೀತವಾಗಿದೆ ಕಾರಣ ಅದು ಪ್ರಕಾಶವಾಗದೇ ಹೋಗಲೀ' ಎಂದು ಹೇಳಲು ಬರುವದಿಲ್ಲ. ಕಾರಣ ಮೇಲಿನ ತರ್ಕದಲ್ಲಿ ತರ್ಕಲಕ್ಷಣ ಬಾರದೇ ತರ್ಕವಾಗಲಾರದು.

೫] 'ಒಂದು ವೇಳೆ ಶಬ್ದವು ನಿತ್ಯವಾದರೆ, ಅದು ಕೃತಕವಾಗದೇ ಹೋಗಲಿ' ಅಂದಲ್ಲಿ ಪ್ರತಿವಾದಿಯು ಪ್ರತಿ ತರ್ಕವನ್ನು ಮಾಡಬಹುದು 'ಶಬ್ದವು ಕೃತಕವಾದಲ್ಲಿ

तर्कपंचांगानां विवरणम्--

१ ) आपादकस्यापाद्येन व्याप्तिः--यथा यद्यग्निर्न स्यात् तर्हि धूमोऽपि न स्यादिति तर्के, यत्राग्न्यभावः तत्र धूमाभाव इति व्याप्तिः ( अत्र आपादकस्यापादनकर्तुरापाद्येन आपादनकर्मणा इत्यर्थ )

५ ) प्रतितर्केणाप्रतिघातः, यथाह बौद्धः-यदि जगतः क्षणिकत्वं न स्यात् तर्हि अर्थक्रियाकारित्वरूपं सत्त्वं न स्यात्, तदेतस्य तर्कस्य यदि क्षणिकं स्यात्, तर्हि तदेवेदमिति प्रत्यभिज्ञाविरोधः-स्यादिति प्रतितर्केण विरोधेऽस्ति, तथा सत्तर्के नैवं—यद्यग्निः स्यात् तर्हीदं स्यादित्यभावात्

---

ಅದು ಅನಿತ್ಯವೇ ಆಗಲೀ' ಘಟವೇ ಮೊದಲಾದವುಗಳಲ್ಲಿ ಹಾಗೇ ಕಂಡದ್ದರಿಂದ, ಎಂಬ ಪ್ರತಿ ತರ್ಕವು ಕೃತಕತ್ವವಾದಿಗೆ ಅನುಕೂಲವೇ ಆಗಿದೆ. ಹೀಗೆ ಪರಾನುಕೂಲ ತರ್ಕವು ಸರಿಯಾದ ತರ್ಕವಾಗಲಾರದೆಂದು ತಿಳಿಯಲು, 'ಪರನಿಗೆ ಅನನುಕೂಲವಾಗಬೇಕೆಂಬ' ಅಂಗವನ್ನು ಸೇರಿಸಲಾಗಿದೆ.

### ತರ್ಕದಲ್ಲಿಯ ಐದು ಅಂಗಗಳ ನಿರೂಪಣೆಯು

೧) ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿಗೆ, ಉದಾಹರಣೆ–'ಒಂದು ವೇಳೆ ಪರ್ವತದಲ್ಲಿ ಅಗ್ನಿ ಇಲ್ಲವೆಂದಾದರೆ, [ಅಂಗೀಕೃತವಾದ] ಧೂಮವೂ ಇಲ್ಲದೇ ಹೋಗಲೀ' ಎಂಬ ತರ್ಕದಲ್ಲಿ 'ಎಲ್ಲಿ ಅಗ್ನಿ ಅಭಾವವೋ ಅಲ್ಲಿ ಧೂಮದ ಅಭಾವ' ವೆಂಬ ವ್ಯಾಪ್ತಿಯಿದೆ. (ಇಲ್ಲಿ ಆಪಾದಕವೆಂದರೆ ಆಪಾದನೆಗೆ ಕರ್ತೃವಾದ ಅಗ್ನಿ ಅಭಾವವು. ಆಪಾದ್ಯವೆಂದರೆ ಆಪಾದನೆಗೆ ಕರ್ಮವಾದ ಧೂಮಾಭಾವವು) ಧೂಮಾಭಾವದಿಂದ ಅಗ್ನಿ ಅಭಾವಕ್ಕೆ ವ್ಯಾಪ್ತಿಯಿದೆಯೆಂದರ್ಥವು.

೫) ಪ್ರತಿ ತರ್ಕದಿಂದ ಅಪ್ರತಿಘಾತಕ್ಕೆ, ಉದಾಹರಣೆ– ಬೌದ್ಧರು ಹೇಳುತ್ತಾರೆ. ಒಂದು ವೇಳೆ ಜಗತ್ತು ಕ್ಷಣಿಕವಾಗದೇ ಹೋದರೆ, ಅದು ಸತ್ವವಿಲ್ಲದೇ ಹೋಗಲಿ' ಎಂಬ ತರ್ಕಕ್ಕೆ ಪ್ರತಿಯಾಗ 'ಒಂದು ವೇಳೆ ಜಗತ್ತು ಕ್ಷಣಿಕವಾದಲ್ಲಿ, ಆ ಘಟವೇ ಇದು ಎಂಬ ಪ್ರತ್ಯಭಿಜ್ಞಾ ವಿರೋಧವು ಬರಬೇಕಾದೀತು' ಎಂಬ ಪ್ರತಿತರ್ಕದಿಂದ ವಿರೋಧ ಬರುತ್ತದೆ. ಆದರೆ ಸರಿಯಾದ ತರ್ಕದಲ್ಲಿ ಇಂಥ ವಿರೋಧ ಬರುವದಿಲ್ಲ. (ಅಗ್ನಿ ಇಲ್ಲವೆಂದರೆ ಧೂಮವೂ ಇಲ್ಲದೇ ಹೋಗಲಿ, ಎಂಬ ತರ್ಕದಲ್ಲಿ ಒಂದು ವೇಳೆ ಅಗ್ನಿಯಿದ್ದರೆ ಹೀಗೆ ಆಗಲಿ ವೆಂಬ ಪ್ರತಿ ತರ್ಕವು ಹೇಳಲು ಬರುವದಿಲ್ಲ)

---

३) आपादस्यानिष्टत्वं--अंगीकर्तव्यताविरोधिधर्मवत्त्वं यथा-यदि अग्निर्न स्यात् तर्हि धूमो न स्यादित्यत्र धूमो न स्यदिति।

४) विपर्यये पर्यवसानं–आपाद्यव्यतिरेकस्य पक्षधर्मताप्रदर्शनपूर्वकमापादकव्यतिरेकस्य पक्षसंबंधकथनं, यथा-अत्र नांगीकर्तुं शक्यते धूमाभावस्तस्मादग्न्यभावोऽपिन, तथा च वर्तते च धूमस्तस्मादाग्निमानिति यावत्।

५) परस्याननुकूलत्वं--विरुद्धहेत्वाभासवत् प्रकरणसमवदिति वा प्रतिपक्षासाधकत्वमिति

इति तर्कस्वरूपनिरूपणम्।

२) परस्याननुकूलत्वविषये व्यतिरेकोदाहरणमुखेनैवं विमर्शः कृतः अभिनामृते, तथा हि

---

३) 'ಆಪಾದ್ಯಕ್ಕೆ ಅನಿಷ್ಟತೆ' ಯೆಂದರೆ ಅಂಗೀಕೃತವಾದುದಕ್ಕೆ ವಿರೋಧಿಯಾಗಬೇಕು. ಉದಾಹರಣೆಃ- ಒಂದು ವೇಳೆ ಪರ್ವತದಲ್ಲಿ ಅಗ್ನಿಯಿಲ್ಲದಿದ್ದರೆ, ಅಲ್ಲಿ ಧೂಮವೂ ಇಲ್ಲದೇ ಹೋಗಲೀ,' ಎಂಬ ತರ್ಕದಲ್ಲಿ 'ಧೂಮವು ಇಲ್ಲದೇ ಹೋಗಲಿ' ಎಂಬುದು ಆಪಾದ್ಯವಾಗಿದ್ದು, ಇದು ಅನಿಷ್ಟವಾಗಿದೆ. (ಧೂಮವು ಅಂಗೀಕೃತವಾಗಿದ್ದರಿಂದ ಅದಕ್ಕೆ ವಿರೋಧಿಯಾಗಿದೆ)

೪) ವಿಪರ್ಯಯ ಪರ್ಯವಸಾನವೆಂದರೆ ಆಪಾದ್ಯ ವ್ಯತಿರೇಕವಾದುದಕ್ಕೆ ಪಕ್ಷಧರ್ಮತೆಯನ್ನು ತೋರಿಸಿ, ಅಪಾದಕದವ್ಯತಿರೇಕವೂ ಪಕ್ಷ ಸಂಬಂಧನಾಗಿದೆಯೆಂದು ಹೇಳುವದು. ಉದಾಃ- 'ಪರ್ವತದಲ್ಲಿ ಒಂದು ವೇಳೆ ಅಗ್ನಿ ಇಲ್ಲದಿದ್ದರೆ, ಧೂಮವೂ ಇಲ್ಲದೇ ಹೋಗಲಿ' ಎಂಬ ತರ್ಕದಲ್ಲಿ, ವಿಪರ್ಯಯ ಪರ್ಯವಸಾನ ಹೀಗೆ ಮಾಡಬೇಕು. ಧೂಮವಿದ್ದ ಕಾರಣ ಧೂಮಾಭಾವವು ಅಂಗೀಕಾರ್ಯವಲ್ಲ. ಆದ್ದರಿಂದ ಅಗ್ನಿ ಅಭಾವವನ್ನು ಅಂಗೀಕರಿಸಲು ಬರುವದಿಲ್ಲ. ಅಂದರೆ, ಧೂಮವಿರುವದರಿಂದ ಅಗ್ನಿಯೂ ಇದೆಯೆಂದು ಅಂಗೀಕರಿಸಬೇಕೆಂಬುದೇ ವಿಪರ್ಯಯ ಪರ್ಯವಸಾನವು.

೫) ಪರನಿಗೆ ಅನನುಕೂಲವಿರುವದೆಂದರೆ, ವಿರುದ್ಧ ಹೇತ್ವಾಭಾಸದಂತೆ, ಅಥವಾ ಪ್ರಕರಣ ಸಮದಂತೆ ಪ್ರತಿಪಕ್ಷಸಾಧಕವಾಗದೇ ಇರುವದು.

೨) ತರ್ಕಾಂಗದಲ್ಲಿ 'ಪರನಿಗೆ ಅನನುಕೂಲತ್ವ'ದ ವಿಚಾರವು-

ತರ್ಕವು ಪರನಿಗೆ ಅನನುಕೂಲವಾಗಿರಬೇಕೆಂಬ ವಿಷಯದಲ್ಲಿ ವ್ಯತಿರೇಕ ಉದಾಹರಣೆ ಮೂಲಕ ಅಭಿನವಾಮೃತ ಗ್ರಂಥದಲ್ಲಿ ಹೀಗೆ ವಿಮರ್ಶೆ ಮಾಡಲಾಗಿದೆ.

अनित्यः शब्दः इति आचार्यदेशीयः, नित्यः शब्द, इति चार्वाकः। आचार्यदेशीयश्चार्वाकं प्रत्याह्यदि शब्दो नित्यः स्यात् तर्हि आकाशविशेषगुणो न स्यादत्रापाद्यापादकयोर्व्याप्तिरस्ति-यत्र नित्यत्वं तत्राकाशविशेषागुणत्वाभावः—यथा परमाणुरूपं, तथा च परमाणुरूपादौ अव्यभिचरितसहचारदर्शनात्, न च प्रतितर्केण बाधमीक्षामह इति, प्रतितर्कैणाप्रतिघातोऽप्यस्ति, आपद्यमिदमनिष्टं भवति, चोदकस्य, तेनाकाशगुणत्वाभावस्य प्रमाणविरुद्धत्वांगीकारात् परस्याननुकूलत्वं नास्ति, तथा हि - चोदकोऽपि आचार्यदेशीयमाह-यदि शब्दः अनित्यः स्यात् तर्हि आकाशविशेषगुणो न स्यात् घटरूपादौ अव्यभिचरितसाहचर्यदर्शनात् व्याप्तिस्तावदस्ति, प्रतितर्काप्रतिघातादिकं पूर्ववदस्ति,

---

ಶಬ್ದವು ಅನಿತ್ಯವೆಂದು ಆಚಾರ್ಯ ದೇಶೀಯರೂ, ಶಬ್ದ ನಿತ್ಯವೆಂದು ಚಾರ್ವಾಕರೂ ಹೇಳುತ್ತಾರೆ.

ಆಚಾರ್ಯ ದೇಶಿಯರು ಚಾರ್ವಾಕರನ್ನು ಕುರಿತು ಹೇಳುತ್ತಾರೆ– 'ಒಂದು ವೇಳೆ ಶಬ್ದವು ನಿತ್ಯವಾದರೆ, ಇದು ಆಕಾಶ ವಿಶೇಷಣ ಗುಣವಾಗದೇ ಹೋಗಲಿ' ಈ ತರ್ಕದಲ್ಲಿ ಆಪಾದಕ ಆಪಾದ್ಯಗಳಿಗೆ ವ್ಯಾಪ್ತಿಯಿದೆ. ಎಲ್ಲಿ ನಿತ್ಯತ್ವವೋ ಅಲ್ಲಿ ಆಕಾಶ ವಿಶೇಷ ಗುಣದ ಅಭಾವವಿದೆ. ಪರಮಾಣು ರೂಪದಂತೆ, ಹೀಗೆ ಪರಮಾಣು ರೂಪ ಮೊದಲಾದವುಗಳಲ್ಲಿ ವ್ಯಾಪ್ತಿಯು ಅವ್ಯಭಿಚರಿತವಾಗಿ ಕಂಡಿದೆ. ಹಾಗೂ ಈ ತರ್ಕಕ್ಕೆ ಪ್ರತಿ ತರ್ಕದಿಂದ ಬಾಧವಿಲ್ಲವಾದ ಕಾರಣ, ಪ್ರತಿ ತರ್ಕದಿಂದ ಅಪ್ರತಿಘಾತವೆಂಬ ಅಂಗವೂ ಇದೆ. ಚಾರ್ವಾಕರು ಶಬ್ದವು ಆಕಾಶವಿಶೇಷಗುಣವೆಂದು ಹೇಳುವರು. ಕಾರಣ, 'ಶಬ್ದವು ಆಕಾಶ ವಿಶೇಷಗುಣವಾಗದೇ ಹೋಗಲಿ, ಎಂಬ ಆಪಾದ್ಯವು ಚಾರ್ವಾಕರಿಗೆ ಅನಿಷ್ಟವಾದ್ದರಿಂದ, 'ಆಪಾದ್ಯದ ಅನಿಷ್ಟತೆ ಎಂಬ ಅಂಗವೂ ಇದೆ. ಆದರೆ, 'ಪರನಿಗೆ (ಚಾರ್ವಾಕನಿಗೆ) ಅನನುಕೂಲತ್ವ' ವೆಂಬ ಅಂಗವಮಾತ್ರವಿಲ್ಲ. ಹೇಗೆಂದರೆ, ಚಾರ್ವಾಕರೂ ಕೂಡಾ ಆಚಾರ್ಯ ದೇಶಿಯರನ್ನು, ಕುರಿತು 'ಶಬ್ದವು ಅನಿತ್ಯವಾದಲ್ಲಿ ಅದು ಆಕಾಶವಿಶೇಷಗುಣವಾಗದೇ ಹೋಗಲಿ, ಘಟರೂಪದಂತೆ, ಘಟರೂಪ ಮೊದಲಾದವುಗಳಲ್ಲಿ 'ಯಾವುದು ಅನಿತ್ಯವೋ ಅದು ಆಕಾಶ ವಿಶೇಷ ಗುಣವಲ್ಲ' ಎಂಬ ವ್ಯಾಪ್ತಿಯು ಅವ್ಯಭಿಚರಿತವಾಗಿ ಕಂಡಿದೆ. ಹೀಗೆ ಈ ಪ್ರತಿತರ್ಕವಲ್ಲಿಯೂ ಆಪಾದ್ಯ–ಆಪಾದಕಗಳಿಗೆ ವ್ಯಾಪ್ತಿಯಿದೆ ಪ್ರತಿತರ್ಕದ ಅಪ್ರತಿಘಾತ ಮೊದಲಾದ ಅಂಗಗಳೂ ಪೂರ್ವದಂತೆ ಇದೆ.

परास्याननुकूलत्वं तु उभयत्रापि नास्ति; आचार्यदेशीयस्यानित्यत्वमनुकूलं, चोदकस्य नित्यत्वमनुकूलमिति सत्प्रतिपक्षहेतुवत् तर्कद्वयमाभास इति बोध्यं, एतेन यद्यापाद्यं परस्यानिष्टं तर्हि परस्याननुकूलं भवेदेवेति नियमादापाद्यानिष्टत्वात् परस्यननुकूलत्वं पृथङ् न वाच्यमिति परास्तम् असंकीर्णोदाहरणसंभवादिति ।

**इति तर्कांगेपरस्याननुकूलत्वविचारः**

३ ) आपद्यानिष्टं द्विविधं--१ ) प्रामाणिकहानं २ ) अप्रामाणिककल्पनं चेति ।

१ ) प्रामाणिकहानं त्रेधा- १ ) दृष्ट - २ ) अनुमित - ३ ) श्रुतहानभेदात् ।

---

'ಪರನಿಗೆ ಅನನುಕೂಲತ್ವವೆಂಬ ಅಂಗವು ಎರಡೂ ಕಡೆಗೆ ಇಲ್ಲ ಆಚಾರ್ಯ ದೇಶಿಯರಿಗೆ ಶಬ್ದಕ್ಕೆ ಅನಿತ್ಯತ್ವವು ಅನುಕೂಲವು, ಚಾರ್ವಾಕರಿಗೆ ನಿತ್ಯತ್ವವು ಅನುಕೂಲವು (ವಿವರಣೆ- ಆಚಾರ್ಯ ದೇಶಿಯರ ಮೊದಲನೆ ತರ್ಕದ ವಿಪರ್ಯ ಪರ್ಯವಸಾನದಲ್ಲಿ ಶಬ್ದವು ಆಕಾಶ ಗುಣವಾಗಿದೆ, ಕಾರಣ ಅನಿತ್ಯವು ಎಂದಲ್ಲಿ ಚಾರ್ವಾಕರು ಇದು ತಮಗೆ ಅನುಕೂಲವೇ ಎಂಬ ಅಭಿಪ್ರಾಯದಿಂದ ಪ್ರತಿ ತರ್ಕಮಾಡುತ್ತಾರೆ. ಆದರಂತೆ ಚಾರ್ವಾಕರ ತರ್ಕದ ವಿಪರ್ಯಯ ಪರ್ಯವಸಾನ ಮಾಡಿದಲ್ಲಿ ಆಚಾರ್ಯ ದೇಶಿಯರಿಗೆ ಅನುಕೂಲವೇ ಎಂಬ ಅಭಿಪ್ರಾಯದಿಂದ ಪ್ರತಿ ತರ್ಕಮಾಮಾಡುತ್ತಾರೆ) ಹೀಗಾಗಿ ಇಬ್ಬರ ತರ್ಕಕ್ಕೂ ಪರಾನನುಕೂಲತ್ವವಿಲ್ಲ. ಎರಡೂ ತರ್ಕಗಳು ಪರಸ್ಪರ ವಿರುದ್ಧಧರ್ಮಸಾಧಕ ಹೇತುಗಳಂತೆ ಆಭಾಸವಾಗುತ್ತವೆ.

ಇದರಿಂದ, ಆಪಾದ್ಯವು ಪರನಿಗೆ ಅನಿಷ್ಟವಾದರೆ, ಪರನಿಗೆ ಅನುಕೂಲವಾಗೇ ಇರುವದೆಂಬ ನಿಯಮ ಬಲದಿಂದ, ಆಪಾದ್ಯ ಅನಿಷ್ಟದಿಂದ 'ಪರನನುಕೂಲ'ವೆಂಬುದು ಪ್ರತ್ಯೇಕವಾಗಿರದೇ, ಎರಡೂ ಒಂದೇ ಎಂಬ ವಾದವು ನಿರಸ್ತವಾಯಿತು. ಏಕೆಂದರೆ ಒಂದರಲ್ಲಿ ಸಂಕೀರ್ಣವಾಗದೇ ಇರುವ ಬೇರೆ ಬೇರೆ ತರ್ಕಕ್ಕೆ ಉದಾಹರಣೆಗಳಿವೆ. ['ಆಪಾದ್ಯ ಅನಿಷ್ಟ'ವೆಂಬ ಅಂಗವೂ, 'ಪರಾನನುಕೂಲ' ವೆಂಬ ಅಂಗವೂ ಭಿನ್ನಭಿನ್ನವೆಂದು ತಿಳಿಯಬೇಕು]

**೩] ತರ್ಕಾಂಗದಲ್ಲಿಯ ಆಪಾದ್ಯಾನಿಷ್ಟ ವಿಭಾಗಗಳು ಹಾಗೂ ಕೇವಲಾನಿಷ್ಟ ವಿಚಾರವು–**

ಆಪಾದ್ಯಾನಿಷ್ಟವು ಎರಡು ವಿಧವಾಗಿದೆ- ೧] ಪ್ರಾಮಾಣಿಕವಾದುದನ್ನು ಬಿಡುವುದು

२ ) अप्रामाणिककल्पनमपि त्रेधा - १ ) अदृष्ट - २ )अननुमित - ३) अश्रुतकल्पनाभेदात् )

एवमापाद्यानिष्टं षड्विधं ज्ञेयं । आपाद्यानिष्टं पुनः पंचधा १ ) आत्माश्रयत्वं २) अन्योन्याश्रयत्वं ३ ) चक्रकाश्रायत्वं ४ ) अनवस्था ५ ) केवलानिष्टं चेति ।

तद्भेदात् तदापादनरूपस्तर्कोऽपि पंचविधः ।

तथा ही आत्माश्रयापादनतर्कस्तु--तस्यैवोत्पत्तिज्ञप्त्यर्थं तदुत्पत्तिज्ञप्त्यपेक्षांगीकारे केनचिद्वादिना तदा प्रतिवादिना, स्वापेक्षया पूर्वभावित्वरूपमात्माश्रयत्वमापाद्यते, तथा ही—यदि घटोऽयमस्यैव घटस्योत्पदकः स्यात् तर्हि घटः स्वतोऽपि पूर्वभावी स्यात् ।

**अस्य तर्कस्य पंचांगानीत्थं**—१. आपादकस्यापाद्येन व्याप्तिः,

---

[ಪ್ರಾಮಾಣಿಕ ಹಾನ] ಹಾಗೂ ೨] ಅಪ್ರಾಮಾಣಿಕವಾದುದನ್ನು ಸ್ವೀಕರಿಸುವದು.

೧] ಪ್ರಾಮಾಣಿಕ ಹಾನವು ಮೂರು ಪ್ರಕಾರವು. ಅ) ದೃಷ್ಟಹಾನ [ಬಿಡುವದು] ಆ) ಅನುಮಿತಿ ಹಾನ ಹಾಗೂ ಇ) ಶ್ರುತಹಾನ

೨] ಅಪ್ರಮಾಣಿಕ ಕಲ್ಪನೆಯು ಮೂರು ಪ್ರಕಾರವು. ಅ) ಅದೃಷ್ಟ ಕಲ್ಪನೆ ಆ) ಅನನುಮಿತ ಕಲ್ಪನೆ ಹಾಗೂ ಇ) ಅಶ್ರುತಹಾನ ಕಲ್ಪನೆ.

ಹೀಗೆ 'ಆಪಾದ್ಯ ಅನಿಷ್ಟವು' ಆರು ಪ್ರಕಾರವೆಂದು ತಿಳಿಯಬೇಕು. ಪುನಃ 'ಆಪಾದ್ಯ ಅನಿಷ್ಟವು' ಐದು ಪ್ರಕಾರವಾಗಿ ವಿಭಾಗಿಸಲಾಗಿದೆ. ೧] ಆತ್ಮಾಶ್ರಯ ೨] ಅನ್ಯೋನ್ಯಾಶ್ರಯ ೩] ಚಕ್ರಕಾಶ್ರಯ ೪] ಅನವಸ್ಥಾ ಹಾಗೂ ೫] ಕೇವಲಾನಿಷ್ಟ, ಈ ಆಪಾದ್ಯ ಅನಿಷ್ಟದ ಭೇದಗಳಿಗನುಸರಿಸಿ, ಅದನ್ನು ಆಪಾದನೆ ಮಾಡತಕ್ಕ ತರ್ಕವೂ ಐದು ಪ್ರಕಾರವಾಗಿದೆಯೆಂದು ತಿಳಿಯಬೇಕು. ಈ ಐದು ಪ್ರಕಾರದ ತರ್ಕಗಳು ಹೀಗಿವೆ-

೧] ಆತ್ಮಾಶ್ರಯ ಆಪಾದಾನ ತರ್ಕವು- ಒಂದು ವಸ್ತುವಿನ ಉತ್ಪತ್ತಿ ಇಲ್ಲವೇ ಜ್ಞಾನಕ್ಕಾಗಿ, ಆ ವಸ್ತುವಿನ ಉತ್ಪತ್ತಿಯನ್ನೇ ಇಲ್ಲನೇ ಜ್ಞಾನವನ್ನೇ ಅಪೇಕ್ಷಿಸಿದಲ್ಲಿ ತನಗಿಂತಲೂ ತಾನು ಮೊದಲೇ ಇರಬೇಕೆಂಬ 'ಆತ್ಮಾಶ್ರಯ' ದೋಷವು ಪ್ರತಿವಾದಿಯಿಂದ ಹೇಳಲ್ಪಡುತ್ತದೆ. ಉದಾಹರಣೆಗೆ- ಒಂದು ವೇಳೆ ಈ ಘಟವು ತನಗೆ ತಾನು ಉತ್ಪಾದಕನಾದಲ್ಲಿ, ಈ ಘಟವು ತನ್ನ ಉತ್ಪತ್ತಿಗಿಂತಲೂ ಮೊದಲು ತಾನು ಇರಬೇಕಾದೀತು' ಈ ಆತ್ಮಾಶ್ರಯ ದೋಷದಿಂದ ಕೂಡಿದ ತರ್ಕಕ್ಕೆ ಐದು ಅಂಗಗಳು ಹೀಗೆ ಇರುತ್ತವೆ.

यद्यस्य कारणं तत् ततोऽपि पूर्वभावि दृष्टं, यथाप
तन्तवस्तदपेक्षया पूर्वभाविनः ।

२. प्रतितर्काप्रतिघातः--यदि घटस्य घट एव का
स्यात् तर्हि एवमापाद्येत इति प्रतिकूलतर्को नास्ति ।

३. आपाद्यानिष्टं च स्वापेक्षया स्वस्य पूर्वभावित्वस्या
णिकत्वात् ।

४. विपर्यये पर्यवसानं चास्ति - नांगीकर्तु शक्यते घट
र्वभावित्वं, तस्मात् घटः न स्वस्य स्वयमेव उत्पादक इ

परस्याननुकूलत्वं - यद्ययं घटः एतद्घटजनकः स्यात् तर्हि
पेक्षया पूर्वभावी स्यात् इति तर्कप्रयोक्तारं पुरुषं प्रति स
सिद्ध्यनुकूलतया अयमेव तर्कः प्रयोक्तुं न च शक्यते व
ना, अतोऽननुकूलत्वमस्य तर्कस्येति ज्ञेयम् ।

इति पचांगानि । अंगत्वं नाम सत्तर्कताप्रयोजकत्वं ।

---

೧] ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿಯು ಇದೆ. ಯಾವುದು ಯಾ
ಕಾರಣವೋ. ಅದು ಅದಕ್ಕಿಂತ ಪೂರ್ವಭಾವಿಯಾಗಿರುವದು ಕಂಡಿದೆ. ಉದಾಹ
ಬಟ್ಟೆಗೆ ಕಾರಣವಾದ ತಂತುಗಳು, ಬಟ್ಟೆಗಿಂತಲೂ ಪೂರ್ವಭಾವಿಯಾಗಿವೆ.

೨] ಪ್ರತಿ ತರ್ಕದಿಂದ ಅಪ್ರತಿಘಾತವಿದೆ – ಒಂದು ಪಕ್ಷ ಘಟಕ್ಕೆ ಘಟವೇ ಕಾ
ವಾಗದೇ ಹೋದಲ್ಲಿ, ಹೀಗೆ ಆಗಬಹುದೆಂಬ ಪ್ರತಿತರ್ಕವಿಲ್ಲ.

೩] ಆಪಾದ್ಯ ಅನಿಷ್ಟವೂ ಇದೆ–ತನಗಿಂತಲೂ ತಾನು ಪೂರ್ವದಲ್ಲಿರುವದು ಅ
ಪ್ರಾಣಿಕವು. (ಕಾರಣ ಆಪಾದ್ಯನಿಷ್ಟವು)

೪] ವಿಪರ್ಯಯದಲ್ಲಿ ಪರ್ಯಾವಸನವಿದೆ– ಘಟದ ಪೂರ್ವಭಾವಿತ್ವವನ್ನು ಅ
ಕರಿಸಲು ಶಕ್ಯವಿಲ್ಲ. ಕಾರಣ ಘಟವು ತನಗೆ ತಾನು ಉತ್ಪಾದಕವಾಗಲಾರದು

೫] ಪರನಿಗೆ ಅನುನಕೂಲವಾಗಿದೆ– 'ಒಂದು ವೇಳೆ ಈ ಘಟವು ಇದೇ ಘ
ಉತ್ಪಾದಕವಾದರೆ, ತನಗಿಂತಲೂ ಪೂರ್ವದಲ್ಲಿರಬೇಕಾದಿತೆಂದು' ತರ್ಕ ಮಾಡು
ಕುರಿತು, ವಾದಿಯು ತನ್ನ ಇಷ್ಟಸಿದ್ಧಿಗನುಕೂಲವಾಗುವಂತೆ, ಇದೇ ತರ್ಕವ
ಯೋಗ ಮಾಡಲು ಬರುವದಿಲ್ಲ. ಕಾರಣ ಈ ತರ್ಕವು ಪರನಿಗೆ ಅನನುಕೂಲ
ಯೆಂದು ತಿಳಿಯಬೇಕು ತರ್ಕದ ಅಂಗವೆಂದರೆ, ಸತ್ ತರ್ಕಕ್ಕೆ ಪ್ರಯೋಜಕ ಸಾಮ

अनित्यः शब्दः इति आचार्यदेशीयः, नित्यः शब्द, इति चार्वाकः। आचार्यदेशीयश्चार्वाकं प्रत्याह-यदि शब्दो नित्यः स्यात् तर्हि आकाशविशेषगुणो न स्यादत्रापाद्यापादकयोर्व्याप्तिरस्ति-यत्र नित्यत्वं तत्राकाशविशेषगुणत्वाभावः—यथा परमाणुरूपं, तथा च परमाणुरूपादौ अव्यभिचरितसहचारदर्शनात्, न च प्रतितर्केण बाधमीक्षामह इति, प्रतितर्कैणाप्रतिघातोऽप्यस्ति, आपद्यमिदमनिष्टं भवति, चोदकस्य, तेनाकाशगुणत्वाभावस्य प्रमाणविरुद्धत्वांगीकारात् परस्याननुकूलत्वं नास्ति, तथा हि - चोदकोऽपि आचार्यदेशीयमाह-यदि शब्दः अनित्यः स्यात् तर्हि आकाशविशेषगुणो न स्यात् घटरूपादौ अव्यभिचरितसाहचर्यदर्शनात् व्याप्तिस्तावदस्ति, प्रतितर्काप्रतिघातादिकं पूर्ववदस्ति,

---

ಶಬ್ದವು ಅನಿತ್ಯವೆಂದು ಆಚಾರ್ಯ ದೇಶೀಯರೂ, ಶಬ್ದ ನಿತ್ಯವೆಂದು ಚಾರ್ವಾಕರೂ ಹೇಳುತ್ತಾರೆ.

ಆಚಾರ್ಯ ದೇಶೀಯರು ಚಾರ್ವಾಕರನ್ನು ಕುರಿತು ಹೇಳುತ್ತಾರೆ- 'ಒಂದು ವೇಳೆ ಶಬ್ದವು ನಿತ್ಯವಾದರೆ, ಇದು ಆಕಾಶ ವಿಶೇಷಣ ಗುಣವಾಗದೇ ಹೋಗಲಿ' ಈ ತರ್ಕದಲ್ಲಿ ಆಪಾದಕ ಆಪಾದ್ಯಗಳಿಗೆ ವ್ಯಾಪ್ತಿಯಿದೆ. ಎಲ್ಲಿ ನಿತ್ಯತ್ವವೋ ಅಲ್ಲಿ ಆಕಾಶ ವಿಶೇಷ ಗುಣದ ಅಭಾವವಿದೆ. ಪರಮಾಣು ರೂಪದಂತೆ, ಹೀಗೆ ಪರಮಾಣು ರೂಪ ಮೊದಲಾದವುಗಳಲ್ಲಿ ವ್ಯಾಪ್ತಿಯು ಅವ್ಯಭಿಚರಿತವಾಗಿ ಕಂಡಿದೆ. ಹಾಗೂ ಈ ತರ್ಕಕ್ಕೆ ಪ್ರತಿತರ್ಕದಿಂದ ಬಾಧವಿಲ್ಲವಾದ ಕಾರಣ, ಪ್ರತಿ ತರ್ಕದಿಂದ ಅಪ್ರತಿಘಾತವೆಂಬ ಅಂಗವೂ ಇದೆ. ಚಾರ್ವಾಕರು ಶಬ್ದವು ಆಕಾಶವಿಶೇಷಗುಣವೆಂದು ಹೇಳುವರು. ಕಾರಣ, 'ಶಬ್ದವು ಆಕಾಶ ವಿಶೇಷ-ಗುಣವಾಗದೇ ಹೋಗಲಿ, ಎಂಬ ಆಪಾದ್ಯವು ಚಾರ್ವಾಕರಿಗೆ ಅನಿಷ್ಟವಾದ್ದರಿಂದ, 'ಆಪಾದ್ಯದ ಅನಿಷ್ಟತೆ ಎಂಬ ಅಂಗವೂ ಇದೆ. ಆದರೆ, 'ಪರನಿಗೆ (ಚಾರ್ವಾಕನಿಗೆ) ಅನನುಕೂಲತ್ವ'ವೆಂಬ ಅಂಗಮಾತ್ರವಿಲ್ಲ. ಹೇಗೆಂದರೆ, ಚಾರ್ವಾಕರೂ ಕೂಡಾ ಆಚಾರ್ಯ ದೇಶೀಯರನ್ನು ಕುರಿತು 'ಶಬ್ದವು ಅನಿತ್ಯವಾದಲ್ಲಿ ಅದು ಆಕಾಶವಿಶೇಷಗುಣವಾಗದೇ ಹೋಗಲಿ, ಘಟರೂಪದಂತೆ, ಘಟರೂಪ ಮೊದಲಾದವುಗಳಲ್ಲಿ 'ಯಾವುದು ಅನಿತ್ಯವೋ ಅದು ಆಕಾಶ ವಿಶೇಷ ಗುಣವಲ್ಲ' ಎಂಬ ವ್ಯಾಪ್ತಿಯು ಅವ್ಯಭಿಚರಿತವಾಗಿ ಕಂಡಿದೆ. ಹೀಗೆ ಈ ಪ್ರತಿತರ್ಕದಲ್ಲಿಯೂ ಆಪಾದ್ಯ-ಆಪಾದಕಗಳಿಗೆ ವ್ಯಾಪ್ತಿಯಿದೆ ಪ್ರತಿತರ್ಕದ ಅಪ್ರತಿಘಾತ ಮೊದಲಾದ ಅಂಗಗಳೂ ಪೂರ್ವದಂತೆ ಇದೆ.

परास्याननुकूलत्वं तु उभयत्रापि नास्ति; आचार्यदेशीयस्यानित्यत्वमनुकूलं, चोदकस्य नित्यत्वमनुकूलमिति सत्प्रतिपक्षहेतुवत् तर्कद्वयमाभास इति बोध्यं, एतेन यद्यापाद्यं परस्यानिष्टं तर्हि परस्याननुकूलं भवेदेवेति नियमादापाद्यानिष्टत्वात् परस्यननुकूलत्वं पृथङ् न वाच्यमिति परास्तम् असंकीर्णोदाहरणसंभवादिति ।

**इति तर्कांगेपरस्याननुकूलत्वविचारः**

३ ) आपद्यानिष्टं द्विविधं—१ ) प्रामाणिकहानं २ ) अप्रामाणिककल्पनं चेति ।

१ ) प्रामाणिकहानं त्रेधा - १ ) दृष्ट - २ ) अनुमित - ३ ) श्रुतहानभेदात् ।

---

'ಪರನಿಗೆ ಅನನುಕೂಲತ್ವವೆಂಬ ಅಂಗವು ಎರಡೂ ಕಡೆಗೆ ಇಲ್ಲ ಆಚಾರ್ಯ ದೇಶಿಯರಿಗೆ ಶಬ್ದಕ್ಕೆ ಅನಿತ್ಯತ್ವವು ಅನುಕೂಲವು, ಚಾರ್ವಾಕರಿಗೆ ನಿತ್ಯತ್ವವು ಅನುಕೂಲವು (ವಿವರಣೆ- ಆಚಾರ್ಯ ದೇಶಿಯರ ಮೊದಲನೆ ತರ್ಕದ ವಿಪರ್ಯ ಪರ್ಯವಸಾನದಲ್ಲಿ ಶಬ್ದವು ಆಕಾಶ ಗುಣವಾಗಿದೆ, ಕಾರಣ ಅನಿತ್ಯವು ಎಂದಲ್ಲಿ ಚಾರ್ವಾಕರು ಇದು ತಮಗೆ ಅನುಕೂಲವೇ ಎಂಬ ಅಭಿಪ್ರಾಯದಿಂದ ಪ್ರತಿ ತರ್ಕಮಾಡುತ್ತಾರೆ. ಆದರಂತೆ ಚಾರ್ವಾಕರ ತರ್ಕದ ವಿಪರ್ಯಯ ಪರ್ಯವಸಾನ ಮಾಡಿದಲ್ಲಿ ಆಚಾರ್ಯ ದೇಶಿಯರಿಗೆ ಅನುಕೂಲವೇ ಎಂಬ ಅಭಿಪ್ರಾಯದಿಂದ ಪ್ರತಿ ತರ್ಕಮಾಮಾಡುತ್ತಾರೆ) ಹೀಗಾಗಿ ಇಬ್ಬರ ತರ್ಕಕ್ಕೂ ಪರಾನನುಕೂಲತ್ವವಿಲ್ಲ. ಎರಡೂ ತರ್ಕಗಳು ಪರಸ್ಪರ ವಿರುದ್ಧಧರ್ಮಸಾಧಕ ಹೇತುಗಳಂತೆ ಆಭಾಸವಾಗುತ್ತವೆ.

ಇದರಿಂದ, ಆಪಾದ್ಯವು ಪರನಿಗೆ ಅನಿಷ್ಟವಾದರೆ, ಪರನಿಗೆ ಅನುಕೂಲವಾಗೇ ಇರುವದೆಂಬ ನಿಯಮ ಬಲದಿಂದ, ಆಪಾದ್ಯ ಅನಿಷ್ಟದಿಂದ 'ಪರನನುಕೂಲ'ವೆಂಬುದು ಪ್ರತ್ಯೇಕವಾಗಿರದೇ, ಎರಡೂ ಒಂದೇ ಎಂಬ ವಾದವು ನಿರಸ್ತವಾಯಿತು. ಏಕೆಂದರೆ ಒಂದರಲ್ಲಿ ಸಂಕೀರ್ಣವಾಗದೇ ಇರುವ ಬೇರೆ ಬೇರೆ ತರ್ಕಕ್ಕೆ ಉದಾಹರಣೆಗಳಿವೆ. ['ಆಪಾದ್ಯ ಅನಿಷ್ಟ'ವೆಂಬ ಅಂಗವೂ, 'ಪರಾನನುಕೂಲ' ವೆಂಬ ಅಂಗವೂ ಭಿನ್ನಭಿನ್ನವೆಂದು ತಿಳಿಯಬೇಕು]

**೩] ತರ್ಕಾಂಗದಲ್ಲಿಯ ಆಪಾದ್ಯನಿಷ್ಟ ವಿಭಾಗಗಳು ಹಾಗೂ ಕೇವಲಾನಿಷ್ಟ ವಿಚಾರವು–**

ಆಪಾದ್ಯಾನಿಷ್ಟವು ಎರಡು ವಿಧವಾಗಿದೆ- ೧] ಪ್ರಾಮಾಣಿಕವಾದುದನ್ನು ಬಿಡುವದು

२ ) अप्रामाणिककल्पनमपि त्रेधा - १ ) अदृष्ट - २ )अननुमित - ३) अश्रुतकल्पनाभेदात् )

एवमापाद्यानिष्टं षड्विधं ज्ञेयं । आपाद्यानिष्टं पुनः पंचधा १ ) आत्माश्रयत्वं २) अन्योन्याश्रयत्वं ३ ) चक्रकाश्रयत्वं ४ ) अनवस्था ५ ) केवलानिष्टं चेति ।

तद्भेदात् तदापादनरूपस्तर्कोऽपि पंचविधः ।

तथा ही आत्माश्रयापादनतर्कस्तु--तस्यैवोत्पत्तिज्ञप्त्यर्थं तदुत्पत्तिज्ञप्त्यपेक्षांगीकारे केनचिद्वादिना तदा प्रतिवादिना, स्वापेक्षया पूर्वभावित्वरूपमात्माश्रयत्वमापाद्यते, तथा ही—यदि घटोऽयमस्यैव घटस्योत्पदकः स्यात् तर्हि घटः स्वतोऽपि पूर्वभावी स्यात् ।

**अस्य तर्कस्य पंचांगानीत्थं**—१. आपादकस्यापाद्येन व्याप्तिः,

---

[ಪ್ರಾಮಾಣಿಕ ಹಾನ] ಹಾಗೂ ೨] ಅಪ್ರಾಮಾಣಿಕವಾದುದನ್ನು ಸ್ವೀಕರಿಸುವದು.

೧] ಪ್ರಾಮಾಣಿಕ ಹಾನವು ಮೂರು ಪ್ರಕಾರವು. ಅ) ದೃಷ್ಟಹಾನ [ಬಿಡುವದು] ಆ) ಅನುಮಿತಿ ಹಾನ ಹಾಗೂ ಇ) ಶ್ರುತಹಾನ

೨] ಅಪ್ರಮಾಣಿಕ ಕಲ್ಪನೆಯು ಮೂರು ಪ್ರಕಾರವು. ಅ) ಅದೃಷ್ಟ ಕಲ್ಪನೆ ಆ) ಅನನುಮಿತ ಕಲ್ಪನೆ ಹಾಗೂ ಇ) ಅಶ್ರುತಹಾನ ಕಲ್ಪನೆ.

ಹೀಗೆ 'ಆಪಾದ್ಯ ಅನಿಷ್ಟವು' ಆರು ಪ್ರಕಾರವೆಂದು ತಿಳಿಯಬೇಕು. ಪುನಃ 'ಆಪಾದ್ಯ ಅನಿಷ್ಟವು' ಐದು ಪ್ರಕಾರವಾಗಿ ವಿಭಾಗಿಸಲಾಗಿದೆ. ೧] ಆತ್ಮಾಶ್ರಯ ೨] ಅನ್ಯೋನ್ಯಾಶ್ರಯ ೩] ಚಕ್ರಕಾಶ್ರಯ ೪] ಅನವಸ್ಥಾ ಹಾಗೂ ೫] ಕೇವಲಾನಿಷ್ಟ, ಈ ಆಪಾದ್ಯ ಅನಿಷ್ಟದ ಭೇದಗಳಿಗನುಸರಿಸಿ, ಅದನ್ನು ಆಪಾದನೆ ಮಾಡತಕ್ಕ ತರ್ಕವೂ ಐದು ಪ್ರಕಾರವಾಗಿದೆಯೆಂದು ತಿಳಿಯಬೇಕು. ಈ ಐದು ಪ್ರಕಾರದ ತರ್ಕಗಳು ಹೀಗಿವೆ-

೧] ಆತ್ಮಾಶ್ರಯ ಆಪಾದಾನ ತರ್ಕವು- ಒಂದು ವಸ್ತುವಿನ ಉತ್ಪತ್ತಿ ಇಲ್ಲವೇ ಜ್ಞಾನಕ್ಕಾಗಿ, ಆ ವಸ್ತುವಿನ ಉತ್ಪತ್ತಿಯನ್ನೇ ಇಲ್ಲನೇ ಜ್ಞಾನವನ್ನೇ ಅಪೇಕ್ಷಿಸಿದಲ್ಲಿ ತನಗಿಂತಲೂ ತಾನು ಮೊದಲೇ ಇರಬೇಕೆಂಬ 'ಆತ್ಮಾಶ್ರಯ' ದೋಷವು ಪ್ರತಿವಾದಿಯಿಂದ ಹೇಳಲ್ಪಡುತ್ತದೆ. ಉದಾಹರಣೆಗೆ- ಒಂದು ವೇಳೆ ಈ ಘಟವು ತನಗೆ ತಾನು ಉತ್ಪಾದಕನಾದರೆ, ಈ ಘಟವು ತನ್ನ ಉತ್ಪತ್ತಿಗಿಂತಲೂ ಮೊದಲು ತಾನು ಇರಬೇಕಾದೀತು' ಈ ಆತ್ಮಾಶ್ರಯ ದೋಷದಿಂದ ಕೂಡಿದ ತರ್ಕಕ್ಕೆ ಐದು ಅಂಗಗಳು ಹೀಗೆ ಇರುತ್ತವೆ.

यद्यम्य कारणं तत् ततोऽपि पूर्वभावि दृष्टं, यथापटकारणं त ।द्स्तदपेक्षया पूवभाविनः ।

२. प्रतितर्के ।।प्रतिघ.तः--यदि घटस्य घट ।.व कारणं न स्यत्‌ तर्हि एवमापाद्यत इति तिकूलतर्को नास्ति ।

३. आ।.द्यानिष्ट च स्वपे.।या स्वस्य पूव ।ावित्वस्याप्रामाणिकत्वात्‌ ।

४. विपर्यये पर्यवसानं चास्ति - नांगीकर्तु शक्यते घटस्य पुर्वभावित्वं, तस्मात्‌ घटः न स्वस्य स्वयमेव उत्पादक इति ।

परस्याननुकूलत्वं - यद्ययं घटः एतद्घटजनकः स्यात्‌ तर्हि स्वापेक्षया पूर्वभावी स्यात्‌ इति तर्कप्रयोक्तारं पुरुषं प्रति स्वेष्टसिद्धयनुकूलतया अयमेव तर्कः प्रयोक्तुं न च शक्यते वादिना, अतोऽननुकूलत्वमस्य तर्कस्येति ज्ञेयम्‌ ।

**इति पचांगानि ।** अंगत्वं नाम सत्तर्कताप्रयोजकत्वं ।

---

೧] ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿಯು ಇದೆ. ಯಾವುದು ಯಾವುದಕ್ಕೆ ಕಾರಣವೋ, ಅದು ಅದಕ್ಕಿಂತ ಪೂರ್ವಭಾವಿಯಾಗಿರುವದು ಕಂಡಿದೆ. ಉದಾಹರಣೆಗೆ-ಬಟ್ಟೆಗೆ ಕಾರಣವಾದ ತಂತುಗಳು, ಬಟ್ಟೆಗಿಂತಲೂ ಪೂರ್ವಭಾವಿಯಾಗಿವೆ.

೨] ಪ್ರತಿ ತರ್ಕದಿಂದ ಅಪ್ರತಿಘಾತವಿದೆ – ಒಂದು ಪಕ್ಷ ಘಟಕ್ಕೆ ಘಟವೇ ಕಾರಣವಾಗದೇ ಹೋದಲ್ಲಿ, ಹೀಗೆ ಆಗಬಹುದೆಂಬ ಪ್ರತಿತರ್ಕವಿಲ್ಲ.

೩] ಆಪಾದ್ಯ ಅನಿಷ್ಟವೂ ಇದೆ–ತನಗಿಂತಲೂ ತಾನು ಪೂರ್ವದಲ್ಲಿರುವದು ಅಪ್ರಾಮಾಣಿಕವು. (ಕಾರಣ ಆಪಾದ್ಯನಿಷ್ಟವು)

೪] ವಿಪರ್ಯಯದಲ್ಲಿ ಪರ್ಯಾವಸನವಿದೆ- ಘಟದ ಪೂರ್ವಭಾವಿತ್ವವನ್ನು ಅಂಗೀಕರಿಸಲು ಶಕ್ಯವಿಲ್ಲ. ಕಾರಣ ಘಟವು ತನಗೆ ತಾನು ಉತ್ಪಾದಕವಾಗಲಾರದು.

೫] ಪರನಿಗೆ ಅನುನಕೂಲವಾಗಿದೆ– 'ಒಂದು ವೇಳೆ ಈ ಘಟವು ಇದೇ ಘಟಕ್ಕೆ ಉತ್ಪಾದಕವಾದರೆ, ತನಗಿಂತಲೂ ಪೂರ್ವದಲ್ಲಿರಬೇಕಾದಿತೆಂದು' ತರ್ಕ ಮಾಡುವವನನ್ನು ಕುರಿತು, ವಾದಿಯು ತನ್ನ ಇಷ್ಟಸಿದ್ಧಿಗನುಕೂಲವಾಗುವಂತೆ, ಇದೇ ತರ್ಕವನ್ನು ಪ್ರಯೋಗ ಮಾಡಲು ಬರುವದಿಲ್ಲ. ಕಾರಣ ಈ ತರ್ಕವು ಪರನಿಗೆ ಅನನುಕೂಲವಾಗಿದೆಯೆಂದು ತಿಳಿಯಬೇಕು ತರ್ಕದ ಅಂಗವೆಂದರೆ, ಸತ್ ತರ್ಕಕ್ಕೆ ಪ್ರಯೋಜಕ ಸಾಮುಗ್ರಿಗಳು.

एवं ज्ञप्तावपि, तद्ज्ञानस्य तद्ज्ञानं प्रति पूर्वभावित्वमापाद्यमिति ज्ञप्तावात्माश्रयो ज्ञेयः ।

उत्पत्तिज्ञप्त्यात्माश्रययोः, अयं विशेषो वर्तते - प्रमेयस्योत्पत्तौ आत्माश्रयो हि प्रमेयस्यैव दोषो नान्यस्य, प्रमेयविलापहेतुत्वात् यस्य हि मते घटस्य घट एव कारणं न तस्य घटोत्पत्तिः सिद्ध्यति ।

ज्ञप्तावात्माश्रयस्तु--ज्ञानस्येव ज्ञेयस्यापि दोषः, उभयविलापहेतुत्वात्, तथा हि - यस्य मते तस्य ज्ञानस्य तदेव कारणं न तस्य ज्ञानमिति सिध्यति, ततश्च ज्ञेयविलोपश्चाप्नोति ज्ञानाविषये ज्ञेयसद्भावे मानाभावादिति ।

२ ) अन्योन्याश्रयापादकतर्कस्तु - द्वयोरितरेतरकारणत्वांगीकारे अन्योन्यापेक्षया पूर्वभावित्वरूपमन्योन्याश्रत्वमापाद्य, आपादनप्रकारस्तु -

---

ಇದೇ ಪ್ರಕಾರ ಜ್ಞಾನದಲ್ಲಿ [ಜ್ಞಪ್ತಿ] ಒಂದು ಜ್ಞಾನಕ್ಕೆ ಅದೇ ಜ್ಞಾನವು ಕಾರಣವೆಂದು ಹೇಳಿದರೆ, ತನಗಿಂತ ತಾನು ಮೊದಲಿರಬೇಕೆಂಬ, ಆತ್ಮಾಶ್ರಯವು ಜ್ಞಾನದಲ್ಲಿ ಬರುತ್ತದೆ. ಉತ್ಪತ್ತಿ ಹಾಗೂ [ಜ್ಞಪ್ತಿ] ಜ್ಞಾನ, ಈ ಎರಡೂ ಆತ್ಮಾಶ್ರಯ ತರ್ಕಗಳಲ್ಲಿರುವ ವಿಶೇಷ ಹೀಗಿದೆ- ಅ] ಒಂದು ವಸ್ತುವಿನ ಉತ್ಪತ್ತಿಯಲ್ಲಿಯ ಆತ್ಮಾಶ್ರಯವು ವಸ್ತುವೇ ಹುಟ್ಟದಂತೆ ಮಾಡುವದರಿಂದ, ವಸ್ತು ದೋಷವೇ ಆಗುವದಲ್ಲದೇ ಬೇರೆಯ ದೋಷವಲ್ಲ. ಯಾರ ಮತದಲ್ಲಿ ಘಟಕ್ಕೆ ಘಟವೇ ಕಾರಣವೋ, ಅವರ ಮತದಲ್ಲಿ ಘಟದ ಉತ್ಪತ್ತಿಯಾಗುವದೇ ಶಕ್ಯವಿಲ್ಲ.

ಆ] ಜ್ಞಾನದಲ್ಲಿಯ ಆತ್ಮಾಶ್ರಯವು, ಜ್ಞಾನದೋಷವಾದಂತೆ, ಜ್ಞೇಯವಾದ ವಸ್ತುದೋಷವೂ ಆಗುತ್ತದೆ. ಇಲ್ಲಿ ಜ್ಞಾನ ಹಾಗೂ ಜ್ಞೇಯ ವಸ್ತುಗಳೆರಡೂ ಹುಟ್ಟುವದಿಲ್ಲ. ಹೇಗೆಂದರೆ-ಯಾರ ಮತದಲ್ಲಿ ತನ್ನ ಜ್ಞಾನಕ್ಕೆ ತನ್ನ ಜ್ಞಾನವೇ ಕಾರಣವೋ, ಆ ಮತದಲ್ಲಿ ಜ್ಞಾನವೇ ಸಿದ್ಧಿಸುವದಿಲ್ಲ. ಜ್ಞಾನವೇ ಸಿದ್ಧಿಸಿದ ಮೇಲೆ ಜ್ಞೇಯವೆಲ್ಲಿಂದ ಸಿದ್ಧಿಸಬೇಕು. [ಜ್ಞಾನ ವಿಷಯವೇ ಜ್ಞೇಯವು. ಜ್ಞಾನ ವಿಷಯವಾಗದೇ ಜ್ಞೇಯವಿದೆಯೆಂಬಲ್ಲಿ ಪ್ರಮಾಣವಿಲ್ಲ]

೨) ಅನ್ಯೋನ್ಯಾಶ್ರಯ ಆಪಾದನೆ ತರ್ಕವು- ಎರಡು ಪದಾರ್ಥಗಳಿಗೆ ಪರಸ್ಪರ ಕಾರಣತ್ವವನ್ನು ಹೇಳುವಲ್ಲಿ, ಅನ್ಯೋನ್ಯವಾಗಿ ಒಂದಕ್ಕಿಂತ ಇನ್ನೊಂದು

यदि द्वयोरितरेतकारणत्वं स्यात् तर्हि अन्योन्यापेक्षया पूर्वभावित्वरूपमन्योन्याश्रयत्वं स्यात् ।

३ ) बहूनां चक्रकवत् कार्यकारणभावाभ्युपगमे पूर्वभावित्वरूपं चक्रकाश्रयत्वमापाद्यम् ।

४ ) अनवस्था – अपर्यवसिताप्रामाणिकव्यक्तिपरंपरांगीकारे अनवस्थाऽऽपाद्या । अनवस्था नाम मूलक्षयापरनामिका, प्रमितकार्यविलोपरूपा वा ।

५ ) केवलानिष्टापादनमपि त्रेधा - १ दृष्ट - २ अनुमित - ३ श्रुतहानभेदात्. तथा - ४ अदृष्ट ५ अननुमित - ६ अश्रुतकल्पनाभेदाच्च, एतदेवाप्रामाणिककल्प्यानेकत्वे कल्पनागौरवमुच्यते ।

---

ಪೂರ್ವಭಾವಿಯಾಗಿರುವದೆಂಬ ತರ್ಕ ಮಾಡಬೇಕು. ಆಪಾದನ ಪ್ರಕಾರವು ಹೀಗೆ-ಒಂದು ವೇಳೆಎರಡು ಪದಾರ್ಥಗಳು ಪರಸ್ಪರ ಒಂದಕ್ಕೊಂದು ಕಾರಣವೆಂದು ಹೇಳಿದಲ್ಲಿ,ಒಂದಕ್ಕಿಂತ ಇನ್ನೊಂದು ಅನ್ಯೋನ್ಯವಾಗಿ ಪೂರ್ವದಲ್ಲಿ ಇರಲಿ, ಎಂದು ಅನ್ಯೋನ್ಯಾಶ್ರಯ ದೋಷ ಹೇಳುವದು. [ಉದಾಹರಣೆಗೆ- ಮದುವೆ ಆಗದೇ ಹುಚ್ಚು ಹೋಗದು, ಹುಚ್ಚು ಹೋಗದೇ ಮದುವೆಯಾಗದು]

೩] ಚಕ್ರಕಾಶ್ರಯ ಆಪಾದನ ತರ್ಕವು- ಅನೇಕ ಪದಾರ್ಥಗಳಿಗೆ ಒಂದಕ್ಕೊಂದರಂತೆ ಕಾರ್ಯಕಾರಣ ಹೇಳುತ್ತ, ಒಂದು ಕಾರಣಕ್ಕೆ ಇನ್ನೊಂದು ಕಾರಣವೆಂದು ಹೇಳುತ್ತ ಚಕ್ರದಂತೆ ಮತ್ತೇ ಮೊದಲಿನ ಕಾರಣಕ್ಕೆ ಬಂದರೆ, ಚಕ್ರಕಾಶ್ರಯವೆಂಬ ದೋಷವನ್ನು ಆಪಾದನೆ ಮಾಡಬೇಕು.

೪] ಅನವಸ್ಥಾ- ಪರ್ಯವಸಾನ ಹೊಂದದ ಅಪ್ರಾಮಾಣಿಕ ಅನೇಕ ವ್ಯಕ್ತಿ ಪರಂಪರೆಯ ಕಲ್ಪನೆಯನ್ನು ಅಂಗೀಕರಿಸಿದರೆ, ಅನವಸ್ಥಾ ಎಂಬ ದೋಷವನ್ನು ಆಪಾದನೆ ಮಾಡಬೇಕು ಅನವಸ್ಥಾ ಎಂದರೆ, ಮೂಲ ಕ್ಷಯ ಮಾಡತಕ್ಕದ್ದು, ಅಥವಾ ಪ್ರಮಾಣದಿಂದ ಸಿದ್ಧವಾದ ಕಾರ್ಯಹಾನಿ ಮಾಡತಕ್ಕದೆಂದು ಅರ್ಥವು.

೫] ಕೇವಲ ಅನಿಷ್ಟ ಆಪಾದನೆ ತರ್ಕವು- ಈ ತರ್ಕವು i) ದೃಷ್ಟಹಾನ [ನಿರಾಕರಣೆ] ii) ಶ್ರುತಹಾನ ಹಾಗೂ iii) ಅನುಮಿತಿ ಹಾನ ಎಂಬ ಭೇದದಿಂದ ಮೂರು ಪ್ರಕಾರವಿದೆ ಅದರಂತೆ iv) ಅದೃಷ್ಟ ಕಲ್ಪನೆ v) ಅನನುಮಿತಿ ಕಲ್ಪನೆ ಹಾಗೂ vi] ಅಶ್ರುತ ಕಲ್ಪನೆ ಎಂಬ ಭೇದದಿಂದಲೂ ಮತ್ತೇ ಮೂರು ಪ್ರಕಾರವಿದೆ. ಅಶ್ರುತ ಕಲ್ಪನೆಯು ಅನೇಕ ಅಪ್ರಾಮಾಣಿಕ ವಸ್ತು ಕಲ್ಪನೆಯಿಂದ ಕೂಡಿದ್ದು,

१. दृष्टहानं यथा-यदि पर्वतः निरग्निकः स्यात् तर्हि निर्धूमः स्यात् ।

२. अनुमितहानं यथा-यदि देवदत्तः रूपदृष्टा न स्यात् तर्हि चक्षुष्मान् न स्यात्-

३. श्रुतहानं यथा–यदीश्वरः न सर्वज्ञः तर्हि न जगत्कर्ता स्यात् ।

४. अदृष्टकल्पनं यथा–यदि पीतमुदकं परमंतर्दहेत् तर्हि मामपि दहेत् ।

५. अनुमितकल्पनं यथा—यदि वन्हिः जलाभिन्नः स्यात् तर्हि शीतलः स्यात् ।

६. अश्रुतकल्पनं यथा--यदीश्वरः जीवाभिन्नः स्यात् तर्हि दुःखी स्यात् । कल्पनागौरवं तु-तत्त्वमसीत्यत्र जीवब्रह्मैक्ये पदद्वयलक्षणा, श्रुतिप्रत्यक्षयोरतत्त्वावेदकत्वकल्पना, इत्यादि ।

**॥ इति तर्कांगापाद्यानिष्टे आत्माश्रयत्वादिकं, निरूपितम् तथा केवलानिष्टं च**

---

'ಕಲ್ಪನಾ ಗೌರವ' ವೆಂದೂ ಹೇಳಲ್ಪಡುತ್ತದೆ. ಇವುಗಳಿಗೆ ಉದಾಹರಣೆಗಳು-

i] ದೃಷ್ಟಹಾನ- ಪರ್ವತವು ಅಗ್ನಿ ಅಭಾವವುಳ್ಳದ್ದಾದರೆ, ಧೂಮದ ಅಭಾವವುಳ್ಳದ್ದೂ ಆಗಲಿ. [ದೃಷ್ಟವಾದ ಧೂಮವನ್ನು ನಿರಾಕರಿಸುವ ಪ್ರಸಂಗವೇ ದೋಷವು]

ii] ಅನುಮಿತಿಹಾನ- ದೇವದತ್ತನು ರೂಪದರ್ಶನವುಳ್ಳವನಾಗದೇ ಹೋದಲ್ಲಿ, ಚಕ್ಷುರಿಂದ್ರಿಯವುಳ್ಳವನಾಗದೇ ಹೋಗಲಿ.

iii] ಶ್ರುತಹಾನ- ಈಶ್ವರನು ಸರ್ವಜ್ಞನಾಗದೇ ಹೋದರೆ, ಜಗತ್ಕರ್ತ್ರನು ಆಗದೇ ಹೋಗಲಿ [ಸರ್ವಜ್ಞನೇ ಜಗತ್ಕರ್ತನೆಂದು ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ.

iv] ಅದೃಷ್ಟ ಕಲ್ಪನೆ- ಕುಡಿದ ನೀರು ದೇಹದ ಒಳಗೆ ದಹನ ಮಾಡುವದೆಂದಲ್ಲಿ ಅದು ನನ್ನನ್ನೂ ದಹಿಸಲಿ.

v] ಅನನುಮಿತ ಕಲ್ಪನೆ- ಬೆಂಕಿಯು ನೀರಿನಿಂದ ಅಭಿನ್ನವಾದಲ್ಲಿ, ಅದು ಶೀತವೂ ಆಗಲಿ.

vi] ಅಶ್ರುತ ಕಲ್ಪನೆ- ಈಶ್ವರನು ಜೀವನಿಂದ ಅಭಿನ್ನನಾದಲ್ಲಿ, ದುಃಖಿಯೂ ಆಗಲಿ ಇದು ಕಲ್ಪನಾ ಗೌರವವು ಹೇಗೆಂದರೆ, 'ತತ್ವಮಸಿ' ಎಂಬ ವಾಕ್ಯಕ್ಕೆ, ಜೀವಬ್ರಹ್ಮ ಐಕ್ಯವನ್ನು ಹೇಳಿದಲ್ಲಿ, 'ತತ್' ಹಾಗೂ 'ತ್ವಂ' ಪದಗಳಿಗೆ ಲಕ್ಷಣಾರ್ಥವನ್ನು ಹಾಗೂ

४ ) ननु तर्कस्यानुमानत्वे आपादकं निरग्निकत्वं लिंगं, आपाद्यं निर्धूमत्वं साध्यं, न चैवं युक्तं, लिंगस्य निर्वन्हित्वस्यासिद्धत्वात्, लिंगिनः निर्धूमत्वस्य प्रत्यक्षबाधात्, धूमस्यांगीकृतत्वेन तदभावसाधनेऽपसिद्धांतापत्तेश्च, कथं तर्कस्यानुमानत्वमिति चेदत्र समाधानं, तर्को अनुमानं भवितुमर्हति, व्याप्तिबलेन परोक्षज्ञानजनकत्वादिति ।

ननु आपादकस्य लिंगस्यासिद्धत्वादापाद्यस्य निर्धूमत्वस्य बाधापसिद्धांतदोषग्रस्तत्वाच्च कथं प्रामाण्यं तर्कस्येति शंका-स्यात्, तन्नोपपद्यते-साधनरूपलिंगस्यैव निर्वन्हित्वस्यासिद्धिर्दोषाय, न त्वापादकरूपस्य स्वमतेऽसिद्धेर्भूषणत्वमेव,

---

ಶೃತಿ ಪ್ರತ್ಯಕ್ಷಕ್ಕೆ ಅತತ್ವಾವೇದಕತ್ವ [ಅಪ್ರಾಮಾಣಿಕತೆ] ವನ್ನು ಕಲ್ಪನಾ ಮಾಡಬೇಕಾಗುವದು. ಇದೇ ಕಲ್ಪನಾ ಗೌರವವು.

೪) **ತರ್ಕದಲ್ಲಿ ಬಾಧ ಹಾಗೂ ಅಪಸಿದ್ಧಾಂತಗಳು ದೋಷಗಳಿಲ್ಲವೆಂಬುದರ ಸಮರ್ಥನೆ–**

ಶಂಕಾ– ತರ್ಕವು ಅನುಮಾನರೂಪವಾದಲ್ಲಿ, ಆಪಾದಕವಾದ ಅಗ್ನಿ ಅಭಾವವೇ ಹೇತುವಾಗಿ, ಆಪಾದ್ಯವಾದ ಧೂಮಾಭಾವವು ಸಾಧ್ಯವಾಗುವದು. ಆದರೆ ಇದು ಯೋಗ್ಯವಾಗಲಾರದು. ಪರ್ವತದಲ್ಲಿ ಅಗ್ನಿ ಇರುವದರಿಂದ, ಅದರ ಅಭಾವವು ಅಂದರೆ ಹೇತುವು, ಅಸಿದ್ಧವು. [ಪಕ್ಷದಲ್ಲಿ ಹೇತು ಬರದಿದ್ದರೆ ಅಸಿದ್ಧಿಯು] ಆಪಾದ್ಯವಾದ 'ಧೂಮಾಭಾವವು' ಪ್ರತ್ಯಕ್ಷದಿಂದ ಬಾಧಿತವು. ಧೂಮವು ಅಂಗೀಕೃತವಾಗಿದ್ದರಿಂದ, ಅದರ ಅಭಾವವನ್ನು ಆಪಾದಿಸಿದಲ್ಲಿ ಅಪಸಿದ್ಧಾಂತವೂ ಬರುತ್ತದೆ ಹೀಗೆ ಬಾಧ, ಅಸಿದ್ಧಿ, ಅಪಸಿದ್ಧಾಂತ ದೋಷಗಳಿರವದರಿಂದ ತರ್ಕವು ಅನುಮಾನ ಹೇಗಾಗುವದು ? ಈ ಶಂಕಾಕ್ಕೆ ಸಮಾಧಾನವು ಹೀಗಿದೆ. ತರ್ಕವು ವ್ಯಾಪ್ತಿ ಬಲದಿಂದ ಕಣ್ಣಿಗೆ ಕಾಣದಿದ್ದ ಪರೋಕ್ಷ ವಸ್ತು ವಿಷಯದಲ್ಲಿ ಅನುಮಿತಿ ಹುಟ್ಟಿಸುವದರಿಂದ ಅನುಮಾನವಾಗಲು ಯೋಗ್ಯವೇ ಆಗಿದ್ದು, ಅದಕ್ಕೆ ಅನುಮಾನತ್ವವು ಕೂಡುತ್ತದೆ,

ಶಂಕಾ– ಆಪಾದಕವಾದ 'ಅಗ್ನಿ ಅಭಾವ' ಲಿಂಗವು ಅಸಿದ್ಧವಾಗಿದೆ. ಆಪಾದ್ಯವಾದ ಧೂಮಾಭಾವವು ಬಾಧ ಹಾಗೂ ಅಪಸಿದ್ಧಾಂತ ದೋಷಗಳಿಂದ ಕೂಡಿದೆ. ಎಂದಮೇಲೆ ತರ್ಕವು ಪ್ರಮಾಣ ಹೇಗಾಗಬೇಕು ? ಎಂದು ಶಂಕಾ ಮಾಡಿದರೆ, ಅದಕ್ಕೆ ಸಮಾಧಾನ ಹೀಗಿದೆ– ಅಗ್ನಿ ಅಭಾವವೆಂಬ ಲಿಂಗವು [ಹೇತು] ಸಾಧನಾನುಮಾನದಲ್ಲಿ ಮಾತ್ರ

पराभ्युपगतेनैव "वन्हिमर्मास्तु धूमोऽस्तु" इत्यंगीकारेणैव प्रवृत्तात् तर्कस्य, अस्माभिः निर्धूमो भवतीत्यसाधनादापादनरूपदूषणानुमाने च बाधादेरनिष्टोपपादकत्वेन भूषणतैव भवति ।

अयं भावः--साध्यरूपस्यैव लिंगिनः बाधो दोषो, न त्वापाद्यरूपस्य, आपाद्यत्वव्याघातात्, यदापाद्यं तत्प्रमाणबाधितमेव अनिष्टं हि आपाद्यं, प्रमाणबाध एवानिष्टं, तथा च कथं बाधो दोषो भवेत्, न चात्र निर्धूमत्वं साध्यं, तथात्वे यदि तर्हीति न स्यात् किं तु निर्धूमोऽयमिति स्यात्, अत एव नापसिद्धांतदोषोऽपि स हि सिद्धांतविरुद्धसाधनेन स्यात्, नत्वापादनेन तस्मात् साधनानुमान एव बाधापसिद्धांतयोर्दूषणत्वं न त्वापादनरूपतर्के, प्रत्युत भूषणत्वमेव स्यादिति ।

---

ಅಸಿದ್ಧಿ ದೋಷವುಳ್ಳದ್ದಾಗುತ್ತಿತ್ತು. ಆದರೆ ಇಲ್ಲಿ ಲಿಂಗವು ಆಪಾದಕರೂಪವಾಗಿದ್ದರಿಂದ ದೋಷವಿಲ್ಲ, ತರ್ಕದಲ್ಲಿ ನಮ್ಮ ಮತದಂತೆ, ಈ ಅಸಿದ್ಧಿ ದೋಷವು ಭೂಷಣವೇ ಆಗುತ್ತದೆ ಏಕೆಂದರೆ, ಪರನು 'ಧೂಮ ಇರಲಿ ಅಗ್ನಿ ಬೇಡ' ಎಂದು 'ಅಗ್ನಿ ಅಭಾವ'ವನ್ನು ಅಂಗೀಕಾರ ಮಾಡಿದ್ದರಿಂದಲೇ [ಅಪ್ರಯೋಜಕ ಶಂಕಾ ಮಾಡಿದ್ದರಿಂದ] ಅಗ್ನಿಯಿಲ್ಲದಿದ್ದರೆ ಧೂಮವು ಇಲ್ಲದೇ ಹೋಗಲಿ' ಎಂಬ ತರ್ಕವು ಪ್ರವೃತ್ತವಾಗುತ್ತದೆ. ನಮ್ಮಿಂದ ಮಾತ್ರ 'ನಿರ್ಧೂಮವು ಇರಲಿ' ಎಂದು ಸಾಧನ ಮಾಡಿಲ್ಲ. ಆಪಾದನರೂಪವಾದ ದೂಷಣಾನುಮಾನದಲ್ಲಿ, ಬಾಧ ಮೊದಲಾದ ದೋಷಗಳು 'ಆಪಾದ್ಯ ಅನಿಷ್ಟತಾ'ವನ್ನು ತಂದುಕೊಟ್ಟ ಭೂಷಗಳೇ ಆಗುತ್ತವೆ.

ಇಲ್ಲಿ ಹೀಗೆ ಅಭಿಪ್ರಾಯವಿದೆ- ಸಾಧ್ಯರೂಪವಾದ ಲಿಂಗಕ್ಕೆ ಬಾಧವು ದೋಷವು. ಹೊರತು ಆಪಾದ್ಯ ರೂಪದಲ್ಲಿ ಅಲ್ಲ, ಅಲ್ಲಿ ಆಪಾದ್ಯಕ್ಕೆ ವ್ಯಾಘಾತ ಬರುವದರಿಂದ ಬಾಧವು ದೋಷವಾಗುವದಿಲ್ಲ. ಹೇಗೆಂದರೆ, ಯಾವುದು ಆಪಾದ್ಯವೋ ಅದು ಪ್ರಮಾಣ ಬಾಧಿತವಾಗಿಯೇ ಇರುವದು. ಪ್ರಮಾಣಬಾಧಿತವಲ್ಲವೆಂದರೆ, ವ್ಯಾಹತಿಯು ಬರುತ್ತದೆ. ಆಪಾದ್ಯವಾದುದು ಅನಿಷ್ಟವೇ ಆಗಿರುತ್ತದೆ ಅನಿಷ್ಟವಾದುದು ಪ್ರಮಾಣಬಾಧಿತವೇ ಆಗಿರುತ್ತದೆ. ಹೀಗಾಗಿ ಬಾಧ ಮೊದಲಾದವು ದೋಷ ಹೇಗಾಗುವವು ? ಮೇಲಿನ ತರ್ಕದಲ್ಲಿ 'ನಿರ್ಧೂಮತ್ವ'ವು ಸಾಧ್ಯವಲ್ಲ. ಸಾಧ್ಯವಾಗಿದ್ದರೆ, 'ಯದಿ' 'ತರ್ಹಿ' ಎಂಬ ಪದಗಳು ಬೇಕಿರಲಿಲ್ಲ. ಆದರೆ, 'ಪರ್ವತವು (ಪಕ್ಷವು) ನಿರ್ಧೂಮವಾಗಬೇಕಾದೀತು' ಎಂದು ಆಪಾದನರೂಪವಾಗಿದೆ. ಆದ್ದರಿಂದ ಅಪಸಿದ್ಧಾಂತ ದೋಷವೂ ಬರುವದಿಲ್ಲ.

॥ इति तर्के बाधापसिद्धांतादेर्दूषणत्वाभावसमर्थनम् ॥

५ ) ननु तर्के निरग्निकत्वनिर्धूमत्वरूप - आपादकापाद्यगोचरज्ञानयोः, यथाक्रमं करणत्वेन फलत्वेनाभिप्रेतयोर्द्वयोरपि भ्रमत्वात् कथं तर्कस्य प्रमितिसाधनत्वरूपप्रामाण्यं इत्यतो मैवंफलकरणभावः किंतु अन्यथैवेतिभावेन दृष्टांतपूर्वमुच्यते--

यथा साधनानुमाने न व्याप्तिमात्रं, नापि समुचितदेशवृत्तित्वमात्रं, साध्यप्रमितिसाधनं, किं तु मिलितमेव, एवमापाद्यनिष्टं, विपर्यये पर्यवसानं चोभयं मिलितमेवानुमितिसाधनं भवतीति, तर्कस्य ( प्रमितिसाधनत्वात् ) प्रामाण्यमुपपद्यते ।

---

ಸಿದ್ಧಾಂತಕ್ಕೆ ವಿರುದ್ಧವಾಗಿ ಸಾಧನ ಮಾಡಿದಾಗ ಮಾತ್ರ ಅಪಸಿದ್ಧಾಂತದೋಷ ಬರಬಹುದಾಗಿತ್ತು ಆಪಾದನೆ ರೂಪದಲ್ಲಿ ಅದಕ್ಕೆ ಅವಕಾಶವಿಲ್ಲ. ಆದ್ದರಿಂದ ಸಾಧನಾನುಮಾನದಲ್ಲಿಯೇ ಅಸಿದ್ಧಿ ಬಾಧ, ಅಪಸಿದ್ಧಾಂತಗಳು ದೋಷಗಳೇ ಹೊರತು ಆಪಾದನರೂಪವಾದ ತರ್ಕದಲ್ಲಿ ಅವು ದೋಷಗಳಲ್ಲ, ಇಷ್ಟೇ ಅಲ್ಲ ಭೂಷಣಗಳೇ ಆಗುತ್ತವೆ.

೫) ತರ್ಕಕ್ಕೆ ಪ್ರಮಿತಿ ಕಾರಣತ್ವರೂಪ ಪ್ರಾಮಾಣ್ಯ ಸಮರ್ಥನೆಯು-

ಶಂಕಾ- ತರ್ಕದಲ್ಲಿ ಅಗ್ನಿ ಅಭಾವರೂಪ ಆಪಾದಕವು ಹಾಗೂ ಧೂಮಾಭಾವ ರೂಪ ಆಪಾದ್ಯ ವಿಷಯಕ ಜ್ಞಾನಗಳು, ಅನುಕ್ರಮವಾಗಿ ಕರಣ ಹಾಗೂ ಫಲರೂಪವಾಗಿರುವದರಿಂದ, ಇಲ್ಲಿ ಅವೆರಡೂ ಜ್ಞಾನಗಳು ಭ್ರಮಾತ್ಮಕವಾಗಿದ್ದು, ತರ್ಕವು ಪ್ರಮಿತಿಗೆ ಸಾಧನವಾಗಿ ಪ್ರಮಾಣ ಹೇಗಾಗುತ್ತದೆ ? [ವಹ್ನಿ ಧೂಮಗಳು ಪರ್ವತದಲ್ಲಿದ್ದಾಗಲೂ ಅವುಗಳ ಅಭಾವ ಜ್ಞಾನ ಬಂದಲ್ಲಿ ಅದು ಭ್ರಮವೇ ಹೊರತು ಯಥಾರ್ಥಜ್ಞಾನವಾಗಲಾರದೆಂಬ ಅಭಿಪ್ರಾಯವು] ಹೀಗೆ ಶಂಕೆ ಮಾಡಕೂಡದು ಏಕೆಂದರೆ ಈ ತರ್ಕದಲ್ಲಿ ನೀವು ಹೇಳಿದ ಪ್ರಕಾರ ಫಲಕರಣಭಾವವಿರದೇ, ಬೇರೆ ರೀತಿಯಿಂದ ಇರುತ್ತದೆಂಬ ಭಾವದಿಂದ ದೃಷ್ಟಾಂತ ಪೂರ್ವಕವಾಗಿ ನಿರೂಪಿಸಲ್ಪಡಲಾಗುತ್ತದೆ. ಹೇಗೆ ಸಾಧನಾನುಮಾನವು ವ್ಯಾಪ್ತಿ ಮಾತ್ರದಿಂದಾಗಲೀ, ಸಮುಚಿತ ದೇಶ ವೃತ್ತಿತ್ವ ಮಾತ್ರದಿಂದಾಗಲೀ, ಸಾಧ್ಯ ಪ್ರಮಿತಿಗೆ ಸಾಧನವಾಗಲಾರದೋ, ಆದರೆ ವ್ಯಾಪ್ತಿ ಹಾಗೂ ಸಮುಚಿತ ದೇಶ ವೃತ್ತಿತ್ವವೆರಡೂ ಕೂಡಿಯೇ ಹೇಗೆ ಅನುಮಿತಿಗೆ ಕಾರಣವೋ, ಹಾಗೆಯೇ ತರ್ಕದಲ್ಲಿ ಆಪಾದ್ಯ ಅನಿಷ್ಟತೆಯೂ ಹಾಗೂ ವಿಪರ್ಯಯ ಪರ್ಯವಸಾನವೂ ಕೂಡಿಯೇ ಅನುಮಿತಿಗೆ ಸಾಧನವಾಗುತ್ತದೆ. ಆದ್ದರಿಂದ ತರ್ಕಕ್ಕೂ ಪ್ರಮಿತಿ ಸಾಧನತ್ವ ರೂಪ ಪ್ರಾಮಾಣ್ಯವು ಕೂಡುತ್ತದೆ.

अयं भावः--यदि वन्हिर्न स्यात् तर्हि धूमोऽपि न स्यादिति तर्के "निर्धूमः स्यात्" इति अनिष्टापादनं, विपर्यये पर्यवसानं, उभयं मिलितमेव वन्ह्यनुमितिं जनयति। अत्र निर्धूमत्वाभावज्ञानं करणं, निरग्निकत्वाभावज्ञानं फलं ज्ञानद्वयमपि प्रमास्वरूपमेवेति तर्कस्य प्रमितिकरणत्वरूपप्रामाण्यं युक्तं भवतीति ज्ञेयम्।

॥ इति तर्कस्य प्रमितिकरणत्वरूपप्रामाण्यसमर्थनम् ॥

ननु तर्कस्य प्रामाण्ये प्रामाणांतरानुग्राहकत्वप्रसिद्धिविरोध इति चेन्न, सोऽयं तर्कः क्वचिद्विपरीतशंकानिरसनद्वारेण प्रामाणाना मनुग्राहकोऽपि भवति, तथा हि--

तर्को द्विविधः--१ ) प्रकृतसाध्यस्य प्रकृतपक्षे साधकहेत्वाद्युपस्थितेः पूर्वं प्रवृत्तः २ ) ततः पाश्चात्यश्च ।

---

ಇಲ್ಲಿ ಹೀಗೆ ಅಭಿಪ್ರಾಯ:ವಿದೆ- ‹ ಒಂದು ಪಕ್ಷ [ಪೂರ್ವದಲ್ಲಿ] ವಹ್ನಿಯ ಅಭಾವವಿದ್ದಲ್ಲಿ, ಅಲ್ಲಿ ಧೂಮಾಭಾವವೂ ಇರಲಿ ' ಎಂಬ ತರ್ಕದಲ್ಲಿ ‹ ಧೂಮಾಭಾವವಿರಲಿ ' ಎಂಬುದು ಅನಿಷ್ಟಾಪಾದನೆಯು. ಧೂಮ ಪ್ರತ್ಯಕ್ಷ ಸಿದ್ಧವಾದ್ದರಿಂದ ಧೂಮಾಭಾವವಿರಲು ಶಕ್ಯವಿಲ್ಲವಾದ್ದರಿಂದ ಅಗ್ನಿಯ ಅಭಾವವೂ ಇಲ್ಲವೆಂಬುದು ವಿಪರ್ಯಯ ಪರ್ಯವಸಾನವು. ಇವೆರಡೂ ಕಲೆತು ‹ವಹ್ನಿ' ಇದೆ ಎಂಬ, ಅನುಮಿತಿಯನ್ನು ಹುಟ್ಟಿಸುತ್ತದೆ. ಇಲ್ಲಿ [ನಿರ್ಧೂಮತ್ವಾಭಾವದ] ‹ಧೂಮಾಭಾವವಿಲ್ಲ' ವೆಂಬ ಜ್ಞಾನವು ಅಂದರೆ, ಧೂಮದ ಜ್ಞಾನವು ಕರಣವೇ ಹೊರತು, ಧೂಮಾಭಾವ ಜ್ಞಾನವು ಕರಣವಲ್ಲ. ಅದರಂತೆ [ನಿರಗ್ನಿಕತ್ವಾಭಾವದ] ‹ಅಗ್ನಿಯ ಅಭಾವವಿಲ್ಲವೆಂಬ' ಜ್ಞಾನವು ಎಂದರೆ ಅಗ್ನಿಯ ಜ್ಞಾನವು ಫಲವೇ ಹೊರತು ‹ವಹ್ನಿಯ ಅಭಾವ ಜ್ಞಾನ' ಫಲವಲ್ಲ. ಈ ಉಭಯ ಜ್ಞಾನಗಳೂ ಪ್ರಮಾ ಸ್ವರೂಪವೇ ಆಗಿದ್ದರಿಂದ ಪೂರ್ವೋಕ್ತ ದೋಷವು ಬಾರದು. ಕಾರಣ ತರ್ಕಕ್ಕೆ ಪ್ರಮಿತಿ ಕಾರಣತ್ವರೂಪ ಪ್ರಾಮಾಣ್ಯವು ಯುಕ್ತವೇ ಆಗಿರುತ್ತದೆ.

೬) ತರ್ಕವು ಅನುಮಾನಕ್ಕೆ ಅನುಗ್ರಾಹಕವೆಂಬುದರ ಸಮರ್ಥನೆಯು-

ಶಂಕಾ- ತರ್ಕವು ಪ್ರಮಾಣವಾದಲ್ಲಿ ಅದು ಪ್ರಮಾಣಾಂತರಗಳಿಗೆ ಅನುಗ್ರಾಹಕವೆಂಬ ಪ್ರಸಿದ್ಧಿಯ ವಿರೋಧವು ಬರುವದು ಎಂದು ಶಂಕಿಸುವದು ಸರಿಯಲ್ಲ. ಈ ತರ್ಕವು ಕೆಲವೆಡೆಗಳಲ್ಲಿ ವಿಪರೀತ ಶಂಕೆಯನ್ನು ಪರಿಹರಿಸಿ ಪ್ರಮಾಣಗಳಿಗೆ ಅನುಗ್ರಹಕವೂ ಆಗುತ್ತದೆ ಅದು ಹೇಗೆಂದರೆ- ತರ್ಕವು ಎರಡು ಪ್ರಕಾರವಾಗಿವೆ.

೧) ಪಕ್ಷದಲ್ಲಿ ಸಾಧ್ಯ ಸಾಧನೆ ಮಾಡತಕ್ಕ ಹೇತು ಮೊದಲಾದವುಗಳಿಗಿಂತ

आद्यस्तु विपर्यये पर्यवसानसहितः साध्यप्रमितिमेव जनयति । द्वितीयस्तुधूमादिरूपहेतूपस्थितौ, तत्र वन्हिव्यभिचारशंकायां धूमरूपहेतौ व्याप्तिनिश्चायकतया, अनुग्राहको भवति, धूमादिकरणे वन्ह्यभावस्याशंकितत्वेन यदि धूमाधिकरणं वन्ह्यभाववत्स्यात् तर्हि धूमाभाववत्स्यादित्यापत्त्या, धूमाधिकरणे वन्हिप्रमित्युत्पत्त्या व्यभिचारशंकाया विधूननात्, पर्वतादौ वन्हिनिश्चययस्तु धूमादिहेतुबलादेव भवति, तथा च तर्को न केवलं स्वतन्त्रं प्रमाण किं तु प्रतिबंधकनिरासकत्वेन अनुग्राहकोऽपि भवति ।

इति तर्कस्यानुमानानुग्राहकत्वसमर्थनम्

इति तर्कप्रकरणम् ।

---

ಮೊದಲೇ ಪ್ರವೃತ್ತವಾದುದು ಒಂದು ಪ್ರಕಾರ. ಆ) ಹೇತು ಮೊದಲಾದವುಗಳು ಬಂದ ಮೇಲೆ ಪ್ರವೃತ್ತವಾದುದು ಇನ್ನೊಂದು ಪ್ರಕಾರ. ಮೊದಲನೆಯ ಪ್ರಕಾರದ ತರ್ಕವು ಅನಿಷ್ಟಾಪಾದನೆ ಹಾಗೂ ವಿಪರ್ಯಯ ಪರ್ಯವಸಾನ ಸಹಿತವಾಗಿ ಸಾಧ್ಯ ಪ್ರಮಿತಿಯನ್ನು ಹುಟ್ಟಿಸುತ್ತದೆ ಎರಡನೆಯ ಪ್ರಕಾರದ ತರ್ಕ 'ಧೂಮ' ಮುಂತಾದ ಹೇತು ಉಪಸ್ಥಿತವಾದ ಮೇಲೆ, ಹೇತುವಿನಲ್ಲಿ ವ್ಯಭಿಚಾರ ಶಂಕಾ ಬಂದರೆ, ವ್ಯಾಪ್ತಿಯನ್ನು ನಿಶ್ಚಯ ಮಾಡುವ ಸಲುವಾಗಿ, [ಧೂಮಕ್ಕೆ ಆಶ್ರಯವಾಗಿರುವ ಅಡುಗೆಯ ಮನೆ] ವಹ್ನಿ ಅಭಾವವುಳ್ಳದ್ದಾದರೆ, ಆಗ್ಯೆ ಧೂಮಾಭಾವವುಳ್ಳದ್ದೂ ಆಗಲಿ, ಎಂದು ಆಪತ್ತಿ ಮಾಡುವದರ ಮೂಲಕ ಧೂಮಾಧಿಕರಣದಲ್ಲಿ [ಅಡುಗೆ ಮನೆಯಲ್ಲಿ] ವಹ್ನಿಯ ಪ್ರಮಿತಿಯನ್ನು ಹುಟ್ಟಿಸಿ, ವ್ಯಭಿಚಾರ ಶಂಕಾವನ್ನು ಪರಿಹರಿಸುತ್ತವೆ ನಂತರ ಪರ್ವತ ಮೊದಲಾದ ಪಕ್ಷದಲ್ಲಿ, ಧೂಮರೂಪ ಹೇತು ಬಲದಿಂದಲೇ 'ವಹ್ನಿ' ನಿಶ್ಚಯವಾಗುತ್ತದೆ. ಹೀಗಾಗಿ ತರ್ಕವು ಕೇವಲ ಸ್ವತಂತ್ರ ಪ್ರಮಾಣವಿಷ್ಟೇ ಅಲ್ಲ, ವ್ಯಭಿಚಾರ ಮೊದಲಾದ ಪ್ರತಿಬಂಧಕಗಳನ್ನು ನಿರಾಕರಿಸಿ, ಪ್ರಮಾಣಗಳಿಗೆ ಅನುಗ್ರಹಕವೂ ಆಗುತ್ತದೆ.

[ವಿವರಣೆ– 'ಪರ್ವತವು ವಹ್ನಿಯುಳ್ಳದ್ದು, ಧೂಮವಿದ್ದುದರಿಂದ' ಈ ಅನುಮಾನಕ್ಕೆ ಧೂಮವಿರಲಿ, ವಹ್ನಿ ಬೇಡವೆಂದು ಅಪ್ರಯೋಜಕ ಶಂಕಾ ಮಾಡಿದರೆ, ಆಗ್ಗೆ ತರ್ಕವು 'ಧೂಮಾಧಿಕರಣವಾದ ಅಡುಗೆ ಮನೆಯೂ ಬೆಂಕಿ ಇಲ್ಲದ್ದಾದಲ್ಲಿ ಅದು ಧೂಮಾಭಾವವುಳ್ಳದ್ದೂ ಆಗಲಿ' ಎಂಬ ಆಪತ್ತಿ ಮೂಲಕ ವ್ಯಭಿಚಾರ ಶಂಕಾ ಪರಿಹರಿಸಿ ಅನುಗ್ರಾಹಕವಾಗುತ್ತದೆ. ನಂತರ ಧೂಮರೂಪ ಹೇತು ಬಲದಿಂದ 'ವಹ್ನಿ'ಯ ಅನುಮಿತಿ ಹುಟ್ಟುತ್ತದೆ. ಹೀಗೆ ತರ್ಕವು ಅನುಗ್ರಾಹಕವೆಂದು ತಿಳಿಯಬೇಕು.

## अथ नैयायिकोक्तानुमानभंगप्रकरणम् ।

१ ) नैयायिकसिद्धं अनुमानभेदं दूषयितुमनूद्यते——

१ ) केवलान्वयि, २ ) केवलव्यतिरेकि, ३ ) अन्वयव्यतिरेकीतिभेदात् त्रिविधमनुमानमिति **नैयायिकाः** ।

केवलान्वय्यादिलक्षणं वक्तुं प्रथमतः पक्षादिलक्षणमुच्यते——

१ ) साध्यधर्मविशिष्टो धर्मी **पक्षः**, धर्मी पक्ष इत्युक्ते, सपक्षादौ (महानसे) धर्मिण्यतिव्याप्तिरतः **साध्यधर्मेति** "यत्प्रतीतिर्लिंगेन जनयितव्या स साध्यधर्मः" एतादृशसाध्यधर्मस्य (वन्हेः) तत्राभावान्नातिव्याप्तिः, साध्यधर्मवत्त्वं च संयोगेन संबंधेन हेतावप्य (धूमेऽ)स्ति,

---

ನೈಯಾಯಿಕರು ಹೇಳುವ ಅನುಮಾನ ಭಂಗ ಪ್ರಕರಣವು-

೧) ನೈಯಾಯಿಕರು ಹೇಳುವ ವ್ಯಾಪ್ತಿ ಹಾಗೂ ಅನುಮಾನಗಳ **ನಿರೂಪಣೆ**

i] ನೈಯಾಯಿಕರಿಂದ ಅಂಗೀಕೃತವಾದ ಅನುಮಾನ ಭೇದಗಳನ್ನು ದೂಷಿಸುವದಕ್ಕಾಗಿ. ಅವುಗಳನ್ನು ಮೊದಲು ಅನುವಾದ ಮಾಡಲಾಗುತ್ತದೆ.

೧] ಕೇವಲಾನ್ವಯೀ ೨] ಕೇವಲ ವ್ಯತಿರೇಕಿ ಹಾಗೂ ೩] ಅನ್ವಯ ವ್ಯತಿರೇಕಿ ಎಂಬ ಭೇದದಿಂದ ಮೂರು ಪ್ರಕಾರ ಅನುಮಾನಗಳೆಂದು ನೈಯಾಯಿಕರು ಹೇಳುತ್ತಾರೆ. ನೈಯಾಯಿಕರು ಹೇಳುವ ಅನುಮಾನ ಪ್ರಭೇದ ದೂಷಣೆಗೆ ಮೊದಲು ನಮ್ಮ ರೀತಿಯಿಂದ 'ಪಕ್ಷ' ಮೊದಲಾದವುಗಳ ಲಕ್ಷಣ ಹೇಳಲಾಗುತ್ತದೆ.

ಪಕ್ಷದ ಲಕ್ಷಣವು- 'ಸಾಧ್ಯ ಧರ್ಮದಿಂದ ಕೂಡಿದ ಧರ್ಮಿಯು ಪಕ್ಷವು'

ದಲಕೃತ್ಯವು- 'ಧರ್ಮಿ ಪಕ್ಷ'ವೆಂದರೆ ಸಪಕ್ಷರೂಪ ಮಹಾನಸ [ಅಡುಗೆ ಮನೆ]ವೂ ಧರ್ಮಿಯಾಗಿದ್ದು, ಅದರಲ್ಲಿ ಅತಿವ್ಯಾಪ್ತಿ ಬರುವದು. ಅದನ್ನು ಪರಿಹರಿಸಲು 'ಸಾಧ್ಯಧರ್ಮವುಳ್ಳ'ವೆಂಬ' ದಲವನ್ನು ಸೇರಿಸಬೇಕು. ಸಾಧ್ಯ ಧರ್ಮವೆಂದರೆ ಯಾವುದರ ಜ್ಞಾನವು ಹೇತುವಿನಿಂದ ಹುಟ್ಟುತ್ತದೆಯೋ ಅದು ಸಾಧ್ಯ ಧರ್ಮವು. ಈಗ್ಗೆ ಹೇತುವಿನಿಂದ ಹುಟ್ಟುವ ಸಾಧ್ಯರೂಪ ವಹ್ನಿ ಜ್ಞಾನವು ಮಹಾನಸದಲ್ಲಿ [ಸಪಕ್ಷದಲ್ಲಿ] ಆಗುವದಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. [ವಿವರಣೆ-ಮಹಾನಸದಲ್ಲಿಯ ವಹ್ನಿ ಜ್ಞಾನವು ಪ್ರತ್ಯಕ್ಷ ಬಲದಿಂದಲೇ ಹೊರತು ಹೇತುವಿನ ಬಲದಿಂದಬಂದಿಲ್ಲವಾದ್ದರಿಂದ, ಅದು ಸಾಧ್ಯಧರ್ಮವಾಗಲಾರದು] ಇನ್ನು 'ಸಾಧ್ಯ ಧರ್ಮವುಳ್ಳದ್ದು ಪಕ್ಷವು' ಎಂದು ಲಕ್ಷಣ ಮಾಡಿದರೆ, ಸಾಧ್ಯ ಧರ್ಮವಾದ ವಹ್ನಿಯು ಸಂಯೋಗ ಸಂಬಂಧದಿಂದ ಹೇತುವಾದ

संबंधस्य द्व्याश्रयत्वात् तद्वारणाय **धर्मीति**, तथा च साध्यधर्मनिरूपितसंबंधमात्रस्य हेतौ सत्त्वेऽपि धर्मिपदलब्धसाध्यधर्माधिकरणत्वस्य तत्राभावान्नातिव्यप्तिः तद्वानूपक्षः, यथा वन्हिमत्पर्वतः ।

निश्चितसाध्यसमानधर्मा धर्मी सपक्षः, (अत्र विग्रहः-साध्येन समानः साध्यसमानः, निश्चतश्चासौ साध्यसमानश्च, निश्चितसाध्यसमानः, निश्चितसाध्यसमानः धर्मः यस्य सः निश्चित साध्यसमानधर्मा, तद्वान् धर्मी) ।

दलकृत्यं तु—साध्यसमानधर्मा इत्युक्ते, महानसीयधूमेऽतिव्याप्तिः तत्र, व्याप्तिरूपप्रत्यासत्त्या साध्यसमानधर्मवत्त्वस्य सत्त्वात् तद्वारणाय धर्मीति (तादृशधर्म प्रत्याधारभूतेत्यर्थः) । तथा च साध्यसमानवद्धर्मा धर्मी महानसो भवति

---

[ಲಿಂಗ] ಧೂಮದಲ್ಲಿಯೂ ಇದೆ. [ಸಂಯೋಗ ಸಂಬಂಧವು ಎರಡರಲ್ಲಿಯು ಇರುವದು] ಅಂದರೆ ವಹ್ನಿಯಲ್ಲಿ ಸಂಯೋಗ ಸಂಬಂಧದಿಂದ ಧೂಮ ಬಂದರೆ ವಹ್ನಿಯು ಸಂಯೋಗದಿಂದ ಧೂಮದಲ್ಲಿ ಬರುವದು ಎಂಬ ಭಾವ] ಯಾಕೆಂದರೆ ಸಂಯೋಗ ಎರಡರಲ್ಲಿಯೂ ಇದೆ. ಕಾರಣ ಧೂಮದಲ್ಲಿ ಅಂದರೆ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಿಸಲು 'ಧರ್ಮಿ' ಎಂಬ ಪದವನ್ನು ಹಾಕಬೇಕು. ಇದರಿಂದ ಸಾಧ್ಯ ಧರ್ಮವಾದ ವಹ್ನಿಯ ಸಂಯೋಗ ಸಂಬಂಧವು ಹೇತುವಾದ ಧೂಮದಲ್ಲಿದ್ದರೂ, 'ಧರ್ಮಿ' ಎಂಬ ಪದವು ಅಧಿಕರಣಾರ್ಥವನ್ನು ಕೊಡುವದರಿಂದ, ಸಾಧ್ಯವಾದ ವಹ್ನಿಗೆ ಧೂಮವು ಅಧಿಕರಣವಾಗದ್ದರಿಂದ, ಅತಿವ್ಯಾಪ್ತಿ ಬರುವದಿಲ್ಲ. ಹೀಗೆ 'ಸಾಧ್ಯ ಧರ್ಮದಿಂದ ಕೂಡಿದ ಧರ್ಮಿಯೂ' ಪಕ್ಷವು. 'ವಹ್ನಿಯುಳ್ಳ ಪರ್ವತವು ಇದಕ್ಕೆ ಉದಾಹರಣೆಯು.

३] 'ನಿಶ್ಚಿತವಾದ ಸಾಧ್ಯದ ಸಮಾನಧರ್ಮವುಳ್ಳ ಧರ್ಮಿಯು ಸಪಕ್ಷವು' ಈ ಲಕ್ಷಣದ ದಲಕೃತ್ಯವು– 'ಸಾಧ್ಯ ಸಮಾನ ಧರ್ಮವುಳ್ಳದ್ದು ಸಪಕ್ಷವೆಂದಿಷ್ಟೇ ಲಕ್ಷಣ ಮಾಡಿದರೆ, ಮಹಾನಸದಲ್ಲಿರುವ ಧೂಮದಲ್ಲಿ ಅತಿವ್ಯಾಪ್ತಿ ಬರುವದು. ಏಕೆಂದರೆ, ಮಹಾನಸದಲ್ಲಿಯ ಧೂಮವು ವ್ಯಾಪ್ತಿರೂಪ ಸಂಬಂಧದಿಂದ ಸಾಧ್ಯಸಮಾನವಾದ ಧರ್ಮವುಳ್ಳದ್ದಾಗಿದೆ. [ಸಾಧ್ಯವು ಪರ್ವತದಲ್ಲಿಯ ವಹ್ನಿಯು ಅದಕ್ಕೆ ಸಮಾನವಾದುದು ಮಹಾನಸ ವಹ್ನಿಯು, ಈ ವಹ್ನಿ ಧರ್ಮವನ್ನು ವ್ಯಾಪ್ತಿರೂಪ ಸಂಬಂಧದಿಂದ ಹೊಂದಿದುದು, ಮಹಾನಸ ಧೂಮವು] ಈ ಅತಿವ್ಯಾಪ್ತಿ ನಿವಾರಿಸಲು, 'ಧರ್ಮಿ' ಎಂಬ ಪದವನ್ನು ಸೇರಿಸಬೇಕು. ಈಗ ಸಾಧ್ಯ ಸಮಾನ ಧರ್ಮವುಳ್ಳ ಧರ್ಮಿ [ಅಧಾರ] ಎಂದರೆ ಇಲ್ಲಿ 'ಮಹಾನಸ'

न तु धूम इति नातिव्याप्तिः, साध्यधर्मवान् धर्मी सपक्ष इत्युक्ते, पक्षेऽतिव्याप्तिः, अतः **समानेति** संदिग्धत्वाकारमंतरेण **समानधर्म**वानित्रि यावत् पक्षे तथाभावान्नातिव्याप्तिः, **निश्चितेति** स्वरूपकथनं यथा--वन्हिमन्महानसः ।

३ ) साध्यसमानधर्मरहितः धर्मी, विपक्षः, धर्मी विपक्षः इत्युक्ते, पक्षेऽतिव्याप्तिः, तद्वारणाय साध्यधर्मरहित इति, पक्षे साध्यस्यैव सत्त्वेन, साध्यधर्मरहितत्वाभावान्नातिव्याप्तिः, साध्यधर्मरहितो विपक्ष इत्युक्ते सपक्षे ( महानसे) अतिव्याप्तिः, तत्र, साध्यधर्मः (पर्वतीयवन्हिः) तद्रहितत्वस्य सत्त्वात्. तद्वारणाय साध्यसमानधर्मरहितो विपक्ष इति,

---

ವಾಗುತ್ತದೆಯಲ್ಲದೆ ಧೂಮವಾಗುವದಿಲ್ಲ. ಇದರಿಂದ ಮೇಲಿನ ಅತಿವ್ಯಾಪ್ತಿ ದೂರವಾಯಿತು ಇನ್ನು 'ಸಮಾನ' ಪದ ಬಿಟ್ಟು 'ಸಾಧ್ಯವುಳ್ಳ ಧರ್ಮಿ' ಸಪಕ್ಷವೆಂದರೆ, ಪಕ್ಷವು ಸಾಧ್ಯಧರ್ಮವುಳ್ಳ ಧರ್ಮಿಯಾದ್ದರಿಂದ, [ ಪಕ್ಷವಾದ ಪರ್ವತವು ಸಾಧ್ಯವಾದ ವಹ್ನಿ'ವುಳ್ಳ ಧರ್ಮಿಯಾದ್ದರಿಂದ] ಪಕ್ಷದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ನಿವಾರಣೆ ಮಾಡಲು 'ಸಮಾನ' ಪದವನ್ನು ಲಕ್ಷಣದಲ್ಲಿಡಬೇಕು. 'ಸಮಾನಧರ್ಮ'ವೆಂಬ ಪದದಿಂದ ಸಂಶಯ ವಿಷಯವಾಗದೆ ಇದ್ದ ಸಮಾನ ಧರ್ಮವುಳ್ಳದ್ದೆಂಬ ಅಭಿಪ್ರಾಯವು. ಪ್ರಕೃತ ಪಕ್ಷವಾದ ಪರ್ವತದಲ್ಲಿ, ಸಂಶಯಕ್ಕೆ ವಿಷಯವಾಗಿಯೆ ಸಾಧ್ಯವಾದ ವಹ್ನಿ ಉಂಟಲ್ಲದೆ, ನಿಶ್ಚಯಕ್ಕೆ ವಿಷಯವಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ. ಆದಾಗ್ಯೂ 'ನಿಶ್ಚಿತ' ಎಂಬ ಪದವು, ಲಕ್ಷಣದ ಸ್ವರೂಪವನ್ನು ದೃಢಕರಿಸಲು ಇದೆ ಸಪಕ್ಷಕ್ಕೆ ಉದಾಹರಣೆ ಎಂದರೆ 'ವಹ್ನಿವುಳ್ಳ ಮಹಾನಸವು'

೩] 'ಸಾಧ್ಯದ ಸಮಾನವಾದ ಧರ್ಮದಿಂದ ರಹಿತವಾದ ಧರ್ಮಿಯು ವಿಪಕ್ಷವು' ದಲಕ್ಷತ್ಯವು- 'ಧರ್ಮವಿಪಕ್ಷ' ವೆಂದಿಷ್ಟೇ ಲಕ್ಷಣ ಮಾಡಿದರೆ, ಪಕ್ಷವು ಧರ್ಮಿಯಾಗಿದ್ದರಿಂದ, ಪಕ್ಷದಲ್ಲಿ ಅತಿವ್ಯಾಪ್ತಿಯು. ಇದನ್ನು ನಿವಾರಿಸಲು 'ಸಾಧ್ಯಧರ್ಮರಹಿತ' ವೆಂಬ ವಿಶೇಷ ಕೊಡಬೇಕು. ಈಗ ಪಕ್ಷವಾದ ಪರ್ವತದಲ್ಲಿ ಸಾಧ್ಯಧರ್ಮವಾದ 'ವಹ್ನಿ' ಇದೆಯಲ್ಲದೆ, ಅದರ ಅಭಾವ ಇಲ್ಲದ್ದರಿಂದ ಅತಿವ್ಯಾಪ್ತಿ ಇಲ್ಲ. ಇನ್ನು 'ಸಾಧ್ಯಧರ್ಮರಹಿತವು' ವಿಪಕ್ಷವೆಂದಿಷ್ಟೇ ಲಕ್ಷಣ ಮಾಡಿದಲ್ಲಿ, ಸಪಕ್ಷವಾದ ಮಹಾನಸದಲ್ಲಿ ಅತಿವ್ಯಾಪ್ತಿ ಬರುವದು. ಏಕೆಂದರೆ ಸಾಧ್ಯಧರ್ಮವೆಂದರೆ ಪರ್ವತದಲ್ಲಿಯ ಅಗ್ನಿಯು, ಮಹಾನಸದಲ್ಲಿಲ್ಲವಾದ್ದರಿಂದ ಅದು ಸಾಧ್ಯಧರ್ಮರಹಿತವಾಗಿದೆ ಈ ಅತಿವ್ಯಾಪ್ತಿ

तथा च महानसे साध्यसमानधर्मस्यैव सत्त्वेन तत्समानधर्मरहितत्वाभावात् नातिव्याप्तिः, यथा वन्ह्यभाववान् हृदः ।

इदानीं केवलान्वयिलक्षणमुच्यते--सर्वपक्षवृत्तित्वे सति (पक्षव्यापकत्वे सति) सपक्षवृत्तित्वे सति विपक्षरहितत्वं केवलान्वयिनो लक्षणमित्युक्तं भवति, यथा शब्दो, अभिधेयः, प्रमेयत्वादित्यत्र, प्रमेयत्वहेतौ, सर्वपक्षवृत्तित्वस्य सपक्षवृत्तित्वस्य विपक्षरहितत्वस्य च सत्त्वात् लक्षणसमन्वयः । दलकृत्यं तु—अत्र सपक्षवृत्तित्वे सति विपक्षरहितत्वमित्यंगीकारे (सर्वपक्षवृत्तित्वानंगीकारेऽपि) उक्तप्रमेयत्वहेतौ लक्षणसमन्वयो भवति, उभयदलस्य प्रमेयत्वे सत्वात् । तथापि शब्दोऽभिधेयः, चाक्षुपत्वादिति स्वरूपासिद्धेऽतिव्याप्तिः,

---

ಪರಿಹರಿಸಲು 'ಸಾಧ್ಯ ಸಮಾನ ಧರ್ಮ'ರಹಿತವಾದ ಧರ್ಮಿಯು ವಿಪಕ್ಷವೆಂದು ಹೇಳಬೇಕು. ಮಹಾನಸದಲ್ಲಿ ಸಾಧ್ಯ ಸಮಾನ ಧರ್ಮವೇ ಇದ್ದು. ಅದರ ರಹಿತತ್ವ ಬರದಿದ್ದದರಿಂದ ಅತಿವ್ಯಾಪ್ತಿ ಇಲ್ಲ. ಪ್ರಕೃತ, ವಹ್ನಿ ಅಭಾವವುಳ್ಳ ಸರೋವರವು [ಹ್ರದವು] ವಿಪಕ್ಷಕ್ಕೆ ಉದಾಹರಣೆಯು.

I) ಈಗ ಕೇವಲಾನ್ವಯೀ ಲಕ್ಷಣವು ಹೇಳಲ್ಪಡುತ್ತದೆ– 'ಸರ್ವಪಕ್ಷದಲ್ಲಿದ್ದು ಸಪಕ್ಷದಲ್ಲಿದ್ದು, ವಿಪಕ್ಷದಲ್ಲಿರದೇ ಇರುವ ಹೇತುವು, ಕೇವಲಾನ್ವಯಿಯು' ಉದಾಹರಣೆಗೆ– 'ಶಬ್ದವು ಅಭಿಧೇಯವು. ಪ್ರಮೇಯವಾದ್ದರಿಂದ' ಈ ಅನುಮಾನದಲ್ಲಿ ಪ್ರಮೇಯತ್ವ ಹೇತುವು ಕೇವಲಾನ್ವಯಿಯು. ಈ ಹೇತುವಿನಲ್ಲಿ ಲಕ್ಷಣ ಸಮನ್ವಯವಾಗುತ್ತದೆ. 'ಪ್ರಮೇಯತ್ವ' ಹೇತುವು ಎಲ್ಲ ಶಬ್ದಗಳಲ್ಲಿ ಎಂದರೆ ಸರ್ವಪಕ್ಷದಲ್ಲಿದೆ. ಸಪಕ್ಷವಾದ 'ಘಟ' ಮೊದಲಾದ ವಸ್ತುವಿನಲ್ಲಿಯೂ ಇದೆ. ಜಗತ್ತಿನಲ್ಲಿ ಅಭಿಧೇಯವಿಲ್ಲದ ಪ್ರಮೇಯವಾಗದ ವಸ್ತುವೇ ಇಲ್ಲದ್ದರಿಂದ, ವಿಪಕ್ಷರಹಿತವೂ ಆಗಿದೆ.

ದಲಕೃತ್ಯವು- 'ಸಪಕ್ಷವೃತ್ತಿಯಾಗಿದ್ದು ವಿಪಕ್ಷರಹಿತವಾದ ಹೇತು' ಕೇವಲಾನ್ವಯಿಯೆಂದು ಲಕ್ಷಣ ಮಾಡಿದರೆ, [ಸರ್ವಪಕ್ಷ ವೃತ್ತಿತ್ವವನ್ನು ಬಿಟ್ಟರೆ], ಮೇಲಿನ ಅನುಮಾನದ 'ಪ್ರಮೇಯತ್ವ' ಹೇತುವಿನಲ್ಲಿ ಲಕ್ಷಣ ಕೂಡುತ್ತದೆ. ಆದರೆ, 'ಶಬ್ದವು ಅಭಿಧೇಯವು, ಚಕ್ಷುರಿಂದ್ರಿಯದಿಂದ ಹುಟ್ಟಿದ ಜ್ಞಾನಕ್ಕೆ ವಿಷಯವಾಗಿದ್ದರಿಂದ' ಎಂಬ ಅನುಮಾನದಲ್ಲಿ ಹೇತುವಾದ ಚಾಕ್ಷುಷತ್ವವು' ಪಕ್ಷವಾದ ಶಬ್ದದಲ್ಲಿ ಇರಲಾರದ್ದರಿಂದ ಅಸಿದ್ಧವಾಗುತ್ತದೆ. ಆದರೂ ಈ ಹೇತುವಿನಲ್ಲಿ ಅಭಿಧೇಯವುಳ್ಳ ಘಟ ಮೊದಲಾದ ವಸ್ತುಗಳಲ್ಲಿ ಚಾಕ್ಷುಷ-

तत्रापि सपक्षवृत्तित्वविशिष्टविपक्षरहितत्वस्य सत्त्वात्, तद्वारणाय पक्षवृत्तित्वं देयं, तत्र पक्षवृत्तित्वाभावान्नातिव्याप्तिः, एवमपि तस्यामेव प्रतिज्ञायां वर्णात्मकत्वादिति भागासिद्धे, अतिव्याप्ति-वारणाय सर्वेति पक्षविशेषणं देयं, तथा च सर्वपक्षवृत्तीति यावत्, शब्दोऽभिधेयः, वर्णात्मकत्वात् इत्यत्र शब्दत्वावच्छिन्नवर्णात्मक-ध्वन्यात्मकशब्दयोर्मध्ये, वर्णात्मकशब्दे वर्णात्मकत्वरूपहेतुसद्भावेऽपि, हेतोः सर्वपक्षवृत्तित्वाभावान्नातिव्याप्तिः, सर्वपक्षवृत्तित्वे सति विपक्षरहितत्वमित्येवोक्ते, सर्वमनित्यं, प्रमेयत्वादित्यत्र अतिव्याप्तिरतद्वारणाय सपक्षवृत्तित्वविशेषणं,

---

ತ್ವವಿರುವದರಿಂದ, ಸಪಕ್ಷವೃತ್ತಿತ್ವವಿದೆ. ಹಾಗೂ ಅಭಿಧೇಯತ್ವದ ಅಭಾವವೇ ಅಪ್ರಸಿದ್ಧವಾದ ಕಾರಣ ವಿಪಕ್ಷರಹಿತವೂ ಆಗಿದೆ. ಆದ್ದರಿಂದ ಈ ಅಸಿದ್ಧವಾದ 'ಚಾಕ್ಷುಷತ್ವ' ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗಾಗಿ, 'ಪಕ್ಷವೃತ್ತಿಯಾಗಿದ್ದು' ಎಂಬ ವಿಶೇಷಣ ಕೊಡಬೇಕು. ಆಗ ಚಾಕ್ಷುಷತ್ವ ಹೇತುವಿಗೆ ಪಕ್ಷವಾದ 'ಶಬ್ದ' ವೃತ್ತಿತ್ವವಿಲ್ಲದ್ದರಿಂದ ಅತಿವ್ಯಾಪ್ತಿ ಬರಲಾಗದು. ಆದರೂ 'ಶಬ್ದವು ಅಭಿಧೇಯವು ವರ್ಣಾತ್ಮಕವಾಗಿದ್ದರಿಂದ' ಎಂಬ ಅನುಮಾನ ಪ್ರಯೋಗವು ಭಾಗಾಸಿದ್ಧವಾಗುವದು. ವರ್ಣಾತ್ಮಕ ಶಬ್ದದಲ್ಲಿ ವರ್ಣಾತ್ಮಕಶಬ್ದತ್ವವಿದ್ದರೂ ಧ್ವನ್ಯಾತ್ಮಕ ಶಬ್ದದಲ್ಲಿ ವರ್ಣಾತ್ಮಕ ಶಬ್ದತ್ವ ಬಾರದೇ ಇರುವ ಕಾರಣ, ಪಕ್ಷದ ಒಂದು ಭಾಗದಲ್ಲಿದ್ದು, ಇನ್ನೊಂದು ಭಾಗದಲ್ಲಿ ಬಾರದ ಕಾರಣ ಭಾಗಾಸಿದ್ಧವಾಗುವದು ಭಾಗಾಸಿದ್ಧವಾದ ಈ ಹೇತುವಿನಲ್ಲಿ ಅತಿವ್ಯಾಪ್ತಿಯು, ಏಕೆಂದರೆ, ಈ 'ವರ್ಣಾತ್ಮಕಶಬ್ದತ್ವ' ಹೇತುವು ಪಕ್ಷವೃತ್ತಿಯಾಗಿದೆ. ಸಪಕ್ಷ-[ಪದವಾಕ್ಯ] ವೃತ್ತಿಯೂ ಆಗಿದೆ ವಿಪಕ್ಷರಹಿತವೂ ಆಗಿದೆ. ಈ ಅತಿವ್ಯಾಪ್ತಿ ನಿವಾರಿಸಲು, 'ಸರ್ವಪಕ್ಷ'ವೆಂದು ಪಕ್ಷದಲ್ಲಿ 'ಸರ್ವ' ಎಂಬ ಪದವನ್ನು ಸೇರಿಸಬೇಕು.

ಪ್ರಕೃತ ವರ್ಣಾತ್ಮಕ ಶಬ್ದವು ಕೇವಲ ವರ್ಣಾತ್ಮಕ ಶಬ್ದಗಳಲ್ಲಿದ್ದು, ಧ್ವನ್ಯಾತ್ಮಕ ಶಬ್ದಗಳಲ್ಲಿಲ್ಲದ್ದರಿಂದ, ಪಕ್ಷದ ಏಕದೇಶ ವೃತ್ತಿಯಾಗಿದ್ದು, ಸರ್ವ ಪಕ್ಷ ವೃತ್ತಿಯಾಗಿಲ್ಲ. ಕಾರಣ ಅತಿವ್ಯಾಪ್ತಿಯಿಲ್ಲ. 'ಸರ್ವಪಕ್ಷ ವೃತ್ತಿತ್ವದಿಂದ ಕೂಡಿದ ವಿಪಕ್ಷ ರಹಿತ್ವವು' ಕೇವಲಾನ್ವಯಿಯು ಎಂದು ಲಕ್ಷಣ ಮಾಡಿದರೆ, [ಸಪಕ್ಷವೃತ್ತಿತ್ವ ವಿಶೇಷಣ ಕೊಡದೇ ಹೋದರೆ] 'ಸರ್ವವು ಅನಿತ್ಯವು ಪ್ರಮೇಯವಾದ್ದರಿಂದ" ಎಂಬ ಅನುಮಾನದಲ್ಲಿಯ ಪ್ರಮೇಯತ್ವ ಹೇತುವು ಸರ್ವಪಕ್ಷ ವೃತ್ತಿಯಾಗಿದೆ, ಹಾಗೂ ಪ್ರಮೇಯತ್ವದ ಅಭಾವ ಅಪ್ರಸಿದ್ಧವಿದ್ದ ಕಾರಣ ವಿಪಕ್ಷರಹಿತವೂ ಆಗಿದೆ.

तथा च प्रमेयत्वस्य सर्वपक्षवृत्तित्वेऽपि सपक्षवृत्तित्वाभावान्नातिव्याप्तिः, सर्वस्यापि पक्षत्वेन सपक्षवस्यैभावात् । सर्वपक्षवृत्तित्वे सति सपक्षवृत्तित्वमित्युक्ते अन्वयव्यतिरेकिणि धूमादौ गतं, अतो विपक्षरहितत्वमिति वक्तव्यं,धूमात्मकहेतोः विपक्षस्यैव सत्त्वेन विपक्षरहितत्वाभावान्नातिव्याप्तिरिति क्रमेण व्यावर्त्यानीति बोध्यम् ।

तत् केवलान्वयि द्विविधं--१. सर्वपसक्षतदेकदेशभेदात् । शब्दोऽभिधेयः प्रमेयत्वादिति सपक्षव्यापकं (सर्वसपक्षवृत्ति), अभिधेयताया संप्रतिपन्ने सर्वस्मिन्सपक्षे प्रमेयत्वस्य वृत्तेः । २. शब्दोऽभिधेयः गुणत्वादित्यत्र गुणत्वस्य सपक्षैकदेशरूपादौ वृत्तेः, घटादाववृत्तेरिति सपक्षैकदेशकेवलान्वयीति ध्येयम् ।

---

ಈ ಅತಿವ್ಯಾಪ್ತಿ ಪರಿಹರಿಸಲು, 'ಸಪಕ್ಷ ವೃತ್ತಿತ್ವ' ಎಂಬ ವಿಶೇಷಣ ಕೊಡಬೇಕು. ಈಗ ಅತಿವ್ಯಾಪ್ತಿ ಬರುವದಿಲ್ಲ. ಪ್ರಮೇಯತ್ವಕ್ಕೆ ಸಪಕ್ಷವೃತ್ತಿತ್ವವಿಲ್ಲ. ಏಕೆಂದರೆ, ಸರ್ವವೂ ಪಕ್ಷವಾದ ಮೇಲೆ, ಸಪಕ್ಷವೆಂಬುದೇ ಇರಲಾರದ ಕಾರಣ ಸಪಕ್ಷ ವೃತ್ತಿತ್ವ ಬರಲಾರದು 'ಸರ್ವಪಕ್ಷವೃತ್ತಿಯಾಗಿದ್ದು ಸರ್ವಪಕ್ಷವೃತ್ತಿಯಾದುದು' ಎಂದು ಕೇವಲಾನ್ವಯಿ ಲಕ್ಷಣ ಮಾಡಿದರೆ, [ವಿಪಕ್ಷರಹಿತವಾದುದೆಂಬ ದಲವನ್ನು ಬಿಟ್ಟುಕೊಟ್ಟರೆ], ಅನ್ವಯ ವ್ಯತಿರೇಕಿ ಹೇತುವಾದ 'ಧೂಮ'ದಲ್ಲಿ ಅತಿವ್ಯಾಪ್ತಿಯು. [ಪರ್ವತವು, ಅಗ್ನಿಯುಳ್ಳದ್ದು, ಧೂಮಿರುವದರಿಂದ, ಎಂಬ ಅನುಮಾನದಲ್ಲಿ ಧೂಮಕ್ಕೆ ಅನ್ವಯ ವ್ಯಾಪ್ತಿ, ಹಾಗೂ ವ್ಯತಿರೇಕ ವ್ಯಾಪ್ತಿ ಎರಡೂ ಇರುವದರಿಂದ, ಅದು ಅನ್ವಯ ವ್ಯತಿರೇಕೀ ಹೇತುವು]

ಇದನ್ನು ಪರಿಹರಿಸಲು 'ವಿಪಕ್ಷರಹಿತತ್ವ' ವೆಂಬ ವಿಶೇಷಣ ಕೊಡಬೇಕು. ಧೂಮರೂಪ ಹೇತುವಿಗೆ ಸರೋವರವೆಂಬ ವಿಪಕ್ಷವಿರುವ ಮೂಲಕ, ವಿಪಕ್ಷರಹಿತವಾಗಿಲ್ಲವಾದ್ದರಿಂದ, ಅತಿವ್ಯಾಪ್ತಿಯಿಲ್ಲ. ಹೀಗೆ ಕ್ರಮದಿಂದ ವಿಶೇಷಣಗಳಿಗೆ ಸಾರ್ಥಕ್ಯವಿದೆಯೆಂದು ತಿಳಿಯಬೇಕು.

ಈ ಕೇವಲಾನ್ವಯೀ ಹೇತುವು ಎರಡು ಪ್ರಕಾರವಿದೆ– ಅ) ಸರ್ವಪಕ್ಷದಲ್ಲಿರುವದು. ಆ) ಸಪಕ್ಷದ ಒಂದು ಭಾಗದಲ್ಲಿರುವದು.

ಅ) 'ಶಬ್ದವು, ಅಭಿಧೇಯವು, ಪ್ರಮೇಯತ್ವವುಳ್ಳದ್ದರಿಂದ– 'ಈ ಅನುಮಾನದಲ್ಲಿಯ ಹೇತುವಾದ ಪ್ರಮೇಯತ್ವವು, ಅಭಿಧೇಯತ್ವದಿಂದ ಕೂಡಿದ ಎಲ್ಲ ಸಪಕ್ಷದಲ್ಲಿಯೂ ಇದೆ. ಕಾರಣ ಪ್ರಮೇಯತ್ವವು 'ಸರ್ವ ಸಪಕ್ಷವೃತ್ತಿ' ಹೇತುವು.

केवलान्वयि केवलव्यतिरेकि, अन्वयव्यतिरेकीति शब्दवाच्यतयां निमित्तं वक्तुं नैयायिकोदाहृतव्याप्तिद्वैविध्यं तथा पूर्वावशिष्टकेवलव्यतिरेक्यन्वयव्यतिरेकिणोः लक्षणमुच्यते—

द्विविधा किल व्याप्तिः--१) अन्वयतः, २) व्यतिरेकतश्च। १) साधनस्य साध्येन सह व्याप्तिः अन्वयव्याप्तिः, २) साध्याभावस्य साधनाभावेन सह व्याप्तिर्व्यतिरेकः।

तयोर्मध्ये प्रमेयत्वगुणत्वयोः, केवलान्वय एवास्ति, यत्प्रमेयं तदभिधेयं, यथा घटः, न तत्र व्यतिरेकः, यदभिधेयं न, तत्प्रमेयं न भवतीति, निदर्शनाभावात् सर्वस्याप्यभिधेयत्वेनानभिधेयत्वासंभवाच्च, तेनैतत्केवलान्वयि - हेतुरित्युच्यते,

---

ಆ) ಶಬ್ದವು-ಅಭಿಧೇಯವು, ಗುಣತ್ವವುಳ್ಳದ್ದರಿಂದ' ಎಂಬ ಅನುಮಾನದಲ್ಲಿ 'ಗುಣತ್ವ" ಹೇತುವು ಸಪಕ್ಷದ ಏಕದೇಶವಾದ ರೂಪಾದಿಗಳಲ್ಲಿದ್ದು, ಸಪಕ್ಷವಾದ ಘಟಗಳಲ್ಲಿ ಇಲ್ಲವಾದ್ದರಿಂದ, 'ಗುಣತ್ವ" ಹೇತುವು ಸಪಕ್ಷದ ಏಕದೇಶ ವೃತ್ತಿಯಾದ ಕೇವಲಾನ್ವಯೀ ಹೇತುವೆಂದು ತಿಳಿಯಬೇಕು. (ಘಟವು ದ್ರವ್ಯವಾದ ಕಾರಣ ಅಲ್ಲಿ ಗುಣತ್ವವಿಲ್ಲವೆಂಬ ಭಾವವು)

ನೈಯಾಯಿಕರು ಹೇಳುವಂತೆ ಕೇವಲಾನ್ವಯಿ, ಕೇವಲ ವ್ಯತಿರೇಕಿ, ಅನ್ವಯ ವ್ಯತಿರೇಕಿ, ಎಂದು ಕರೆಯಲ್ಪಡುವದಕ್ಕೆ ಕಾರಣವಾದ ಎರಡು ಪ್ರಕಾರದ ವ್ಯಾಪ್ತಿಯನ್ನೂ, ಹಾಗೂ ಈ ಮೊದಲು ಹೇಳಿದ್ದ ಕೇವಲ ವ್ಯತಿರೇಕಿ, ಹಾಗೂ ಅನ್ವಯ ವ್ಯತಿರೇಕಿಗಳ, ಲಕ್ಷಣವನ್ನೂ ಈಗ ಹೇಳಲಾಗುತ್ತದೆ,

ವ್ಯಾಪ್ತಿಯು ಎರಡು ಪ್ರಕಾರ- ೧) ಅನ್ವಯ ವ್ಯಾಪ್ತಿಯು ೨) ವ್ಯತಿರೇಕ ವ್ಯಾಪ್ತಿಯು.
ಅನ್ವಯ ವ್ಯಾಪ್ತಿಯ ಲಕ್ಷಣ ಹೇತುವಿಗೆ ಸಾಧ್ಯದಿಂದ ವ್ಯಾಪ್ತಿಯು ಅನ್ವಯ ವ್ಯಾಪ್ತಿಯು.

ವ್ಯತಿರೇಕ ವ್ಯಾಪ್ತಿಯ ಲಕ್ಷಣ- ಸಾಧ್ಯಾಭಾವಕ್ಕೆ ಸಾಧನಾ ಭಾವದಿಂದ ವ್ಯಾಪ್ತಿಯು ವ್ಯತಿರೇಕ ವ್ಯಾಪ್ತಿಯು. [ಪಿ- 'ಎಲ್ಲಿ ಧೂಮವೋ ಅಲ್ಲಿ ಅಗ್ನಿಯು' ಎಂಬಲ್ಲಿ ಅನ್ವಯ ವ್ಯಾಪ್ತಿಯು 'ಎಲ್ಲಿ ಅಗ್ನಿಯ ಅಭಾವವೋ ಅಲ್ಲಿ ಧೂಮದ ಅಭಾವವು- ಸರೋವರದಂತೆ' ಎಂಬಲ್ಲಿ ವ್ಯತಿರೇಕ ವ್ಯಾಪ್ತಿಯು]

ಆವೆರಡರಲ್ಲಿ, ಮೇಲೆ ಹೇಳಿದ 'ಪ್ರಮೇಯತ್ವ' 'ಗುಣತ್ವ' ಹೇತುಗಳಿಗೆ ಕೇವಲಾನ್ವಯವೇ ಉಂಟು. ಯಾವದು ಪ್ರಮೇಯವೋ, ಅದು ಅಭಿಧೇಯವೂ ಆಗಿದೆ. ಘಟದಂತೆ 'ಅಲ್ಲದೇ ಎಲ್ಲವೂ ಅಭಿಧೇಯವೂ ಹಾಗೂ ಪ್ರಮೇಯವು ಆಗಿದ್ದು,

एवं गुणत्वहे- तुरपि, तथा च केवलान्वयव्याप्तिमत्त्वेनैवोभयोः प्रमेयत्वगुणत्वहेत्वोः केवलान्वयिशब्दवाच्यत्वमुक्तं भवति ।

२) केवलव्यतिरेकिलक्षणं तु—सर्वपक्षवृत्तित्वे सति अविद्यमानसपक्षत्वे सति सर्वविपक्षव्यावृत्तत्वं यथा – जीवच्छरीरजातं, सात्मकं, प्राणादिमत्वादित्यत्र प्राणादिमत्त्वहेतौ लक्षणसमन्वयः।

दलकृत्यं तु—सर्वपक्षवृत्तित्वमित्युक्ते केवलान्वयिनि "शब्दोऽभिधेयः प्रमेयत्वात्,, इत्यत्रातिव्याप्तिः, अतः, अविद्यमानसपक्षत्वं विशेषणं देयं, केवलान्वयिनि प्रमेयत्वहेतौ अविद्यमानसपक्षत्वाभावान्नातिव्याप्तिः, सर्वपक्षवृत्तित्वे सति अविद्यमानसपक्षत्वमित्युक्ते "सर्वं अभिधेयं प्रमेयत्वात्,, इत्यनुपसंहारिणि गतं,

---

ಯಾವುದು ಅಭಿಧೇಯವಲ್ಲವೋ ಅದು ಪ್ರಮೇಯವೂ ಅಲ್ಲ' ವೆಂಬಲ್ಲಿ ನಿದರ್ಶನವಿಲ್ಲವಾದ್ದರಿಂದ, 'ಪ್ರಮೇಯತ್ವ' ಹೇತುವು ಕೇವಲಾನ್ವಯಿಯು. ಅದರಂತೆಯೇ 'ಗುಣತ್ವ'ವೂ ಕೇವಲಾನ್ವಯಿ ಹೇತುವಾಗಿದೆ. ಕಾರಣ ಕೇವಲಾನ್ವಯಿ ವ್ಯಾಪ್ತಿಯುಳ್ಳ ಈ ಹೇತುಗಳು 'ಕೇವಲಾನ್ವಯೀ' ಶಬ್ದವಾಚ್ಯವಾಗಿವೆ.

೨) ಕೇವಲ ವ್ಯತಿರೇಕಿ ಲಕ್ಷಣವು– 'ಸರ್ವಪಕ್ಷವೃತ್ತಿಯಾಗಿದ್ದು, ಸಪಕ್ಷವೇ ಇಲ್ಲದ್ದಾಗಿ, ಸರ್ವವಿಪಕ್ಷದಲ್ಲಿಲ್ಲದೇ ಇರುವ ಹೇತುವು, ಕೇವಲ ವ್ಯತಿರೇಕಿಯು' ಉದಾ;- 'ಜೀವವುಳ್ಳ ಶರೀರ ಸಮೂಹವು, ಆತ್ಮದಿಂದ ಕೂಡಿದ್ದು, ಪ್ರಾಣ ಮೊದಲಾದವುಗಳುಳ್ಳದ್ದರಿಂದ' ಈ ಅನುಮಾನದ 'ಪ್ರಾಣಾದಿವುಳ್ಳದ್ದು' [ಇಂದ್ರಿಯಾದಿಯುಳ್ಳದ್ದು] ಎಂಬ ಹೇತುವಿನಲ್ಲಿ ಲಕ್ಷಣ ಸಮನ್ವಯವಾಗುತ್ತದೆ. [ವಿ. ಪ್ರಾಣಾದಿವುಳ್ಳದ್ದೆಂಬ ಹೇತುವು, ಎಲ್ಲ ಶರೀರಗಳು ಪಕ್ಷವಾದ್ದರಿಂದ ಸರ್ವಪಕ್ಷವೃತ್ತಿಯಾಗಿದೆ. ಬೇರೆ ಸಪಕ್ಷವೇ ಇಲ್ಲ' ಹಾಗೂ ವಿಪಕ್ಷವಾದ ಘಟಾದಿಗಳಿಂದ ವ್ಯಾವೃತ್ತವಾಗಿದೆ]

ದಲಕೃತ್ಯವು– 'ಸರ್ವಪಕ್ಷವೃತ್ತಿತ್ವವು ಕೇವಲ ವ್ಯತಿರೇಕಿ' ಎಂಬಲ್ಲಿ 'ಶಬ್ದವು ಅಭಿಧೇಯವು. ಪ್ರಮೇಯತ್ವವುಳ್ಳದ್ದರಿಂದ, ಎಂಬ ಅನುಮಾನದ ಪ್ರಮೇಯತ್ವ" ಹೇತುವಿನಲ್ಲಿ ಅತಿವ್ಯಾಪ್ತಿ ಬರುತ್ತದೆ. ಏಕೆಂದರೆ ಪ್ರಮೇಯತ್ವವು ಸರ್ವಪಕ್ಷವೃತ್ತಿಯಾಗಿದೆ. ಈ ಅತಿವ್ಯಾಪ್ತಿ ನಿವಾರಿಸಲು, 'ಅವಿದ್ಯಮಾನಸಪಕ್ಷತ್ವವೆಂಬ ವಿಶೇಷಣ ಕೊಡಬೇಕು. ಕೇವಲಾನ್ವಯಿಯಾದ 'ಪ್ರಮೇಯತ್ವ' ಹೇತುವಿನಲ್ಲಿ ಸಪಕ್ಷವೃತ್ತಿತ್ವವಿದ್ದು, 'ಅವಿದ್ಯಮಾನ ಸಪಕ್ಷವುಳ್ಳದ್ದಾಗಿಲ್ಲ'ವಾದ ಕಾರಣ ಅಲ್ಲಿ ಅತಿವ್ಯಾಪ್ತಿ ಬರುವದಿಲ್ಲ. 'ಸರ್ವಪಕ್ಷವೃತ್ತಿತ್ವದಿಂದ ಕೂಡಿ, ಅವಿದ್ಯಮಾನ ಸಪಕ್ಷವುಳ್ಳದ್ದು' ಎಂದಿಷ್ಟೇ ಲಕ್ಷಣ ಮಾಡಿದರೆ,

अतः सर्वविपक्षव्यावृत्तत्वं देयं, प्रमेयत्वहेतौ सर्वस्यपि पक्षत्वेन सर्वविपक्षव्यावृत्तत्त्वाभावान्नातिव्याप्तिः, सर्वविपक्षव्यावृत्तत्वमित्यत्र सर्वपदपरित्यागे विपक्षव्यावृत्तत्वमित्त्येवोक्ते जीवच्छरीरजातं, सात्मकं, पृथिवीत्त्वादित्यत्र, अतिव्याप्तिः पृथिवीत्वहेतौ, पक्षवृत्तित्वं, अविद्यमानसपक्षत्त्वं विपक्षाद् व्यावृत्तत्त्वं (यत्किंचिद् विपक्षजलादिव्यावृत्तत्त्वं च) वर्तते, इति तद्वारणाय सर्वं इतिविपक्षविशेषणं देयं, एवं च पृथिवीत्वहेतौ यत्किंचिद्विपक्षजलादिव्यावृतत्त्वेऽपि, सर्वविपक्षघटादिव्यावृत्तत्त्वाभावान्नाति व्याप्तिरिति । सर्वपक्षवृत्तित्त्वमित्त्यत्र सर्वपदानुपादाने, पक्षवृत्तित्वे सति अविद्यमानसपक्षत्त्वे सति सर्वविपक्षव्यावृत्तत्वं, इत्युक्तेऽपि, केवलव्यतिरेकिणि प्राणादिमत्त्वहेतौ लक्षणसमन्वयो भवति,

---

'ಸರ್ವವೂ, ಅಭಿಧೇಯವು,-ಪ್ರಮೇಯತ್ವವಿರುವದರಿಂದ' ಎಂಬ ಅನುಮಾನದಲ್ಲಿಯು ಪ್ರಮೇಯತ್ವ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. (ಈ ಹೇತುವಿಗೆ ಸರ್ವವೂ ಪಕ್ಷವಾಗಿದ್ದರಿಂದ, ಸಪಕ್ಷವೇ ಇಲ್ಲವಾಗಿ ಸರ್ವಪಕ್ಷವೃತ್ತಿತ್ವ ಹಾಗೂ ಸಪಕ್ಷದ ಅಭಾವವೂ ಇದೆ. ಈ ಅತಿವ್ಯಾಪ್ತಿ ಪರಿಹರಿಸಲು ಸರ್ವವಿಪಕ್ಷವೃತ್ತಿತ್ವ' ವೆಂಬ ದಲವನ್ನು ಕೊಡಬೇಕು. ಈಗ, ಮೇಲಿನ ಪ್ರಮೇಯತ್ವ ಹೇತುವಿಗೆ , ವಿಪಕ್ಷವೇ ಇಲ್ಲದ್ದರಿಂದ ಸರ್ವ ವಿಪಕ್ಷವ್ಯಾವೃತ್ತತ್ವ" ಧರ್ಮವು ಬರಲಿಲ್ಲವಾಗಿ ಅತಿವ್ಯಾಪ್ತಿ ಬರಲಾರದು. 'ಸರ್ವವಿಪಕ್ಷವ್ಯಾವೃತ್ತತ್ವ" ವೆಂಬಲ್ಲಿ 'ಸರ್ವ' ಪದವನ್ನು ಬಿಟ್ಟುಕೊಟ್ಟು 'ವಿಪಕ್ಷವ್ಯಾವೃತ್ತತ್ವ" ವೆಂದಿಷ್ಟೇ ದಲವನ್ನು ಸೇರಿಸಿದರೆ, 'ಜೀವವುಳ್ಳ" ಶರೀರ ಸಮೂಹವು ಆತ್ಮಸಹಿತವೂ -ಪೃಥಿವಿತ್ವವಿರುವದರಿಂದ' ಎಂಬ ಅನುಮಾನದ ಹೇತುವಾದ 'ಪೃಥಿವೀತ್ವ' ದಲ್ಲಿ ಅತಿವ್ಯಾಪ್ತಿ ಬರುವದು. ಇಲ್ಲಿಯು ಪೃಥಿವೀತ್ವ ಹೇತುವು ಪಕ್ಷವೃತ್ತಿಯಾಗಿದೆ. ಅವಿದ್ಯಮಾನ ಸಪಕ್ಷವುಳ್ಳದ್ದಾಗಿದೆ, ಕೆಲವೊಂದು ವಿಪಕ್ಷವಾದ 'ಜಲ' ಮೊದಲಾದವುಗಳಿಂದ ವ್ಯಾವೃತ್ತವಾಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು, ವಿಪಕ್ಷದಲ್ಲಿ 'ಸರ್ವ"ವೆಂಬ ವಿಶೇಷಣ ಕೊಡಬೇಕು. 'ಪೃಥಿವೀತ್ವ' ಹೇತುವು, ಜಲಾದಿಗಳಾದ ಕೆಲವೊಂದು ವಿಪಕ್ಷದಲ್ಲಿಲ್ಲದಿದ್ದರೂ, ಘಟಾದಿಗಳೂ ವಿಪಕ್ಷವಾಗಿದ್ದು, ಅವುಗಳಲ್ಲಿ ಪೃಥಿವೀತ್ವವಿರುವದರಿಂದ, 'ಸರ್ವವಿಪಕ್ಷವ್ಯಾವೃತ್ತ'ವಾಗಲಾರದು. ಕಾರಣ ಅಲ್ಲಿ ಅತಿವ್ಯಾಪ್ತಿಯಿಲ್ಲ ಇನ್ನು 'ಸರ್ವಪಕ್ಷವೃತ್ತಿತ್ವೇಸತಿ' ಎಂಬಲ್ಲಿಯೂ 'ಸರ್ವ' ಪದ ಬಿಟ್ಟಲ್ಲಿ, ಎಂದರೆ, 'ಪಕ್ಷವೃತ್ತಿತ್ವವುಳ್ಳ ಸಪಕ್ಷವಿಲ್ಲದ ಸರ್ವವಿಪಕ್ಷವ್ಯಾವೃತ್ತವಾದ ಹೇತುವು ಕೇವಲ ವ್ಯತಿರೇಕೀ ಎಂದು ಹೇಳಿದಲ್ಲಿ ಮೇಲಿನ, ಅನುಮಾನದ

तथापि जीवच्छशरीरजातं सात्मकं, नीलशरीरत्त्वादित्यनुमाने, नीलशरीरत्त्वहेतौ पक्षवृत्तित्त्वादिकं, सर्वविशेषणमस्तीत्त्यतिव्याप्तिः तद्वारणाय सर्वमिति पक्षविषणं देयं, तथा च नीलशरीरत्त्वस्य, यत्किंचिन्नीलशरीरे वर्तमानत्त्वेऽपि जीवच्छरीरजातेऽभावान्नातिव्याप्तिरिति सर्वं विशेषणं सार्थकं ज्ञेयमिति-**जनार्दनीये** ।

तथा च जीवच्छरीरजातं सात्मकं, प्राणादिमत्त्वादित्यत्र यत्सात्मकं न भवति तद् प्राणादिमन्न भवति यथा घट इति व्यतिरेक एवास्ति, न तु यत्प्राणादिमत् तत्सात्मकमित्यन्वयः, सर्वस्यापि जीवच्छरीरजातस्य पक्षत्वात्, अन्यस्य सर्वस्य निरात्मकत्वात्, तेनैतत्, केवलव्यतिरेकीत्युच्यत इति ।

---

'ಪ್ರಣಾದಿಮತ್ವ' ಹೇತುವಿನಲ್ಲಿ ಲಕ್ಷಣ ಸಮನ್ವಯವಾದರೂ 'ಜೀವವುಳ್ಳ ಶರೀರ ಸಮೂಹವು, ಆತ್ಮಸಹಿತವಾದುದು,-ನೀಲ ಶರೀರವುಳ್ಳದ್ದರಿಂದ" ಎಂಬ ಅನುಮಾನದಲ್ಲಿಯು 'ನೀಲ-ಶರೀರತ್ವ" ಹೇತುವಿನಲ್ಲಿ ಮತ್ತೆ ಅತಿವ್ಯಾಪ್ತಿ ಬರುವದು. ಏಕೆಂದರೆ, ಈ ಹೇತುವು ಪಕ್ಷವೃತ್ತಿಯಾಗಿದೆ, ಹಾಗೂ ಸರ್ವ ಜೀವಂತ ಶರೀರಗಳನ್ನು, ಪಕ್ಷ ಮಾಡಿದ್ದರಿಂದ ಸಪಕ್ಷವುಳ್ಳದ್ದಾಗಿಲ್ಲ, ಹಾಗೂ ವಿಪಕ್ಷವಾದ ಘಟ ಮೊದಲಾದವುಗಳಿಂದ ನೀಲಶರೀರವು ಭಿನ್ನವಾಗಿದ್ದು, ವಿಪಕ್ಷವ್ಯಾವೃತ್ತವೂ ಆಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು ಪಕ್ಷದಲ್ಲಿ 'ಸರ್ವ' ಪದವನ್ನು ಸೇರಿಸಬೇಕು.

ಈಗ 'ನೀಲ ಶರೀರತ್ವ"ವು ಕೆಲವೊಂದು ನೀಲ ಶರೀರದಲ್ಲಿದ್ದರೂ ಎಲ್ಲ ಶರೀರಗಳಲ್ಲಿರಲಾರದು. ಸರ್ವ ಪಕ್ಷದಲ್ಲಿ ಈ ಹೇತು ಬರಲಾರದ್ದರಿಂದ ಅತಿವ್ಯಾಪ್ತಿಯಿಲ್ಲವು. ಹೀಗೆ ಎಲ್ಲ ವಿಶೇಷಣಗಳು ಸಾರ್ಥಕವಾಗಿವೆಯೆಂದು ಜನಾರ್ದನೀಯ ಟಿಪ್ಪಣಿಯಲ್ಲಿ ಹೇಳಿದೆ.

ಆದಕಾರಣ, 'ಜೀವವುಳ್ಳ ಶರೀರ ಸಮೂಹವು ಆತ್ಮರಹಿತವಾದುದು, ಪ್ರಾಣಾದಿಗಳುಳ್ಳದ್ದರಿಂದ,' ಎಂಬ ಅನುಮಾನಕ್ಕೆ. 'ಯಾವುದು ಆತ್ಮಸಹಿತವಾಗಿಲ್ಲವೋ, ಅದು ಪ್ರಾಣಾದಿಗಳುಳ್ಳದ್ದಲ್ಲ,- ಘಟದಂತೆ' ಎಂಬ ವ್ಯತಿರೇಕ ವ್ಯಾಪ್ತಿಯೇ ಇದಲ್ಲದೇ 'ಯಾವದು' ಪ್ರಾಣಾದಿಗಳುಳ್ಳದ್ದು ಅದು ಆತ್ಮಸಹಿತವೆಂದು ಅನ್ವಯವ್ಯಾಪ್ತಿಯಿಲ್ಲ. ಏಕೆಂದರೆ, ಜೀವವುಳ್ಳ ಸರ್ವ ಶರೀರಗಳೂ ಪಕ್ಷವಾದುವುಗಳು, ಉಳಿದ ಎಲ್ಲ ಪದಾರ್ಥಗಳೂ ನಿರಾತ್ಮಕವಾಗಿದ್ದರಿಂದ, ಅನ್ವಯವ್ಯಾಪ್ತಿ ಕೂಡುವದಿಲ್ಲ. ಕಾರಣ ಈ ಹೇತು ಕೇವಲ ವ್ಯತಿರೇಕಿ ಎಂದು ಕರೆಯಲ್ಪಡುತ್ತದೆ.

३ ) अन्वयव्यतिरेकिलक्षणं तु—सर्वपक्षवृत्तित्वे सति सपक्षवृत्तित्वे सति सर्वविपक्षत्वमन्वयव्यतिरेकिणो लक्षणं, "शब्दो-अनित्यः कृतकत्वात्" इत्यत्र, कृतकत्वहेतौ सर्वविशेषणस्य सत्त्वाल्लक्षणसमन्वयः ।

दलकृत्यं तु—सर्वपक्षवृत्तित्वमित्येवोक्ते, "जीवच्छरीरजातं सात्मकं प्राणादिमत्त्वात्,, इत्यत्र प्राणादिमत्त्वस्य सर्वपक्षवृत्तित्वे नातिव्याप्तिः तद्वारणाय सपक्षवृत्तित्वं देयं, प्राणादिमत्वहेतौ सपक्षवृत्तित्वाभावान्नातिव्याप्तिः, सर्वपक्षवृत्तित्वे सति सपक्षवृत्तित्वमित्युक्ते "पर्वतो वन्हिमान् प्रमेयत्वात्,, इत्यत्र प्रमेयत्वहेतौ उभयदलयोरपि सत्त्वेनातिव्याप्तिस्तद्वारणाय सर्वविपक्षव्यावृत्तत्वविशेषणं देयं, प्रमेयत्वस्य विपक्षवृत्तत्वेन सर्वविपक्षव्यावृत्तित्वाभावान्नातिव्याप्तिः,

---

३) ಅನ್ವಯ ವ್ಯತಿರೇಕಿ ಲಕ್ಷಣವು– 'ಸರ್ವ ಪಕ್ಷಗಳಲ್ಲಿದ್ದು, ಸಪಕ್ಷವೃತ್ತಿಯಾಗಿದ್ದು ಸರ್ವ ವಿಪಕ್ಷವ್ಯಾವೃತ್ತವಾದ ಹೇತುವು ಅನ್ವಯ ವ್ಯತಿರೇಕಿಯು' ಶಬ್ದವು, ಅನಿತ್ಯವು,– ಕೃತಕವಾಗಿದ್ದರಿಂದ," ಎಂಬ ಅನುಮಾನದಲ್ಲಿ, "ಕೃತಕತ್ವ" ಹೇತುವಿನಲ್ಲಿ ಮೇಲಿನ ಎಲ್ಲ ವಿಶೇಷಣಗಳಿರುವದರಿಂದ ಲಕ್ಷಣ ಸಮನ್ವಯವಾಗುವದು.

ದಲಕೃತ್ಯವು– 'ಸರ್ವಪಕ್ಷವೃತ್ತಿತ್ವವುಳ್ಳ ಹೇತುವು ಅನ್ವಯ ವ್ಯತಿರೇಕಿ ಹೇತುವು ಎಂದು ಲಕ್ಷಣ ಮಾಡಿದರೆ, 'ಜೀವಚ್ಛರೀರ ಸಮೂಹವು, ಸಾತ್ಮಕವು, ಪ್ರಾಣಾದಿಗಳು–ಳ್ಳದ್ದರಿಂದ" ಎಂಬ ಅನುಮಾನದಲ್ಲಿರುವ ಪ್ರಾಣಾದಿಮತ್ವ ಹೇತುವು ಸರ್ವಪಕ್ಷವೃತ್ತಿ–ಯಾದ್ದರಿಂದ ಈ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು 'ಸರ್ವಪಕ್ಷವೃತ್ತಿತ್ವ' ವೆಂಬ ದಲವನ್ನು ಕೊಡಬೇಕು. 'ಪ್ರಾಣಾದಿಮತ್ವ' ಹೇತುವಿಗೆ, ಎಲ್ಲ ಜೀವಚ್ಛರೀರಗಳೂ, ಪಕ್ಷವಾಗಿರುವದರಿಂದ, ಸಪಕ್ಷವೇ ಇಲ್ಲವಾಗಿ, ಸಪಕ್ಷವೃತ್ತಿ-ತ್ವ ಇಲ್ಲದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. 'ಸರ್ವಪಕ್ಷವೃತ್ತಿಯಾಗಿದ್ದು ಸಪಕ್ಷವೃತ್ತಿಯೂ ಆಗಬೇಕೆಂದಿಷ್ಟೇ ವಿವಕ್ಷಾ ಮಾಡಿದಲ್ಲಿ, 'ಪರ್ವತವು, ಅಗ್ನಿಯುಳ್ಳದ್ದು,–ಪ್ರಮೇಯತ್ವ-ವುಳ್ಳದ್ದರಿಂದ" ಎಂಬ ಅನುಮಾನದ 'ಪ್ರಮೇಯತ್ವ' ಹೇತುವಿನಲ್ಲಿ ಅತಿವ್ಯಾಪ್ತಿ ಬರು–ವದು. ಪ್ರಮೇಯತ್ವ ಹೇತುವು ಸರ್ವಪಕ್ಷವೃತ್ತಿಯಾಗಿದ್ದು, ಸಪಕ್ಷವೃತ್ತಿಯೂ ಆಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು 'ಸರ್ವವಿಪಕ್ಷವ್ಯಾವೃತ್ತತ್ವ" ವೆಂಬ ದಲವನ್ನು ಕೊ–ಡಬೇಕು. 'ಪ್ರಮೇಯತ್ವ'ವು ವಿಪಕ್ಷವಾದ ಸರೋವರದಲ್ಲಿ ಇರುವದೇ ಹೊರತು,

पक्षवृत्तित्वे सति सपक्षवृतित्वे सति सर्वविपक्षव्यावृत्तत्वमित्युक्ते (पक्षे सर्वपदानुपादाने) उक्तकृतकत्वहेतौ लक्षणसमन्वयेऽपि "पर्वतह्रदौ वन्हिमंतौ धूमवत्त्वा,, दिति भागासिद्धेऽतिव्याप्तिस्तद्वारणाय सर्वेति पक्षविशेषणं देयं, तथा च धूमवत्त्वस्य पर्वते सत्त्वेऽपि ह्रदेऽभावेन च सर्वपक्षवृतित्वाभावान्नातिव्याप्तिः, तथा सर्वपक्षवृतित्वे सति सपक्षवृतित्वे सति विपक्षव्यावृतत्वमित्युक्ते (विपक्षे सर्वपदानुपादाने) "जीवच्छरीरजातं अनित्यं पृथिवीत्त्वात्,, इति व्यभिचारिण्यतिव्याप्तिः, यथा पृथिवीत्त्वस्य नित्यगगनादाववृत्तेः विपक्षव्यावृत्तत्वमस्तीत्त्यतिव्याप्तिःस्तद्वारणाय विपक्षे सर्वमिति विशेषणं देयं, तथा च पृथिवीत्त्वस्य नित्त्यगगनादौ अवृत्तावपि, नित्त्ये पार्थिवपरमाण्वादौ वृत्तेः, सर्वविपक्षव्यावृत्तत्वाभावान्नातिव्याप्तिरिति

---

ಸರ್ವವಿಪಕ್ಷವ್ಯಾವೃತ್ತವಾಗಿಲ್ಲ, ಕಾರಣ ಇಲ್ಲಿ ಅತಿವ್ಯಾಪ್ತಿ ಬರುವದಿಲ್ಲ.

( ಪಕ್ಷದಲ್ಲಿ ಸರ್ವಪದ ಪರಿತ್ಯಾಗ ಮಾಡಿದಲ್ಲಿ ) ಕೇವಲ ಪಕ್ಷವೃತ್ತಿಯಾಗಿ ಸಪಕ್ಷವೃತ್ತಿಯಾಗಿ, ಸರ್ವಪಕ್ಷವ್ಯಾವೃತ್ತವಾದದ್ದು ಅನ್ವಯ ವ್ಯತಿರೇಕಿ, ಎಂದು ಲಕ್ಷಣ ಹೇಳಿದಲ್ಲಿ, ಈ ಮೊದಲು ಹೇಳಿದ 'ಕೃತಕತ್ವ' ಹೇತುವಿನಲ್ಲಿ ಲಕ್ಷಣ ಸಮನ್ವಯವಾದರೂ, 'ಪರ್ವತ ಸರೋವರಗಳು ವಹ್ನಿಯುಳ್ಳವುಗಳು-ಧೂಮವಿರುವದರಿಂದ' ಎಂಬ ಅನುಮಾನದ ಭಾಗಾಸಿದ್ಧವಾದ ಧೂಮ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. (ಧೂಮವು ಪರ್ವತದಲ್ಲಿದ್ದರೂ, ಸರೋವರದಲ್ಲಿಲ್ಲವಾದ್ದರಿಂದ' ಪಕ್ಷದ ಒಂದು ಭಾಗದಲ್ಲಿಲ್ಲವಾದ್ದರಿಂದ, ಭಾಗಾಸಿದ್ಧವು) ಈ ಅತಿವ್ಯಾಪ್ತಿ ಪರಿಹರಿಸಲು, ಪಕ್ಷದಲ್ಲಿ 'ಸರ್ವ' ಪದವನ್ನು ಕೊಡಬೇಕು. 'ಸರ್ವಪಕ್ಷವೃತ್ತಿ' ಎಂದಾಗ ಧೂಮವು ಸರ್ವಪಕ್ಷವೃತ್ತಿಯಾಗದ್ದರಿಂದ ಮೇಲಿನ ಅತಿವ್ಯಾಪ್ತಿಗೆ ಅವಕಾಶವಿಲ್ಲ. 'ಸರ್ವಪಕ್ಷವೃತ್ತಿತ್ವವುಳ್ಳದ್ದಾಗಿ, ಸಪಕ್ಷವೃತ್ತಿತ್ವವುಳ್ಳದ್ದಾಗಿ, ವಿಪಕ್ಷವ್ಯಾವೃತ್ತವಾದುದು, ಅನ್ವಯ ವ್ಯತಿರೇಕಿ,' ಎಂದು ಲಕ್ಷಣ ಮಾಡಿದರೆ, (ವಿಪಕ್ಷದಲ್ಲಿ ಸರ್ವಪದ ಪರಿತ್ಯಾಗ ಮಾಡಿದರೆ), 'ಜೀವಚ್ಛರೀರ ಸಮೂಹವು ಅನಿತ್ಯವು,-ಪೃಥಿವೀತ್ವವಿರುವದರಿಂದ' ಎಂಬ ವ್ಯಭಿಚರಿತವಾದ ಅನುಮಾನದ 'ಪೃಥಿವೀತ್ವ' ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. ಹೇಗೆಂದರೆ, 'ಪೃಥಿವೀತ್ವ'ವು ಸರ್ವಪಕ್ಷವೃತ್ತಿಯೂ ಆಗಿದ್ದು, ವಿಪಕ್ಷದಿಂದ (ನಿತ್ಯವಾದ ಗಗನದಿಂದ) ವ್ಯಾವೃತ್ತವೂ ಆಗಿದೆ. ಈ ಅತಿವ್ಯಾಪ್ತಿ ನಿವಾರಿಸಲು, ವಿಪಕ್ಷದಲ್ಲಿ 'ಸರ್ವ' ಎಂಬ ವಿಶೇಷಣ ಕೊಡಬೇಕು. ಈಗ 'ಪೃಥಿವೀತ್ವ'ವು

क्रमेण सर्वं विशेषणं सार्थकं ज्ञेयम् ।

तद्द्विविधम्——सर्वपक्षवृत्ति, सपक्षैकदेशवृत्तीति । आद्यं यथा-शब्दोऽनित्यः कृतकत्वादिति, सर्वस्मिन्ननित्ये कृतकत्वस्य सत्त्वात् सर्वपक्षवृत्ति अन्वयव्यतिरेकीत्युच्यते । द्वितीयं यथा——पर्वतो, अग्निमान् धूमादिति सपक्षैकदेशवृत्ति, अग्निमत्पर्वतादौ क्वचिद्वर्तमानत्वात् अयोगोलकादौ क्वचिदवर्तमानत्वाच्च, इदं हि यद्धूमवत्तदग्निमत् यथा महानसः, यदग्निमन्न भवति तद्धूमवन्न भवति यथा ह्रद इति, व्यप्तिद्वैविध्यसद्भावात् सपक्षैकदेशवृत्ति अन्वयव्यतिरेकीत्युच्यते, एवमुभे अपि अन्वयव्यतिरेकिणी ज्ञेये ।

इति नैयायिकोक्तव्याप्तिस्तथा तदनुमानं च निरूपितम् ।

---

'ನಿತ್ಯವಾದ ಗಗನ' ದಿಂದ ವ್ಯಾವೃತ್ತವಾಗಿದ್ದರೂ, ನಿತ್ಯವಾದ ಪಾರ್ಥಿವ ಪರಮಾಣುವಿನಲ್ಲಿ ಪೃಥಿವೀತ್ವವಿರುವದರಿಂದ, ಸರ್ವವಿಪಕ್ಷವ್ಯಾವೃತ್ತತ್ವ, ಬರಲಾರದ ಕಾರಣ, ಅತಿವ್ಯಾಪ್ತಿಯಿಲ್ಲ. ಹೀಗೆ ಕ್ರಮದಿಂದ ಎಲ್ಲ ವಿಶೇಷಣಗಳು ಸಾರ್ಥಕವಾಗಿವೆಯೆಂದು ತಿಳಿಯಬೇಕು.

ಈ ಅನ್ವಯ ವ್ಯತಿರೇಕಿ-ಹೆತುವು ಎರಡು ಪ್ರಕಾರವಿದೆ- ೧) ಸರ್ವಸಪಕ್ಷವೃತ್ತಿ. ೨) ಸಪಕ್ಷದ ಏಕದೇಶವೃತ್ತಿ ಎಂದು.

೧) ಸರ್ವಸಪಕ್ಷವೃತ್ತಿ ಹೇತುವಿಗೆ ಉದಾಹರಣೆ- 'ಶಬ್ದವು ಅನಿತ್ಯವು-ಕೃತಕತ್ವವುಳ್ಳದ್ದರಿಂದ' ಎಲ್ಲ ಅನಿತ್ಯವಾದ ಪದಾರ್ಥಗಳಲ್ಲಿ ( ಎಂದರೆ ಎಲ್ಲ ಸಪಕ್ಷವಾದ ಘಟಾದಿಗಳಲ್ಲಿ ) ಕೃತಕತ್ವವಿರುವದರಿಂದ 'ಕೃತಕತ್ವವು' ಸರ್ವಪಕ್ಷವೃತ್ತಿಯಾದ ಅನ್ವಯ ವ್ಯತಿರೇಕಿ ಹೇತುವೆಂದು ಕರೆಯಲ್ಪಡುತ್ತದೆ.

೨) ಸಪಕ್ಷದ ಏಕದೇಶವೃತ್ತಿ ಹೇತುವಿಗೆ ಉದಾಹರಣೆ- 'ಪರ್ವತವು, ಅಗ್ನಿಯುಳ್ಳದ್ದು- ಧೂಮವಿರುವದರಿಂದ" ಎಂಬಲ್ಲಿ ಹೇತುವಾದ ಧೂಮವು, ಸಪಕ್ಷದ ಏಕದೇಶವೃತ್ತಿಯಾಗಿದೆ. ಏಕೆಂದರೆ ಧೂಮವು ಅಗ್ನಿಯುಳ್ಳ ಮಹಾನಸದಲ್ಲಿದೆ. ಆದರೆ ಅಗ್ನಿಯುಳ್ಳ ಅಯೋಗೋಲಕದಲ್ಲಿ ( ಕಾದ ಕಬ್ಬಿಣ ಗುಂಡಿನಲ್ಲಿ) ಇಲ್ಲ. ಈ ಅನುಮಾನಕ್ಕೆ ಎರಡು ರೀತಿಯ ವ್ಯಾಪ್ತಿಯಿದೆ. ಯಾವುದು ಧೂಮವುಳ್ಳದ್ದು, ಅದು ಅಗ್ನಿಯುಳ್ಳದ್ದು, ಮಹಾನಸದಂತೆ, ಯಾವದು ಅಗ್ನಿಯುಳ್ಳದ್ದಲ್ಲ, ಅದು ಧೂಮವುಳ್ಳದ್ದಲ್ಲ ಸರೋವರದಂತೆ ಹೀಗೆ ದ್ವಿವಿಧ ವ್ಯಾಪ್ತಿಯುಳ್ಳದ್ದಾಗಿದ್ದರಿಂದ, ಧೂಮವೆಂಬ ಹೇತುವು 'ಸಪಕ್ಷದ ಏಕದೇಶವೃತ್ತಿಯಾದ ಅನ್ವಯ ವ್ಯತಿರೇಕಿ" ಯಾಗಿದೆ. ಹೀಗೆ, 'ಕೃತಕತ್ವ' ಹಾಗೂ 'ಧೂಮವತ್ವ' ಎರಡೂ ಅನ್ವಯ-ವ್ಯತಿರೇಕಿ ಹೇತುಗಳೆಂದು ತಿಳಿಯಬೇಕು.

२) नैयायिकैः, यत् व्याप्तिद्वैविध्यमुच्यते तदसत् व्यतिरेकव्याप्तिः प्रकृतसाध्यसिद्धौ अनुपयोगात् तथा हि––ईश्वरः, सर्वज्ञः, सर्वकर्तृत्वात्, इत्यत्र, सर्वकर्तृत्वेन सार्वज्ञ्यसाधने कार्ये, सर्वज्ञत्वाभावस्य सर्वकर्तृत्वाभावेन व्याप्तिर्न हि युज्यते न हि भावस्य भावसाधने अभावस्याभावेन व्याप्तिरुपयुज्यते, तथा व्याप्तिपक्षधर्मतयोर्वैयधिकरण्यं चैवं सति स्यात्, अतो व्यतिरेकव्याप्तिः अनुपयुक्तैवेति ज्ञेयम् ।

ननु अत्र अन्वयव्याप्तिर्नास्त्येव, व्यतिरेकव्याप्तिर्विद्यमानापि चेदनुपयोगिनी, तर्हि, उभयाभावात् कथं सर्वकर्तृत्वस्य सार्वज्ञ्यसाधकत्वम्, तदभावे च कथं शास्त्रे तस्य केवलव्यतिरेक्यनुमानत्वेन संव्यवहार इति चेदित्थम्––

---

೨] ನೈಯಾಯಿಕರು ಹೇಳುವ ವ್ಯಾಪ್ತಿ ವಿಭಾಗದ ಖಂಡನವು-

ಅ] ನೈಯಾಯಿಕರಿಂದ ಹೇಳಲ್ಪಟ್ಟ ವ್ಯಾಪ್ತಿ ದ್ವೈವಿಧ್ಯವು ಸರಿಯಲ್ಲ. ವ್ಯತಿರೇಕ ವ್ಯಾಪ್ತಿಯು, ಪ್ರಕೃತ ಸಾಧ್ಯವನ್ನು ಸಾಧನ ಮಾಡುವಲ್ಲಿ ಅನುಪಯುಕ್ತವು. ಹೇಗೆಂದರೆ, 'ಈಶ್ವರನು, ಸರ್ವಜ್ಞನು ಸರ್ವಕರ್ತೃನಾದ್ದರಿಂದ' ಎಂಬ ಅನುಮಾನದಲ್ಲಿ 'ಸರ್ವಕರ್ತೃತ್ವದಿಂದ ಸಾರ್ವಜ್ಞತೆಯನ್ನು ಸಾಧನ ಮಾಡುವ ವಿಷಯದಲ್ಲಿ, ಸರ್ವಜ್ಞತ್ವದ ಅಭಾವಕ್ಕೆ, ಸರ್ವಕರ್ತೃತ್ವಾಭಾವದಿಂದ, ವ್ಯತಿರೇಕ ವ್ಯಾಪ್ತಿಯು ಸರಿಯಾಗುವದಿಲ್ಲ. ಭಾವ ಪದಾರ್ಥದಿಂದ ಭಾವ ಪದಾರ್ಥವನ್ನು ಸಾಧನ ಮಾಡುವಾಗ್ಗೆ, ಅಭಾವಕ್ಕೆ ಅಭಾವದಿಂದ ವ್ಯಾಪ್ತಿಯು ಕೂಡುವದಿಲ್ಲ. ಹಾಗಾದಲ್ಲಿ ವ್ಯಾಪ್ತಿ ಹಾಗೂ ಪಕ್ಷಧರ್ಮತಾ ಇವೆರಡೂ ಒಂದೇ ಅಧಿಕರಣದಲ್ಲಿರದೇ ಹೋಗಲಿ ಎಂಬ ಆಪತ್ತಿ ಬರುವದು. ಕಾರಣ ವ್ಯತಿರೇಕ ವ್ಯಾಪ್ತಿಯು ಅನುಪಯುಕ್ತವೆಂದೇ ತಿಳಿಯಬೇಕು.

ಶಂಕಾ. 'ಸರ್ವಕರ್ತೃತ್ವ' ಅನುಮಾನಕ್ಕೆ, ಸರ್ವಕರ್ತೃತ್ವ ಹಾಗೂ ಸರ್ವಜ್ಞಗಳುಳ್ಳ ಬೇರೆ ದೃಷ್ಟಾಂತವೇ ಇಲ್ಲದ್ದರಿಂದ, ಅನ್ವಯವ್ಯಾಪ್ತಿಯಿಲ್ಲವು. ವ್ಯತಿರೇಕ ವ್ಯಾಪ್ತಿಯಿದ್ದರೂ, ಅದು ಅನುಪಯುಕ್ತವಾದಲ್ಲಿ, ಎರಡೂ ವಿಧ ವ್ಯಾಪ್ತಿಯಿಲ್ಲದ್ದರಿಂದ 'ಸರ್ವಕರ್ತೃತ್ವ' ಹೇತುವು 'ಸರ್ವಜ್ಞತ್ವವನ್ನು' ಹೇಗೆ ಸಾಧನ ಮಾಡಬಲ್ಲದು? ಅದು ಸಾಧನ ಮಾಡದಿದ್ದ ಪಕ್ಷದಲ್ಲಿ ಶಾಸ್ತ್ರದಲ್ಲಿ 'ಸರ್ವಕರ್ತೃತ್ವ' ಹೇತುವಿಗೆ 'ಕೇವಲ ವ್ಯತಿರೇಕಿ' ಎಂಬ ವ್ಯವಹಾರವಾದರೂ ಹೇಗೆ ಮಾಡುವದು? ಈ ಶಂಕಾ ಬಂದರೆ, ಸಮಾಧಾನ ಹೀಗೆ ಇದೆ.

तत्रापि यः सर्वकर्ता, स सर्वज्ञ इत्येव व्याप्तिः, एवं तर्हि व्यतिरेकोक्तिर्व्यर्था, इति चेन्न, अत्र व्याप्तिग्रहणस्थानस्यैव विप्रतिपत्तिविषयत्वप्राप्त्या सर्वज्ञत्वरूपसाध्येन सा दर्शयितुमशक्या अभूत्। ततोऽनुमानेनान्वयव्याप्तिं साधयितुं व्यतिरेकव्याप्तिरुपन्यस्यते। सर्वकर्तृत्वादिति प्रयुक्ते, कथमस्य व्याप्तिरित्याकांक्षायां सर्वकर्तृत्वम्, सर्वज्ञत्वेन व्याप्तम्, तदभावव्यापकाभावप्रतियोगित्वात्, यत्, यदभावव्यापकाभावप्रतियोगि तत्तेन व्याप्तम् यथा धूमवत्त्वम् अग्निमत्त्वेन व्याप्तमिति, अन्वयव्याप्तिमुखेन साध्यसाधने केवलव्यतिरेक्युपयोगोऽस्ति, न साक्षादिति ध्येयम्। अन्वयव्यतिरेकिणितु व्यतिरेकव्याप्तिरनुपयुक्तैव,

---

ಈ ಅನುಮಾನದಲ್ಲಿಯೂ 'ಯಾವನು ಸರ್ವಕರ್ತೃವೋ ಅವನು ಸರ್ವಜ್ಞನು" ಎಂದೇ ವ್ಯಾಪ್ತಿಯು. ಹಾಗಾದರೆ ವ್ಯತಿರೇಕ ವ್ಯಾಪ್ತಿಯು ವ್ಯರ್ಥವೆಂದು ಹೇಳುವದು ಸರಿಯಲ್ಲ. ಮೇಲಿನ ಸರ್ವಕರ್ತೃತ್ವ ಅನುಮಾನದಲ್ಲಿ ವ್ಯಾಪ್ತಿಯನ್ನು ಗ್ರಹಣ ಮಾಡತಕ್ಕ ಸಾಧನವು ಸಂದೇಹಾಸ್ಪದವಾದ್ದರಿಂದ, ಸರ್ವಜ್ಞರೂಪ ಸಾಧ್ಯದಿಂದ ಆ ವ್ಯಾಪ್ತಿಯನ್ನು ನಿರ್ದೇಶನ ಮಾಡಲು ಅವಶ್ಯವಾಯಿತು. ಕಾರಣ ಅನುಮಾನ ಮೂಲಕ ಅನ್ವಯ ವ್ಯಾಪ್ತಿಯನ್ನು ಸಂಪಾದಿಸುವದಕ್ಕಾಗಿ ವ್ಯತಿರೇಕ ವ್ಯಾಪ್ತಿಯು ಉಪಯುಕ್ತವಾಗುತ್ತದೆ. 'ಸರ್ವಕರ್ತೃನಾದ್ದರಿಂದ' ಎಂದು ಹೇತು ಪ್ರಯೋಗ ಮಾಡಲು, ಅದಕ್ಕೆ ವ್ಯಾಪ್ತಿಯು ಹೇಗೆ ? ಎಂಬ ಆಕಾಂಕ್ಷಾ ಬಂದರೆ. ಹೀಗೆ ಹೇಳಬೇಕು. ಸರ್ವಕರ್ತೃತ್ವವು ಸರ್ವಜ್ಞತ್ವದಿಂದ ವ್ಯಾಪ್ತವು. ಏಕೆಂದರೆ, 'ಸರ್ವಜ್ಞತ್ವದ ಅಭಾವ'ಕ್ಕೆ ವ್ಯಾಪಕವಾದ, 'ಸರ್ವಕರ್ತೃತ್ವಾಭಾವಕ್ಕೆ ಪ್ರತಿಯೋಗಿಯಾಗಿದೆ. ಸರ್ವಕರ್ತೃತ್ವವು, ಯಾವದು ಯಾವುದರ ಅಭಾವಕ್ಕೆ ವ್ಯಾಪಕವಾದ ಅಭಾವಕ್ಕೆ, ಪ್ರತಿಯೋಗಿಯೋ' ಅದು ಅದರಿಂದ ವ್ಯಾಪ್ತವು. ಉದಾಹರಣೆ- ಧೂಮವು ಅಗ್ನಿಯಿಂದ ವ್ಯಾಪ್ತವು. ಹೇಗೆಂದರೆ ಅಗ್ನಿಯ ಅಭಾವಕ್ಕೆ ವ್ಯಾಪಕವಾದುದು ಧೂಮಾಭಾವವು. ಇದಕ್ಕೆ ಪ್ರತಿಯೋಗಿಯು ಧೂಮವು. ಹೀಗೆ ಅನ್ವಯ ವ್ಯಾಪ್ತಿ ಮೂಲಕ ಸಾಧ್ಯವನ್ನು ಸಾಧನ ಮಾಡುವ ವಿಷಯದಲ್ಲಿ ವ್ಯತಿರೇಕ ವ್ಯಾಪ್ತಿಯು ಉಪಯುಕ್ತವಾಗುತ್ತದೆಯೇ ಹೊರತು ಸಾಕ್ಷಾತ್ ಸಾಧ್ಯ ಸಾಧನ ಮಾಡಲಾಗದು ಎಂದು ತಿಳಿಯಬೇಕು.

ಅನ್ವಯ ವ್ಯತಿರೇಕಿ ಅನುಮಾನದಲ್ಲಿ ವ್ಯತಿರೇಕ ವ್ಯಾಪ್ತಿಯನ್ನು ಹೇಳುವದು ಸರಿಯಲ್ಲ.

प्रकृतसाध्यसिद्धचंगभूतान्वयव्याप्तेः प्रत्यक्षादिनैव सिद्धत्वात्, व्यतिरेकव्याप्तिस्तु व्यभिचाराभावमुखेन कथंचिदुपयुज्यते, तथा च व्यतिरेकव्याप्तिः, साध्याभाववति विपक्षे, हेत्वभावप्रतिपादनात्, व्यभिचारशङ्कानिवर्तकत्वेन अन्वयव्याप्तिग्रहे उपयुक्ता भवतीति ज्ञेयम् ।

**इति नैयायिकोक्तव्याप्तिविभागखंडनम् ।**

३) मतान्तरनिरासाय अनुमानविभागान्तरं निरूप्यते—

अनुमानं पुनर्द्विविधम् --१ ) स्वार्थं २) परार्थं च ।

१ ) **स्वार्थम्–स्वस्य अर्थः,** प्रयोजनं यस्मादिति स्वार्थानुमानम् तथा च परोपदेशमनपेक्ष्य, यत्स्वयमेव व्याप्तिज्ञानतत्स्मरणसहितं लिङ्गज्ञानं, यत्तु परोपादेशमपेक्ष्योत्पद्यते तत्स्वार्थानुमानम् ।

२ ) परर्थम्--परस्यार्थः प्रयोजनम् यस्मदिति परार्थानुमानम्,

---

ಪ್ರಕೃತವಾದ ಸಾಧ್ಯಸಿದ್ಧಿಗೆ ಅಂಗಭೂತವಾದ ಅನ್ವಯ ವ್ಯಾಪ್ತಿಯು ಪ್ರತ್ಯಕ್ಷದಿಂದಲೇ ಸಿದ್ಧಿಸುತ್ತದೆ. [ಕಾರಣ ವ್ಯತಿರೇಕ ವ್ಯಾಪ್ತಿಯು ಪ್ರಯೋಜನವಿಲ್ಲ] ವ್ಯತಿರೇಕ ವ್ಯಾಪ್ತಿಯು ಕದಾಚಿತ್ ವ್ಯಭಿಚಾರದ ಅಭಾವವಿದೆಯೆಂದು ತಿಳಿಸಲು ಉಪಯುಕ್ತವಾಗುವದು. [ವಿ. ಅನುಮಾನಕ್ಕೆ ವ್ಯತಿರೇಕ ವ್ಯಾಪ್ತಿಯಿದ್ದಲ್ಲಿ, ಆ, ಅನುಮಾನದ ಹೇತುವು ವ್ಯಭಿಚರಿತವಾಗುವದಿಲ್ಲ. ಇಷ್ಟು ಮಾತ್ರ ವ್ಯತಿರೇಕ ವ್ಯಾಪ್ತಿಯ ಪ್ರಯೋಜನ] ಹೀಗೆ ವ್ಯತಿರೇಕ ವ್ಯಾಪ್ತಿಯು, ಸಾಧ್ಯದ ಅಭಾವವುಳ್ಳ ವಿಪಕ್ಷದಲ್ಲಿ ಹೇತುವಿನ ಅಭಾವವನ್ನು ಪ್ರತಿಪಾದಿಸುವದರಿಂದ, ವ್ಯಭಿಚಾರ ಶಂಕೆಯನ್ನು ಪರಿಹರಿಸಿ ಅನ್ವಯ ವ್ಯಾಪ್ತಿಯನ್ನು ಗ್ರಹಿಸುವಲ್ಲಿ ಉಪಯೋಗವಾಗುವದೆಂದು ತಿಳಿಯಬೇಕು.

**ಪ್ರಕಾರಾಂತರದಿಂದ ನೈಯಾಯಿಕರು ಹೇಳುವ ಅನುಮಾನದ ವಿಭಾಗಗಳ ಹಾಗೂ ಅದರ ಅವಯವ ನಿರೂಪಣೆ; ಹಾಗೂ ಭಾಟ್ಟರು ಬೌದ್ಧರು ಅಂಗೀಕರಿಸಿದ ಅವಯವಗಳ ನಿರೂಪಣೆಯು–**

೧] ಸ್ವಾರ್ಥಾನುಮಾನವು– ತನಗೆ ಪ್ರಯೋಜನ, ಯಾವುದರಿಂದಾಗುವದೋ ಅದು ಸ್ವಾರ್ಥಾನುಮಾನವು. ಎಂದರೆ, ಪರೋಪದೇಶವನ್ನಪೇಕ್ಷಿಸದೇ ತಾನೇ ವ್ಯಾಪ್ತಿಜ್ಞಾನ ಹಾಗೂ ಅದರ ಸ್ಮರಣೆ ಪೂರ್ವಕ ಲಿಂಗಜ್ಞಾನವು ಹುಟ್ಟುತ್ತದೆಯೋ, ಅದು ಸ್ವಾರ್ಥಾನುಮಾನವು.

೨] ಪರಾರ್ಥಾನುಮಾನವು– ಪರರಿಗೆ ಪ್ರಯೋಜನವು ಯಾವುದರಿಂದ ಆಗುತ್ತದೆಯೋ,

तथा च व्याप्तिज्ञानतत्स्मरणसहितं लिङ्गज्ञानं, यत्तु परोपदेशमपेक्ष्योत्पद्यते तत् परार्थानुमानम् ।

परोपदेशस्तु, पञ्चावयववाक्यानिति **नवीननैयायिकाः** ।

पञ्चावयवास्तु--१ ) प्रतिज्ञा- २ ) हेतु - ३ ) उदाहरण - ४) उपनय ५ ) निगमनानीति । एत एव **वैशेषिकैः** १ ) प्रतिज्ञा २) उपदेश - ३ )निदर्शन - ४ ) अनुसंधान - ५ ) प्रत्यान्माया: - इति व्यापदिश्यन्ते ।

**जरनैयायिकैः**-- १ ) जिज्ञासा - २ ) संशय - ३ ) शक्यप्राप्ति - ४ ) प्रयोजन - ५ - ) संशयनिरासैः सह प्रतिज्ञादयो दशावयवाः स्वीक्रियन्ते । तत्र जिज्ञासादिपंचकस्य शब्दरूपत्वस्यास्फुटत्वेनानवयवत्वात् तथा च जिज्ञासाऽऽदयः शब्दा एव न भवन्ति कुतः वाक्यावयवाः, इति तत्पक्षो न युक्त इति, नवीननैयायिकैरुपेक्षितः

---

ಅದು ಪರಾರ್ಥಾನುಮಾನವು- ಎಂದರೆ, ವ್ಯಾಪ್ತಿಜ್ಞಾನ ಹಾಗೂ ಅದರ ಸ್ಮರಣೆಪೂರ್ವಕ ಲಿಂಗಜ್ಞಾನವು ಪರೋಪದೇಶವನ್ನಪೇಕ್ಷಿಸಿ ಹುಟ್ಟುತ್ತದೆಯೋ ಅದು ಪರಾರ್ಥಾನುಮಾನವು ಪರೋಪದೇಶವೆಂದರೆ ಐದು ಅವಯವ ವಾಕ್ಯಗಳೆಂದು ನವೀನ ನೈಯಾಯಿಕರು ಹೇಳುತ್ತಾರೆ.

ಪಂಚಾವಯವಗಳು-೧) ಪ್ರತಿಜ್ಞೆ - ೨) ಹೇತುವು. ೩) ಉದಾಹರಣೆ ೪) ಉಪನಯ ೫) ನಿಗಮನ. ಈ ಐದು ಅವಯವಗಳನ್ನೇ ವೈಶೇಷಿಕರು ಬೇರೆ ರೀತಿಯಿಂದ ಹೀಗೆ ಹೇಳುತ್ತಾರೆ. ೧) ಪ್ರತಿಜ್ಞೆ ೨) ಉಪದೇಶ ೩) ನಿದರ್ಶನ ೪) ಅನುಸಂಧಾನ ೫) ಪ್ರತ್ಯಾಮ್ನಾಯ, ಪ್ರಾಚೀನ ನೈಯಾಯಿಕರು ಹತ್ತು ಅವಯವಗಳೆಂದು ಹೇಳುತ್ತಾರೆ- ೧) ಜಿಜ್ಞಾಸೆ ೨) ಸಂಶಯ, ೩) ಶಕ್ಯಪ್ರಾಪ್ತಿ ೪) ಪ್ರಯೋಜನ ೫) ಸಂಶಯನಿರಾಸ ಈ ಐದು ಅವಯವಗಳಿಂದ ಕೂಡಿ, ಪೂರ್ವದಲ್ಲಿ ಹೇಳಿದ ಪ್ರತಿಜ್ಞಾದಿ ಐದು ಅವಯವಗಳು- ಹೀಗೆ. ಹತ್ತು ಅವಯವಗಳೆಂದು ಹೇಳುತ್ತಾರೆ ಇವುಗಳಲ್ಲಿ 'ಜಿಜ್ಞಾಸೆ' ಮೊದಲಾದ ಐದು ಅವಯಗಳು ಶಬ್ದರೂಪಗಳಾಗದೇ ಕೇವಲ ಮನೋವೃತ್ತಿಯೆಂದು ಸ್ಪಷ್ಟವಿರುವದರಿಂದ ಅವು ಅನುಮಾನದ ಅವಯವಗಳಾಗುವದಿಲ್ಲ. ಜಿಜ್ಞಾಸಾದಿಗಳು ಶಬ್ದಗಳೇ ಅಲ್ಲವೆಂದ ಬಳಿಕ ಅವು ವಾಕ್ಯಾವಯವಗಳು ಹೇಗಾಗಬಹುದು? ಕಾರಣ ಇವರ ಪಕ್ಷವು ನವೀನ ನೈಯಾಯಿಕರಿಂದ ಉಪೇಕ್ಷಿಸಲಾಗಿದೆ.

परोपदेशस्यावश्यकत्वं इत्थं - यावता व्याप्तिविशिष्टलिंगधीस्तावदाकांक्षाक्रमेणाभिधेयं, अन्यथान्यूनत्वापत्तेः, तत्र साध्यानुपस्थितौ हेत्वाकांक्षा नैवोदेतीति, तदुपस्थित्यर्थं १ ) **प्रतिज्ञा** - यथा पर्वतो वन्हिमानिति, ततः कस्मात्प्रमाणादिदं ज्ञेयं, इत्याकांक्षायां हेतु - स्वरूपमात्रप्रतिपादकं, '२ ) धूमादिति, **हेतुवचनं**। ततोऽस्य सामर्थ्यजिज्ञासायां प्रथमं व्याप्तिप्रदर्शनार्थं, ३ ) '**उदाहरणं**, । ४) पश्चात्पक्षधर्मताप्रदर्शनार्थं, अग्निव्याप्तधूमवानयमित्युप**नयः** । ततः सर्वस्यैकबुद्ध्यारोहाय एकवाक्यतामापादयितुं ५ ) **निगमनमिति** । तस्मात् पंचावयवा अवश्यका एवेति ध्येयम्

३ ) इदानीं क्रमेणावयवानां स्वरूपमुच्यते —

---

ಪರೋಪದೇಶದಐದು ಅವಯುವಗಳ ಕೃತ್ಯವನ್ನು ನವೀನ ನೈಯಾಯಿಕರು ಹೀಗೆ ಹೇಳುತ್ತಾರೆ. ವ್ಯಾಪ್ತಿಯಿಂದ ಸಹಿತವಾದ ಲಿಂಗಜ್ಞಾನ ಹುಟ್ಟುವವರೆಗೆ ಆಕಾಂಕ್ಷಾಕ್ರಮದಿಂದ ಅವಯುವಗಳನ್ನು ಹೇಳಬೇಕು. ಹಾಗೆ ಹೇಳದಿದ್ದಲ್ಲಿ ಅನುಮಾನ ಪ್ರಯೋಗಕ್ಕೆ ನ್ಯೂನತಾ ಬಂದು, ಸರಿಯಾದ ಅನುಮತಿ ಹುಟ್ಟಲಾರದು. ಹೇಗೆಂದರೆ, ಮೊದಲು ಸಾಧ್ಯದ ಪ್ರತೀತಿ ಆಗದೇ ಹೋದರೆ, ಹೇತುವಿನ ಇಚ್ಛೆಯೇ ಹುಟ್ಟುವದಿಲ್ಲ. ಆದ್ದರಿಂದ ಸಾಧ್ಯದ ಉಪಸ್ಥಿತಿಯು ಸಲುವಾಗಿ ಪ್ರತಿಜ್ಞೆಯೆಂಬ ಅವಯುವವು ಬೇಕು–೧] ಪ್ರತಿಜ್ಞೆ–ಉದಾ:- ಪರ್ವತವು ಅಗ್ನಿಯುಳ್ಳದ್ದು. ಅದನ್ನು ಯಾವ ಪ್ರಮಾಣದಿಂದ ತಿಳಿಯಬೇಕೆಂದು ಆಕಾಂಕ್ಷಾ ಹುಟ್ಟಿದಲ್ಲಿ, ಹೇತುವಿನ ಸ್ವರೂಪ ಮಾತ್ರ ಪ್ರತಿಪಾದಕವಾದ [ಧೂಮಾತ್] 'ಧೂಮವಿರುವದರಿಂದ' ಎಂಬ ೨] ಹೇತುವಚನ ಬೇಕು. ಈ ಹೇತುವಿನ ಸಾಮರ್ಥ್ಯವೇನು ? ಎಂಬ ಆಕಾಂಕ್ಷಾ ಬಂದಲ್ಲಿ ಮೊದಲು ವ್ಯಾಪ್ತಿ ಪ್ರದರ್ಶನಾರ್ಥ ೩] ಉದಾಹರಣೆ ಬೇಕು [ 'ಯಾವುದು ಧೂಮವುಳ್ಳದ್ದೋ ಅದು ಅಗ್ನಿಯುಳ್ಳದ್ದು, ಮಹಾನಸದಂತೆ' ಎಂಬ ವಾಕ್ಯವು] ನಂತರ ಪಕ್ಷ ಧರ್ಮತಾ ತೋರಿಸಲು [ಪಕ್ಷದಲ್ಲಿ ಹೇತುವಿನ ಇರುವಿಕೆ ತಿಳಿಸಲು] ೪] 'ಅಗ್ನಿವ್ಯಾಪ್ತ ಧೂಮವುಳ್ಳದ್ದು. ಈ ಪರ್ವತ'ವು ಎಂಬ ಉಪನಯ ವಾಕ್ಯಬೇಕು.

ನಂತರ ಎಲ್ಲವೂ ಏಕಕಾಲಕ್ಕೆ ಬುದ್ಧಿಸ್ಥವಾಗುವಂತೆ ಹಾಗೂ ಏಕವಾಕ್ಯತಾ ಬರುವದಕ್ಕಾಗಿ ೫] 'ವ್ಯಾಪ್ತಿವಿಶಿಷ್ಟ ಧೂಮವುಳ್ಳದ್ದಾದುದರಿಂದ ಪರ್ವತವು ಅಗ್ನಿಯುಳ್ಳದ್ದು' ಎಂಬ ನಿಗಮನ ವಾಕ್ಯ ಬೇಕು. ಹೀಗೆ ಐದು ಅವಯುವ ವಾಕ್ಯಗಳು, ಅನುಮಿತಿ ಹುಟ್ಟಿಸಲು ಅವಶ್ಯ ಬೇಕು.

---

तत्र प्रतिज्ञा नाम, पक्षवचनं–साध्यविशिष्टधर्मिवचनमिति यावत् यथा 'पर्वतोऽग्निमानिति,, तत्र धर्मिणमुद्दिश्य पश्चाधर्मो विधातव्यः । तथा च अग्निमान् पर्वत इति न वाच्यं । "सिद्धधर्मिणमुद्दिश्य साध्यधर्मो विधीयत, इति वचनात् ।

२ ) साधनत्वख्यापकविभक्त्यंतं लिंगवचनं हेतुः, तथा च कारणत्वप्रतिपादकपंचम्यंतं तृतीयांतं वा विभक्तिवचनमिति यावत्, यथा धूमवत्त्वादिति वचनं हेतुवाक्यं, अत्र, लिंगवचनं हेतुरित्युक्ते 'धूमवान् पर्वतो वन्हिमान्' इति वाक्येऽतिव्याप्तिः, अतः साधनत्वप्रतिपादकेति, तत्र साधनत्वप्रतिपादकत्वाभावान्नातिव्याप्तिः, साधनत्वप्रतिपादकेत्येवोक्ते 'पर्वतो वन्हिमान् पर्वतत्वादिति वाक्ये गतं, अतः लिंगवचनमिति (न्यायावयव इति यावत् ) वक्तव्यं, पर्वतो वन्हिमान् पर्वतत्वादित्यत्र साधनत्वप्रतिपादकत्वेऽपि लिंगवचनभावान्नातिव्याप्तिरिति ।

---

೩] ಈ ಕ್ರಮದಿಂದ ಐದು ಅವಯವಗಳ ಸ್ವರೂಪ ಹೇಳಲ್ಪಡುತ್ತದೆ. ೧] ಪ್ರತಿಜ್ಞೆ – ಪ್ರತಿಜ್ಞೆಯೆಂದರೆ ಪಕ್ಷವಚನವು. ಹಾಗೆಂದರೆ. ಸಾಧ್ಯದಿಂದ ಕೂಡಿದ ಧರ್ಮಿಯ ವಚನವು. ಉದಾಹರಣೆ–'ಪರ್ವತವು ಅಗ್ನಿಯುಳ್ಳದ್ದು' ಇಲ್ಲಿ ಧರ್ಮಿಯನ್ನು ಉದ್ದೇಶ ಮಾಡಿ ನಂತರ ಧರ್ಮವಿಧಾನ ಮಾಡಬೇಕು. ಪರ್ವತವು ವಹ್ನಿಯುಳ್ಳದ್ದು' ಎನ್ನಬೇಕೇ ಹೊರತು, 'ಅಗ್ನಿಮಾನ್ ಪರ್ವತ" ವೆನ್ನಕೂಡದು. ಸಿದ್ಧವಾದ ಧರ್ಮಿಯನ್ನುದ್ದೇಶಿಸಿ ನಂತರ ಸಾಧ್ಯಧರ್ಮವನ್ನು ವಿಧಾನ ಮಾಡಬೇಕೆಂದು ವಚನವಿರುತ್ತದೆ.

೨] ಹೇತು–ಸಾಧನವನ್ನು ಹೇಳುವ ವಿಭಕ್ತಿ ಪ್ರತ್ಯಯವುಳ್ಳ ಲಿಂಗವಚನವು ಹೇತುವು. ಉದಾ;–'ಧೂಮವಿರುವದರಿಂದ' ಎಂಬ ವಚನವು ಹೇತುವಾಕ್ಯವು. ದಲಕೃತ್ಯವು–'ಲಿಂಗವಚನವು ಹೇತುವು' ಎಂದಿಷ್ಟೇ ಲಕ್ಷಣ ಹೇಳಿದರೆ, 'ಧೂಮವುಳ್ಳ ಪರ್ವತವು, ವಹ್ನಿಯುಳ್ಳದ್ದು' ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿ ಬರುವದು. ಇದನ್ನು ಪರಿಹರಿಸಲು, 'ಸಾಧನತ್ವ ಪ್ರತಿಪಾದಕ' ವೆಂಬ ವಿಶೇಷಣ ಕೊಡಬೇಕು. ಮೇಲಿನ ವಾಕ್ಯದಲ್ಲಿ ಸಾಧನತ್ವ ಪ್ರತಿಪಾದಕತ್ವವಿಲ್ಲದಿರುವದರಿಂದ, ಅಲ್ಲಿ ಅತಿವ್ಯಾಪ್ತಿಯಿಲ್ಲ. 'ಸಾಧನತ್ವವನ್ನು ಹೇಳುವದು ಹೇತುವಾಕ್ಯ' ವೆಂಬಲ್ಲಿ, ಪರ್ವತವು ಅಗ್ನಿಯುಳ್ಳದ್ದು–ಪರ್ವತತ್ವವಿರುವದರಿಂದ' ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿಯು. ಇದನ್ನು ಪರಿಹರಿಸಲು 'ಲಿಂಗವಚನ' ವೆಂದು ಹೇಳಬೇಕು. [ಎಂದರೆ ಸಾಧ್ಯವನ್ನು ಸಾಧನ ಮಾಡುವಲ್ಲಿ ಅಂಗವಾಗಬೇಕು]

३) व्याप्तिग्रहणस्थलं **दृष्टान्तः**, यथा महानस इति, **अत्र** व्याप्तिस्थानं दृष्टान्त, इत्यौवोक्ते पक्षे गतं, अतो ग्रहणमिति, तद्ग्रहणं च महानसे न तु पक्षे, स दृष्टान्तो द्विविधः १) साधर्म्यदृष्टांतः २) वैधर्म्यदृष्टांत इति च,

१) तत्र अन्वयव्याप्तिग्रहणस्थलं साधर्म्यदृष्टांतः, यथाधूमानुमाने महानसः ।

२) व्यतिरेकव्याप्तिग्रहणस्थलं वैधर्म्यदृष्टांतः, यथा महाहृद इति ।

४) सम्यक् व्याप्तिप्रदर्शनपूर्वकं दृष्टांताभिधानमुदाहरणं, (यो-यो धूमवान् स स वन्हिमान्) इत्येव, न पुनर्वैपरित्येनेति सम्यक् शब्दार्थः, तद् द्विविधं--१) साधर्म्योदाहरणं २) वैधर्म्योदाहरणं चेति ।

---

ಮೇಲಿನ 'ಪರ್ವತತ್ವವಿರುವದರಿಂದ' ಎಂಬ ಹೇತುವು, ಸಾಧನೆ ಮಾಡತಕ್ಕ ಪಂಚಮಿವಿಭಕ್ತಿಯಿಂದ ಕೂಡಿದ್ದರೂ ಲಿಂಗವಚನವಾಗಿಲ್ಲ- [ಅನುಮಾನದ ನ್ಯಾಯಾವಯವಾಗಿಲ್ಲ-ವಾದ್ದರಿಂದ ಅನುಮಿತಿ ಹುಟ್ಟಿಸಲಾರದು] ಕಾರಣ ಅತಿವ್ಯಾಪ್ತಿಯಿಲ್ಲ.

೩] ಉದಾಹರಣೆ- ಉದಾಹರಣೆಯ ಘಟಕವು ದೃಷ್ಟಾಂತವು, ದೃಷ್ಟಾಂತವೆಂದರೆ ವ್ಯಾಪ್ತಿಯನ್ನು ಗ್ರಹಣ ಮಾಡತಕ್ಕ ಸ್ಥಳವು.

ಉದಾಹರಣೆ- ಮಹಾನಸವು, [ಅಡುಗೆ ಮನೆಯು] ದಲಕ್ಷ್ಯತ್ಯವು ಇಲ್ಲಿ ವ್ಯಾಪ್ತಿಯ ಸ್ಥಾನವು 'ದೃಷ್ಟಾಂತವು' ಎಂದು ಲಕ್ಷಣ ಮಾಡಿದಲ್ಲಿ, ಪಕ್ಷದಲ್ಲಿ ಅತಿವ್ಯಾಪ್ತಿಯು. ಏಕೆಂದರೆ ಪಕ್ಷವೂ ವ್ಯಾಪ್ತಿಗೆ ಸ್ಥಳವಾಗಿದೆ. ಅದನ್ನು ನಿವಾರಿಸಲು 'ಗ್ರಹಣ' ವೆಂಬ ಪದವನ್ನು ಸೇರಿಸಬೇಕು. ಈ ವ್ಯಾಪ್ತಿಯ ಗ್ರಹಣವು ಮಹಾನಸದಲ್ಲಾಗುತ್ತದೆಯೇ ಹೊರತು ಪಕ್ಷವಾದ ಪರ್ವತದಲ್ಲಿ ಅಲ್ಲ. ಕಾರಣ ಅತಿವ್ಯಾಪ್ತಿಯಿಲ್ಲ. ಈ ದೃಷ್ಟಾಂತವು ಎರಡು ಪ್ರಕಾರ ಅ] ಸಾಧರ್ಮ್ಯ ದೃಷ್ಟಾಂತ ಹಾಗೂ ಆ] ವೈಧರ್ಮ್ಯ ದೃಷ್ಟಾಂತ.

ಅ] ಅನ್ವಯ ವ್ಯಾಪ್ತಿಯನ್ನು ಗ್ರಹಿಸತಕ್ಕ ದೃಷ್ಟಾಂತವು ಸಾಧರ್ಮ್ಯ ದೃಷ್ಟಾಂತವು [ಉದಾ: ಧೂಮಮಾನದಲ್ಲಿ ಮಹಾನಸವು]

ಆ] ವ್ಯತಿರೇಕ- ವ್ಯಾಪ್ತಿಯನ್ನು ಗ್ರಹಿಸತಕ್ಕ ದೃಷ್ಟಾಂತವು. ವೈಧರ್ಮ್ಯ ದೃಷ್ಟಾಂತವು [ಉದಾಃ-ಧೂಮಾನುಮಾನದಲ್ಲಿ ಸರೋವರವು] ಉದಾಹರಣೆಯೆಂದರೆ 'ಸಮೀಚಿನ ವ್ಯಾಪ್ತಿ ಪ್ರದರ್ಶನಪೂರ್ವಕ ದೃಷ್ಟಾಂತವನ್ನು ಹೇಳುವದು. ಉದಾ;- ಯಾವುದು ಧೂಮವುಳ್ಳದ್ದೋ ಅದು ಅಗ್ನಿಯುಳ್ಳದ್ದು. ಮಹಾನಸದಂತೆ. ಈ ವಾಕ್ಯವು

१ ) साधर्म्योदाहरणं तु--अन्वयव्याप्तिदर्शनपूर्वकं (साधर्म्य) दृष्टांभिधानम्, यथा-यो धूमवान् सोऽग्निमान्, यथा महानस इति वचनम् ।

व्यतिरेकव्याप्तिप्रदर्शनपूर्वकं वैधर्म्योदादरणं, यथा—योऽग्निमान्न भवति, स धूमवान्न भवति, यथा--महान्हृद इति वचनं ।

५ ) दृष्टांते उदाहरणोपदर्शितव्याप्तिकस्य लिंगस्य, पक्षे व्याप्तिसत्त्वप्रतिपादकं वचनं, **उपनयः** ।

स द्विविधः--१ ) साधर्म्योपनयः २ ) वैधर्म्योपनयः इति च ।

१ ) साधर्म्योपनयो--महानस इव धूमवांश्चायं पर्वत इति वचनं

२ ) वैधर्म्योपनयस्तु–न च हृद इव निर्धूमः पर्वत इति वचनं।

६ ) सहेतुकं पक्षवचनं **निगमनं**, यथा धूमवत्वात् पर्वतोऽग्निमानिति वचनम् ।

---

ಉದಾಹರಣೆಯು. ಆದರೆ ಇದನ್ನು ವಿಪರೀತವಾಗಿ ಎಂದರೆ' ಯಾವುದು ಅಗ್ನಿಯುಳ್ಳದ್ದು ಅದು ಧೂಮವುಳ್ಳದ್ದು' ಎಂದು ಹೇಳಲಾಗದು. ಇದನ್ನು ತಿಳಿಸಲು 'ಸಮ್ಯಕ್' [ಸಮೀಚಿನ] ಪದವಿದೆ. ಈ ಉದಾಹರಣೆಯು i]ಸಾಧರ್ಮ್ಯ ಹಾಗೂ ii]ವೈಧರ್ಮ್ಯವೆಂದು ಎರಡು ವಿಧವಾಗಿದೆ.

i] ಸಾಧರ್ಮ್ಯೋದಾಹರಣೆ–ಅನ್ವಯುವ್ಯಾಪ್ತಿ ಪ್ರದರ್ಶನಪೂರ್ವಕ ದೃಷ್ಟಾಂತಾಭಿದಾನವು ಸಾಧರ್ಮ್ಯೋದಾಹರಣೆಯು. ಉದಾ:- 'ಯಾವುದು ಧೂಮವುಳ್ಳದ್ದು, ಅದು ಅಗ್ನಿಯುಳ್ಳದ್ದು, ಮಹಾನಸದಂತೆ' ಯೆಂಬ ವಚನವು ಇದಕ್ಕೆ ಉದಾಹರಣೆಯು.

೪] ಉಪನಯ– ದೃಷ್ಟಾಂತದಲ್ಲಿಯ ವ್ಯಾಪ್ತಿಯುಳ್ಳ, ಲಿಂಗಕ್ಕೆ ಪಕ್ಷದಲ್ಲಿ ವ್ಯಾಪ್ತಿಯಿದೆಯೆಂದು ಹೇಳುವ ವಚನವು, ಉಪನಯವು. ಈ ಉಪನಯವೂ ಎರಡು ವಿಧ– i] ಸಾಧರ್ಮ್ಯ ಉಪನಯ, ii] ವೈಧರ್ಮ್ಯ ಉಪನಯ.

ಅ] ಸಾಧರ್ಮ್ಯ ಉಪನಯವು– 'ಮಹಾನಸದಂತೆ ಧೂಮವುಳ್ಳದ್ದು ಈ ಪರ್ವತವು" ಎಂಬ ವಚನವು.

ಆ] ವೈಧರ್ಮ್ಯ ಉಪನಯವು– 'ಸರೋವರದಂತೆ ಧೂಮಾಭಾವವುಳ್ಳದ್ದು ಈ ಪರ್ವತವಲ್ಲ' ವೆಂಬ ವಚನವು.

೫] ನಿಗಮನ–ಹೇತು ಸಹಿತವಾದ ಪಕ್ಷ ವಚನವು ನಿಗಮನವು. ಉದಾ:–'ಧೂಮವತ್ವಾದುದರಿಂದ ಪರ್ವತವು ವಹ್ನಿಯುಳ್ಳದ್ದು' ಎಂಬ ವಚನವು.

**भाट्टमतानुसारेणावयवनिम** उच्यते--

१ ( प्रतिज्ञा– २) **हेतुः** – ३ ) उदाहरणमिति । उदाहरण, उप-नयन, निगमनानि वा त्रय एवावयवा इति भाट्टाः ।

उदाहरणोपनयौ द्वावेवेति बौद्धाः ।

**इति प्रकारांतरे गनैयिकोक्तानुमानविभागकथनपूर्वकं तदवयव निरूपणं तथा भाट्टाबौद्धांगीकृतावयव निरूपणं च ॥**

तन्निरसनप्रकारस्तु इत्थम्--'उदाहरणद्वैविध्यं, पञ्चैव, त्रय एव अवयवाः' इत्यादि नियमो न संभवति, व्याप्तिद्वैविध्यनि-राकरणेनोदाहरणोपनयद्वैविध्यस्यापि, निराकृतत्वात् नियमानुपपत्तेश्च।

नियमानुपपत्तिर्यथा– पंचत्र्यादिअवयवप्रवक्तरि वादिनि पुरुषे प्रतिवादिनः किमाप्तिनिश्चयो नास्ति, उत अस्तीति ।

---

i] ಭಾಟ್ಟಮತಾನುಸಾರ ಅವಯವಗಳ ನಿಯಮವು– ೧] ಪ್ರತಿಜ್ಞೆ, ೨] ಹೇತು ೩], ಉದಾಹರಣೆ– ಅಥವಾ ೧] ಉದಾಹರಣೆ. ೨] ಉಪನಯ. ೩] ನಿಗಮನ, ಎಂದಾ-ಗಲೀ ಮೂರೇ ಅವಯವಗಳೆಂದು ಹೇಳುತ್ತಾರೆ.

ii] ಭೌದ್ಧರು- ಉದಾಹರಣೆ, ಹಾಗೂ ಉಪನಯ, ಹೀಗೆ ಎರಡೇ ಅವಯವ-ಗಳೆಂದು ಹೇಳುತ್ತಾರೆ.

**ನೈಯಾಯಿಕರ ಹಾಗೂ ಭಾಟ್ಟ ಭೌದ್ಧರ ನಿಯಮಗಳ ನಿರಾಸವು**-

ಮೇಲಿನ ವಾದದ ನಿರಾಸ ಪ್ರಕಾರವು ಹೀಗಿದೆ- ಎರಡು ಪ್ರಕಾರದ ಉದಾಹರಣೆ-ಗಳೆಂಬ, ಐದು ಅಥವಾ ಮೂರು ಅವಯವಗಳೆಂಬ ನಿಯಮವು ಸರಿಯಲ್ಲ. ವ್ಯಾಪ್ತಿಯು [ಅನ್ವಯವ್ಯತಿರೇಕ, ಹಾಗೂ ವ್ಯತಿರೇಕ, ಎಂದು ] ಎರಡು ಪ್ರಕಾರಗಳೆಂಬುದನ್ನು ನಿರಾಕರಿಸಿದ್ದರಿಂದ, ಉದಾಹರಣೆ ಹಾಗೂ ಉಪನಯಗಳಲ್ಲಿಯು ಎರಡು ಪ್ರಕಾರಗ-ಳೆಂಬ ವಾದವನ್ನೂ ನಿರಾಕರಿಸಿದಂತಾಯಿತು. [ವ್ಯತಿರೇಕ ವ್ಯಾಪ್ತಿಯ ಉಪಯೋಗ-ವಿಲ್ಲೆಂದ ಬಳಿಕ ವೈಧರ್ಮ್ಯ ಉದಾಹರಣೆ, ವೈಧರ್ಮ್ಯ ಉಪನಯಗಳೂ ಅನುಪಯು-ಕ್ತವಾದಂತೆಯೇ ಸರಿ]

ಮೇಲಿನ ನಿಯಮಗಳು ಕೂಡುವದಿಲ್ಲ. ಹೇಗೆಂದರೆ, ಐದು, ಮೂರು, ಅವ-ಯವಗಳೆಂದು ಹೇಳತಕ್ಕ ವಾದಿಯನ್ನು ಕುರಿತು ಪ್ರತಿವಾದಿಗೆ ಆಪ್ತಿ ನಿಶ್ಚಯವಿದೆಯೋ ಇಲ್ಲವೇ, ಎಂದು ಕೇಳುವೆವು.

---

१ ) नास्तीति पक्षे यथार्थमेवेदं वाक्यमयम् वदतीत्याप्त्यनिश्चयेन विश्वासाभावात्पुनराकांक्षोदयात् तन्निवृत्यर्थमवयवांतरप्रयोगस्यावश्यकत्वान्न पंचावयवनियमः ।

२ ) अस्तीति पक्षे यथार्थमेवायमिदं वाक्यं वदतीति विप्रलंभकत्वाभावघटिताप्तिनिश्चये, निश्चयस्य सत्त्वेनैवास्तिकस्य मन्वादिस्मृतितः संध्यावंदनादिकर्तव्यतानिश्चयवत् प्रकृतेऽपि प्रतिज्ञामात्रेण साध्यसिद्धेः, सप्रमाणमेवायं वदतीति निश्चयसत्त्वेन- हेत्वादिरूपप्रमाणाकांक्षाविरहात् हेत्वाद्यभिदानवैयर्थ्यं, तथा च वाक्यश्रोतुः, वादिनि आप्त्यनिश्चये, निश्चये वा, पक्षद्वयेऽपि अवयवनियमोऽनुपपन्न इति ।

---

i] ವಾದಿಯು ವಿಷಯದಲ್ಲಿ ಪ್ರತಿವಾದಿಗೆ ಆಪ್ತಿನಿಶ್ಚಯವಿಲ್ಲವೆಂದರೆ, ಅವನು ಹೇಳುವ ವಾಕ್ಯದಲ್ಲಿ ಆಪ್ತಿನಿಶ್ಚಯ ಅಭಾವದಿಂದ ಯಥಾರ್ಥತೆಯ ವಿಶ್ವಾಸ ಕೂಡೂವದಿಲ್ಲ. ಆಗ ಪುನಃ ಪ್ರತಿವಾದಿಗೆ ಆಕಾಂಕ್ಷಾ ಬಂದು, ಅದನ್ನು ಪರಿಹರಿಸಲು ಅವಯವಾಂತರ ಪ್ರಯೋಗದ ಅವಶ್ಯಕತೆ ಬರುವದು. ಹೀಗೆ ಪಂಚಾವಯವಗಳೇ ಎಂಬ ನಿಯಮ ಕೂಡುವದಿಲ್ಲ.

ii] ವಾದಿ ವಿಷಯದಲ್ಲಿ ಪ್ರತಿವಾದಿಗೆ ಆಪ್ತಿನಿಶ್ಚಯವಿದೆಯೆಂದು ಅಂಗೀಕರಿಸಿದಲ್ಲಿ, ವಾದಿಯು ವಂಚಕನಲ್ಲ. ಯಥಾರ್ಥವಾಗಿಯೇ ಹೇಳುತ್ತಾನೆಂಬ ಆಪ್ತಿನಿಶ್ಚಯ ಮೂಲಕ ವಿಶ್ವಾಸ ಹುಟ್ಟುವದು. ಆಪ್ತಿನಿಶ್ಚಯ ಮೂಲಕವೇ ಆಸ್ತಿಕ ಪುರುಷನಿಗೆ ಹೇಗೆ ಮನ್ವಾದಿ ಸ್ಮೃತಿಗಳಿಂದ ಸಂಧ್ಯಾವಂದನಾದಿ ಕರ್ತವ್ಯ ನಿಶ್ಚಯವಾಗುವದೋ, ಹಾಗೆಯೇ ಪ್ರಕೃತ ವಾದಿ ವಾಕ್ಯವಾದ ಪ್ರತಿಜ್ಞಾರೂಪ ಒಂದೇ ಅವಯವದಿಂದಲೇ ಸಾಧ್ಯವು ಸಿದ್ಧಿಸುತ್ತದೆ. ಅವನು ಪ್ರಾಮಾಣಿಕವಾಗಿಯೇ ಹೇಳುತ್ತಾನೆಂಬ ನಿಶ್ಚಯ ಬುದ್ಧಿಯಿಂದ, ಹೇತ್ವಾದಿ ಅವಯವಗಳ [ಬೇರೆ ಪ್ರಮಾಣಗಳ] ಇಚ್ಛೆಯೇ ಹುಟ್ಟಲಾರದ್ದರಿಂದ, ಹೇತು ಮೊದಲಾದ ಅವಯವಗಳನ್ನು ಹೇಳುವದು ವ್ಯರ್ಥವಾಗುವದು. ಒಟ್ಟಿನಲ್ಲಿ ವಾಕ್ಯವನ್ನು ಶ್ರವಣ ಮಾಡುವವನಿಗೆ, ವಾದಿ ವಿಷಯದಲ್ಲಿ ಆಪ್ತಿನಿಶ್ಚಯವಿರಲಿ, ಇಲ್ಲದಿರಲಿ, ಎರಡೂ ಪಕ್ಷದಲ್ಲಿ ಅವಯವಗಳ ನಿಯಮವು ಕೂಡುವದಿಲ್ಲ. [ವಿವರಣೆ- ಆಪ್ತಿನಿಶ್ಚಯವಿಲ್ಲದಿದ್ದರೆ ಪುನಃ ಪುನಃ ಅವಯವಾಂತರಗಳ ಅವಶ್ಯಕತೆ ತೋರಿ ಹೇಳಬೇಕಾದ್ದರಿಂದ ಐದು ಇಲ್ಲವೇ ಮೂರು ಎಂಬ ನಿಯಮವು ಕೂಡಲಾರದು. ಆಪ್ತಿನಿಶ್ಚಯವಿದ್ದಲ್ಲಿ ಒಂದು ಅವಯವದಿಂದಲೇ ಅನುಮಿತಿ ಹುಟ್ಟುತ್ತಿರಲು ಅವಯವಾಂತರ ಪ್ರಯೋಜನವಿಲ್ಲದ್ದರಿಂದ ನಿಯಮ ಕೂಡದು]

तर्हि वादिवाक्यं कथं बोधकं भवतीति चेदुच्यते—गृहीत-व्याप्त्यादेः ( गृहीता निश्चिता, व्याप्तिः, आदिः= पक्षधर्मता येन तस्य) पुरुषस्य व्याप्त्यादिस्मारकत्वेन, अगृहीतव्याप्त्यादेः पुरुषस्य व्याप्तिज्ञानानुकूलजिज्ञासाजनकधूमाद्युपस्थितिजनकत्वेन च वादि-वाक्यं बोधकं भवतीति ध्येयम्

व्याप्तिस्मरणाद्यर्थमपि, अवयवनियमोऽपेक्ष्यते, इति चेन्न, व्या-प्तिस्मरणादिकं तु एतैश्चतुर्भिरपि प्रकारैः ( नैयायिकसौगता-भ्यां उक्तप्रकारद्वयं मीमांसकोक्तप्रकाद्वयमिति प्रकारचतुष्टयं ) तै-रनुभूयते ।

अयं भावः—मीमांसकादीनां स्वस्वनियमानुसारेण त्र्यवयव-द्व्यवयवप्रयोगे, पंचावयवादिनां नैयायिकादीनां व्याप्त्यादिमल्लिं-गोपस्थितिर्भवति वा न वा ।

---

ಹಾಗಾದರೆ, ವಾದಿಯ ವಾಕ್ಯಗಳು ಹೇಗೆ ಬೋಧಕವಾಗುವವೆಂಬ ಬಗ್ಗೆ ಶಂಕೆ ಬಂದರೆ, ಸಮಾಧಾನವು ಹೀಗಿದೆ- ವ್ಯಾಪ್ತಿ ಹಾಗೂ ಪಕ್ಷ ಧರ್ಮತಾಗಳು, ಯಾವ ಪುರುಷನಿಂದ ಗ್ರಹಿತವಾಗಿದೆಯೋ ಅವನಿಗೆ ವಾದಿಯ ವಾಕ್ಯಗಳು ವ್ಯಾಪ್ತಿ ಹಾಗೂ ಪಕ್ಷ ಧರ್ಮತಾಗಳನ್ನು ಸ್ಮರಣೆಗೆ ತಂದು ಕೊಡುತ್ತವೆ. ಯಾವ ಪುರುಷನಿಗೆ ವ್ಯಾಪ್ತಿ ಹಾಗೂ ಪಕ್ಷಧರ್ಮತಾಗಳು ಗ್ರಹಿತವಾಗಿಲ್ಲವೋ [ಅವುಗಳ ಜ್ಞಾನವಿಲ್ಲವೋ] ಅಂಥವನಿಗೆ ವ್ಯಾಪ್ತಿಜ್ಞಾನಕ್ಕೆ ಅನುಕೂಲವಾದ ಜಿಜ್ಞಾಸೆ ಹುಟ್ಟಿಸುವ ಮೂಲಕ ಧೂಮಾದಿ ಜ್ಞಾನಕ್ಕೆ ಕಾರಣವಾಗಿ ವಾದಿಯ ವಾಕ್ಯವು ಭೋಧಕವಾಗುವದೆಂದು ತಿಳಿಯಬೇಕು.

ವ್ಯಾಪ್ತಿ ಹಾಗೂ ಪಕ್ಷ ಧರ್ಮತಾ ಅವುಗಳ ಸ್ಮರಣೆ ಬರುವವದಕ್ಕಾಗಿಯಾದರೂ ಅವಯವ ನಿಯಮಗಳು ಬೇಕೆಂದಲ್ಲಿ, ವ್ಯಾಪ್ತಿ ಪಕ್ಷ ಧರ್ಮತೆಗಳ ಸ್ಮರಣೆಯು ಪೂರ್ವದಲ್ಲಿ ಹೇಳಿದ ನಾಲ್ಕು ಪ್ರಕಾರಗಳಿಂದಲೂ [ನೈಯಾಯಿಕರ ಹಾಗೂ ಬೌದ್ಧರ ಒಂದೊಂದು ಪ್ರಕಾರ ಹಾಗೂ ಮೀಮಾಂಸಕರು [ಭಾಟ್ಟರು] ಹೇಳುವ ಎರಡು ಪ್ರಕಾರ ಹೀಗೆ ಒಟ್ಟು ನಾಲ್ಕು ಪ್ರಕಾರಗಳಿಂದ] ಅನುಭೂತವಾಗುವದು. (ಆದ್ದರಿಂದ ಇಷ್ಟೇ ನಿಯ-ಮಗಳಿಂದು ನಿಯಮ ಬೇಕಿಲ್ಲ. ವ್ಯಾಪ್ತಿ ಪಕ್ಷ ಧರ್ಮಗಳ ಸ್ಮರಣೆಗೆ ಎಷ್ಟು ಅವಯವಗಳು-ಪಯುಕ್ತವೋ ಅಷ್ಟೇ ಸಾಕು ಎಂಬ ಭಾವವು)

ಇಲ್ಲಿ ಹೀಗೆ ಅಭಿಪ್ರಾಯವಿದೆ–ಮೀಮಾಂಸಕರು ಹಾಗೂ ಬೌದ್ಧರು ತಮ್ಮ ನಿ-ಯಮಾನುಸಾರ ಕ್ರಮವಾಗಿ ಮೂರು ಇಲ್ಲವೇ ಎರಡು ಅವಯವಗಳನ್ನು ಪ್ರಯೋಗ ಮಾಡಿದಲ್ಲಿ, ಐದು ಅವಯವಗಳನ್ನಂಗೀಕರಿಸಿದ ನೈಯಾಯಿಕರಿಗೆ

नेति पक्षे-नैयायिकादयो मीमांसकादीन् न निराकुर्युः, तदुक्तलिंगाबोधात्, ( व्याप्तिपक्षधर्मताविशिष्टलिंगस्मरणाभावात्, एवमग्रेऽपि ) एवं मीमांसकादयोऽपि न नैयायिकादीन् निराकुर्युः, तदुक्तलिंगाबोधात्, प्रत्युत परस्परं स्वावयवनियमसंरक्षणाय एते कथांतरारंभं कुर्युः । तत्राप्युक्तरीत्या परस्परमबोधे स्वावयवसमर्थनानुपपत्तिरिति, वादिप्रतिवादिनोः मूकीभाव एवापद्येत, तस्मात् समयबंधानुसारेण स्वस्वरीत्याऽवयवप्रयोग एव परस्परं बोधो भवतीति, आद्यपक्षोंऽगीकार्यः, तथा च पंचावयवादिनियमाभावेऽपि व्याप्त्यादिमल्लिंगबोधोऽनुभूयत इति सर्वैरंगीकृतत्वात्, न तन्नियमो युक्त इति बोध्यम् । **इतिभावविवरणे** ।
अपि च प्रमाणलक्षणटीकायां, उक्तं च--

---

ವ್ಯಾಪ್ತಿ ಸಹಿತ ಲಿಂಗಜ್ಞಾನವಾಗುವದೋ ಇಲ್ಲವೋ ? ಮೀಮಾಂಸಕರಿಂದ ಇಲ್ಲವೇ ಬೌದ್ಧರಿಂದ ಉಕ್ತವಾದ ಅವಯವಗಳಿಂದ ವ್ಯಾಪ್ತಿ ವಿಶಿಷ್ಟ ಲಿಂಗಜ್ಞಾನ ಆಗುವದಿಲ್ಲವೆಂದರೆ, ನೈಯಾಯಿಕರು ಅವರಿಬ್ಬರನ್ನು ನಿರಾಕರಿಸದೇ ಹೋಗಲಿ ಅದರಂತೆ ಮೀಮಾಂಸಕ ಮೊದಲಾದವರು ನೈಯಾಯಿಕರನ್ನು ನಿರಾಕರಿಸಲಾರರು.

ನಿರಾಕರಣವೇ ಕೂಡುವದಿಲ್ಲವಾದ್ದರಿಂದ ಉಭಯುತರರು ತಮ್ಮ ತಮ್ಮ ಅವಯವಗಳ ಸಂರಕ್ಷಣಾರ್ಥವಾಗಿ ಬೇರೆ ಬೇರೆ ವಾದಗಳನ್ನೇ (ಕಥಾಂತರ) ಮಾಡಬೇಕಾದೀತು. ಆ ಕಥಾಂತರದಲ್ಲಿ ಕೂಡಾ ಪರಸ್ಪರ ಅವಯವಗಳಿಂದ ಲಿಂಗಜ್ಞಾನವಾಗದೇ ಅದರಿಂದ ಸ್ವಕೀಯ ಅವಯವಗಳ ಸಮರ್ಥನೆಯಾಗದೇ, ವಾದಿ ಪ್ರತಿವಾದಿಗಳು ಮೂಕಭಾವ ಹೊಂದಬೇಕಾಗುವದು. ಆದುದರಿಂದ, ಸಮಯ ಬಂಧಾನುಸಾರವಾಗಿ ಎಂದರೆ ಪರಸ್ಪರರು ಒಪ್ಪಿಕೊಂಡ ನಿಯಮಾನುಸಾರವಾಗಿ ತಮ್ಮ ತಮ್ಮ ರೀತಿಯಿಂದಲೇ ಅವಯವ ಪ್ರಯೋಗ ಮಾಡುವದರಿಂದ, ವಾದಿ-ಪ್ರತಿವಾದಿಗಳಿಗೆ, ಪರಸ್ಪರ ಲಿಂಗಜ್ಞಾನವಾಗುತ್ತದೆಯೆಂದು ಪ್ರಥಮ ಪಕ್ಷವನ್ನು ಒಪ್ಪಬೇಕು. ಹಾಗೆಯೇ ಐದು ಅವಯವಗಳ ನಿಯಮವಿಲ್ಲದಾಗಲೂ ಸಹ, ಐದು ಅವಯವಗಳನ್ನಂಗೀಕರಿಸಿದ ನೈಯಾಯಿಕರಿಗೂ ವ್ಯಾಪ್ತಿ ಸಹಿತ ಲಿಂಗಜ್ಞಾನವಾಗುತ್ತದೆಯೆಂದು ಒಪ್ಪಿಕೊಳ್ಳಬೇಕು. ಹೀಗೆ ಎಲ್ಲರೂ ಒಪ್ಪಿಕೊಂಡದ್ದರಿಂದ ಇಷ್ಟೇ ಅವಯವಗಳೆಂಬ ನಿಯಮವು ಸರಿಯಲ್ಲವೆಂದು ತಿಳಿಯಬೇಕು. (ಹೀಗೆ ಭಾವ ವಿವರಣದಲ್ಲಿ ನಿರೂಪಿಸಲ್ಪಟ್ಟಿದೆ)

ಅದರಂತೆಯೇ ಪ್ರಮಾಣ ಲಕ್ಷಣ ಟೀಕಾದಲ್ಲಿ ಹೀಗೆ ಹೇಳಿದೆ-

यस्य यावता विना न बोधः, तं प्रति तावदभिधानस्येष्टत्वात्, विचित्रबुद्धयो हि पुरुषा इति ।

**इति नैयायिकाद्युक्तावयवनियमानुपपत्तिसमर्थनम् ।**

न केवलं चत्वार एव परोपदेशाः ( न्यायावयवाः ) परोक्ताः, किंत्वन्येऽपि संति, व्याप्तिस्मरणसहितलिंगज्ञानजननविषये तानि सप्तविधानीति निरूप्यते--

१ ) पर्वतो, अग्निमान्, धूमवत्त्वात्, महानसवत् इति वचनं, प्रतिज्ञाहेतूदाहरणैकदेशदृष्टांतवचनेनानुमानमुद्राभिज्ञस्य व्याप्तिग्रहणस्थले उक्ते, व्याप्तिस्मृतिर्भवत्येव, उदाहरणवचनाभावप्रयुक्तन्यूनता नास्ति ।

२) वन्हिव्याप्यधूमवानयं पर्वतोऽग्निमानिति हेतुगर्भपक्षवचनंवा,

---

"ಪುರುಷರು ವಿಭಿನ್ನ ಬುದ್ಧಿಯುಳ್ಳವರಾದ್ದರಿಂದ ಯಾರಿಗೆ ಎಷ್ಟು ಅವಯವಗಳು ಇಲ್ಲದೇ ಇದ್ದರೆ ವ್ಯಾಪ್ತಿ ಸಹಿತ ಲಿಂಗಜ್ಞಾನವಾಗುವದಿಲ್ಲವೋ ಅಷ್ಟು ಮಾತ್ರ ಅವಯವಗಳನ್ನು ಅವರನ್ನು ಕುರಿತು ಹೇಳುವದು ಇಷ್ಟವು"

**ಪರೋಪದೇಶಗಳು ಏಳು ಪ್ರಕಾರವೆಂಬ ರೀತಿಯಿಂದ ಪುನಃ ಅನುಮಾನ ವಿಭಾಗವು-**

ಅನ್ಯರು ಹೇಳಿದ ನ್ಯಾಯದ ಅವಯವಗಳು (ಪರೋಪದೇಶಗಳು) ನಾಲ್ಕೇ ಪ್ರಕಾರ ಎಂಬುದು ಸರಿಯಲ್ಲ. ವ್ಯಾಪ್ತಿ ಸ್ಮರಣೆ ಸಹಿತ ಲಿಂಗಜ್ಞಾನ ಹುಟ್ಟಿಸುವದರಲ್ಲಿ ಬೇರೆ ಅವಯವಗಳೂ ಇರುತ್ತವೆ. ಅವು ಒಟ್ಟು ಏಳು ಪ್ರಕಾರಗಳಿವೆ. ಹೇಗೆಂದರೆ-

೧) 'ಪರ್ವತವು ಅಗ್ನಿಯುಳ್ಳದ್ದು ಧೂಮವಿರುವದರಿಂದ, ಮಹಾನಸದಂತೆ' ಎಂಬ ವಚನದಲ್ಲಿ ಪ್ರತಿಜ್ಞೆ, ಹೇತು, ಉದಾಹರಣೆಯ ಒಂದು ಭಾಗವಾದ (ಅಡುಗೆ ಮನೆ) ದೃಷ್ಟಾಂತವು ಇದ್ದು, ಅನುಮಾನ ಪ್ರಯೋಗದ ರೀತಿಯನ್ನು ತಿಳಿದವನಿಗೆ, ವ್ಯಾಪ್ತಿ ಗ್ರಹಣ ಮಾಡತಕ್ಕ ಸ್ಥಳವನ್ನು ಹೇಳಿದಲ್ಲಿ ವ್ಯಾಪ್ತಿ ಸ್ಮರಣೆಯು ಬಂದೇ ಬರುತ್ತದೆ. ಇಲ್ಲಿ ಉದಾಹರಣೆ ವಾಕ್ಯ ಹೇಳದೇ ಇರುವದರಿಂದ ಯಾವ ನ್ಯೂನತೆಯು ಬರುವದಿಲ್ಲ. ( ಅವಯವ ಕಡಿಮೆ ಇದ್ದರೂ ವ್ಯಾಪ್ತಿ ಸ್ಮರಣೆಯಿಂದ ಅನುಮತಿ ಹುಟ್ಟುತ್ತದೆ. ಕಾರಣ ಅವಯವಗಳು ಇಷ್ಟೇ ಎಂಬ ನಿಯಮ ಬೇಕಾಗಿಲ್ಲ.

೨) 'ವಹ್ನಿಯಿಂದ ವ್ಯಾಪ್ತವಾದ ಧೂಮವುಳ್ಳ ಈ ಪರ್ವತವು ಅಗ್ನಿಯುಳ್ಳದ್ದು' ಎಂಬ ಹೇತು ಗರ್ಭಪಕ್ಷವುಳ್ಳ ವಚನದಲ್ಲಿ ಪಂಚಮೀ ವಿಭಕ್ತಿಯುಳ್ಳ ಹೇತು ವಾಕ್ಯ

अत्र धूमवत्त्वादिति पंचम्यंतप्रयोगाभावेऽपि, लोके शास्त्रे, हेतुगर्भप्रयोगान् दृष्टवतो व्युत्पन्नस्य, व्याप्तिपक्षधर्मताविशिष्टलिंगप्रतीतिर्भवतीति न न्यूनता ।

३ ) अग्निमानिति कश्चित्, अनग्निमानित्यन्यः, तत्र द्वयोर्विवादेन अग्निमान्पर्वत इति प्रतिज्ञासिद्धौ, कुतः पर्वतोऽग्निमानिति प्रश्ने, धूमवत्त्वादिति हेतुमात्रवचनं, अत्रोक्तवचनेन साध्यधर्मस्य, लिंगधर्मिणश्चोपस्थितेः, सामर्थ्यलिंगस्मृत्यादिसंभवात् न न्यूनता ।

४ ) पर्वतस्याग्निमत्त्वे किं प्रमाणमिति पृष्टे अग्निव्याप्यधूमवत्त्वादिति लिंगोक्तिमात्रं वा । तेनैव सामर्थ्यलिंगस्मृत्यादिकमिति न न्यूनता ।

---

ಇಲ್ಲದೇ ಇದ್ದರೂ, ಲೌಕಿಕ ಹಾಗೂ ಶಾಸ್ತ್ರ ರೀತಿಗಳಿಂದ ಹೇತುಗರ್ಭ ಪ್ರಯೋಗ-ಗಳನ್ನು ತಿಳಿದ ಪುರುಷನಿಗೆ ವ್ಯಾಪ್ತಿ ಸಹಿತ ಪಕ್ಷ ಧರ್ಮತಾದಿಂದ ಕೂಡಿದ ಲಿಂಗಜ್ಞಾ-ನವು ಬಂದೇ ಬರುತ್ತದೆ. ಆದ್ದರಿಂದ ಅನುಮಾತಿ ಹುಟ್ಟುತ್ತದೆ ಹೀಗಾಗಿ ಹೇತುವಚನ ಹೇಳದೇ ಇದ್ದ ಪ್ರಯುಕ್ತ ನ್ಯೂನತೆ ಬರುವದಿಲ್ಲ.

೩) ಒಬ್ಬನು 'ಪರ್ವತವು ಅಗ್ನಿಯುಳ್ಳ' ದೆಂದೂ, ಇನ್ನೊಬ್ಬನು ಅಗ್ನಿಯುಳ್ಳದ್ದಲ್ಲ' ವೆಂದೂ ವಿವಾದ ಮಾಡುತ್ತಿರುವಾಗ್ಗೆ, ಈ ಇಬ್ಬರ ವಿವಾದದಿಂದ 'ಪರ್ವತವು ಅಗ್ನಿಯು-ಳ್ಳದ್ದು' ಎಂಬ ಪ್ರತಿಜ್ಞಾವಚನವು ಸಿದ್ಧಿಸುತ್ತಿರಲು, ಪರ್ವತವು ಅಗ್ನಿಯುಳ್ಳದ್ದೇಕೆ ? ಎಂದು ಪ್ರಶ್ನೆ ಮಾಡಲು, 'ಧೂಮವು ಇರುವದರಿಂದ' ಎಂದು ಹೇತು ವಚನವೊಂದ-ನ್ನೇ ಹೇಳಿದಾಗಲೂ, ಈ ಹೇತು ವಚನವೊಂದರಿಂದಲೇ, ವ್ಯಾಪ್ತಿ ಸ್ಮರಣೆಸಹಿತ, ಪಕ್ಷ ಧರ್ಮತಾ ವಿಶಿಷ್ಟ ಲಿಂಗಜ್ಞಾನವು ಆಗುವದು. ಆದ್ದರಿಂದ ಅನುಮಿತಿ ಹುಟ್ಟುವದು. ಉಳಿದ ಅವಯವಗಳ ಅಭಾವ ಪ್ರಯುಕ್ತ ನ್ಯೂನತಾ ಬರಲಾರದು.

೪) 'ಪರ್ವತವು ಅಗ್ನಿಯುಳ್ಳದ್ದು' ಎಂಬಲ್ಲಿ ಪ್ರಮಾಣವೇನು ? ಎಂದು ಪ್ರಶ್ನೆ ಮಾಡಿದಾಗ್ಗೆ, 'ಅಗ್ನಿಯಿಂದ ವ್ಯಾಪ್ತವಾದ ಧೂಮವುಇರುವದರಿಂದ" ಎಂದು ಹೇತು ವಾಕ್ಯ ಹೇಳುವದರಿಂದಲೇ, ವ್ಯಾಪ್ತಿಸ್ಮರಣ ಸಹಿತ ಪಕ್ಷ ಧರ್ಮತಾ ವಿಶಿಷ್ಟ ಲಿಂಗಜ್ಞಾನವಾಗುತ್ತದೆ. (ಆದ್ದರಿಂದ ಅನುಮಿತಿ ಹುಟ್ಟುತ್ತದೆ) ಹೀಗಾಗಿ ಉಳಿದ ಅವಯವಗಳ ಅಭಾವದಿಂದ ನ್ಯೂನತೆಯಿಲ್ಲ.

---

५) धूमवन्महानसवत् अग्निमानिति सप्रतिज्ञं हेतुगर्भं दृष्टांतवचनं वा। अस्मिन्पक्षे महानसवदिति व्याप्तेः, धूमवदिति दृष्टांतविशेषणेन पक्षधर्मतायाश्चोपस्थितिरिति न न्यूनता।

६) अग्निव्याप्यधूमोऽत्र पर्वतेऽस्ती त्युपनयो वा, अत्रापि व्याप्तिपक्षधर्मतोपस्थितिरस्त्येवेति न न्यूनता।

७) व्याप्तिमद्धूमवत्त्वात् पर्वतोऽग्निमानिति निगमनं वा, अत्रापि व्याप्तिपक्षधर्मस्थितेः सत्त्वात् न न्यूनता।

एते सप्त प्रकाराः, तत्र तत्र शास्त्रे परीक्षकैर्व्यवहृताः। तस्मात् परीक्षकव्यवहारातिक्रमाभावात् न न्यूनाधिकमुद्भावनीयं तथा च १) कार्य - २) कारण - ३) अकार्यकारण - ४) दृष्ट - ५) सामान्यतो दृष्ट - ६) साधन - ७) दूषण - ८) स्वार्थ - ९) परार्थभेदभिन्नमस्मदुक्तप्रकारोपेतमेवानुमानमिति बोध्यम्।

---

೫) 'ಧೂಮವುಳ್ಳ ಮಹಾನಸದಂತೆ, ಅಗ್ನಿಯುಳ್ಳದ್ದು ಪರ್ವತವು' ಎಂದು ಪ್ರತಿಜ್ಞಾಸಹಿತ ಹೇತುಗರ್ಭಿತ ದೃಷ್ಟಾಂತ ವಚನವು ಇಲ್ಲಿದೆ. ಇಲ್ಲಿ 'ಮಹಾನಸದಂತೆ' ಎಂಬುದರಿಂದ ವ್ಯಾಪ್ತಿ ಜ್ಞಾನವೂ 'ಧೂಮವುಳ್ಳ' ಎಂಬ ವಿಶೇಷಣದಿಂದ ಕೂಡಿದ ದೃಷ್ಟಾಂತದಿಂದ, ಪಕ್ಷಧರ್ಮದ ಜ್ಞಾನವು ಆಗುವದರಿಂದ ಅನುಮಿತಿ ಹುಟ್ಟುತ್ತದೆ. ಆದ್ದರಿಂದ ಅವಯುವಗಳ ಅಭಾವ ಪ್ರಯುಕ್ತ ನ್ಯೂನತಾ ಬರಲಾರದು.

೬) 'ಅಗ್ನಿಯಿಂದ ವ್ಯಾಪ್ತವಾದ ಧೂಮವು ಈ ಪರ್ವತದಲ್ಲಿದೆ' ಎಂಬ ಉಪನಯ ವಾಕ್ಯದಲ್ಲಿಯೂ ವ್ಯಾಪ್ತಿ ಸ್ಮರಣಸಹಿತ ಪಕ್ಷಧರ್ಮತಾ ವಿಶಿಷ್ಟ ಲಿಂಗಜ್ಞಾನವು ಆಗುವದರಿಂದ, ಉಳಿದ ಅವಯವಗಳ ಅಭಾವದ ಮೂಲಕ ನ್ಯೂನತಾ ದೋಷವಿಲ್ಲ.

೭) "ವ್ಯಾಪ್ತಿಯುಳ್ಳ ಧೂಮ ಇರುವದರಿಂದ ಪರ್ವತವು ಅಗ್ನಿಯುಳ್ಳದ್ದು" ಎಂಬ ನಿಗಮನ ವಚನದಲ್ಲಿಯೂ ವ್ಯಾಪ್ತಿ ಹಾಗೂ ಪಕ್ಷ ಧರ್ಮತಾ ವಿಶಿಷ್ಟ ಲಿಂಗಜ್ಞಾನವು ಹುಟ್ಟುವದರಿಂದ, ಅನುಮಿತಿ ಹುಟ್ಟುವದು. ಇಲ್ಲಿಯೂ ಕೂಡ ಅವಯುವಗಳ ಅಭಾವ ಪ್ರಯುಕ್ತ ನ್ಯೂನತಾ ಇಲ್ಲ.

ಈ ರೀತಿ ಏಳು ಪ್ರಕಾರಗಳು ಅಲ್ಲಲ್ಲಿ ಶಾಸ್ತ್ರದಲ್ಲಿ ಪರೀಕ್ಷಕರಿಂದ ವ್ಯವಹರಿಸಲ್ಪಟ್ಟಿವೆ. ಪರೀಕ್ಷಕರ ವ್ಯವಹಾರವನ್ನು ಅತಿಕ್ರಮಿಸಲಾಗದ್ದರಿಂದ ನ್ಯೂನತೆಯನ್ನಾಗಲೀ, ಆಧಿಕ್ಯವನ್ನಾಗಲೀ ಹೇಳಕೂಡದು. ಹಾಗೂ ೧) ಕಾರ್ಯಾನುಮಾನ, ೨) ಕಾರಣಾನುಮಾನ ೩) ಅಕಾರ್ಯಕಾರಣಾನುಮಾನ ೪) ದೃಷ್ಟಾನುಮಾನ

॥ इति परोपदेशानां सप्तविधत्वकथनपूर्वकं पुनरनुमानविभाग निरूपणम् ॥

इति नैयायिकोक्तानुमानभङ्गप्रकरणम्

## ४ ) उपपत्तिदोषविचारप्रकरणम्

१) अथ निर्दोषोपपत्तिरनुमानमित्युक्तम्, तत्रोपपत्तिदोषाः किंलक्षणकाः कियन्त इति चेदुच्यते—

यत्सद्भावे लिङ्गाभिमतमनुमितिप्रमां न जनयति संशयविपर्ययौ वा करोति स उपपत्तिदोषः, तथा च दोषत्वं नाम प्रमाप्रतिबन्धकत्वम्, तत् प्रतिबन्धकत्वं च ज्ञानाजनकत्वेन क्वचित् संशयविपर्ययजनकत्वेन वा विवक्षितम् ।

कियन्त इत्तस्योत्तरं तु--ते दोषा द्विविधाः । १ )अर्थ - २) वचन- दोषभेदात्, तत्र ( अर्थदोषवचनदोषयोर्मध्ये ) लिङ्गाभिमतस्योपपत्तेरेव अर्थस्य साक्षाद्दोषौ १ )विरोधः, २ ) असंगतिश्चेति

---

೫) ಸಾಮಾನ್ಯವಾದ ದೃಷ್ಟಾನುಮಾನ ೬) ಸಾಧನಾನುಮಾನ, ೭) ದೂಷಣಾನುಮಾನ ೮) ಸ್ವಾರ್ಥಾನುಮಾನ ೯) ಪರಾರ್ಥಾನುಮಾನಗಳೆಂದು ಒಂಬತ್ತು ಪ್ರಕಾರವಾಗಿ ನಮ್ಮಿಂದ ಹೇಳಲ್ಪಟ್ಟವುಗಳಿಗೆ ಅನುಮಾನಗಳೆಂದು ತಿಳಿಯಬೇಕು.

೪] ಉಪಪತ್ತಿ ದೋಷ ವಿಚಾರ ಪ್ರಕರಣವು.

೧] ಉಪಪತ್ತಿಯ ದೋಷಗಳು ಹಾಗೂ ಅವುಗಳಲ್ಲಿಯ ಪ್ರಕಾರಗಳು.

ನಿರ್ದೋಷವಾದ ಉಪಪತ್ತಿಯು [ಯುಕ್ತಿಯು] ಅನುಮಾನವೆಂದು ಹೇಳಿದ್ದಾಯಿತು.

* ಉಪಪತ್ತಿ ದೋಷಗಳ ಲಕ್ಷಣವೇನು ? ಅವು ಎಷ್ಟು ಪ್ರಕಾರಗಳೆಂದರೆ, ಹೀಗಿದೆ–

ಯಾವುದಿರುವದರಿಂದ ಲಿಂಗವೆಂದು ಹೇಳಲ್ಪಡುವದು, ಅನುಮಿತಿ ಜ್ಞಾನವನ್ನು ಹುಟ್ಟಿಸುವದಿಲ್ಲವೊ, ಇಲ್ಲವೇ ಸಂಶಯ ವಿಪರೀತಜ್ಞಾನಗಳನ್ನು ಹುಟ್ಟಿಸುವದೋ ಅದು ಉಪಪತ್ತಿಯ ದೋಷವು. ಇಲ್ಲಿ ಪ್ರಮಾಪ್ರತಿಬಂಧಕವಾಗಿರುವದೇ ದೋಷವು. ಪ್ರಮಾಪ್ರತಿಬಂಧಕವು ಎರಡು ವಿಧವಾಗಿದೆ– ೧] ಜ್ಞಾನವನ್ನೇ ಹುಟ್ಟಿಸದಿರುವದು ಅಥವಾ ೨] ಸಂಶಯ ಇಲ್ಲವೇ ವಿಪರ್ಯಯ ಜ್ಞಾನವನ್ನಾದರೂ ಹುಟ್ಟಿಸುವದು– ಎಂದು ತಿಳಿಯಬೇಕು.

ಈ ದೋಷಗಳು ಎಷ್ಟು ಪ್ರಕಾರಗಳಿವೆ ? ಈ ದೋಷಗಳು ಎರಡು ಪ್ರಕಾರಗಳಾಗಿವೆ. ೧] ಅರ್ಥದೋಷ ೨] ವಚನ ದೋಷ

द्विविधौ, तद्द्वारा वचनस्यापि दोषौ, अर्थस्यासाधुत्वे वचनस्याप्यासाधुत्वादिति ।

तत्र विरोधो नाम योग्यताभावः, परस्परमन्वययोग्यताभाव इति यावत्, स कुत्र दृष्ट इति चेत्, वन्हिरनुष्णः पदार्थत्वादित्यत्र वन्ह्यनुष्णत्वयोः परस्परमन्वययोग्यता नास्तीति दृष्टः ।

२ ) असंगतिर्नाम, आकांक्षाविरहः, आकांक्षा नाम जिज्ञासा, जिज्ञासाविषयत्वाभावः, आकांक्षाविरह इति यावत्, पर्वतोऽनग्निमानित्यत्र आकांक्षाविरहोऽस्तीति ज्ञेयः ।

वचनदोषौ तु न्यूनाधिक्ये, वचनद्वारेणार्थस्यापि दोषौ, वचनासाधुत्वे तदर्थस्याप्यसाधुत्वादिति ।

---

ಇವೆರಡರ ಮಧ್ಯದಲ್ಲಿ ಲಿಂಗಾಭಿಮತವಾದ ಉಪಪತ್ತಿರೂಪ ಅರ್ಥದ ಸಾಕ್ಷಾತ್ ದೋಷಗಳು, ಮತ್ತೆ ಎರಡು ಪ್ರಕಾರವಾಗಿವೆ- ೧] ವಿರೋಧ ಹಾಗೂ ೨] ಅಸಂಗತಿ ಎಂದು. ಅರ್ಥವು ದುಷ್ಟವಾದಲ್ಲಿ ವಚನವೂ ದುಷ್ಟವಾಗುವದರಿಂದ, ಇವು ಅರ್ಥದ್ವಾರಾ ವಚನ ದೋಷಗಳೂ ಆಗಿವೆ.

೧] ವಿರೋಧವೆಂದರೆ- ಯೋಗ್ಯತೆಯ ಅಭಾವವು ಎಂದರೆ ಪರಸ್ಪರ ಅನ್ವಯ ಯೋಗ್ಯತಾ ಇಲ್ಲದಿರುವಿಕೆಯು-ಇದು ಎಲ್ಲಿ ಕಂಡಿದೆಯೆಂದರೆ-'ವಹ್ನಿಯು ಅನುಷ್ಣವಾದುದು, ಪದಾರ್ಥವಾದುದರಿಂದ' ಎಂಬ ಅನುಮಾನದಲ್ಲಿ 'ವಹ್ನಿ' ಹಾಗೂ 'ಅನುಷ್ಣ' [ಶೈತ್ಯ] ಗಳಲ್ಲಿ ಪರಸ್ಪರ ಅನ್ವಯ ಯೋಗ್ಯತಾಗಳಿಲ್ಲನೆಂಬುದು ಪ್ರತ್ಯಕ್ಷಸಿದ್ಧವಾಗಿದೆ.

[ವಹ್ನಿ ಇದ್ದಲ್ಲಿ ಶೈತ್ಯವಿಲ್ಲ, ಶೈತ್ಯವಿದ್ದಲ್ಲಿ ವಹ್ನಿಯಿಲ್ಲವೆಂಬುದು ಸಿದ್ಧವು]

೨] ಅಸಂಗತಿಯೆಂದರೆ- ಆಕಾಂಕ್ಷೆಯ ಅಭಾವವು. ಆಕಾಂಕ್ಷೆ ಎಂದರೆ 'ಜಿಜ್ಞಾಸೆ'ಯು, ಜಿಜ್ಞಾಸಾ ಇಲ್ಲದಿರುವದೇ ಆಕಾಂಕ್ಷಾವಿರಹವು. 'ಪರ್ವತವು ಅಗ್ನಿಯುಳ್ಳದ್ದಲ್ಲ' ಎಂಬ ಪ್ರತಿಜ್ಞಾ ವಾಕ್ಯದಲ್ಲಿ ಆಕಾಂಕ್ಷೆಯೇ ಹುಟ್ಟುವದಿಲ್ಲವಾದ್ದರಿಂದ ಈ ವಾಕ್ಯವು "ಆಕಾಂಕ್ಷಾ ವಿರಹ" ರೂಪ ಅಸಂಗತಿವುಳ್ಳದ್ದೆಂದು ತಿಳಿಯಬೇಕು.

ವಚನ ದೋಷಗಳು- ೧] ನ್ಯೂನ ಹಾಗೂ ೨] ಆಧಿಕ್ಯ ಎಂದು ಎರಡು ಪ್ರಕಾರಗಳಿವೆ. ವಚನವು ದುಷ್ಟವಾದಲ್ಲಿ ಅರ್ಥವೂ ದುಷ್ಟವಾಗುವದರಿಂದ ಇವು ವಚನ ಮೂಲಕ ಅರ್ಥಕ್ಕೂ ದೋಷಗಳಾಗುತ್ತವೆ.

तत्र न्यूनं, यं प्रति यावद्वक्तव्यं तदेकदेशवचनम्, यथा पर्वतो धूमवत्त्वादिति, तथा च "यावत्पदसमुदायं विना स्वतात्पर्यज्ञानं न संभवति तावत्पदसमुदायाघटितत्वं न्यूनत्वम्,, इत्यादर्शे ।

न्यूनत्वस्य वचनदोषत्वं कुतः? सन्निध्यभावादिति, सन्निधिश्च, अविलंबेनोच्चरितत्वं, तदभावः सन्निध्यभावः, तथा च दोषत्वं नाम वाक्यार्थप्रमोपयुक्तसन्निधिविघटकत्वं, तेन निमित्तेन न्यूनत्ववचनदोष इति ।

२) आधिक्यं नाम, आकांक्षितस्यैववान्येन कृतकार्यस्य वचनं (प्रयोगाधिक्यमिति यावत्), यथा—पर्वतोऽग्निमान् धूमवत्त्वात् प्रकाशविशेषाच्चेत्यत्राधिक्यं दोषः ।

---

'ನ್ಯೂನ' ವೆಂದರೆ ಯಾರನ್ನು ಕುರಿತು ಎಷ್ಟು ಹೇಳಬೇಕು. ಆದರ ಏಕದೇಶವನ್ನು ಮಾತ್ರ ಹೇಳುವದು. ಉದಾಹರಣೆಗೆ- 'ಪರ್ವತವು ಧೂಮವಿರುವದರಿಂದ' ಎಂಬ ವಾಕ್ಯವು ನ್ಯೂನವಾದುದು. ಹೀಗೆ ಎಷ್ಟು ಪದಗಳ ಸಮುದಾಯವಿಲ್ಲದಿದ್ದರೆ ಆ ವಾಕ್ಯದ ತಾತ್ಪರ್ಯ ಜ್ಞಾನವಾಗುವದಿಲ್ಲವೋ, ಅಷ್ಟು ಪದಗಳ ಸಮುದಾಯವಿಲ್ಲದಿರುವದೇ ನ್ಯೂನತೆಯು' ಎಂದು [ಶ್ರೀ ಹುಲಗಿ ನರಸಪ್ಪಾಚಾರ್ಯರ] 'ಆದರ್ಶ' ವೆಂಬ ಟಿಪ್ಪಣೆಯಲ್ಲಿ ಹೇಳಿದೆ.

'ನ್ಯೂನತೆಯು' ವಚನ ದೋಷ ಹೇಗಾಗುವದು ? ಅದು ಹೀಗೆ- ಸನ್ನಿಧಿಯ ಅಭಾವದಿಂದ ದೋಷವಾಗುತ್ತದೆ. 'ಸನ್ನಧಿ' ಎಂದರೆ ವಿಲಂಬವಿಲ್ಲದೇ ಉಚ್ಚರಿಸುವದು. ಇದರ ಅಭಾವವೇ ಸನ್ನಿಧಿಯ ಅಭಾವವು. ಹಾಗೂ 'ವಚನ ದೋಷ' ವೆಂದರೆ ವಾಕ್ಯಾರ್ಥದ ಸಮ್ಯಕ್ ಜ್ಞಾನಕ್ಕೆ ಉಪಯುಕ್ತವಾದ ಸನ್ನಿಧಿಯನ್ನು ತಪ್ಪಿಸುವದು. ಈ ನಿಮಿತ್ತದಿಂದ "ನ್ಯೂನತ್ವ"ವು ವಚನದೋಷವಾಗುವದೆಂದು ತಿಳಿಯಬೇಕು.

೨] ಆಧಿಕ್ಯವೆಂದರೆ- ಆಕಾಂಕ್ಷಿತವಾದದ್ದಲ್ಲದೆ, ಪ್ರಯೋಜನವಿಲ್ಲದ ಬೇರೆ ವಾಕ್ಯ ಪ್ರಯೋಗವು ಆಧಿಕ್ಯವು. [ಬೇರೆ ವಾಕ್ಯದಿಂದಲೇ ಅರ್ಥಸಿದ್ಧಿಯಾಗುತ್ತಿರಲು ವಾಕ್ಯಾಂತರವನ್ನು ಹೇಳುವದು ಕೃತ ಕಾರ್ಯವಾದ ವಚನವು. ಅದಕ್ಕೆ ಪ್ರಯೋಜನವಿಲ್ಲ]

ಉದಾಹರಣೆಗೆ- "ಪರ್ವತವು ಅಗ್ನಿಯುಳ್ಳದ್ದು" ಧೂಮವಿರುವದರಿಂದ ಹಾಗೂ ಪ್ರಕಾಶ ವಿಶೇಷವಿರುವದರಿಂದ' ಈ ಅನುಮಾನದಲ್ಲಿ ಆಧಿಕ್ಯ ದೋಷವಿದೆ. [ವಿವರಣೆ- ಆಕಾಂಕ್ಷಿತವಾದ ಅಗ್ನಿಯು ಯಾವುದರಿಂದ ಸಿದ್ಧವಾಗುತ್ತದೆಯೋ ಅದನ್ನಲ್ಲದೇ, ಅಗ್ನಿ ಎಂಬ ಕಾರ್ಯ ಸಿದ್ಧಿಸಲು ಉಪಯೋಗಿಸಿದ ವಾಕ್ಯಾಂತರ ಪ್ರಯೋಗವು ಆಧಿಕ್ಯವು- ಧೂಮದಿಂದಲೇ ಅಗ್ನಿ ಸಿದ್ಧಿಸುವಾಗ್ಗೆ 'ಪ್ರಕಾಶ ವಿಶೇಷ' ಪ್ರಯೋಗವು ಆಧಿಕ್ಯವು]

ननु न्यूनत्वाधिक्याभ्यां वचने दुष्टे सति तदर्थभूतोपपत्तेः प्रमाजनकत्वाभावादुपपत्तेरपि न्यूनत्वाधिक्ये दोषौ इत्युक्तं, वचनस्य न्यूनत्वे सम्यगवबोधाभावादस्तु प्रमाजनकत्वाभावः। वचनाधिक्ये तु कथमबोधकत्वं, उपपत्तेरदुष्टत्वात्, इति चेत्, सत्यं पर्वतो अग्निमान् धूमात्, प्रकाशविशेषाच्चेत्यत्र आद्यस्य लिंगस्य प्रमाजनकत्वं द्वितीयस्य तु नास्ति, आद्येनैव संशयविपर्ययाज्ञानानां निवृत्तत्वात्, एवं च विवक्षितप्रमाजनकत्वाभावात्, द्वितीयस्य लिंगस्य आधिक्यं दोषो भवति, दार्ढ्यादिप्रयोजनसद्भावे तु विवक्षितप्रमाजनकत्वात् नाधिक्यं दोष इति ज्ञेयम्।

**इति उपपत्तेर्दोषत्वनिर्वचनपूर्वकदोषविभागनिरूपणम्।**

---

ಶಂಕಾ– ನ್ಯೂನ ಹಾಗೂ ಅಧಿಕ್ಯ ದೋಷಗಳಿಂದ ವಚನವು ದುಷ್ಟವಾಗುತ್ತಿರಲು ಆ ವಚನದ ಅರ್ಥವಾದ ಉಪಪತ್ತಿಯೂ ಪ್ರಮಾಣಜನಕವಾಗಲಾರದು. ಆದ್ದರಿಂದ ನ್ಯೂನಾಧಿಕ್ಯಗಳು ಉಪಪತ್ತಿಯ ದೋಷಗಳೆಂದು ಹೇಳಿದಂತಾಯಿತು. ವಚನವು ನ್ಯೂನವಾದಲ್ಲಿ ಸಮ್ಯಕ್ ಜ್ಞಾನವು ಹುಟ್ಟದೇ ಇರುವದರಿಂದ, ಅದು ಪ್ರಮಾಜನಕವಾಗದೇ ಹೋಗಲಿ. ಆದರೆ ವಚನವು ಅಧಿಕ್ಯದೋಷದಿಂದ ಕೂಡಿದಾಗ್ಗ ಅದಕ್ಕೆ ಅಬೋಧಕತ್ವ ಹೇಗೆ ಬರುವದು ? ಏಕೆಂದರೆ ಇಲ್ಲಿ ಉಪಪತ್ತಿಯು [ಯುಕ್ತಿಯು] ದುಷ್ಟವಾಗಲಾರದು. ಹೀಗೆ ಶಂಕಾ ಬಂದರೆ, ಅದಕ್ಕೆ ಸಮಾಧಾನ ಹೀಗಿದೆ. "ಪರ್ವತವು ಅಗ್ನಿಯುಳ್ಳದ್ದು ಧೂಮವಿರುವದರಿಂದ ಹಾಗೂ ಪ್ರಕಾಶ ವಿಶೇಷವಿರುವದರಿಂದ," ಎಂಬ ಅನುಮಾನ ವಚನದಲ್ಲಿ ಪ್ರಥಮ ಲಿಂಗವಾದ 'ಧೂಮ'ವು ಪ್ರಮಾಜನಕವು. ಎರಡನೆಯವಾದ 'ಪ್ರಕಾಶ ವಿಶೇಷ ಹೇತುವು 'ಅಗ್ನಿ' ಪ್ರಮಾ ಹುಟ್ಟಿಸಲಾರದು. ಮೊದಲಿನ ಹೇತುವಿನಿಂದಲೇ ಅಜ್ಞಾನ, ಸಂಶಯ, ಹಾಗೂ ವಿಪರೀತ ಜ್ಞಾನಗಳ ನಾಶನಾಗುವದರಿಂದ, ಎರಡನೆಯ ಹೇತುವಿಗೆ ಪ್ರಯೋಜನಕತ್ವವೇ ಇಲ್ಲದಿರುವದರಿಂದ, ಅದು ಅಧಿಕವಾಗಿ ದೋಷವಾಗುತ್ತದೆ. ಒಂದು ವೇಳೆ ನಿಶ್ಶಂಕ ಪ್ರವೃತ್ತಿ ಹುಟ್ಟಿಸುವ ದಾರ್ಢ್ಯರೂಪ ಪ್ರಯೋಜನವಿದ್ದರೆ ಮಾತ್ರ, ಅಪೇಕ್ಷಿತ ಪ್ರಯೋಜಕವಾಗುವದರಿಂದ, ಅಲ್ಲಿ ಮಾತ್ರ ಅಧಿಕ್ಯವು ದೋಷವಿಲ್ಲವೆಂದು ತಿಳಿಯಬೇಕು.

---

ಅ] ಅನುಮಾನ ದೋಷಗಳಲ್ಲೊಂದಾದ 'ಪ್ರತಿಜ್ಞಾ ವಿರೋಧ' ವೆಂಬ ದೋಷದ ನಿರೂಪಣೆಯು–

---

२) परोदीरितहेत्वाभासानां अनुमानदोषेषु विरोधादिषु अन्तर्भावोक्त्यर्थं तद्विभागः टिप्पण्याद्युक्तरीत्या उच्यते ( एवं अन्यत्रापि ) - एते विरोधादयो द्विविधाः १) कथास्वरूपे, उद्भावनीयाः २) अनुमाननिष्टाश्च ।

कीदृशी सा कथा इति चेत्—समयबन्धः तत्तत्सिद्धान्तानुसारेणावयवादिप्रयोगः कार्य इति नियमः ) तादृशकथास्वरूपे, उद्भावनीयाः ।

कथानिष्टदोषास्तु प्रतिज्ञाविरोधः, प्रतिज्ञाऽसंगतिः, प्रतिज्ञाधिक्यं च । एते समयबन्धकथासाधारणा दोषा ज्ञातव्याः ।

तत्र अनुमाननिष्ठास्तावदुच्यन्ते—

अनुमानविरोधस्त्रिविधः—१) प्रतिज्ञा – २) हेतुः – ३) दृष्टान्तविरोधभेदात् । अत्र प्रतिज्ञापदेन पक्षोऽप्युपलक्ष्यते,

---

ಪರರು ಹೇಳಿದ ಹೇತ್ವಾಭಾಸಗಳನ್ನು ಅನುಮಾನ ದೋಷಗಳಾದ ವಿರೋಧಾದಿಗಳಲ್ಲಿಯೇ ಅಂತರ್ಭಾವ ಮಾಡುವದಕ್ಕಾಗಿ ವಿರೋಧಾದಿಗಳ ವಿಭಾಗವನ್ನು [ಟಿಪ್ಪಣಿ ಮೊದಲಾದವುಗಳಲ್ಲಿ ನಿರೂಪಿತವಾದಂತೆ] ಇಲ್ಲಿ ಹೇಳುತ್ತೇವೆ.

ಈ ವಿರೋಧಾದಿಗಳು ಎರಡು ಪ್ರಕಾರ- ೧] ಕಥಾ ಸ್ವರೂಪದಲ್ಲಿ ಹುಟ್ಟುವಂತಹವು. ಹಾಗೂ ೨] ಅನುಮಾನದಲ್ಲಿರತಕ್ಕವು.

'ಕಥಾ' ಎಂದರೇನು ? ಸಮಯ ಬಂಧ, ಪ್ರಶ್ನೆ , ಸ್ವಪಕ್ಷಸಾಧನೆ, ಹಾಗೂ ಪರಪಕ್ಷ ದೂಷಣೆ, ಇವುಗಳನ್ನೊಳಗೊಂಡ ವಚನವೇ 'ಕಥಾ' [ಇಲ್ಲಿ ಸಮಯಬಂಧವೆಂದರೆ, ಅವರವರ ಸಿದ್ಧಾಂತದಂತೆ ಅವಯವ ಪ್ರಯೋಗಗಳನ್ನು ಮಾಡಬೇಕೆಂದು ವಾದಿ-ಪ್ರತಿವಾದಿಗಳು ಪರಸ್ಪರ ಒಪ್ಪಿಕೊಂಡ ನಿಯಮವು]

ಇಂತಹ ಕಥಾಸ್ವರೂಪದಲ್ಲಿ ಉದ್ಭವಿಸುವ ದೋಷಗಳು ಯಾವವೆಂದರೆ-

i] ಪ್ರತಿಜ್ಞಾ ವಿರೋಧವು ii] ಪ್ರತಿಜ್ಞಾ ಅಸಂಗತಿ iii] ಪತಿಜ್ಞಾ ನ್ಯೂನತಾ ಹಾಗೂ iv] ಪ್ರತಿಜ್ಞಾ ಆಧಿಕ್ಯ ಎಂದು ನಾಲ್ಕು ಪ್ರಕಾರಗಳಿವೆ. ಇವು ಸಮಯ ಬಂಧದಿಂದ ಕೂಡಿದ 'ಕಥಾ' ದಲ್ಲಿ ಬರತಕ್ಕ ಸಾಧಾರಣ ದೋಷಗಳು.

೨] ಇನ್ನು ಅನುಮಾನದಲ್ಲಿಯ ದೋಷಗಳನ್ನು ಹೇಳಲಾಗುತ್ತದೆ- i] ಪ್ರತಿಜ್ಞಾ ವಿರೋಧ i] ಹೇತು ವಿರೋಧ ಹಾಗೂ iii] ದೃಷ್ಟಾಂತ ವಿರೋಧ. ಇಲ್ಲಿ 'ಪ್ರತಿಜ್ಞಾ' ಪದದಿಂದ ಉಪಲಕ್ಷಣವಾಗಿ 'ಪಕ್ಷ' ವನ್ನು ತೆಗೆದುಕೊಳ್ಳಬೇಕು.

हेतुपदेन लिङ्गञ्च, दृष्टान्तपदेनोदाहरणमपि, विरोधस्योभयदूषणत्वात्

अत्र प्रतिज्ञाविरोधो नाम--प्रतिज्ञातार्थप्रतिस्पर्धिसद्भावः । ननु प्रतिज्ञाविरोधादयः कथमनुमननिष्टा इति चेदुच्यते--प्रतिज्ञाहेतुदृष्टान्तविरोधादीनाम्, अनुमानत्वाभिमतनिष्टत्वाभावेऽपि अनुमानसामर्थ्यविघटकत्वात् अनुमानदोषत्वं बोध्यम् ।

प्रतिज्ञाविरोधो द्विविधः- १) प्रमाणविरोधः २) स्ववचनविरोधश्चेति ।

१) प्रमाणविरोधोऽपि द्विविधः-१)प्रबलप्रमाणविरोधः २)समबलप्रमाणविरोधश्च । हीनबलविरोधोऽपि कुतो नोक्त इति चेन्न हीनबलस्य प्रबलेनैव बाधितस्याकिंचित्करत्वात् तद्विरोधो नोक्तः ।

---

ಅದರಂತೆ 'ಹೇತು' ಪದದಿಂದ ಲಿಂಗವನ್ನು, 'ದೃಷ್ಟಾಂತ' ಪದದಿಂದ ಉದಾಹರಣೆಯನ್ನೂ ತೆಗೆದುಕೊಳ್ಳಬೇಕು. ಏಕೆಂದರೆ, ವಿರೋಧವು ಎರಡಕ್ಕೂ ದೂಷಣವೇ ಆಗಿದೆ. (ಪ್ರತಿಜ್ಞಾ ವಿರೋಧವಾದಲ್ಲಿ ಪಕ್ಷವೂ ದೋಷವುಳ್ಳದ್ದಾಯಿತೆಂದು ಭಾವವು)

ಈ ಮೂರರಲ್ಲಿ 'ಪ್ರತಿಜ್ಞಾ ವಿರೋಧ' ವೆಂದರೆ- ಪ್ರತಿಜ್ಞಾತವಾದ ಅರ್ಥಕ್ಕೆ ಪ್ರತಿಸ್ಪರ್ಧಿಯಾಗಿರುವದು. ಶಂಕಾ–ವ್ಯಾಪ್ತಿ ವಿಶಿಷ್ಟವಾದ ಲಿಂಗವು ಅನುಮಾನವೆಂದ ಮೇಲೆ ಪ್ರತಿಜ್ಞಾ ವಿರೋಧಾದಿಗಳು ಅನುಮಾನದಲ್ಲಿ ಹೇಗೆ ಬರುತ್ತವೆ ? ಎಂದು ಶಂಕಾ ಬಂದರೆ ಅದಕ್ಕೆ ಸಮಾಧನ ಹೀಗೆ- ಪ್ರತಿಜ್ಞಾ, ಹೇತು' ದೃಷ್ಟಾಂತಗಳ ವಿರೋಧಾದಿ ದೋಷಗಳ [ಸಾಕ್ಷಾತ್ತಾಗಿ] ಅನುಮಾನದಲ್ಲಿ [ವ್ಯಾಪ್ತಿ ವಿಶಿಷ್ಟ ಲಿಂಗದಲ್ಲಿ] ಇಲ್ಲದೇ ಹೋದರೂ, ಅನುಮಾನದ ಸಾಮರ್ಥ್ಯವನ್ನು ಕೆಡಿಸುವದರಿಂದ [ವ್ಯಾಪ್ತಿ ಹಾಗೂ ಸಮುಚಿತ್ ದೇಶವೃತ್ತಿತ್ವವೆಂಬ ಸಾಮರ್ಥ್ಯವನ್ನು ತೊಡೆದು ಹಾಕುವದರಿಂದ] ಅನುಮಾನ ದೋಷಗಳಾಗುತ್ತವೆಯೆಂದು ತಿಳಿಯಬೇಕು.

ಪ್ರತಿಜ್ಞಾ ವಿರೋಧವು ಎರಡು ಪ್ರಕಾರವು- i] ಪ್ರಮಾಣ ವಿರೋಧವು ಹಾಗೂ ii] ಸ್ವವಚನ ವಿರೋಧವು.

i] ಪ್ರಮಾಣ ವಿರೋಧವೂ ಎರಡು ಪ್ರಕಾರವಾದುದು. ಅ] ಪ್ರಬಲ ಪ್ರಮಾಣ ವಿರೋಧವು ಆ] ಸಮಬಲ ಪ್ರಮಾಣ ವಿರೋಧವು. ಹೀನಬಲ ಪ್ರಮಾಣವನ್ನು ವಿರೋಧದಲ್ಲಿ ಗಣಿಸಲಾಗಿಲ್ಲ. ಏಕೆಂದರೆ, ಹೀನಬಲ ಪ್ರಮಾಣವು ಪ್ರಬಲ ಪ್ರಮಾಣದಿಂದ ಬಾಧಿತವಾಗುವದರಿಂದ, ನಿರುಪಯುಕ್ತವಾಗಿದ್ದು ವಿರೋಧದಲ್ಲಿ ಪರಿಗಣಿಸಿಲ್ಲ.

ननु प्रामाण्यातिरिक्तं किं बलवत्त्वं इत्यतस्तद्विभज्य निरूप्यते प्राबल्यं द्विविधं - १) बहुत्वेन २- स्वाभाविकत्वेन च, स्वाभाविकत्वं उपजीव्यत्वं निरवकाशत्वं चेति, तत्र निरवकाशत्वं च विषयान्तरपरतया नेतुमशक्यत्वं, उपजीव्यत्वं च - येन विना यस्योदयो नास्ति तत्तस्योपजीव्यं तत्रोपजीव्यत्वमस्तीति ध्येयं। एतौ प्रबलप्रमाण-समबलप्रमाणविरोधौ प्रत्येकं त्रिविधौ, तथाहि - १. प्रबलप्रत्यक्षविरोधः २. प्रबलानुमानविरोधः ३. प्रबलागमविरोधेति। १. समबलप्रत्यक्षविरोधः २. समबलानुमानविरोधः ३.समबलागमविरोधश्चेति।

---

ಶಂಕಾ– ಪ್ರಾಮಾಣ್ಯ ಬಿಟ್ಟು ಬೇರೆ ಬಲವತ್ತ್ವವು ಯಾವುದು ? ಎಂಬ ಸಂಶಯ ಬಂದರೆ, ಆ 'ಪ್ರಾಬಲ್ಯ' ವನ್ನು ವಿಭಾಗಿಸಿ ನಿರೂಪಿಸಲಾಗುತ್ತದೆ. ಪ್ರಾಬಾಲ್ಯವು ಎರಡು ಪ್ರಕಾರವಾಗಿದೆ. ಅ] ಬಹುತ್ವದಿಂದ ಬರುವ ಪ್ರಾಬಾಲ್ಯವು ಹಾಗೂ ಆ] ಸ್ವಾಭಾವಿಕತೆಯಿಂದ ಬರುವ ಪ್ರಾಬಾಲ್ಯವು. ಈ ಸ್ವಾಭಾವಿಕತೆಯು ಉಪಜೀವ್ಯವು ಹಾಗೂ ನಿರವಕಾಶವು ಎಂದು ಎರಡು ವಿಧವಾಗಿದೆ. 'ನಿರವಕಾಶವೆಂದರೆ– ಅನ್ಯಾರ್ಥ ಪರವಾಗಿ ಹೇಳಲು ಬರದಿರುವದು. [ಒಂದು ವಾಕ್ಯಕ್ಕೆ ತನ್ನದೇ ಆದ ಅರ್ಥವನ್ನು ಬಿಟ್ಟು ಬೇರೆ ಅರ್ಥ ಹೇಳಲು ಬಾರದಿರುವದೇ ನಿರವಕಾಶ ಅರ್ಥವು]

ಆ] ಉಪಜೀವ್ಯವೆಂದರೆ– ಯಾವುದಿಲ್ಲದೇ ಯಾವ ವಸ್ತುವಿನ ಉತ್ಪತ್ತಿಯೇ ಆಗುವದಿಲ್ಲವೋ, ಆ ವಸ್ತುವಿಗೆ, ಅದು ಉಪಜೀವ್ಯವು. [ವಿವರಣೆ: ಉದಾಹರಣೆಗೆ ಪ್ರತ್ಯಕ್ಷದಿಂದ ಹೊರತಾಗಿ ಧೂಮಾನುಮಾನವು ಉದಯವಾಗುವದಿಲ್ಲ. ಈ ಧೂಮಾನುಮಾನಕ್ಕೆ ಧೂಮ ಪ್ರತ್ಯಕ್ಷವು ಉಪಜೀವ್ಯವು. ಹೀಗೆ ನಿರವಕಾಶತೆ ಇಲ್ಲವೇ ಉಪಜೀವ್ಯತೆಯುಳ್ಳ, ಸ್ವಾಭಾವಿಕತೆ, ಹಾಗೂ ಬಹುತ್ವಗಳಿಂದ ಬರುವ ಪ್ರಾಬಲ್ಯವು, ಪ್ರಾಮಾಣ್ಯದ ಹೊರತಾಗಿ ಬರುವದು]

ಅ] ಪ್ರಬಲ ಪ್ರಮಾಣ ವಿರೋಧವು ಹಾಗೂ ಆ] ಸಮಬಲ ಪ್ರಮಾಣ ವಿರೋಧವು. ಒಂದೊಂದು ಮೂರು ಪ್ರಕಾರವಾಗಿವೆ.

೧] ಪ್ರಬಲ ಪ್ರತ್ಯಕ್ಷ ವಿರೋಧ ೨] ಪ್ರಬಲ ಅನುಮಾನ ವಿರೋಧವು ಹಾಗೂ ೩] ಪ್ರಬಲ ಆಗಮ ವಿರೋಧ. ಅದರಂತೆ– ೧] ಸಮಬಲ ಪ್ರತ್ಯಕ್ಷ ವಿರೋಧ, ೨] ಸಮಬಲ ಅನುಮಾನ ವಿರೋಧ ಹಾಗೂ ೩] ಸಮಬಲ ಆಗಮ ವಿರೋಧ.

---

२) समबलविरोधोऽपि द्विविधः - १. तेनैवानुमानेन (वादिप्रयुक्त) हेतुनैव २. अनुमानांतरेण चेति ।

२) तत्रस्ववचनविरोधोऽपि द्विविधः - १) अपसिद्धांतः २) जातिश्चेति । १) अपसिद्धांतस्तु – पूर्वाचार्यांगीकृतसिद्धांतविरुद्धांगीकारः, पूर्वाचार्यवचनस्यापि स्वयमंगीकृतत्वेन स्ववचनत्वात् ।

२) स्ववचन एव व्याहतिः जातिः - सा त्रिविधा - १ एककर्तृकवाक्ये पदयोः अवांतरवाक्ययोर्वा मिथो व्याघातः, २ स्वक्रियाविरोधः, ३ स्वन्यायविरोधश्चेति ।

१ एककर्तृकवाक्ये पदायोर्वा अवांतरवाक्ययोर्वा मिथो विरोधो नाम - स्वघटकपदप्रतिपाद्यार्थविरुद्धार्थप्रतिपादकपदघटितवाक्यत्वं, एतच्च पदयोर्विरोधलक्षणं, एवमेव वाक्ययोरपि विरोधो ज्ञेयः ।

---

೨] ಸಮಬಲ ವಿರೋಧ ಎರಡು ಪ್ರಕಾರವಿವೆ– i) ವಾದಿ ಹೇಳುವ ಅನುಮಾನದಿಂದ ಹಾಗೂ i] ಅನುಮಾನಾಂತರ [ಹೇತ್ವಂತರ] ದಿಂದ.

೨] ಪ್ರತಿಜ್ಞಾ ವಿರೋಧದಲ್ಲಿಯು ಸ್ವವಚನ ವಿರೋಧವೂ ಎರಡು ಪ್ರಕಾರವಾಗಿದೆ. i) ಅಪಸಿದ್ಧಾಂತ ಹಾಗೂ ii) ಜಾತಿ ಎಂದು.

i) ಅಪಸಿದ್ಧಾಂತವೆಂದರೆ– ತಮ್ಮ ಪೂರ್ವಾಚಾರ್ಯದಿಂದ ಅಂಗೀಕೃತವಾದ ಸಿದ್ಧಾಂತಕ್ಕೆ ವಿರುದ್ಧವಾಗಿ ಅಂಗೀಕಾರ ಮಾಡುವದು. ಏಕೆಂದರೆ, ಪೂರ್ವಾಚಾರ್ಯರ ವಚನವನ್ನು ತಾನು ಅಂಗೀಕಾರ ಮಾಡಿದ್ದರಿಂದ ಅದು ಸ್ವವಚನವೇ ಆಗುವದು.

ii) ಸ್ವವಚನದಲ್ಲಿಯು ವ್ಯಾಹತಿಯೇ [ವಿರುದ್ಧಾರ್ಥವೇ] ಜಾತಿಯು. ಈ ಜಾತಿಯು ಮೂರು ಪ್ರಕಾರವಾಗಿದೆ– ಅ) ಒಬ್ಬನಿಂದ ಪ್ರಯೋಗಿಸಲ್ಪಟ್ಟ ವಾಕ್ಯದಲ್ಲಿ ಅಲ್ಲಿರುವ ಪದಗಳಿಗೆ ಪರಸ್ಪರವಾಗಿ ವಿರೋಧ ಬಂದರೆ, ಅದು ಸ್ವವಚನ ವ್ಯಾಹತಿರೂಪ ಜಾತಿಯು ಆ) ಸ್ವಕ್ರಿಯಾ ವಿರೋಧವು ಇ) ಸ್ವನ್ಯಾಯ ವಿರೋಧವು.

ಅ) ಏಕಕರ್ತೃಕವಾಕ್ಯದಲ್ಲಿ ಪದಗಳಿಗೆ ಇಲ್ಲವೇ ಅವಾಂತರ ವಾಕ್ಯಗಳಿಗೆ ಪರಸ್ಪರ ವಿರೋಧವೆಂದರೆ:- 'ಸ್ವವಾಕ್ಯದಲ್ಲಿ ಘಟಕವಾದ ಪದದಿಂದ ಪ್ರತಿಪಾದ್ಯವಾದ ಅರ್ಥಕ್ಕೆ ವಿರುದ್ಧವಾದ ಅರ್ಥ ಪ್ರತಿಪಾದಕ ಪದದಿಂದ ಕೂಡಿದ ವಾಕ್ಯವು. ಇದು ಪದಗಳಿಗೆ ಇದ್ದ ಪರಸ್ಪರ ವಿರೋಧವು. ಇದರಂತೆ ವಾಕ್ಯಗಳಿಗೂ ಪರಸ್ಪರ ವಿರೋಧವನ್ನು ತಿಳಿಯಬೇಕು.

पदार्योर्विरोधो यथा - मे माता वंध्या, अत्रोक्तलक्षणसमन्वयः -मे माता वंध्येति वाक्ये, स्वघटकपदं, मे मातेति पदं, पदप्रतिपाद्यार्थः, मातृरूपोर्थः, तद्विरुद्धार्थः, वंध्यारूपोऽर्थः, अर्थप्रतिपादकपदं, वंध्या इति पदं, तद्घटितवाक्यं, मे माता वंध्या इति वाक्यं, तत्र वाक्यत्वस्य सत्वाल्लक्षणसमन्वय इति।

वाक्ययोर्विरोधो यथा - द्रव्यं गुणव्यतिरिशक्तं अव्यतिरिक्तत्वादिति ।

२ स्वक्रियाविरोधो नाम, स्ववचनक्रियया विरोधः, यथा - मूकोऽहमिति वाक्यम् ।

३ स्वन्यायविरोधो नाम - स्ववचनन्यायेन विरोधः, यथा - मेयं मानसापेक्षं न भवतीति

---

ಪದ ವಿರೋಧಕ್ಕೆ ಉದಾಹರಣೆ- 'ನನ್ನ ತಾಯಿಯು ಬಂಜೆ' ಈ ವಾಕ್ಯದಲ್ಲಿ ಮೇಲಿನ ಲಕ್ಷಣ ಸಮನ್ವಯವಾಗುತ್ತದೆ. 'ಸ್ವ' ಎಂದರೆ "ನನ್ನ ತಾಯಿ ಬಂಜೆ" ಎಂಬ ವಾಕ್ಯವು. ಸ್ವ ಘಟಕ ಪದಗಳು 'ನನ್ನ ತಾಯಿ' ಎಂಬ ಪದಗಳು. ಈ ಪದಗಳಿಂದ ಪ್ರತಿಪಾದ್ಯ ಅರ್ಥವು 'ತಾಯಿ' [ಮಾತೃತ್ವ] ಎಂಬ ಅರ್ಥವು. ಇದಕ್ಕೆ ವಿರುದ್ಧ ಅರ್ಥವೆಂದರೆ 'ಬಂಜೆ' (ವಂಧ್ಯಾತ್ವ) ಈ ಅರ್ಥ ಹೇಳುವ ಪದ "ಬಂಜೆ" (ವಂಧ್ಯಾ) ಎಂಬ ಪದವು. ಇದರಿಂದ ಕೂಡಿದ ವಾಕ್ಯವೆಂದರೆ 'ನನ್ನ ತಾಯಿ ಬಂಜೆ' (ಮೇಮಾತಾ ವಂಧ್ಯಾ) ಎಂಬವಾಕ್ಯವಾದುದರಿಂದ ಲಕ್ಷಣ ಸಮನ್ವಯವಾಗುತ್ತದೆ.

ಆ] ಸ್ವಕರ್ತೃಕ ವಾಕ್ಯಗಳಿಗೆ ವಿರೋಧ ಹೇಗೆಂದರೆ- "ದ್ರವ್ಯವು ಗುಣದಿಂದ ಭಿನ್ನವಾಗಿದೆ. ಗುಣದಿಂದ ಅಭಿನ್ನವಾಗಿದ್ದರಿಂದ" ಹೀಗೆ ಪ್ರತಿಜ್ಞಾ ಹಾಗೂ ಹೇತುವಾಕ್ಯಗಳನ್ನು ಹೇಳಿದ್ದಾಗ ವಾಕ್ಯ ವಿರೋಧವು ಬರುವದು. (ಮೇಲಿನ ಲಕ್ಷಣವನ್ನು ಇಲ್ಲಿಯೂ ಸಮನ್ವಯ ಮಾಡಬೇಕು)

ಇ] ಸ್ವಕ್ರಿಯಾ ವಿರೋಧವೆಂದರೆ ಸ್ವವಚನ ಕ್ರಿಯೆಯಿಂದ ವಿರೋಧವು- ಉದಾಹರಣೆಗೆ 'ನಾನು ಮೂಕನು' ಎಂಬ ವಾಕ್ಯವು ['ನಾನು' ಎಂಬ ಉಚ್ಚಾರಣೆ ರೂಪ ಕ್ರಿಯೆಯು ಮೂಕನಲ್ಲವೆಂದು ತಿಳಿಸುತ್ತದೆ. ಆದರೆ ಮೂಕನೆಂದು ಹೇಳುವದರಿಂದ ಪರಸ್ಪರ ಅವನ ವಚನಕ್ಕೂ ಕ್ರಿಯೆಗೂ ವಿರೋಧವು]

ಈ) ಸ್ವನ್ಯಾಯ ವಿರೋಧವೆಂದರೆ ಸ್ವವಚನ ನ್ಯಾಯದಿಂದ ವಿರೋಧವು. ಉದಾಹರಣೆಗೆ, 'ಪ್ರಮೇಯವು ಪ್ರಮಾಣವನ್ನಪೇಕ್ಷಿಸುವದಿಲ್ಲ' ಎಂಬ ವಾಕ್ಯವು. ಇಲ್ಲಿ ಪ್ರಮೇಯ ಎಂಬ ಪದದಿಂದಲೇ ಪ್ರಮಾಣ ಸಾಪೇಕ್ಷಿತವೆಂದು ಸಿದ್ಧವಾದ ಮೇಲೆ,

जातिशब्दे नोक्तार्थः कथं भवतीति चेदुच्यते ( जस्य अतिः जातिः ) जस्य, स्वाख्यस्यान्यस्य वा जनकस्य, ज्ञापकस्य, अतिः, अत्ययो विरोधो जातिः तथा च जेन जनकेन स्वाख्येन ( स्ववचनेन ) अन्येन स्वक्रियास्वन्यायेन वा वाक्यस्य अतिः, विरोधो जातिः ।

इति अनुमाननिष्टदोषेषु प्रतिज्ञाविरोधनिरूपणम् ।

२ ) क्रमप्राप्तो हेतुविरोध उच्यते--

हेतुविरोधो द्विविधः - १) असिद्धिः २ ) अव्याप्तिश्च ।

(१) समुचितस्थले लिंगस्याप्रमितिः, असिद्धिः, समुचितस्थलं नाम यत्र स्थले लिंगस्य सत्त्वप्रमितिरनुमितिहेतुः तत् समुचितस्थलं ।

(२) अव्याप्तिस्त्रिविधा -

---

'ಪ್ರಮಾಣ ಸಾಪೇಕ್ಷವಲ್ಲ' ವೆಂದರೆ, ತನ್ನ ನ್ಯಾಯದಿಂದಲೇ ತನಗೆ ವಿರೋಧ ಬರುತ್ತದೆ.

'ಜಾತಿ' ಶಬ್ದದಿಂದ ಮೇಲೆ ಹೇಳಿದ ಅರ್ಥವು ಹೇಗೆ ಬರುತ್ತದೆಂದರೆ, [ಜಸ್ಯ ಅತಿಃ ಜಾತಿಃ] 'ಜಸ್ಯ' ಎಂದರೆ ಸ್ವವಾಕ್ಯ ಇಲ್ಲವೇ ಅನ್ಯದರ ಜನಕದ ಅಥವಾ ಜ್ಞಾಪಕದ 'ಅತಿಃ' ಎಂದರೆ ವಿರೋಧವು. ಹಾಗೆಂದರೆ, ಸ್ವವಚನದಿಂದ, ಇಲ್ಲವೇ 'ಅನ್ಯ' ವೆಂದರೆ ಸ್ವಕ್ರಿಯಾ ಅಥವಾ ಸ್ವನ್ಯಾಯದಿಂದ, ಸ್ವವಾಕ್ಯಕ್ಕೆ ವಿರೋಧವೇ "ಜಾತಿ" ಎಂದು ತಿಳಿಯಬೇಕು.

೨) ಅನುಮಾನ ದೋಷಗಳಲ್ಲೊಂದಾದ ಹೇತು ವಿರೋಧವು-

ಕ್ರಮಾನುಸಾರವಾಗಿ ಈಗ 'ಹೇತು ವಿರೋಧ' ವನ್ನು ಹೇಳಲಾಗುವದು. ಹೇತು ವಿರೋಧವು ಎರಡು ಪ್ರಕಾರವಿದೆ- ೧) ಅಸಿದ್ಧಿಯು ೨) ಅವ್ಯಾಪ್ತಿಯು. (ವ್ಯಾಪ್ತಿಯಿಲ್ಲದೇ ವ್ಯಭಿಚಾರಿತವಾಗುವದು)

೧] ತನಗೆ ಯೋಗ್ಯವಾದ [ಸಮುಚಿತ] ಸ್ಥಳದಲ್ಲಿ ಹೇತುವಿನ ಜ್ಞಾನವಾಗದೇ ಇರುವದೇ 'ಅಸಿದ್ಧಿ' ಯು

'ಸಮುಚಿತ ಸ್ಥಳ' ವೆಂದರೆ ಯಾವ ಸ್ಥಳದಲ್ಲಿ ಲಿಂಗ ಇರುವಿಕೆಯು ಜ್ಞಾನವು ಅನುಮಿತಿಗೆ ಕಾರಣವೋ ಅದು ಸಮುಚಿತ ಸ್ಥಳವು [ವಿವರಣೆ- ಲಿಂಗವು ಯಾವ ಸ್ಥಳದಲ್ಲಿದ್ದುಕೊಂಡು ತನಗೆ ವ್ಯಾಪಕವಾದ ಸಾಧ್ಯದ ಪ್ರಮಿತಿಯನ್ನು ಹುಟ್ಟಿಸುತ್ತದೆಂಯೋ ಆ ಸ್ಥಳವೇ ಸಮುಚಿತ ಸ್ಥಳವು]

೨] ಅವ್ಯಾಪ್ತಿಯು ಮೂರು ಪ್ರಕಾರವಿದೆ-

१ साध्येन तदभावेन संबंधः, यथा पर्वतो वन्हिमान् प्रमेयत्वात्, अत्र प्रमेयत्वस्य साध्येन ( वन्हिना ) तथा साध्याभावेन ( वन्ह्यभावेन ) च महानसहृदादौ क्रमेण सम्बंधोऽस्ति ।

२. साध्यसंबंधाभावे सति साध्याभावेनैव संबंधः, यथा–शब्दो नित्यः कृतकत्वादित्यत्र ।

३. उभयसंबंधाभावः-साध्यवति सपक्षे साध्याभाववति विपक्षे चावर्तमानं, पक्षमात्रवृत्तीति यावत्, यथा-सर्वं अभिधेयं प्रमेयत्वादित्यत्र सर्वस्यापि पक्षत्वेन अयं हेतुरुभयसंबंधाभाववान् इति ज्ञेयम् ।

**इति अनुमाननिष्टदोषमध्ये हेतुविरोधकथनम् ।**

---

i] ಹೇತುವಿಗೆ ಸಾಧ್ಯ ಹಾಗೂ ಸಾಧ್ಯಾಭಾವದಿಂದ. ಇರುವ ಸಂಬಂಧ. ಉದಾಹರಣೆಗೆ– 'ಪರ್ವತವು ಅಗ್ನಿಯುಳ್ಳದ್ದು. ಪ್ರಮೇಯತ್ವವುಳ್ಳದ್ದರಿಂದ' ಈ ಅನುಮಾನದಲ್ಲಿ ಪ್ರಮೇಯತ್ವ ಹೇತುವಿಗೆ, ಸಾಧ್ಯವಾದ "ಅಗ್ನಿ" ಯಿಂದಲೂ ಹಾಗೂ ಆದರ ಅಭಾವ ಎಂದರೆ ಅಗ್ನಿ ಅಭಾವದಿಂದಲೂ 'ಮಹಾನಸ' ಹಾಗೂ [ಹ್ರದ] ಸರೋವರದಲ್ಲಿ ಕ್ರಮವಾಗಿ ಸಂಬಂಧವಿರುತ್ತದೆ.

ii] ಸಾಧ್ಯ ಸಂಬಂಧಾಭಾವವಿದ್ದು, ಸಾಧ್ಯಾಭಾವದಿಂದಲೇ ಸಂಬಂಧವಿರುವದು. ಉದಾಹರಣೆಗೆ :–

'ಶಬ್ದವು ನಿತ್ಯವು, ಕೃತಕತ್ವವುಳ್ಳದ್ದರಿಂದ' ಎಂಬ ಅನುಮಾನದಲ್ಲಿ 'ಕೃತಕತ್ವ' ಹೇತುವಿಗೆ, ನಿತ್ಯತ್ವದ [ಸಾಧ್ಯದ] ಸಂಬಂಧವಿಲ್ಲ. ಆದರೆ ಸಾಧ್ಯಾಭಾವದಿಂದ [ಅನಿತ್ಯತ್ವದಿಂದ] ಲೇ ಸಂಬಂಧವಿದ್ದ ಪ್ರಯುಕ್ತ, ಇದು [ಎರಡನೆಯ ಪ್ರಕಾರದ] ಅವ್ಯಾಪ್ತಿಯು.

iii] ಉಭಯ ಸಂಬಂಧಾಭಾವವು– ಸಾಧ್ಯವುಳ್ಳ ಪಕ್ಷದಲ್ಲಿಯೂ ಸಾಧ್ಯಾಭಾವವುಳ್ಳ ವಿಪಕ್ಷದಲ್ಲಿಯೂ ಇರಲಾರದೇ, ಪಕ್ಷಮಾತ್ರದಲ್ಲಿ ಇರುವ ಹೇತು. ಉದಾಹರಣೆಗೆ– 'ಸರ್ವವು ಅಭಿಧೇಯವು ಪ್ರಮೇಯತ್ವ ಇರುವದರಿಂದ' ಈ ಅನುಮಾನದಲ್ಲಿ ಸರ್ವವೂ ಪಕ್ಷವಾದ್ದರಿಂದ, ಸಪಕ್ಷ-ವಿಪಕ್ಷಗಳು ಇಲ್ಲದೇ ಇದ್ದ ಕಾರಣ, ಪ್ರಮೇಯತ್ವ ಹೇತುವು ಸಪಕ್ಷ-ವಿಪಕ್ಷ ಎರಡರಲ್ಲಿಯೂ ಬಾರದೇ ಕೇವಲ ಪಕ್ಷದಲ್ಲಿರುವದರಿಂದ, ಈ ಹೇತುವು ಉಭಯ ಸಂಬಂಧಾಭಾವವುಳ್ಳದ್ದಾಗಿ ಅವ್ಯಾಪ್ತವಾಗುತ್ತದೆ.

---

दृष्टांतविरोधोऽपि द्विविधः १.साध्यवैकल्यं २)साधनवैकल्यं चेति ।

ननु प्रतिज्ञाविरोधे यथा स्ववचनविरोधो गणितः, तथा हेतुदृष्टांतविरोधयोरपि कुतः स्ववचनविरोधो न गणितः इति चेदुच्यते - यद्यपि पर्वतो अग्निमान् धूमवत्त्वे सति निर्धूमवत्वात् महानसवदित्यत्र हेतौ दृष्टांते च स्ववचनविरोधोऽस्ति, तथापि स्ववचनविरोधस्य हेतावसिध्द्युन्नायकत्वात्, दृष्टांते साधनवैकल्योन्नायकत्वाच्च असिद्धयादिग्रहणेनैव स्ववचनविरोधोऽपि संगृहीतप्राय इति नोक्तः,, यद्यपि "मे माता वंध्या ,, इति प्रतिज्ञायामपि स्ववचनविरोधो प्रतिज्ञाविरोधेनैव संगृहीत इति न वक्तव्यः, तथापि स्ववचनविरोधे सापसिद्धांत जातिभेदेन द्वैविध्यज्ञापनार्थं तदभिज्ञानमिति ज्ञातव्यम् ।

इति दृष्टांतविरोधकथनम् ।

---

४) ದೃಷ್ಟಾಂತ ವಿರೋಧವು.

ದೃಷ್ಟಾಂತ ವಿರೋಧವು ಎರಡು ವಿಧವಾಗಿದೆ- ೧) ಸಾಧ್ಯ ವೈಕಲ್ಯ ಹಾಗೂ ಸಾಧನವೈಕಲ್ಯ ಎಂದು.

ಶಂಕಾ- ಸ್ವವಚನ ವಿರೋಧವು ಹೇಗೆ ಪ್ರತಿಜ್ಞಾ ವಿರೋಧದಲ್ಲಿ ಪರಿಗಣಿತವಾಯಿತೋ, ಹಾಗೆಯೇ (ಸ್ವವಚನ ವಿರೋಧವನ್ನು) ಹೇತು ಹಾಗೂ ದೃಷ್ಟಾಂತ ವಿರೋಧಗಳಲ್ಲಿಯೂ ಅಂತರ್ಭಾವ ಏಕೆ ಮಾಡಲಿಲ್ಲ? ಎಂಬ ಶಂಕೆಗೆ ಉತ್ತರ ಹೀಗಿದೆ-

• 'ಪರ್ವತವು ಅಗ್ನಿಯುಳ್ಳದ್ದು ಧೂಮವುಳ್ಳದ್ದಾಗಿ ಧೂಮರಹಿತವಾದುದರಿಂದ, ಮಹಾನಸದಂತೆ' ಎಂಬ ಅನುಮಾನದಲ್ಲಿ, ಹೇತುವಿನಲ್ಲಿ ಹಾಗೂ ದೃಷ್ಟಾಂತದಲ್ಲಿ, ಸ್ವವಚನ ವಿರೋಧವಿದೆ. ಆದರೂ ಸ್ವವಚನ ವಿರೋಧವು ಹೇತುವಿನಲ್ಲಿ ಅಸಿದ್ಧಿಯನ್ನು ತಂದುಕೊಟ್ಟು, ತನ್ಮೂಲಕ ದೋಷವಾಗುತ್ತದೆ. ದೃಷಾಂತದಲ್ಲಿ ಸ್ವವಚನ ವಿರೋಧವು ಸಾಧನ ವೈಕಲ್ಯ ಮೂಲಕವಾಗಿಯೇ ಗ್ರಹಿತವಾಗುವದು. ಆದಕಾರಣ ಪ್ರತ್ಯೇಕವಾಗಿ ಹೇಳುವ ಕಾರಣವಿಲ್ಲ. ಒಂದು ವೇಳೆ 'ನನ್ನ ತಾಯಿಯು ಬಂಜೆ' ಎಂಬ ಪ್ರತಿಜ್ಞಾ ವಚನದಲ್ಲಿ ಸ್ವವಚನ ವಿರೋಧವು ಪ್ರತಿಜ್ಞಾ ವಿರೋಧವನ್ನು ಗ್ರಹಣ ಮಾಡುವದರಿಂದಲೇ ಸಂಗ್ರಹಿತವಾಗುವದರಿಂದ, ಸ್ವವಚನ ವಿರೋಧವನ್ನು ಅಲ್ಲಿ ಪ್ರತ್ಯೇಕ ಹೇಳಬೇಕಾಗಿಲ್ಲವಾದರೂ, ಸ್ವವಚನ ವಿರೋಧದಲ್ಲಿ 'ಅಪಸಿದ್ಧಾಂತ' ಹಾಗೂ 'ಜಾತಿ' ಎಂಬ ಭೇದಗಳ ಎರಡು ಪ್ರಕಾರಗಳನ್ನು ತಿಳಿಸಲು, ಅದನ್ನು (ಪ್ರತಿಜ್ಞಾ ವಿರೋಧದಲ್ಲಿ ಅಂತರ್ಭಾವ ಮಾಡದೇ) ಪ್ರತ್ಯೇಕವಾಗಿ ಹೇಳಲಾಗಿದೆಯೆಂದು ತಿಳಿಯಬೇಕು

एवमसंगतिन्यूनाधिक्यान्यपि प्रतिज्ञाहेतुदृष्टांतसंबंधभेदेन प्रत्येकंत्रिविधानि

तत्रासंगतिर्नाम आकांक्षाविरहः, यथा - अग्निमानित्युक्ते तरुशिलाद्यपि तत्रास्तीति प्रत्युक्तिः, असंगतिः, अनाकांक्षाभिधानात् । प्रतिज्ञाविरोधादीनामुदाहरणानि कानि, कथारूपसाधारणविरोधादयः के इति जिज्ञासायां–एतेषामुदाहरणानि, परोदीरितनिग्रहस्थानानां विरोधासंगतिष्वंतर्भावप्रकाराश्च-पद्धत्यादौ विस्तरेणोक्ताः, तत्रैव ते ज्ञातव्याः ।

ननु निग्रहस्थानानि कियंतीति जिज्ञासायां तानि निरूप्यन्ते-- १) विरोधः २) असंगतिः ३) न्यूनं ४) आधिक्यं ५) संवादः ६) अनुक्तिरिति षडेव निग्रहस्थानानि ।

तत्र संवादानुक्त्योः स्वरूपं कथ्यते—

---

ಉ) ನಿಗ್ರಹಸ್ಥಾನ ವಿಭಗಪೂರ್ವಕ ಕಥಾ ಸ್ವರೂಪ ನಿರೂಪಣೆ-

೧) ಹೀಗೆಯೇ, ಅಸಂಗತಿ, ನ್ಯೂನ, ಆಧಿಕ್ಯಗಳು, ಪ್ರತಿಜ್ಞಾ, ಹೇತು, ದೃಷ್ಟಾಂತಗಳ ಸಂಬಂಧ ಭೇದದಿಂದ ಪ್ರತ್ಯೇಕ ಮೂರು ಮೂರು ವಿಧಗಳಾಗಿವೆ. (ಪ್ರತಿಜ್ಞಾ ಅಸಂಗತಿ, ಪ್ರತಿಜ್ಞಾನ್ಯೂನ, ಪ್ರತಿಜ್ಞಾ ಆಧಿಕ್ಯ ಹೀಗೆ) ಇವುಗಳಲ್ಲಿ ಅಸಂಗತಿಯೆಂದರೆ ಆಕಾಂಕ್ಷಾ ವಿರಹವು. ಉದಾಹರಣೆಗೆ- "ಪರ್ವತವು ಅಗ್ನಿಯುಳ್ಳದ್ದು" ಎಂದು ಹೇಳಿದ್ದಾಗ್ಯೆ, ಅಲ್ಲಿ ಗಿಡ, ಕಲ್ಲು ಮುಂತಾದವು ಇವೆಯೆಂದು ಹೇಳಿದರೆ ಅಸಂಗತಿಯು. ಏಕೆಂದರೆ, ಗಿಡ, ಕಲ್ಲು ಮೊದಲಾದವನ್ನು ತಿಳಿಯುವ ಇಚ್ಛೆಯಿಲ್ಲದಿದ್ದರೂ ಹೇಳಿದರೆ, [ಅನಾಕಾಂಕ್ಷಿತವಾದುದನ್ನು ಹೇಳಿದರೆ] ಅಸಂಗತಿಯಾಗುವದು

೨] ಪ್ರತಿಜ್ಞಾ ವಿರೋಧಗಳಿಗೆ ಉದಾಹರಣೆಗಳನ್ನು ಹಾಗೂ ಕಥಾರೂಪದಲ್ಲಿ ಬರುವ ಸಾಧಾರಣ ವಿರೋಧಾದಿಗಳ ಪ್ರಕಾರಗಳನ್ನು ತಿಳಿಯಲಪೇಕ್ಷಿಸದಲ್ಲಿ, ಅವುಗಳನ್ನು ಹಾಗೂ ಪರರು ಹೇಳಿದ ನಿಗ್ರಹ ಸ್ಥಾನಗಳು ವಿರೋಧ ಅಸಂಗತಿಗಳಲ್ಲೇ ಅಂತರ್ಭಾವವಾಗುವ ಪ್ರಕಾರವನ್ನೂ, ಪ್ರಮಾಣ ಪದ್ಧತಿಯಲ್ಲಿವಿಸ್ತೃತವಾಗಿ ಹೇಳಿದ್ದರಿಂದ ಅಲ್ಲಿಯೇ ನೋಡಿ ತಿಳಿಯಬೇಕು.

೩] ನಿಗ್ರಹ ಸ್ಥಾನಗಳು ಎಷ್ಟು ಪ್ರಕಾರವೆಂದು ಜಿಜ್ಞಾಸಾ ಬಂದರೆ, ಅವು ಹೀಗೆ ನಿರೂಪಿತವಾಗಿವೆ- i] ವಿರೋಧ ii] ಅಸಂಗತಿ iii] ನ್ಯೂನ iv] ಆಧಿಕ್ಯ v] ಸಂವಾದ ಹಾಗೂ vi] ಅನುಕ್ತಿ ಹೀಗೆ ಆರು ನಿಗ್ರಹ ಸ್ಥಾನಗಳು.

ಇವುಗಳಲ್ಲಿ ಸಂವಾದ ಹಾಗೂ ಅನುಕ್ತಿಗಳ ಸ್ವರೂಪವು ಇಲ್ಲಿ ಹೇಳಲ್ಪಡುತ್ತದೆ.

१) संवादः--विप्रतिपन्नप्रमेयांगीकारः । २) परबोधनार्थस्यावश्यं वक्तव्यस्यावचनं अनुक्तिः :

निग्रहस्य सामान्यलक्षणं तु--कथायां अखंडिताहंकारेण वादिना प्रतिवादिनः अहंकारखंडनं, पराजयो, निग्रह, इत्युच्यते।

निग्रहस्थानं तु--पराजयापरनामकनिग्रहहेतुः । कथा नामअनेकविद्वत्कर्तृकविचारगोचरवाक्यप्रबंधः ।

सा त्रिविधा--१ ) वाद - २ ) जल्प - ३ ) वितंडा भेदात् ।

१ ) वादकथा—तत्त्वबुभुत्सुकथा २ ) जल्पकथा - स्वपक्षसाधनोपेतविजिगीषुकथा ३) वितंडाकथा - स्वपक्षसाधनहीनविजिगीषुकथा ।

---

v] ಸಂವಾದವೆಂದರೆ ವಿಪ್ರತಿಪನ್ನ ಪ್ರಮೇಯದ [ವಿರುದ್ಧ ಇಲ್ಲವೇ ಸಂಶಯವುಳ್ಳ ಪ್ರಮೇಯಗಳ] ಅಂಗೀಕಾರವು.

vi] ಅನುಕ್ತಿಯೆಂದರೆ, ಪರರಿಗೆ ಬೋಧವಾಗುವದರ ಸಲುವಾಗಿ ಅವಶ್ಯವಾಗಿ ಹೇಳತಕ್ಕದ್ದನ್ನು ಹೇಳದೇ ಇರುವದು.

೪] ನಿಗ್ರಹದ ಸಾಮಾನ್ಯ ಲಕ್ಷಣ ಹೀಗಿದೆ- 'ಕಥಾದಲ್ಲಿ ತನ್ನ ಅಹಂಕಾರ ಖಂಡನವಾಗದೇ ಇದ್ದ ವಾದಿಯಿಂದ ಪ್ರತಿವಾದಿಯ ಅಹಂಕಾರ ಖಂಡನರೂಪ ಪರಾಜಯವೇ ನಿಗ್ರಹವು' ಎಂದು ಕರೆಯಲ್ಪಡುತ್ತದೆ.

ನಿಗ್ರಹಸ್ಥಾನವೆಂದರೆ ಪ್ರತಿವಾದಿಯ ಪರಾಜಯ ಇಲ್ಲವೇ ನಿಗ್ರಹಕ್ಕೆ ಕಾರಣವಾದ ಯುಕ್ತಿಯು- [ಯಾವ ಯುಕ್ತಿಯಿಂದ ಪ್ರತಿವಾದಿಯ ನಿಗ್ರಹವಾಗುವದೋ ಅದೇ ನಿಗ್ರಹಸ್ಥಾನವು]

'ಕಥಾ' ಎಂದರೆ ಅನೇಕ ವಿದ್ವಜ್ಜನರು ಮಾಡುವ ವಿಚಾರಕ್ಕೆ ಸಂಬಂಧಿಸಿದ ವಾಕ್ಯ ಸಮೂಹವು. ಈ ಕಥಾ ಮೂರು ಪ್ರಕಾರವಾಗಿದೆ-

೧] ವಾದ ೨] ಜಲ್ಪ ಹಾಗೂ ೪] ವಿತಂಡ ಎಂಬ ಭೇದದಿಂದ ಮೂರು ವಿಧವಾಗಿದೆ.

೧] ವಾದ ಕಥಾ ಎಂದರೆ, ತತ್ವ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಮಾಡುವ ಪರಸ್ಪರ ವಾದವು.

೨] ಜಲ್ಪಕಥಾ ಎಂದರೆ, ಸ್ವಪಕ್ಷ ಸಾಧನದಿಂದ ಕೂಡಿದ ಜಯ ಸಂಪಾದನೆಯೇ ಮುಖ್ಯ ಉದ್ದೇಶವುಳ್ಳ ವಾದವು.

೩] ವಿತಂಡ ಕಥಾ ಎಂದರೆ, ಸ್ವಪಕ್ಷ ಸಾಧನ ಹೀನವಾದ ಜಯದಲ್ಲಿ ಇಚ್ಛೆಯುಳ್ಳ ಕಥಾ-

पूर्वोक्तनिग्रहलक्षणे अहंकारखंडनं तु—स्वसिद्धांतसाधनं परसिद्धांतदूषणं च करिष्यामीति तयोर्यः संकल्पस्तस्य निवृत्तिः।

निग्रहस्थानलक्षणांतरं तु--परोक्तस्ववक्तव्ययोरज्ञानं, विपरीतज्ञानं वा निग्रहः, तद्ज्ञापकं निग्रहस्थानं, तथा च तत्त्वाप्रतिपत्तिलिंगं ( लिंगं नाम ज्ञापकं ) निग्रहस्थानं। तत्र तत्त्वाप्रतिपत्तिश्च द्विविधा--१) अज्ञानरूपाप्रतिपत्तिः २) विपरीत--ज्ञानरूपाविप्रतिपत्तिश्च ज्ञेया।

**इति निग्रहस्थानविभागपूर्वककथास्वरूपनिरूपणम्।**

**इतिउपपत्तिदोषविचारप्रकरणम्।**

---

**अथ हेत्वाभासप्रकरणम्।**

परोदीरितहेत्वाभासानां स्वोक्तानुमानदोषेष्वंतर्भावकथनाय हेत्वाभासलक्षणं वक्तुमुपक्रम्यते--

---

ಮೇಲೆ ಹೇಳಿದ ನಿಗ್ರಹ ಲಕ್ಷಣದಲ್ಲಿ ಬಂದ 'ಅಹಂಕಾರ ಖಂಡನೆ' ಎಂದರೆ, 'ದೃಷ್ಟಾಂತ ಸಮರ್ಥನೆ ಹಾಗೂ ಪರಸಿದ್ಧಾಂತ ದೂಷಣೆಯನ್ನು ಮಾಡುತ್ತೇನೆ' ಎಂಬ ಪರಸ್ಪರದಲ್ಲಿರುವ ಸಂಕಲ್ಪವನ್ನು ನಿವೃತ್ತಿಗೊಳಿಸುವದು. ನಿಗ್ರಹಸ್ಥಾನದ ಬೇರೆ ಲಕ್ಷಣವು ಹೀಗಿದೆ- ಪ್ರತಿವಾದಿಯು ಹೇಳಿದುದರ ಹಾಗೂ ತಾನು ಹೇಳಬೇಕಾದುದರ ಅಜ್ಞಾನ ಅಥವಾ ವಿಪರೀತ ಜ್ಞಾನವು ನಿಗ್ರಹವು. ಇದನ್ನು ತಿಳಿಸುವದೇ ನಿಗ್ರಹಸ್ಥಾನವು. ತಥಾಚ ತತ್ವದ ಜ್ಞಾನವು ಆಗಿಲ್ಲವೆಂದು ತಿಳಿಸುವ ಲಿಂಗವು ಎಂದರೆ ಜ್ಞಾಪಕವು ನಿಗ್ರಹಸ್ಥಾನವು. ಇಲ್ಲಿ ತತ್ವದ ಜ್ಞಾನವಾಗದೇ ಇರುವದು [ಅಪ್ರತಿಪತ್ತಿಯು] ಎರಡು ವಿಧ- i] ಅಜ್ಞಾನರೂಪವಾದುದು [ಅಪ್ರತಿಪತ್ತಿ] ಹಾಗೂ ii] ವಿಪರೀತ ಜ್ಞಾನರೂಪವಾದುದು [ವಿಪ್ರತಿಪತ್ತಿಯು] ಎಂದು ತಿಳಿಯಬೇಕು.

ಉಪಪತ್ತಿದೋಷ ವಿಚಾರ ಪ್ರಕರಣವು ಮುಗಿದುದು.

**೫) ಹೇತ್ವಾಭಾಸ ಪ್ರಕರಣವು.**

ಪರರಿಂದ ಹೇಳಲ್ಪಟ್ಟ ಹೇತ್ವಾಭಾಸಗಳನ್ನು ಸಿದ್ಧಾಂತಿಗಳು ಹೇಳಿದ ಅನುಮಾನ ದೋಷಗಳಲ್ಲಿಯೇ ಅಂತರ್ಭಾವ ಮಾಡುವದಕ್ಕಾಗಿ, ಹೇತ್ವಾಭಾಸದ ಲಕ್ಷಣವನ್ನು ಇಲ್ಲಿ ಹೇಳಲಾಗುತ್ತದೆ.

ನಿರ್ದೋಷವಾದ ಹೇತುವಿಗೆ ಇರುವ ಅಂಗಗಳು ಐದು-

१. पक्षधर्मत्वं २. सपक्षे सत्त्वं ३. विपक्षाव्द्यावृत्तिः ४. अबाधितविषयत्वं ५. असत्प्रतिपक्षत्वं चेति हेतोः पंच रूपाणि। तत्रान्वयव्यतिरेकिणः पंचापि विवक्षितानि, इतरयोस्तु चत्वारि, तथा हि--केवलन्वयिनो विपक्षाभावेन ततो व्यावृत्त्यभावात्, केवलव्यतिरेकिणः सपक्षाभावेन तत्र सत्त्वानुपपत्तेरिति ।

इदानीं हेत्वाभासलक्षणमुच्यते--त्रिविधेषु अनुमानेषु यत्र यावंति विवक्षितानि तेषु कतिपयसहिताः कतिपयरहिताः हेत्वाभासा इत्युच्यंते, तथा च यादृशहेतौ पंचानां मध्ये यावन्ति अपेक्षितानि तावद्रूपाभाववत्त्वं हेत्वाभासस्य लक्षणमिति पर्यवसितम् ।

**तज्जरनैयायिकरीत्या** गण्यते--१. असिद्ध - २. विरुद्ध - ३. अनैकांतिक - ४. अनध्यविसित ५. कालात्ययापदिष्ट - ६. सत्प्रतिपक्ष - ७, प्रकरणसमाः ।

---

೧) ಪಕ್ಷ ಧರ್ಮತಾ ೨]ಸಪಕ್ಷದಲ್ಲಿರುವಿಕೆ ೩] ವಿಪಕ್ಷದಲ್ಲಿಲ್ಲದಿರುವಿಕೆ ೪] ಬಾಧ ದೋಷಕ್ಕೆ ವಿಷಯವಾಗದಿರುವದು, ಹಾಗೂ ೫] ಸಪಕ್ಷವನ್ನು ಹೊಂದದೇ ಇರುವದು. ಇವುಗಳಲ್ಲಿ 'ಅನ್ವಯುವ್ಯತಿರೇಕ" ರೂಪ ಹೇತುವಿಗೆ ಈ ಐದು ಅವಯುವಗಳಿರುತ್ತವೆ.

ಉಳಿದವುಗಳಿಗೆ [ಕೇವಲಾನ್ವಯೀ ಹಾಗೂ ಕೇವಲ ವ್ಯತಿರೇಕಿ ಹೇತುಗಳಿಗೆ] ನಾಲ್ಕು ಅವಯುವಗಳಿರುತ್ತವೆ. ಅದು ಹೇಗೆಂದರೆ. ಕೇವಲಾನ್ವಯಿ ಹೇತುವಿಗೆ ವಿಪಕ್ಷವಿಲ್ಲವಾದ್ದರಿಂದ, ವಿಪಕ್ಷದಿಂದ ವ್ಯಾವೃತ್ತಿಯೂ ಇಲ್ಲ. ಆದ್ದರಿಂದ 'ವಿಪಕ್ಷವ್ಯಾವೃತ್ತಿ' ಎಂಬ ಅಂಗವಿಲ್ಲ. ಕೇವಲ ವ್ಯತಿರೇಕಿ ಹೇತುವಿಗೆ ಸಪಕ್ಷವಿಲ್ಲದ್ದರಿಂದ 'ಸಪಕ್ಷದಲ್ಲಿರುವಿಕೆ' ಎಂಬ ಅಂಗವಿಲ್ಲ.

ಹೇತ್ವಾಭಾಸದ ಲಕ್ಷಣ– ಮೂರು ವಿಧ ಅನುಮಾನಗಳಲ್ಲಿ [ಕೇವಲ ಅನ್ವಯ ಹೇತುಕ, ಕೇವಲ ವ್ಯತಿರೇಕ ಹೇತುಕ ಹಾಗೂ ಅನ್ವಯ ವ್ಯತಿರೇಕ ಹೇತುಗಳಲ್ಲಿ] ಎಷ್ಟು ಅವಯುವಗಳು ವಿವಕ್ಷಿತವಾಗಿಯೋ ಇವೆಲ್ಲ ಇರಲಾರದೇ, ಅವುಗಳಲ್ಲಿ ಕೆಲವು ಮಾತ್ರವಿದ್ದು ಕೆಲವಿಲ್ಲದಿದ್ದರೆ ಹೇತ್ವಾಭಾಸಗಳೆಂದು ಕರೆಯಲ್ಪಡುತ್ತದೆ. ತಥಾಚ ಅನುಮಾನದ ಐದು ಅವಯುವಗಳಲ್ಲಿ ಎಷ್ಟು ಅಪೇಕ್ಷಿತಗಳೊ, ಅಷ್ಟು ಅವಯವಗಳ ಅಭಾವವು ಹೇತ್ವಾಭಾಸದ ಲಕ್ಷಣವು ಎಂದು ಅರ್ಥವು.

ಜರನ್ನೈಯಾಯಿಕರು ಹೇಳುವಂತೆ ಹೇತ್ವಾಭಾಸಗಳು ಏಳು ಪ್ರಕಾರವಾಗಿವೆ.

१. तत्र व्याप्यस्य पक्षधर्मत्वप्रमितिः सिद्धिः, तदभावोऽसिद्धिः तद्वानसिद्धः । असिद्धश्चतुर्विधः--१) व्याप्यत्वासिद्ध - २) आश्रयसिद्ध - ३) पक्षधर्मत्वासिद्ध - ४) अज्ञानासिद्धाश्च ।

१. तत्र व्याप्यत्वासिद्धो द्विविधः--१) साध्यसंबंधरहितः २) सोपाधिकसंबंधश्चेति, १) आद्यो यथा--सर्वं क्षणिकं सत्त्वादिति, अयं प्रागुक्ते अव्याप्तिरूपहेतुविरोधावांतरभेदे साध्यतदभावरूपोभयसंबंधाभावरूपे ह्यंतर्भवति ।

२) द्वितीयो यथा - वैधी हिंसा, पापसाधनं हिंसात्वात् ब्रह्महिंसावत् । अत्र निषिद्धत्वमुपाधिः

---

೧) ಅಸಿದ್ಧ ೨) ವಿರುದ್ಧ ೩) ಅನೈಂಕಾತಿಕ ೪] ಅನಧ್ಯವಸಿತ ೫) ಕಾಲಾತ್ಯಯಾಪದಿಷ್ಟ ೬] ಸತ್‌ಪ್ರತಿಪಕ್ಷ ೭). ಪ್ರಕರಣ ಸಮ.

ಅಸಿದ್ಧ ಲಕ್ಷಣವು- ವ್ಯಾಪ್ಯವಾದ ಹೇತುವಿನ ಪಕ್ಷ ಧರ್ಮತಾಜ್ಞಾನವು ಸಿದ್ಧಿಯು. ಅದರ ಅಭಾವವು ಅಸಿದ್ಧಿಯು. ಈ ಅಸಿದ್ಧಿ ದೋಷವುಳ್ಳದ್ದು ಅಸಿದ್ಧವು. ಈ 'ಅಸಿದ್ಧ'ವು ನಾಲ್ಕು ವಿಧ- i] ವ್ಯಾಪ್ಯತ್ವಾಸಿದ್ಧ ii] ಆಶ್ರಯಾಸಿದ್ಧ iii]ಪಕ್ಷಧರ್ಮತಾಸಿದ್ಧ ಹಾಗೂ iv] ಅಜ್ಞಾನಾಸಿದ್ಧ.

i] ಇವುಗಳಲ್ಲಿಯ ವ್ಯಾಪ್ಯತ್ವಾಸಿದ್ಧವು ಎರಡು ಪ್ರಕಾರವಾಗಿದೆ-

೧] ಸಾಧ್ಯ ಸಂಬಂಧರಹಿತವಾದ ವ್ಯಾಪ್ಯತ್ವಾಸಿದ್ಧವು. ೨] ಸೋಪಾಧಿಕ ಸಂಬಂಧವುಳ್ಳ ವ್ಯಾಪ್ಯತ್ವಾಸಿದ್ಧವು.

೧] ಸಾಧ್ಯಸಂಬಂಧರಹಿತವಾದುದಕ್ಕೆ ಉದಾಹರಣೆ- 'ಸರ್ವವು, ಕ್ಷಣಿಕವು, ಅರ್ಥಕ್ರಿಯಾಕಾರಿಯಾಗಿರುವದರಿಂದ [ಅಸ್ತಿತ್ವವುಳ್ಳದ್ದರಿಂದ]' [ಇಲ್ಲಿ ಅಸ್ತಿತ್ವಕ್ಕೂ ಕ್ಷಣಿಕತ್ವಕ್ಕೂ ಸಂಬಂಧವಿಲ್ಲ] ಈ 'ಅಸ್ತಿತ್ವ' ಹೇತುವು, ಪೂರ್ವದಲ್ಲಿ ಹೇಳಿದ ಅವ್ಯಾಪ್ತಿರೂಪ ಹೇತುವಿರೋಧಗಳ ಅವಾಂತರಭೇದವಾದ ಸಾಧ್ಯ, ಸಾಧ್ಯಾಭಾವರೂಪ ಉಭಯ ಸಂಬಂಧಾಭಾವರೂಪದಲ್ಲಿ ಅಂತರ್ಭೂತವಾಗುತ್ತದೆ. ['ಸತ್ವ' ಹೇತುವಿಗೆ 'ಕ್ಷಣಿಕತ್ವ' ಸಾಧ್ಯಸಂಬಂಧವಿಲ್ಲ. ಸಾಧ್ಯಾಭಾವದಿಂದಲೇ ಸಂಬಂಧವುಂಟು]

೨] ವ್ಯಾಪ್ಯತ್ವಾಸಿದ್ಧದ ಎರಡನೆಯ ಪ್ರಕಾರವಾದ ಸೋಪಾಧಿಕ ಸಂಬಂಧಕ್ಕೆ ಉದಾಹರಣೆಗೆ- 'ವೇದದಲ್ಲಿ ಹೇಳಿದ ಹಿಂಸೆಯು, ಪಾಪಸಾಧನವು- ಹಿಂಸೆಯಾಗಿದ್ದರಿಂದ, ಬ್ರಾಹ್ಮಣರ ಹಿಂಸೆಯಂತೆ', ಎಂಬ ಅನುಮಾನಕ್ಕೆ ನಿಷಿದ್ಧತ್ವವು ಉಪಾಧಿಯು.

हिंसात्वपापसाधनत्वयोः संबंधे निषद्धत्वस्य प्रयोजकत्वात्

इदानीं प्रसंगवशादुपाधेर्लक्षणादिकं विस्तरेणोच्यते--

उपाधेर्लक्षणं तु - साध्यव्यापकत्वे सति साधनाव्यापकत्वं, साध्यव्यापकत्वं च - साध्याधिकरणवृत्ति - अत्यंतभावाप्रतियोगित्वं, प्रकृते निषिद्धत्वे लक्षणसमन्वयः - साध्यं पापसाधनत्वं, तदधिकरणं ब्रह्महिंसा तद्वृत्तिर्योऽत्यंतभावः घटात्यंतभावः, तत्प्रतियोगी घट अप्रतियोगि निषिद्धत्वं, तत्र साध्याधिकरणवृत्ति -अत्यंताभावाप्रतियोगित्वस्य सत्त्वात् साध्यव्यापकत्वमस्ति, तथा साधनाव्यापकत्वं नाम साधनाधिकरणवृत्ति - अत्यंतभावप्रतियोगित्वं, तद्यथा - साधनं हिंसात्वं तदधिकरणं वैधीहिंसा, तद्वृत्त्यत्यंताभावः निषिद्धत्वात्यंताभावः तत्प्रतियोगि निषिद्धत्वमिति तत्र साधनाव्यापकत्वं वर्तत इति निषिद्धत्वे लक्षणसमन्वयः ।

---

'ಹಿಂಸಾ' ಮತ್ತು 'ಪಾಪಸಾಧನ' ಗಳ ಸಂಬಂಧದಲ್ಲಿ 'ನಿಷಿದ್ಧತ್ವ' ವು ಪ್ರಯೋಜನವು. [ಹಿಂಸೆಯು ನಿಷಿದ್ಧವಾದ ಪ್ರಯುಕ್ತವೇ ಪಾಪಸಾಧನವಾಗುವದೆಂದು ಹೇಳಬೇಕೇ ಹೊರತು 'ಹಿಂಸಾ' ಮಾತ್ರದಿಂದಲ್ಲ. 'ಹಿಂಸಾತ್ವ' ಹೇತುವು 'ನಿಷಿದ್ಧತ್ವ ಉಪಾಧಿಸಂಬಂಧವುಳ್ಳದ್ದು]

ಈಗ ಪ್ರಸಂಗಾನುಸಾರವಾಗಿ 'ಉಪಾಧಿ'ಯ ಲಕ್ಷಣ ಮೊದಲಾದವುಗಳನ್ನು ವಿಸ್ತಾರವಾಗಿ ಹೇಳಲಾಗುತ್ತದೆ.

ಉಪಾಧಿಯ ಲಕ್ಷಣವು– ಸಾಧ್ಯಕ್ಕೆ ವ್ಯಾಪಕವಾಗಿ ಸಾಧನಕ್ಕೆ ಅವ್ಯಾಪಕವಾದದ್ದು ಉಪಾಧಿಯು. ಸಾಧ್ಯಕ್ಕೆ ವ್ಯಾಪಕವೆಂದರೆ ಸಾಧ್ಯಕ್ಕೆ ಯಾವುದು ಅಧಿಕರಣವೋ ಈ ಅಧಿಕರಣದಲ್ಲಿರತಕ್ಕ ಅತ್ಯಂತಾಭಾವಕ್ಕೆ ಅಪ್ರತಿಯೋಗಿಯಾಗಿದ್ದು ಎಂಬ ಅರ್ಥವು. ಪ್ರಕೃತ 'ನಿಷಿದ್ಧತ್ವ' ಉಪಾಧಿಯಲ್ಲಿ ಲಕ್ಷಣ ಸಮನ್ವಯವಾಗುವದು. ಸಾಧ್ಯವು 'ಪಾಪಸಾಧನತ್ವವು' ಇದಕ್ಕೆ ಅಧಿಕರಣವು 'ಬ್ರಹ್ಮಹಿಂಸೆಯು' ಇದರಲ್ಲಿರುವ ಅತ್ಯಂತಾಭಾವವೆಂದರೆ ಘಟ ಪಟದ ಅತ್ಯಂತಾಭಾವವು. ಇದಕ್ಕೆ ಪ್ರತಿಯೋಗಿಯಾದುದು 'ನಿಷಿದ್ಧತ್ವವು' ಈ ನಿಷಿದ್ಧತ್ವದಲ್ಲಿ ಸಾಧ್ಯಾಧಿಕರಣದಲ್ಲಿಯ ಅತ್ಯಂತಾಭಾವದ ಅಪ್ರತಿಯೋಗಿತ್ವ" ಧರ್ಮವಿದೆ. ಕಾರಣ ಈ ಉಪಾಧಿಯಲ್ಲಿ ಸಾಧ್ಯವ್ಯಾಪಕತ್ವವು ಇದೆ. ಆದರಂತೆ ಸಾಧನ ಅವ್ಯಾಪಕತ್ವವೂ ಇದೆ. ಸಾಧನ ಅವ್ಯಾಪಕತ್ವವೆಂದರೆ ಸಾಧನಾಧಿಕರಣದಲ್ಲಿ ಇರತಕ್ಕ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿರುವದು. ಇಲ್ಲಿ ಸಾಧನವು ಹಿಂಸಾತ್ವವು. ಇದಕ್ಕೆ ಅಧಿಕರಣವು "ವೈದಿಕ ಹಿಂಸೆಯು"

उपाधिलक्षणे साधनाव्यापकत्वमित्येवास्तु इति चेत् शब्दो नित्यः कृतकत्वादित्यत्र घटत्वमुपाधिः स्यात् कृतकत्ववति शब्दे घटत्वस्यासत्त्वात् साधनाव्यापकत्वं, तथा च, साधनाव्यापकत्वं घटत्वेऽस्तीति घटत्वमुपाधिः स्यात्। अतः साध्यव्यापकत्वं विशेषणं देयं, घटत्वस्य साध्यव्यापकत्वाभावात् ( यत्र नित्यत्वं तत्र घटत्वं नास्तीति ) नोपाधित्वं। साध्यव्यापकत्वमुपाधिरित्येवोक्ते - पर्वतो वन्हिमान् धूमादित्यत्र द्रव्यत्वमुपाधिः स्यात्, यत्र वन्हिमत्त्वं तत्र द्रव्यत्वं यथा महानस इति द्रव्यत्वस्य साध्यव्यापकत्वमस्ति, तद्वारणाय साधनाव्यापकत्वं विशेषणं देयं,

---

ಇದರಲ್ಲಿಯು ಅತ್ಯಂತಾಭಾವವೆಂದರೆ 'ನಿಷಿದ್ಧತ್ವಾಭಾವವು' ಈ ಅಭಾವಕ್ಕೆ ಪ್ರತಿಯೋಗಿಯು 'ನಿಷಿದ್ಧತ್ವವು' ಹೀಗೆ ನಿಷಿದ್ಧತ್ವದಲ್ಲಿ ಸಾಧನಾವ್ಯಾಪಕತ್ವವೂ ಉಂಟು. 'ನಿಷಿದ್ಧತ್ವ'ದಲ್ಲಿ ಲಕ್ಷಣ ಸಮನ್ವಯವಾಗುತ್ತದೆ.

ಉಪಾಧಿಯ ಲಕ್ಷಣದ ದಲಕೃತ್ಯವು- ಲಕ್ಷಣದಲ್ಲಿ "ಸಾಧನ ಅವ್ಯಾಪಕತ್ವ" ಇಷ್ಟೇ ಇರಲಿ ಎಂದರೆ, 'ಶಬ್ದವು ನಿತ್ಯವು ಕೃತಕತ್ವವುಳ್ಳದಾಗಿರುವದರಿಂದ' ಎಂಬ ಅನುಮಾನದಲ್ಲಿ, 'ಘಟತ್ವ'ವು ಉಪಾಧಿಯಾಗಬೇಕಾಗುತ್ತದೆ. ಏಕೆಂದರೆ, 'ಘಟತ್ವ'ಕ್ಕೆ ಸಾಧನ ಅವ್ಯಾಪಕತ್ವವುಂಟು. ಮೇಲಿನ ಅನುಮಾನದಲ್ಲಿ 'ಕೃತಕತ್ವ'ವು ಹೇತುವಿದ್ದು ಪಕ್ಷವಾದ ಶಬ್ದದಲ್ಲಿದೆ. ಆದರೆ ಅಲ್ಲಿ ಘಟತ್ವವಿಲ್ಲ. ಕಾರಣ, ಘಟತ್ವಕ್ಕೆ ಸಾಧನಾಧಿಕರಣ ವೃತ್ತಿ ಅತ್ಯಂತಾಭಾವ ಪ್ರತಿಯೋಗಿತ್ವವಿದೆ. ಸಾಧನಾಅವ್ಯಾಪಕತ್ವ ಬರುವದರಿಂದ ಘಟತ್ವವು ಉಪಾಧಿಯು. ಇದನ್ನು ಪರಿಹರಿಸಲು, 'ಸಾಧ್ಯವ್ಯಾಪಕತ್ವ' ಎಂಬ ದಲವನ್ನು ಕೊಡಬೇಕು. ಘಟಕ್ಕೆ ಸಾಧ್ಯವ್ಯಾಪಕತ್ವವಿಲ್ಲ. [ನಿತ್ಯತ್ವವಿದ್ದಲ್ಲಿ ಘಟತ್ವವಿಲ್ಲವಾದ್ದರಿಂದ ಘಟತ್ವಕ್ಕೆ ಸಾಧ್ಯವ್ಯಾಪಕತ್ವವಿಲ್ಲ] ಆದ್ದರಿಂದ ಇದು ಉಪಾಧಿಯಾಗುವದಿಲ್ಲ. ಇನ್ನು 'ಸಾಧ್ಯವ್ಯಾಪಕತ್ವವು ಉಪಾಧಿಯು' ಎಂದಿಷ್ಟೇ ಲಕ್ಷಣ ಮಾಡಿದರೆ, 'ಪರ್ವತವು ವಹ್ನಿಯುಳ್ಳದು, ಧೂಮ ಇರುವದರಿಂದ' ಎಂಬ ಅನುಮಾನಕ್ಕೆ 'ದ್ರವ್ಯತ್ವವು' ಉಪಾಧಿಯಾಗುತ್ತದೆ. ಏಕೆಂದರೆ, ಎಲ್ಲಿ ವಹ್ನಿಮತ್ತ್ವವಿದೆ. ಅಲ್ಲಿ ದ್ರವ್ಯತ್ವವಿದೆ. ಹೀಗೆ [ಸಾಧ್ಯಕ್ಕಿಂತ ಹೆಚ್ಚಿನ ದೇಶದಲ್ಲಿದ್ದುದರಿಂದ] ದ್ರವ್ಯತ್ವಕ್ಕೆ ಸಾಧ್ಯ ವ್ಯಾಪಕತ್ವವಿದೆ.

ಇದನ್ನು ಪರಿಹರಿಸಲು 'ಸಾಧನ ಅವ್ಯಾಪಕತ್ವ"ವನ್ನು ಸೇರಿಸಬೇಕು.

---

द्रव्यत्वत्य साधनवति पक्षे ( धूमवत्पर्वते सत्वात् साधनव्यापकत्वमेव वर्तते न तु साधनाव्यापकत्वमिति द्रव्यत्वं नोपाधिर्भवति, तथा च उपाधेर्लक्षणमुक्तरित्या साध्यव्यापकत्वे सति साधनाव्यापकत्वं ज्ञेयम् ।

अत्र साध्यव्यापकत्वं चतुर्विधं--१ ) शुद्धसाध्यव्यापकत्वं २) पक्षधर्मावच्छिन्नसाध्यव्यापकत्वं ३ ) साधनधर्मावच्छिन्नसाध्यव्यापकत्वं ४ ) उदासीनधर्मावच्छिन्नसाध्यव्यापकत्वं चेति । तद्भेदादुपाधेरपि चातुर्विध्यं, तथा हि--१ ) आद्यो यथा - पर्वतो धूमवान् वन्हेरित्यत्र, आर्द्रेन्धनसंयोगः, अयं शुद्धमासाध्यव्यापकः ।

---

ದ್ರವ್ಯತ್ವಕ್ಕೆಸಾಧ್ಯವ್ಯಾಪಕತ್ವವಿದ್ದರೂ, ಸಾಧನ ಅವ್ಯಾಪಕತ್ವವಿಲ್ಲ [ಎಂದರೆ ಸಾಧನ ಇದ್ದಲ್ಲಿಉಪಾಧಿ ಇರಲಾರದು ] ಏಕೆಂದರೆ ಸಾಧನವಾದ ಧೂಮವು ಪಕ್ಷವಾದ ಪರ್ವತದಲ್ಲಿದೆ. ಆದರೆ ಅಲ್ಲಿ ದ್ರವ್ಯತ್ವ ಉಪಾಧಿಯೂ ಇರುತ್ತದೆ. [ಧೂಮಕ್ಕೆ ದ್ರವ್ಯತ್ವವು ವ್ಯಾಪಕವಾಯಿತೇ ಹೊರತು ಅವ್ಯಾಪಕವಾಗಲಿಲ್ಲ] 'ದ್ರವ್ಯತ್ವ' ಉಪಾಧಿಗೆ ಸಾಧನಅವ್ಯಾಪಕತ್ವ ಬರಲಿಲ್ಲವಾದ್ದರಿಂದ 'ಧೂಮ' ಹೇತುವಿಗೆ "ದ್ರವ್ಯತ್ವ"ವು ಉಪಾಧಿಯಾಗಲಾರದು. 'ಸಾಧ್ಯಕ್ಕೆ ವ್ಯಾಪಕವಾಗಿ, ಸಾಧನಕ್ಕೆ ಅವ್ಯಾಪಕವಾದುದೇ ಉಪಾಧಿಯು' ಎಂದು ತಿಳಿಯಬೇಕು.

ಇಲ್ಲಿ ಸಾಧ್ಯ ವ್ಯಾಪಕತ್ವವು ನಾಲ್ಕು ಪ್ರಕಾರವಾಗಿದೆ– ೧] ಶುದ್ಧ ಸಾಧ್ಯವ್ಯಾಪಕತ್ವವು ೨] ಪಕ್ಷಧರ್ಮದಿಂದ ಕೂಡಿದ ಸಾಧ್ಯವ್ಯಾಪಕತ್ವವು. ೩] ಸಾಧನಧರ್ಮದಿಂದ ಕೂಡಿದ ಸಾಧ್ಯ ವ್ಯಾಪಕತ್ವವು ೪] ಉದಾಸೀನ ಧರ್ಮದಿಂದ ಕೂಡಿದ ಸಾಧ್ಯವ್ಯಾಪಕತ್ವವು. ಈ ನಾಲ್ಕು ಪ್ರಕಾರಗಳ ಭೇದದಿಂದ ಉಪಾಧಿಯೂ ನಾಲ್ಕು ಪ್ರಕಾರವಾಗಿದೆ, ಅವುಗಳಿಗೆ ಉದಾಹರಣೆ ಹೀಗಿದೆ–

೧] ಮೊದಲನೆಯದಾದ ಶುದ್ಧ ಸಾಧ್ಯವ್ಯಾಪಕ ಉಪಾಧಿಗೆ ಉದಾಹರಣೆ– ಪರ್ವತವು ಧೂಮವುಳ್ಳದ್ದು, ವಹ್ನಿ ಇರುವದರಿಂದ' ಎಂಬ ಅನುಮಾನದಲ್ಲಿ 'ಹಸಿಕಟ್ಟಿಗೆ ಸಂಯೋಗವು" ಉಪಾಧಿಯು. ಇದು ಶುದ್ಧವಾದ ಸಾಧ್ಯಕ್ಕೆ ವ್ಯಾಪಕವಾಗಿದೆ. (ವಿವರಣೆ– ಸಾಧ್ಯ ಅಧಿಕರಣ ವೃತ್ತಿ ಅತ್ಯಂತ ಅಭಾವ ಅಪ್ರತಿಯೋಗಿತ್ವವೇ ಸಾಧ್ಯವ್ಯಾಪಕತ್ವವು. ಇಲ್ಲಿ ಸಾಧ್ಯವು ಧೂಮವು, ಧೂಮಾಧಿಕರಣವು ಮಹಾನಸವು. ಅಲ್ಲಿ ಘಟ ಅತ್ಯಂತಾಭಾವವು. ಅದಕ್ಕೆ ಪ್ರತಿಯೋಗಿ ಘಟವು. ಅಪ್ರತಿಯೋಗಿಯು ಹಸಿಕಟ್ಟಿಗೆ ಸಂಯೋಗ [ಆರ್ದ್ರೇಂಧನ ಸಂಯೋಗ] ಹಾಗೆಯೇ ಸಾಧನ ಅವ್ಯಾಪಕತ್ವವೂ ಈ ಉಪಾಧಿಗೆ ಇದೆ.

२ ) द्वितीयो यथा वायुः प्रत्यक्षः प्रत्यक्षस्पर्शाश्रयत्वादित्यत्र बहिर्द्रव्यत्वावच्छिन्नप्रत्यक्षत्वव्यापकोभ्दूतरूपवत्त्वमुपाधिः, अत्र बहिर्द्रव्यत्वं पक्षधर्मः, उभ्दूतरूपवत्त्वोपाधेः केवलसाध्यव्यापकत्वं नास्ति, गुणादौ प्रत्यक्षत्वसद्भावेऽपि, उभ्दूतरूपवत्त्वाभावाद्व्यभिचारः, अतो द्रव्यत्वावच्छिन्नेत्युक्तं, तथा च, गुणादौ द्रव्यत्वावच्छिन्नप्रत्यक्षत्वस्यासत्त्वात् न व्यभिचारः,

---

ಇಲ್ಲಿ ಸಾಧನವು 'ವಹ್ನಿಯು. ಅದಕ್ಕೆ ಅಧಿಕರಣವು ಕಾದ ಕಬ್ಬಿಣದಗುಂಡು ಇಲ್ಲಿ ಹಸಿ ಕಟ್ಟಿಗೆಯ ಸಂಯೋಗವಿಲ್ಲ.

ಸಾಧನವ್ಯಾಪಕವೆಂದರೆ. ಸಾಧನಾಧಿಕರಣವೃತ್ತಿ ಅತ್ಯಂತಾಭಾವ ಪ್ರತಿಯೋಗಿತ್ವವು ಇದು ಅಲ್ಲಿ ಅದೆ.

೨] ಎರಡನೆಯ ಪ್ರಕಾರಕ್ಕೆ ಉದಾಹರಣೆಯು- ವಾಯುವು, ಪ್ರತ್ಯಕ್ಷವು, ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯುವಾದುದರಿಂದ, ಎಂಬ ಅನುಮಾನಕ್ಕೆ ಬಹಿದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷಕ್ಕೆ ವ್ಯಾಪಕವಾದ ಉದ್ಭೂತರೂಪ [ಪ್ರಕಟ] ರೂಪವು ಉಪಾಧಿಯು. ಇಲ್ಲಿ ಬಹಿದ್ರವ್ಯತ್ವವು, ಪಕ್ಷಧರ್ಮವು [ವಾಯುವು ಹೊರಗಿರುವ ದ್ರವ್ಯವಾಗಿದೆ] ಉದ್ಭೂತ ರೂಪವೆಂಬ ಉಪಾಧಿಗೆ ಕೇವಲ ಸಾಧ್ಯವ್ಯಾಪಕತ್ವವಿಲ್ಲ. ಏಕೆಂದರೆ, ಗುಣ ಮೊದಲಾದವುಗಳಲ್ಲಿ ಸಾಧ್ಯವಾದ ಪ್ರತ್ಯಕ್ಷತ್ವವಿದ್ದರೂ ಉದ್ಭೂತರೂಪವಿಲ್ಲ, ಆದುದರಿಂದ ವ್ಯಭಿಚಾರ ಬರುತ್ತದೆ. ರೂಪಾದಿ ಗುಣಗಳು ಪ್ರತ್ಯಕ್ಷವಾದರೂ ಪ್ರಕಟವಾದ ರೂಪವುಳ್ಳವುಗಳಾಗಿಲ್ಲ. ಅವು ದ್ರವ್ಯವನ್ನು ಆಶ್ರಯಿಸಿ ತೋರುವದಲ್ಲದೇ ಸಾಕ್ಷಾತ್ತಾಗಿ ಪ್ರತ್ಯಕ್ಷವಾಗುವದಿಲ್ಲ, ಕಾರಣ, ಪ್ರತ್ಯಕ್ಷತ್ವಕ್ಕೂ ಉದ್ಭೂತರೂಪಕ್ಕೂ, ವ್ಯಾಪ್ಯವ್ಯಾಪಕಭಾವ ಕೂಡುವದಿಲ್ಲ. ಪ್ರತ್ಯಕ್ಷತ್ವವು ವ್ಯಾಪಕಾಭಾವದ್‌ವೃತ್ತಿ ವ್ಯಾಪ್ಯವಾಗುವದರಿಂದ ವ್ಯಭಿಚಾರವು, ಇಲ್ಲಿ ವ್ಯಾಪಕಾಭಾವವೆಂದರೆ, ಉದ್ಭೂತರೂಪಾಭಾವವು ಈ ಅಭಾವವುಳ್ಳದ್ದು ಗುಣವು ಇದರಲ್ಲಿ ಇರತಕ್ಕ ಧರ್ಮವು, ಪ್ರತ್ಯಕ್ಷತ್ವವು. ಈ ಪ್ರತ್ಯಕ್ಷತ್ವವು ವ್ಯಾಪ್ಯವಾದುದರಿಂದ ವ್ಯಭಿಚರಿತವಾಗುವದೆಂಬ ಭಾವವು.

ಈ ವ್ಯಭಿಚಾರ ದೋಷ ಪರಿಹರಿಸಲು ದ್ರವ್ಯತ್ವದಿಂದ ಕೂಡಿದ ಎಂಬ ವಿಶೇಷಣವನ್ನು ಪ್ರತ್ಯಕ್ಷತ್ವಕ್ಕೆ ಕೊಡಲಾಗಿದೆ. ಇದರಿಂದ ಗುಣಾದಿಗಳಲ್ಲಿ, ಉದ್ಭೂತರೂಪ ಹೇಗಿಲ್ಲವೋ ಅದರಂತೆ ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವ ಇಲ್ಲದ್ದರಿಂದ ವ್ಯಭಿಚಾರ ದೋಷ ಬರಲಾರದು.

---

घटादौ द्रव्यत्वावच्छिन्नप्रत्यक्षत्वस्य सत्त्वेन तत्र उद्भूतरूपवत्त्वस्यापि विद्यमानत्वेन साध्यव्यापकताऽस्तीति, तथापि आत्मनि द्रव्यत्वावच्छिन्नप्रत्यक्षत्वसद्भावेऽपि उद्भूतरूपवत्त्वं नास्तीति न-साध्यव्यापकता, अतो बहिर्द्रव्यात्वावच्छिन्नेति प्रत्यक्षत्वविशेषणं देयं, तथा च, आत्मनि बहिर्द्रव्यत्वावच्छिन्नप्रत्यक्षत्वस्याभावान्न-व्यभिचारः, अयं पक्षधर्मावच्छिन्नसाध्यव्यापकोपाधिः ( बहिर्द्रव्यत्वावच्छिन्नप्रत्यक्षत्वव्यापकोद्भूतरूपवत्त्वमुपाधिरिति ) ।

(३) तृतीयो यथा-गर्भस्थः श्यामो भवितुमर्हति मैत्रीतनयत्वात् इत्यत्र शाकपाकजत्वमुपाधिः, केवलशाकपाकजत्वस्य साध्यव्यापकता नास्ति,

---

ಘಟಾದಿಗಳಲ್ಲಿ ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವವಿದೆ. ಅಲ್ಲಿ ಉದ್ಭೂತರೂಪವೂ ಇದೆ. ಹೀಗೆ ಘಟಾದಿಗಳಲ್ಲಿಯು ಉದ್ಭೂತರೂಪವು ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವಕ್ಕೆ [ಸಾಧ್ಯಕ್ಕೆ ವ್ಯಾಪಕವಾಗಿದೆ ಕಾರಣ ಸಾಧ್ಯವ್ಯಾಪಕತಾ ಬಂದಿತು.ಆದರೆ ಆತ್ಮನಲ್ಲಿ ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವವಿದ್ದರೂ ಅಲ್ಲಿ ಉದ್ಭೂತರೂಪವಿಲ್ಲ [ಆತನು ನಾನು ಎಂಬ ಸಾಕ್ಷೀ ಪ್ರತ್ಯಕ್ಷಕ್ಕೆ ಗೋಚರನೇ ಹೊರತು ಅವನಲ್ಲಿ ಪ್ರಕಟವಾದ ರೂಪವಿಲ್ಲ) ಆದುದರಿಂದ ಮತ್ತೆ ವ್ಯಾಪಕಾಭಾವವದ್ವೃತ್ತಿ ವ್ಯಾಪ್ಯವಾಗುವದರಿಂದ ವ್ಯಭಿಚಾರ ಬಂದು ಉದ್ಭೂತರೂಪವತ್ವಕ್ಕೂ ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವಕ್ಕೂ ವಿಶಿಷ್ಟ ಸಾಧ್ಯಾವ್ಯಾಪಕತಾ ಕೂಡುವದಿಲ್ಲ. ಈ ಆಕ್ಷೇಪವನ್ನು ನಿವಾರಿಸಲು ದ್ರವ್ಯತ್ವಕ್ಕೆ ಬಹಿಃ [ಹೊರಗೆ] ಎಂಬ ವಿಶೇಷಣ ಕೊಟ್ಟಿದೆ. ಈಗ ಆತ್ಮನಲ್ಲಿ ಬಹಿದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವವಿಲ್ಲದ್ದರಿಂದ ವ್ಯಭಿಚಾರ ದೋಷ ಬರುವದಿಲ್ಲ. ಪ್ರಕೃತ ಎಲ್ಲಿ [ಘಟಾದಿಗಳಲ್ಲಿ] ಬಹಿದ್ರ್ವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವವಿದೆಯೋ ಅಲ್ಲಿ ಉದ್ಭೂತರೂಪವತ್ವ ಉಪಾಧಿ ಇದೆ ಕಾರಣ ಉದ್ಭೂತರೂಪವೆಂಬ ಉಪಾಧಿಗೆ ಶುದ್ಧ ಸಾಧ್ಯವ್ಯಾಪಕತ್ವವಿಲ್ಲದಿದ್ದರೂ ಪಕ್ಷಧರ್ಮದಿಂದ ಕೂಡಿದ ಸಾಧ್ಯವ್ಯಾಪಕತ್ವವಿದೆ.

೩] ಮೂರನೆಯ ಪ್ರಕಾರಕ್ಕೆ ಉದಾಹರಣೆ:- (ಅಂದರೆ ಸಾಧನ ಧರ್ಮದಿಂದ ಕೂಡಿದ ಸಾಧ್ಯವ್ಯಾಪಕ ಉಪಾಧಿಗೆ ಉದಾ:) ಗರ್ಭದಲ್ಲಿದ್ದ ಶಿಶು, ಕಪ್ಪುಬಣ್ಣದವನಾಗಬಹುದು, ಮೈತ್ರೀಯೆಂಬುವಳ ಮಗನಾದ್ದರಿಂದ, ಈ ಅನುಮಾನಕ್ಕೆ 'ಶಾಕಾಹಾರ ತಿನ್ನುವವಳಿಂದ ಹುಟ್ಟಿದ್ದು" (ಶಾಕಪಾಕಜತ್ವ) ಉಪಾಧಿಯು,

घटादौ श्यामत्वसद्भावेऽपि शाकपाक - जत्वाभावात्, अतो मैत्रीतनयत्वावच्छिन्नेत्युक्तं, तथा च घटे मैत्रीतनयत्वावच्छिन्नश्यामत्वस्याभावान्न व्यभिचारः, अत्र मैत्रीतनयत्वं साधनधर्मः, एवं चायमुपाधिः साधनधर्मावच्छिन्नसाध्य व्यापको ज्ञेयः ।

(४) चतुर्थो यथा-परमाणुरूपं प्रत्यक्षं प्रमेयत्वादित्यत्र बहिर्द्रव्यत्वावच्छिन्नप्रत्यक्षत्वव्यापकोद्भूतरूपवत्त्वमुपाधिः, उद्भूतरूपवत्त्वस्य केवलसाध्यव्यापकता नास्ति, गुणादौ, तथा आत्मनि च व्यभिचारात्, तद्वारणाय क्रमेण विशेषणं देयं, तथा च द्रव्यत्वविशेषणेन गुणादौ, बहिर्विशेषणेन च आत्मनि व्यभिचाराभावात् उद्भूतरूपवत्त्वोपाधेः तादृशसाध्यव्यापकताऽस्ति,

---

ಈ ಉಪಾಧಿಗೆ ಕೇವಲ ಸಾಧ್ಯವ್ಯಾಪಕತ್ವವು ಇಲ್ಲ. ಘಟ ಮೊದಲಾದ ವಸ್ತುಗಳಲ್ಲಿ ಕಪ್ಪು ವರ್ಣವಿದೆ ಆದರೂ ಶಾಕಪಾಕದಿಂದ ಹುಟ್ಟಿದ ಧರ್ಮವಿಲ್ಲ ಆದುದರಿಂದ ವ್ಯಭಿಚಾರ ಬರುತ್ತದೆ. ಈ ವ್ಯಭಿಚಾರ ಪರಿಹರಿಸಲು, ಮೈತ್ರೀಯ ಮಗನಾಗಿರುವಿಕೆಯಿಂದ ಕೂಡಿಕೊಂಡು ಎಂದು ಸಾಧ್ಯದಲ್ಲಿ ಕಪ್ಪುವರ್ಣ ಉಳ್ಳದ್ದಕ್ಕೆ, ವಿಶೇಷಣ ಕೊಡಬೇಕು. ಈಗ ಶಾಕಾಹಾರಿಯಿಂದ ಜನಿಸಿದ್ದು ಎಂಬ ವಿಶೇಷಣದಿಂದ ಕೂಡಿಕೊಂಡೇ ಸಾಧ್ಯಕ್ಕೆ (ಕಪ್ಪುವರ್ಣವುಳ್ಳದ್ದಕ್ಕೆ) ಶಾಕಪಾಕಜತ್ವವು ವ್ಯಾಪಕವಾಗುವದರಿಂದ ಉಪಾಧಿಯಾಗುತ್ತದೆ. ಇಲ್ಲಿ ಮೈತ್ರೀತನಯತ್ವವೆಂಬುದು ಸಾಧನಧರ್ಮವು ಈ ಅನುಮಾನದಲ್ಲಿಯ ಶಾಕಪಾಕಜತ್ವ ಎಂಬ ಉಪಾಧಿಯು ಸಾಧನ ಧರ್ಮದಿಂದ ಕೂಡಿದ ಸಾಧ್ಯವ್ಯಾಪಕವಾಗುವದೆಂದು ತಿಳಿಯಬೇಕು.

೪) ನಾಲ್ಕನೆಯ ಪ್ರಕಾರಕ್ಕೆ ಉದಾಹರಣೆ:– (ಉದಾಸೀನ ಧರ್ಮದಿಂದ ಕೂಡಿದ ಸಾಧ್ಯವ್ಯಾಪಕತ್ವಕ್ಕೆ) 'ಪರಮಾಣುರೂಪವು, ಪ್ರತ್ಯಕ್ಷವು, ಪ್ರಮೇಯತ್ವವುಳ್ಳದ್ದರಿಂದ' ಎಂಬ ಅನುಮಾನಕ್ಕೆ 'ಬಹಿರ್ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವ ವ್ಯಾಪಕ ಉದ್ಭೂತರೂಪವತ್ವ"ವು ಉಪಾಧಿಯು. ಉದ್ಭೂತರೂಪವತ್ವಕ್ಕೆ ಕೇವಲ (ಶುದ್ಧ) ಸಾಧ್ಯವ್ಯಾಪಕತ್ವವಿಲ್ಲ. ಗುಣದಲ್ಲಿ ವ್ಯಭಿಚಾರ ಬರುವದರಿಂದ, ಅದನ್ನು ಪರಿಹರಿಸಲು, ದ್ರವ್ಯತ್ವದಿಂದ ಕೂಡಿದ' ಎಂಬ ವಿಶೇಷಣ ಕೊಡಬೇಕು. ಆದರೂ 'ಆತ್ಮ'ನಲ್ಲಿ ಬರುವ ವ್ಯಭಿಚಾರ ನಿವಾರಿಸಲು, 'ಬಹಿಃ' (ಹೊರಗಿನ) ಎಂಬ ವಿಶೇಷಣವನ್ನು ದ್ರವ್ಯತ್ವಕ್ಕೆ ಕೊಡಬೇಕು. ಇದರಿಂದ 'ಗುಣ' ಹಾಗೂ 'ಆತ್ಮ' ಎರಡರಲ್ಲಿ ಬಂದ ವ್ಯಭಿಚಾರ ಪರಿಹಾರವಾಯಿತು. ಈಗ ಉದ್ಭೂತರೂಪವತ್ವ ಉಪಾಧಿಗೆ ಬಹಿರ್ದ್ರವ್ಯದಿಂದ ಕೂಡಿದ

अत्र बहिर्द्रव्यत्वं उदासीनधर्मः, अस्य पक्षधर्मत्वाभावात् तथा साधनधर्मत्वाभावाच्च, तथा चायमुपाधिः उदासीनधर्मावच्छिन्नसाध्यव्यापको ज्ञेयः।

एवं च उक्तप्रकारान्यतमसाध्यव्यापकत्वे सति साधनाव्यापकत्वं उपाधेर्लक्षणमित्युक्तं भवति।

ननु उपाधेर्दोषत्वं कथं? इति चेदित्थं - साध्यतदभावकोटिकविप्रतिपत्तेः प्राक्, अनुमानप्रयोगात्पूर्वं ( व्याप्तिग्रहणवेलायामिति यावत् ) व्यभिचारोन्नायकत्वेनेति ज्ञेयम्। कथमिति जिज्ञासायां इत्थं - यत्र हिंसात्वं तत्र पापसाधनत्वमिति व्याप्तिग्रहणवेलायां निषिद्धत्वमुपाधिः, व्यभिचारानुमापकं भवति, हिंसात्वं, ( हेतुः ) ( साध्याभाववद्वृत्ति साध्यं पापसाधनत्वं साध्याभाववत् पापसाधनत्वाभाववत्, वैधी हिंसा तद्वृत्तिः,

---

ಪ್ರತ್ಯಕ್ಷತ್ವಕ್ಕೆ ವ್ಯಾಪಕತ್ವವೂ ಕೂಡುತ್ತದೆ. ಆದರೆ, ಇಲ್ಲಿ 'ಬಹಿರ್ದ್ರವ್ಯತ್ವ'ವು ಉದಾಸೀನ ಧರ್ಮವು. ಏಕೆಂದರೆ, ಅದು ಪಕ್ಷಧರ್ಮವೂ ಆಗಿಲ್ಲ, ಸಾಧನ ಧರ್ಮವೂ ಆಗಿಲ್ಲ. ಆದ್ದರಿಂದ ಈ ಉಪಾಧಿಯು ಉದಾಸೀನ ಧರ್ಮದಿಂದ ಕೂಡಿದ ಸಾಧ್ಯವ್ಯಾಪಕವೆಂದು ತಿಳಿಯಬೇಕು.

ಹೀಗೆ ಹೇಳಿದ ನಾಲ್ಕು ಪ್ರಕಾರಗಳಲ್ಲಿ ಯಾವುದಾದರೊಂದು ಧರ್ಮದಿಂದ ಕೂಡಿದ ಸಾಧ್ಯಕ್ಕೆ ವ್ಯಾಪಕವಾಗಿ ಸಾಧನಕ್ಕೆ ಅವ್ಯಾಪಕವಾದುದು ಉಪಾಧಿಯೆಂದು, ಅದರ ಲಕ್ಷಣ ಹೇಳಿದಂತಾಯಿತು.

ಶಂಕಾಃ– ಉಪಾಧಿಯು ದೋಷವು ಹೇಗೆ? ಎಂದರೆ– ಸಾಧ್ಯ ಹಾಗೂ ಸಾಧ್ಯಾಭಾವ ಪ್ರಕಾರಕ ಸಂಶಯ ಬರುವ ಪೂರ್ವದಲ್ಲಿ, (ಅನುಮಾನ ಪ್ರಯೋಗ ಮಾಡುವದಕ್ಕೆ ಮೊದಲು) ಎಂದರೆ ವ್ಯಾಪ್ತಿ ಗ್ರಹಣ ಮಾಡತಕ್ಕ ಸಮಯದಲ್ಲಿ, ಹೇತುವಿಗೆ ವ್ಯಭಿಚಾರವನ್ನು ತೋರಿಸಿ ಉಪಾಧಿಯು ದೋಷವಾಗುತ್ತದೆ. ಉಪಾಧಿಯು ಸಾಕ್ಷಾತ್ತಾಗಿ ದೋಷವಾಗುವದಿಲ್ಲ. ಇದು ಹೇಗಾಗುವದೆಂದರೆ- 'ಎಲ್ಲಿ ಹಿಂಸೆ ಇದೆಯೋ ಅಲ್ಲಿ ಪಾಪ ಸಾಧನತ್ವವಿದೆ" ಎಂಬ ವ್ಯಾಪ್ತಿ ಗ್ರಹಣ ಕಾಲದಲ್ಲಿ 'ನಿಷಿದ್ಧತ್ವ' ಉಪಾಧಿಯು ವ್ಯಭಿಚಾರದ ಅನುಮಾಪಕವಾಗುತ್ತದೆ.

ಅನುಮಾನದಲ್ಲಿಯ "ಹಿಂಸಾತ್ವ"ವು ಇಲ್ಲಿ ಪಕ್ಷವಾಗಿ, ಸಾಧ್ಯಾಭಾವದ್ ವೃತ್ತಿಯಾಗುತ್ತದೆ. ಸಾಧ್ಯವು ಪಾಪಸಾಧನತ್ವವು. ಸಾಧ್ಯಾಭಾವವುಳ್ಳದ್ದೆಂದರೆ

तथा च पापसाधनत्वाभाववद्वृत्तिः ( साध्याभावव्यापकोपाध्याभावव-द्वृत्तित्वात् ) पापसाधनत्वाभावव्यापकनिषिद्धत्वाभाववद्वृत्तित्वात् व्यापकनिवृत्तेः व्याप्यनिवृत्तौ तंत्रत्वात् इति, एवं निषिद्धत्वमुपाधिः व्यभिचारोन्नायको भवति ।

ननु अनुमानप्रयोगात्पूर्वं व्याप्तिग्रहणवेलायामपि सत्प्रतिपक्षोन्नायक एवास्तु उपाधिरिति चेन्न, अनुमानप्रयोगात्पूर्वं पक्षपरिग्रहाभावात् प्रतिपक्षावसराभावेन तदनुन्नायकत्वात्, विप्रतिपत्त्युत्तरकाले तु (अनुमानप्रयोगनंतरमिति यावत् ) पक्षपरिग्रहेण प्रतिपक्षोन्नायकत्वमुपाधेः संभवति, तत्कथमिति चेदित्थं-

---

ಪಾಪಸಾಧನತ್ವಾಭಾವವುಳ್ಳದ್ದು, ವೈದಿಕ ಹಿಂಸೆಯು ತದ್ವೃತ್ತಿಯಾಗಿದ್ದು 'ಹಿಂಸಾ' ಆದ್ದರಿಂದ ವೈದಿಕ ಹಿಂಸೆಯು 'ಪಾಪಸಾಧನಾಭಾವವದ್‌ವೃತ್ತಿಯಾಯಿತು. ಸಾಧ್ಯಾಭಾವಕ್ಕೆ ವ್ಯಾಪಕವಾದ ಉಪಾಧಿ ಅಭಾವವೆಂದರೆ ನಿಷಿದ್ಧತ್ವಾಭಾವವು. ನಿಷಿದ್ಧತ್ವಾಭಾವವುಳ್ಳದ್ದು ವೈದಿಕ ಹಿಂಸೆಯು ಯಾಕಂದರೆ ವ್ಯಾಪಕದಲ್ಲಿಲ್ಲದ್ದು ವ್ಯಾಪ್ಯದಲ್ಲಿರಲಾರದೆಂದು ನಿಯಮವಿದೆ. ಹೀಗೆ 'ನಿಷಿದ್ಧತ್ವ' ಉಪಾಧಿಯು ವ್ಯಭಿಚಾರ ಉನ್ನಾಯಕವಾಗುವದು. [ವಿವರಣೆ- ವ್ಯಭಿಚಾರೋನ್ನಾಯಕ ಅನುಮಾನ ಮಾಡುವಾಗ್ಗೆ ಪೂರ್ವಾನುಮಾನದ ಹೇತುವನ್ನೇ ಪಕ್ಷಮಾಡಿ, ಸಾಧ್ಯಾಭಾವ ವ್ಯಾಪಕ ಉಪಾಧ್ಯಭಾವವದ್ ವೃತ್ತಿತ್ವ ಹೇತುವಿನಿಂದ, ಸಾಧ್ಯಾಭಾವವೃತ್ತಿತ್ವವನ್ನು ಸಾಧನ ಮಾಡಬೇಕು, ವ್ಯಾಪಕವು ತಾನು ಪಕ್ಷದಲ್ಲಿಲ್ಲದ್ದಾಗಿ ತನಗೆ ವ್ಯಾಪ್ಯವಾದ ಸಾಧ್ಯವನ್ನು ಇಲ್ಲದಂತೆ ಮಾಡುತ್ತದೆ. ಇದು ನಿಯಮವು. ಹೀಗೆ ಉಪಾಧಿಯು ವ್ಯಭಿಚಾರ ಉನ್ನಾಯಕವಾಗುತ್ತದೆ]

ಶಂಕಾ- ಅನುಮಾನ ಪ್ರಯೋಗ ಪೂರ್ವದಲ್ಲಿ, ಎಂದರೆ ವ್ಯಾಪ್ತಿಗ್ರಹ ಕಾಲದಲ್ಲಿಯೇ ಉಪಾಧಿಯು ಸತ್‌ಪ್ರತಿಪಕ್ಷ ಉನ್ನಾಯಕವಾಗಲಿ ಎಂದು ಶಂಕೆ ಕೂಡುವದಿಲ್ಲ. ಅನುಮಾನ ಪ್ರಯೋಗಕ್ಕಿಂತ ಪೂರ್ವದಲ್ಲಿ [ವ್ಯಾಪ್ತಿಗ್ರಹಣ ಮಾಡತಕ್ಕ ಸಮಯದಲ್ಲಿ] ಪಕ್ಷವಿಲ್ಲದಿರುವದರಿಂದ ಪ್ರತಿಪಕ್ಷ ಅನುಮಾನ ಮಾಡಲು ಬರುವದಿಲ್ಲ. [ಎಲ್ಲಿ ಧೂಮವೋ ಅಲ್ಲಿ ಅಗ್ನಿಯು" ಎಂಬ ವಾಕ್ಯವು ದೃಷ್ಟಾಂತದಲ್ಲಿ ಗ್ರಹಿಸಲ್ಪಡುತ್ತವೆ ಹೊರತು ಪಕ್ಷದಲ್ಲಿ ಅಲ್ಲ. ಪಕ್ಷವೇ ಇಲ್ಲದಿದ್ದಲ್ಲಿ ಪೂರ್ವದ ಅನುಮಾನಕ್ಕೆ ವಿರುದ್ಧವಾಗಿ ಸಾಧನ ಮಾಡತಕ್ಕ ಅನುಮಾನಾಂತರವು. ಅಂದರೆ ಸತ್‌ಪ್ರತಿಪಕ್ಷವು ಹುಟ್ಟುವದಿಲ್ಲ] ವಿಪ್ರತಿಪತ್ತಿಯ ಉತ್ತರ ಕಾಲದಲ್ಲಿ ಅಂದರೆ ಅನುಮಾನ ಪ್ರಯೋಗ ಮಾಡಿದ ಮೇಲೆ, ಪಕ್ಷವು ಪರಿಗ್ರಹಿಸಲ್ಪಡುವದರಿಂದ, ಉಪಾಧಿಯು ಸತ್‌ಪ್ರತಿಪಕ್ಷ ಉನ್ನಾಯಕವಾಗುತ್ತದೆ.

"व्यापकाभावस्य व्याप्याभावनियतत्वात्" उपाधिः स्वयं पक्षाव्यावर्तमानः स्वव्याप्यसाध्यमपि व्यावर्तयति, तत्प्रकारस्तु - " वैधी हिंसा पापसाधनं हिंसात्वात्,, इत्यत्र निषिद्धत्त्वमुपाधिः। वैधी हिंसा, (पक्षः) पापसाधनं न भवति (साध्याभाववान्) पापसाधनत्त्वव्यापकनिषिद्धत्त्वाभावात् (साध्याभावव्यापकोपाध्याभावात्) इति प्रतिपक्षोन्नायको भवतीति ज्ञेयम्।

ननु विप्रतिपत्त्युत्तरकालेऽपि व्यभिचारोन्नायक एवास्तु, उपाधेः एकेन रूपेण दूषकतासंभवे द्वैरूप्यकल्पनासभवादिति चेन्न, पक्षे साध्याभावसाधकोपाधिव्यतिरेकोऽस्तीति ज्ञानमंतरेण व्यभिचारज्ञानासंभवात्, प्रथमोपस्थितप्रतिपक्षोन्नायकतयैवोपाधेः दूषकतासिद्धेः व्यभिचारोन्नायकत्त्वकल्पनाभावेन द्वैरूप्यसंभवादिति ध्येयम्।

---

ಅದು ಹೇಗೆಂದರೆ:–'ವ್ಯಾಪಕದ ಅಭಾವವು ವ್ಯಾಪ್ಯದ ಅಭಾವವನ್ನುಂಟು ಮಾಡುತ್ತದೆಂಬ' ನಿಯಮದಂತೆ' ಉಪಾಧಿಯು [ವ್ಯಾಪಕವು] ತಾನು ಪಕ್ಷದಲ್ಲಿಲ್ಲದಾಗ, ತನಗೆ ವ್ಯಾಪ್ಯವಾದ ಸಾಧ್ಯವನ್ನು ಇಲ್ಲದಂತೆ ಮಾಡುತ್ತದೆ. ಉದಾಹರಣೆಗೆ:-' ವೈದಿಕ ಹಿಂಸೆಯು, ಪಾಪಸಾಧನವು, ಹಿಂಸೆಯಾದ್ದರಿಂದ' ಎಂಬ ಅನುಮಾನಕ್ಕೆ ''ನಿಷಿದ್ಧತ್ವ"ವು ಉಪಾಧಿಯು. ವೈದಿಕಹಿಂಸೆಯು, [ಪಕ್ಷ] ಪಾಪಸಾಧನವಲ್ಲ. [ಸಾಧ್ಯಾಭಾವವುಳ್ಳದ್ದು] ಪಾಪಸಾಧನಕ್ಕೆ ವ್ಯಾಪಕವಾದ ನಿಷಿದ್ಧತ್ವವು ಅಭಾವವುಳ್ಳದ್ದರಿಂದ, ಹೀಗೆ ಪ್ರತಿಪಕ್ಷ ಅನುಮಾಪಕವಾಗುತ್ತದೆಯೆಂದು ತಿಳಿಯಬೇಕು.

ಶಂಕಾ– ಉಪಾಧಿಯು ವಿಪ್ರತಿಪತ್ತಿಯ [ಅನುಮಾನ ಪ್ರಯೋಗ ಮಾಡಿದ] ನಂತರ ಕೂಡ ವ್ಯಭಿಚಾರ ಉನ್ನಾಯಕವೇ ಆಗಲಿ, ಹಾಗಾದಲ್ಲಿ ಉಪಾಧಿಯು ಕೇವಲ ವ್ಯಭಿಚಾರರೂಪವಾದ ಒಂದೇ ದೋಷವನ್ನು ಎತ್ತಿ ತೋರಿಸುವದಷ್ಟೇ! ಅದನ್ನು ಬಿಟ್ಟು, 'ವ್ಯಭಿಚಾರ' ಹಾಗೂ 'ಸತ್‌ಪ್ರತಿಪಕ್ಷ ಅನುಮಾನ' ಹೀಗೆ ಎರಡು ಪ್ರಕಾರದ ದೂಷಣೆ ಹೇಳುವದು ಸರಿಯಲ್ಲ ಎಂದು ಸಂಶಯ ಬಂದರೆ, ಅದು ಕೂಡದು. ಏಕೆಂದರೆ, ಪಕ್ಷದಲ್ಲಿ ಸಾಧ್ಯಾಭಾವ ಸಾಧನ ಮಾಡತಕ್ಕ ಉಪಾಧಿಯ ಅಭಾವವಿದೆಯೆಂದು ಜ್ಞಾನವಾಗದೇ, ಸಾಧ್ಯಾಭಾವವುಳ್ಳದ್ದೆಂಬ ವ್ಯಭಿಚಾರ ಜ್ಞಾನವೇ ಹುಟ್ಟುವದಿಲ್ಲ. [ಅಂದರೆ ಪಕ್ಷದಲ್ಲಿ ಉಪಾಧಿ ಅಭಾವದಿಂದ, ಸಾಧ್ಯಾಭಾವ ಸಾಧನೆ ಮಾಡಬೇಕು. ಹಾಗಾದರೆ, ಮಾತ್ರ ವ್ಯಭಿಚಾರ ದೋಷ ಬರುವದು ಇಲ್ಲವಾದರೆ ಇಲ್ಲ] ಇಲ್ಲಿ ಉಪಾಧಿಯು ಮೊದಲು ಪ್ರತಿಪಕ್ಷ ಉನ್ನಾಯಕವಾಗಿ ದೋಷವಾಗುವದರಿಂದ

ननु शुद्धसाध्यव्यापकोपाधिस्थले पक्षे, उपाध्यभावो विशिष्टसाध्याभावमेव साधयेत्, न तु शुद्धसाध्याभावं, तदा शुद्धसाध्यसाधकानुमानस्य विशिष्टसाध्याभावसाधकसत्प्रतिपक्षानुमानं कथं प्रतिबंधकं भवेदिति चेदित्थम् ।

" य उपाधिर्लगति साध्ये संबंधविशेषणे तद्विशेषणयुक्ततदभावाभूस्तु केवलः,, अस्यार्थः - यः उपाधिः साध्ये विशेषणसंबंधे सति लगति तथा च उपाधिः विशिष्टसाध्यव्यापको भवति, तद्विशेषणयुक्तस्तदभावः साध्यविशेषणं यत् तद्विशेषणयुक्तः सन् उपाध्यभावः तस्य अभूः - उपाध्यभावाभावः, केवलः शुद्धसाध्यव्यापको भवति, इत्युक्त्यनुसारेण

---

ವ್ಯಭಿಚಾರಉನ್ನಾಯಕವಾಗುವದೆಂಬ ಕಲ್ಪನೆ ಸರಿಯಲ್ಲ. [ವಿವರಣೆ. ಪಕ್ಷದಲ್ಲಿ ಉಪಾಧಿ ಇದೆ ಎಂಬ ಜ್ಞಾನದಿಂದ, ಸಾಧ್ಯಾಭಾವವು ಇದೆ ಎಂದು ಶೀಘ್ರನಾಗಿ ಗ್ರಹಿತವಾಗುತ್ತದೆ. ಹೀಗಿರಲು ಈ ಮಾರ್ಗ ಬಿಟ್ಟು ಹೇತುವನ್ನು ಪಕ್ಷ ಮಾಡಿ ಸಾಧ್ಯಾಭಾವವೃತ್ತಿತ್ವ ಹೇಳುವದು ಗೌರವಾಗುತ್ತದೆಂಬ ಭಾವವು] ಹೀಗೆ ಉಪಾಧಿಗೆ ಎರಡು ರೂಪಗಳು ಸಿದ್ಧಿಸುತ್ತವೆಯೆಂದು ತಿಳಿಯಬೇಕು. [ಎಂದರೆ ಪಕ್ಷದ ಗ್ರಹಣಕ್ಕಿಂತ ಮೊದಲು ವ್ಯಭಿಚಾರವು, ಪಕ್ಷಗ್ರಹಣವಾದ ಮೇಲೆ ಸತ್‌ಪ್ರತಿಪಕ್ಷವುನ್ನಾಯಕತ್ವವು, ಹೀಗೆ ಎರಡು ಪ್ರಕಾರ ದೋಷ ತಂದು ಕೊಡುವದು]

ಶಂಕಾ– ಶುದ್ಧಸಾಧ್ಯಕ್ಕೆ ವ್ಯಾಪಕವಾದ ಉಪಾಧಿಯ ಸ್ಥಳದಲ್ಲಿ ಪೂರ್ವೋಕ್ತ ರೀತಿಯಿಂದ ಉಪಾಧಿಗೆ ಪ್ರತಿಪಕ್ಷ ಅನುಮಾನ ಮಾಡಲು ಶಕ್ಯವಿದ್ದರೂ, ಪಕ್ಷಧರ್ಮದಿಂದ ಕೂಡಿದ [ವಿಶೇಷ ಧರ್ಮದಿಂದ ಕೂಡಿದ] ಸಾಧ್ಯಾವ್ಯಾಪಕವಾದ ಉಪಾಧಿ ಸ್ಥಳದಲ್ಲಿ ಮಾತ್ರ ಉಪಾಧಿ ಅಭಾವವು, ಪಕ್ಷದಲ್ಲಿ ವಿಶಿಷ್ಟವಾದ ಸಾಧ್ಯಾಭಾವವನ್ನೇ ಸಾಧನೆ ಮಾಡುತ್ತದೆಯಲ್ಲದೇ ಶುದ್ಧಸಾಧ್ಯಾಭಾವವನ್ನು ಸಾಧನೆ ಮಾಡಲಾರದು. [ಉಪಾಧಿಯು ಪಕ್ಷಧರ್ಮದಿಂದ ಕೂಡಿದ ಸಾಧ್ಯಕ್ಕೆ ವ್ಯಾಪಕವಾದಲ್ಲಿ, ತಾನು ಪಕ್ಷದಲ್ಲಿಲ್ಲದಾಗಿ, [ತನಗೆ ವ್ಯಾಪ್ಯವಾದ ಪಕ್ಷಧರ್ಮದಿಂದ ಕೂಡಿದ ಸಾಧ್ಯವನ್ನು ಇಲ್ಲದಂತೆ ಮಾಡುತ್ತದೆ ಹೊರತು ಶುದ್ಧ ಸಾಧ್ಯಾಭಾವವನ್ನು ಸಾಧನೆ ಮಾಡಲಾರದೆಂಬ ಭಾವವು] ಇನ್ನು ಶುದ್ಧಸಾಧ್ಯಸಾಧನ ಮಾಡತಕ್ಕ ಅನುಮಾನಕ್ಕೆ ವಿಶಿಷ್ಟ ಸಾಧ್ಯಾಭಾವ ಸಾಧನೆ ಮಾಡತಕ್ಕ ಅನುಮಾನವು ಹೇಗೆ ಪ್ರತಿಪಕ್ಷವಾಗಿ ಪ್ರತಿಬಂಧಕವಾಗಬಲ್ಲದು ? ಎಂದು ಸಂಶಯ ಬಂದರೆ, ಅದಕ್ಕೆ ಸಮಾಧಾನ ಹೀಗಿದೆ–

प्रकृते, वायुः, प्रत्यक्षः, प्रत्यक्षस्पर्शाश्रयत्वात् इत्यत्र, उद्भूतरूपवत्त्वं उपाधिः, अस्य च न शुद्धसाध्यव्यापकता, किं तु बहिर्द्रव्यत्वावच्छिन्न-प्रत्यक्षत्वं प्रति उद्भूतरूपवत्त्वस्य व्यापकता ( विशिष्टसाध्यव्यापकता ) तदोपाधिः, एवं सत्प्रतिपक्षोन्नायको भवति यथा-वायुः, बहिर्द्रव्यत्वावच्छिन्नप्रत्यक्षत्वाभाववान्, बहिर्द्रव्यत्वावच्छिन्नप्रत्यक्षत्वाभावव्यापकोद्भूत रूपवत्त्वाभावादिति । अस्योपाधेः, शुद्धसाध्याभावसाधकत्वं तु - पूर्वोक्तनियमानुसारेण, एवं भवति, तथाहि - वायुः, प्रत्यक्षत्वाभाववान्, प्रत्यक्षत्वाभावव्यापकबहिर्द्रव्यत्त्वावच्छिन्नोद्भूतरूपवत्त्वाभावाभावाभावात् ।

तथा च - वायुः, प्रत्यक्षः, प्रत्यक्षस्पर्शाश्रयत्वात्, अस्यानुमानस्य, वायुः, प्रत्यक्षत्वाभाववान्, प्रत्यक्षत्वाभावव्यापकबहिर्द्रव्यत्वावच्छिन्नोद्भूतरूपत्वाभावाभावाभावात्

---

'ಸಾಧ್ಯಕ್ಕೆವಿಶೇಷಣ ಕೊಟ್ಟಲ್ಲಿ ಯಾವದು ಉಪಾಧಿಯಾಗುತ್ತದೆಯೋ [ಉಪಾಧಿಯುವಿಶಿಷ್ಟ ಸಾಧ್ಯಕ್ಕೆ ವ್ಯಾಪಕವಾಗುತ್ತದೆಯೋ] ಆ ಸಾಧ್ಯದ ವಿಶೇಷಣದಿಂದ ಕೂಡಿದ ಉಪಾಧಿಯ ಅಭಾವದ ಅಭಾವವೇ, ಶುದ್ಧಸಾಧ್ಯಕ್ಕೆ ವ್ಯಾಪಕವಾಗುತ್ತದೆ' ಎಂಬ ನಿಯಮಕ್ಕನುಸರಿಸಿ. ಇಲ್ಲಿ 'ವಾಯುವು ಪ್ರತ್ಯಕ್ಷವು, ಪ್ರತ್ಯಕ್ಷಸ್ಪರ್ಶಕ್ಕೆಆಶ್ರಯವಾಗುವದರಿಂದ" ಎಂಬ ಅನುಮಾನಕ್ಕೆ 'ಪ್ರಕಟರೂಪ'ವು [ಉದ್ಭೂತರೂಪವು] ಉಪಾಧಿಯು. ಈ ಉಪಾಧಿಯು ಶುದ್ಧ ಸಾಧ್ಯಕ್ಕೆ ವ್ಯಾಪಕವಾಗಿಲ್ಲ. "ಬಹಿರ್ದ್ರವ್ಯತ್ವ"ದಿಂದ ಕೂಡಿದ ಪ್ರತ್ಯಕ್ಷತ್ವಕ್ಕೆ ಪ್ರಕಟರೂಪವು, ಉದ್ಭೂತರೂಪವು, ವ್ಯಾಪಕವು, [ಎಂದರೆ ವಿಶಿಷ್ಟ ಸಾಧ್ಯಕ್ಕೆ ವ್ಯಾಪಕವು] ಈ ಉಪಾಧಿಯು ಸತ್‌ಪ್ರತಿಪಕ್ಷ ಅನುಮಾನವನ್ನು ಹೀಗೆ ಹುಟ್ಟಿಸುವದು. ವಾಯುವು, ಬಹಿದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವದ ಅಭಾವವುಳ್ಳದ್ದು, ಬಹಿರ್ದ್ರವ್ಯತ್ವದಿಂದ ಕೂಡಿದ ಪ್ರತ್ಯಕ್ಷತ್ವದ ಆಭಾವಕ್ಕೆ ವ್ಯಾಪಕವಾದ ಉದ್ಭೂತರೂಪದ ಅಭಾವವುಳ್ಳದ್ದರಿಂದ, ಈ ಉದ್ಭೂತರೂಪವೆಂಬ ಉಪಾಧಿಯು ಶುದ್ಧ ಸಾಧ್ಯಕ್ಕೆ ವ್ಯಾಪಕ ಹೇಗಾಗುತ್ತದೆಯೆಂದರೆ ಹಿಂದೆ ಹೇಳಿದ ನಿಯಮದಂತೆ, ಹೀಗೆ ವ್ಯಾಪಕವಾಗುವದು. ವಾಯುವು, ಪ್ರತ್ಯಕ್ಷತ್ವದ ಅಭಾವವುಳ್ಳದ್ದು, ಪ್ರತ್ಯಕ್ಷತ್ವದಅಭಾವಕ್ಕೆ ವ್ಯಾಪಕವಾದ ಬಹಿರ್ದ್ರವ್ಯತ್ವದಿಂದ ಕೂಡಿದ ಉದ್ಭೂತರೂಪದ ಅಭಾವದ ಅಭಾವವುಳ್ಳದ್ದಾದುದರಿಂದ, ಅರ್ಥಾತ್ ಉಪಾಧಿಯಾದ ಉದ್ಭೂತರೂಪತ್ವಾಭಾವವುಳ್ಳದ್ದುದರಿಂದ, [ಇದು ವಾಯುವು, ಪ್ರತ್ಯಕ್ಷವು ಪ್ರತ್ಯಕ್ಷಸ್ಪರ್ಶಕ್ಕೆ ಆಶ್ರಯವಾದ್ದರಿಂದ, ಎಂಬ ಮೊದಲಿನ ಅನುಮಾನಕ್ಕೆ

( प्रत्यक्षत्वाभावव्यापकः, बहिर्द्रव्यत्त्वावच्छिन्नोद्भूतरूपत्त्वाभावाभावरूपो यो, उपाधि , तस्याभावः, तस्मात् ) इत्त्येवं शुद्धसाध्याभावसाधको भवतीति ज्ञेयम् ।

अस्त्वेवं उपाधिविचारः, सोपाधिकव्याप्यत्त्वासिद्धेः कांतर्भावः? इति जिज्ञासायामुच्यतेउपाधेः व्यभिचारोन्नायकत्त्वे साध्यतदभावसंबंधलक्षण - अव्याप्तावंतर्भवति, प्रतिपक्षोन्नायकत्त्वे च समबलप्रमाणविरोधे, अंतर्भवतीति ज्ञेयम् ।

**इति व्याप्यत्वासिद्धौ विस्तरेणोपाधिनिरूपणम् तदंतर्भावकथनं च ।**

आश्रयासिद्धो द्विविधः–१ ) असदाश्रयः – २ ) सिद्धसाधनश्चेति ।

---

ಪ್ರತಿಪಕ್ಷಅನುಮಾನವಾಗುವದು] ಈ ಅನುಮಾನದಲ್ಲಿ, ಪ್ರತ್ಯಕ್ಷತ್ವಾಭಾವಕ್ಕೆ ವ್ಯಾಪಕವಾದ ಬಹಿರ್ದ್ರವ್ಯತ್ವದಿಂದ ಕೂಡಿದ ಉದ್ಭೂತರೂಪದ ಅಭಾವದಅಭಾವವು, ಉಪಾಧಿಯು. ಈ ಉಪಾಧಿಯ ಅಭಾವವುಳ್ಳದ್ದಾದುದರಿಂದ, ವಾಯುವು, ಪ್ರತ್ಯಕ್ಷತ್ವದ ಅಭಾವವುಳ್ಳದ್ದು ಅಂತ ಮೇಲಿನ ರೀತಿಯಿಂದ ಅನುಮಾನ ಮಾಡಲಾಗುತ್ತದೆ. [ಹೇತು ವಾಕ್ಯದಲ್ಲಿ ವಿಗ್ರಹಃ- ಪ್ರತ್ಯಕ್ಷತ್ವಾಭಾವ ವ್ಯಾಪಕವು ಬಹಿರ್ದ್ರವ್ಯತ್ವದಿಂದ ಕೂಡಿದ ಉದ್ಭೂತರೂಪದ ಅಭಾವದ ಅಭಾವವು ಯಾವದೋ, ಅದು ಉಪಾಧಿಯು, ಈ ಉಪಾಧಿ ಅಭಾವ ಇರುವದರಿಂದ] ಹೀಗೆ ಶುದ್ಧಸಾಧ್ಯ ವ್ಯಾಪಕ ಆಗುವದೆಂದು ತಿಳಿಯಬೇಕು.

ಉಪಾಧಿ ವಿಚಾರವು ಮೇಲೆ ವಿವೇಚಿಸಿದಂತೆ ಇರಲಿ, ಪ್ರಕೃತ ಈ ಉಪಾಧಿಯ ಅಂತರ್ಭಾವವು ಹೇಗೆ ? ಎಂಬ ಜಿಜ್ಞಾಸೆ ಹುಟ್ಟಿದಲ್ಲಿ ಇದಕ್ಕೆ ಸಮಾಧಾನವು:- ಉಪಾಧಿಯು ವ್ಯಭಿಚಾರ ಉನ್ನಾಯಕವಾದರೆ, ಸಾಧ್ಯ ಸಂಬಂಧ ಹಾಗೂ ಸಾಧ್ಯಾಭಾವ ಸಂಬಂಧ ಲಕ್ಷಣ ಅವ್ಯಾಪ್ತಿಯಲ್ಲಿ [ವ್ಯಭಿಚಾರದಲ್ಲಿ] ಅಂತರ್ಭೂತವಾಗುತ್ತದೆ. ಪ್ರತಿಪಕ್ಷ ಉನ್ನಾಯಕವಾದಲ್ಲಿ ಸಮಬಲ ಪ್ರಮಾಣವಿರೋಧದಲ್ಲಿ ಅಂತರ್ಭಾವ ಹೊಂದುತ್ತದೆ ಎಂದು ತಿಳಿಯಬೇಕು.

**ಹೇತ್ವಾಭಾಸದಲ್ಲಿ ಅಸಿದ್ಧ ಹೇತುವಿನ ಅಂತರ್ಭಾವ ಹಾಗೂ ಅದರ ವಿಭಾಗಗಳು–**

೨] ಆಶ್ರಯಾಸಿದ್ಧವು ಎರಡು ಪ್ರಕಾರವಾಗಿವೆ. ಅ] ಅಸದಾಶ್ರಯವು, ಅಂದರೆ ಅಸತ್ತೇ [ಇಲ್ಲದೇ ಇದ್ದುದು] ಆಶ್ರಯವಾಗಿರುವ ಹೇತುವು. ಆ] ಸಿದ್ಧ ಸಾಧನವು.

---

( १ ) आद्यो यथा - शशविषाणं तीक्ष्णं विषाणत्वादित्यत्र शशविषाणतत्तैक्ष्ण्ययोरभावस्य प्रमितत्वेन, अस्यानुमानस्य प्रमाणविरोधाद्यसंकीर्णोदाहरणस्याभावादयं असदाश्रयो हेत्वाभास एव न भवति, किन्तु प्रमाणविरोधेऽन्तर्भावः ।

( २ ) द्वितीयो यथा - ईश्वरवादिनं प्रति क्षित्यादिकं सकर्तृकं कार्यत्वादिति, अयमसंगतावंतर्भवति, अनाकांक्षिताभिधानात् आकांक्षाभावरूपासंगतावंतर्भवतीति यावत् ।

पक्षधर्मत्वासिद्धो सप्तविधः - ( १ ) स्वरूपासिद्धः, ( २ ) व्यधिकरणासिद्धः, ( ३ ) विशेषणासिद्धः, ( ४ ) विशेष्यासिद्धः, ( ५ ) अप्रसिद्धविशेषणासिद्धः, ( ६ ) अज्ञानासिद्धः, ( ७ ) भागासिद्ध इति च भेदात् ।

---

ಅ] ಅಸದಾಶ್ರಯವು, ಉದಾಹರಣೆ:- ಮೊಲದಕೋಡು, ತೀಕ್ಷ್ಣವಾದದು, ಕೋಡು ಆದುದರಿಂದ, ಈ ಅನುಮಾನದಲ್ಲಿ, ಮೊಲದ ಕೋಡು ಹಾಗೂ ಅದರ ತೀಕ್ಷ್ಣತೆ ಇವುಗಳ ಅಭಾವವೇ [ಸತ್ತಾ ಇಲ್ಲದಿರುವಿಕೆ] ಪ್ರಮಿತವಾಗಿವೆ. ಕಾರಣ ಈ ಅನುಮಾನಕ್ಕೆ ಪ್ರಮಾಣ ವಿರೋಧ ಬಿಟ್ಟು, ಬೇರೆ ದೋಷ ಹೇಳುವ ಉದಾಹರಣೆ, ಇಲ್ಲ ಹೀಗಿರುವದರಿಂದ ಅಸದಾಶ್ರಯವು ಹೇತ್ವಾಭಾಸವೇ ಆಗುವದಿಲ್ಲ ಆದರೆ ಪ್ರಮಾಣ ವಿರೋಧದಲ್ಲಿ ಅಂತರ್ಭಾವವಾಗುತ್ತದೆ.

ಆ] ಸಿದ್ಧಸಾಧನ- ಉದಾಹರಣೆ:- ಈಶ್ವರನು ಇದ್ದಾನೆ ಎಂದು ಅಂಗೀಕಾರ ಮಾಡಿದವನನ್ನು ಕುರಿತು, 'ಭೂಮಿ ಮೊದಲಾದವು, ಒಬ್ಬಕರ್ತೃವಾಗಿ ವುಳ್ಳವುಗಳು, ಕಾರ್ಯವಾಗಿರುವದರಿಂದ' ಈಶ್ವರನನ್ನು ಸಾಧನೆ ಮಾಡತಕ್ಕ ಅನುಮಾನ ಮಾಡುವದು. ಈ ರೀತಿ ಅನುಮಾನ ಮಾಡಿದಲ್ಲಿ ಸಿದ್ಧಸಾಧನವು. ಈ ಸಿದ್ಧಸಾಧನ ದೋಷವು ಅಸಂಗತಿಯಲ್ಲಿ ಅಂತರ್ಭಾವ ಹೊಂದುತ್ತದೆ [ಅಸಂಗತಿ ಅಂದರೆ ಇಚ್ಛೆ [ಆಕಾಂಕ್ಷೆ] ಇಲ್ಲದಿರುವದು ಪ್ರಕೃತ ಈಶ್ವರವಾದಿಗೆ ಈಶ್ವರ ಸಾಧನೆ ವಿಷಯದಲ್ಲಿ ಆಕಾಂಕ್ಷೆ [ಇಚ್ಛೆ] ಇಲ್ಲದಿರುವದರಿಂದ ಅವನಿಗೆ ಅನಾಕಾಂಕ್ಷಿತವಾದುದನ್ನು ಹೇಳುವದರಿಂದ ಈ ದೋಷವು ಅಸಂಗತಿಯಲ್ಲಿ ಸೇರುತ್ತದೆ]

ಇ] ಪಕ್ಷಧರ್ಮತಾಸಿದ್ಧವು ಏಳು ಪ್ರಕಾರವಾಗಿದೆ- ೧) ಸ್ವರೂಪಾಸಿದ್ಧವು ೨] ವ್ಯಧಿಕರಣಾಸಿದ್ಧವು ೩) ವಿಶೇಷಣಾಸಿದ್ಧವು ೪) ವಿಶೇಷ್ಯಾಸಿದ್ಧವು ೫) ಅಪ್ರಸಿದ್ಧ ವಿಶೇಷಣಾಸಿದ್ಧವು. ೬) ಅಜ್ಞಾನಾಸಿದ್ಧವು. ೭) ಭಾಗಾಸಿದ್ಧವು.

(१) आद्यो यथा - शब्दो नित्यः चाक्षुषत्वादित्यत्र चाक्षुषत्वस्य शब्देऽभावात् हेतोः समुचितदेशवृत्तित्वाभावेन, अयं चाक्षुषत्वहेतुरसिद्धः ।

(२) स्वरूपासिद्ध्यदीनां मध्ये व्यधिकरणासिद्धो न दूषणं "ऊर्ध्वदेशो, वृष्टिमान्, अधोदेशे नदीपूरात्" इत्यादौ अनुमितेरप्रत्यूहत्वादिति ।

(३-४) व्यर्थविशेषणासिद्धः, व्यर्थविशेष्यासिद्धश्च, आधिक्ये अंतर्भवतः, यथा - शब्दो नित्यः सामान्यवत्वे सति कृतकत्वादित्यत्र अपेक्षिताधिकाभिधानरूपत्वादुभयोराधिक्ये, अंतर्भावो ज्ञेयः ।

---

೧] ಸ್ವರೂಪಾಸಿದ್ಧವು:- ಶಬ್ದವು, ನಿತ್ಯವು, ಚಕ್ಷುರಿಂದ್ರಿಯದಿಂದ ಜನ್ಯವಾದ ಜ್ಞಾನಕ್ಕೆ ವಿಷಯವಾದ್ದರಿಂದ ಈ ಅನುಮಾನದಲ್ಲಿ ಶಬ್ದವು ಚಕ್ಷುರಿಂದ್ರಿಯಕ್ಕೆ ವಿಷಯವೇ ಆಗುವದಿಲ್ಲ. ಕಾರಣ, ಚಕ್ಷುರಿಂದ್ರಿಯ ವಿಷಯತ್ವ ಹೇತುವಿಗೆ ಸಮುಚಿತ್ ದೇಶ ವೃತ್ತಿತ್ವವಿಲ್ಲ] ಆದುದರಿಂದ ಈ ಹೇತುವು ಸ್ವರೂಪಾಸಿದ್ಧವು. [ಪಕ್ಷದಲ್ಲಿ ಹೇತು ಬಾರದಿದ್ದರೆ ಸ್ವರೂಪಾಸಿದ್ಧಿಯು. ಹೇತುವು ಇದರಿಂದ ಕೂಡಿದುದು ಸ್ವರೂಪಾಸಿದ್ಧವು.] ಈ ವಿಭಾಗವು ಅಸಿದ್ಧಿಯಲ್ಲಿಯೇ ಅಂತರ್ಭಾವವಾಗುತ್ತದೆ.

೨] ವ್ಯಧಿಕರಣಾಸಿದ್ಧವು:- ಈ ವ್ಯಧಿಕರಣಾಸಿದ್ಧವು ದೋಷವೇ ಅಲ್ಲ. ಯಾಕಂದರೆ-'ಮೇಲಿನ ದೇಶವು, ವೃಷ್ಟಿಯುಳ್ಳದ್ದು, ಕೆಳಗಿನ ಪ್ರದೇಶವು ನದೀಪೂರವುಳ್ಳದಾದುದರಿಂದ, ಈ ಅನುಮಾನದಲ್ಲಿ ಹೇತು ಸಾಧ್ಯಗಳಿಗೆ ವ್ಯಯಧಿಕರಣ್ಯವು ಇದೆ [ಒಂದೇ ಅಧಿಕರಣದಲ್ಲಿ ಇರುವಿಕೆ ಇಲ್ಲ] ಹೀಗಿದ್ದರೂ [ಹೇತು ಸಾಧ್ಯಗಳಿಗೆ ಸ್ವಾಭಾವಿಕ ಸಂಬಂಧವಿರುವದರಿಂದ] ಅನುಮಿತಿಯು ಹುಟ್ಟುತ್ತದೆ. ಆದಕಾರಣ ವ್ಯಧಿಕರಣಾಸಿದ್ಧಿಯು ದೋಷವಲ್ಲ. ಹೇತುವು ದುಷ್ಟವಾಗುವದಿಲ್ಲ.

೪-೪] ವ್ಯರ್ಥ ವಿಶೇಷಣಾಸಿದ್ಧವು, ಹಾಗೂ ವ್ಯರ್ಥ ವಿಶೇಷ್ಯಾಸಿದ್ಧವು ಇವೆರಡೂ ಆಧಿಕ್ಯದಲ್ಲಿ ಅಂತರ್ಭಾವವಾಗುತ್ತವೆ. ಉದಾಹರಣೆ:- ಶಬ್ದವು, ಅನಿತ್ಯವು, ಸಾಮಾನ್ಯತ್ವದಿಂದ ಕೂಡಿದ ಕೃತಕತ್ವವುಳ್ಳದ್ದಾದುದರಿಂದ, ಈ ಅನುಮಾನದಲ್ಲಿ ಕೃತಕತ್ವ ಹೇತುವಿನಿಂದ ಅನುಮತಿ ಹುಟ್ಟುತ್ತಿರಲು ಅಪೇಕ್ಷಿತವಾದುದಕ್ಕಿಂತ ಅಧಿಕವಾಗಿ ಹೇಳುವದರಿಂದ ಇಲ್ಲಿ ವಿಶೇಷಣ ಹಾಗೂ ವಿಶೇಷ್ಯವು ಅಸಿದ್ಧವು ಇವು ಆಧಿಕ್ಯದಲ್ಲಿಯೇ ಅಂತರ್ಭಾವವಾಗುತ್ತವೆ. ಇವುಗಳನ್ನು ಪ್ರತ್ಯೇಕ ಪರಿಗಣನೆ ಮಾಡುವ ಕಾರಣವಿಲ್ಲ.

————

५ ) अप्रसिद्धविशेषणासिद्धस्तु यथा भूरियं-शशविषाणोल्लिखिता भूत्वादिति, अयं हेत्वाभासएव न भवति, प्रमाणबाधाव्याप्त्यादिरूपदोषद्वयरहितोदाहरणाभावात्, तथा च प्रतिज्ञातार्थस्य बाधितत्वात् व्याप्त्यभावाद्वा अस्य दुष्टत्वेन तत्रैवांतर्भावसंभावात्।

६ ) अज्ञानासिद्धस्तु ( एतत्प्रमित्यसिद्धः ) यथा - धूमबाष्पाविवेके धूमवत्त्वादिति, ( तथा च धूमवति, किमयं धूमः, उत बाष्पा इति संदेहदशायां प्रयुक्तः, धूमवत्त्वादिति हेतुरिति यावत्, ) अयमपि न स्वरूपासिद्धः नाज्ञानासिद्धः, किंतु प्रमाविरहात् प्रमित्यसिद्धः इति असिद्ध एव, समुचितस्थले लिंगस्याप्रमितेः ।

**इति हेत्वाभासे असिद्धहेतुविभागकथनपूर्वकं तेषामंतभावसमर्थनं च**

---

೫] ಅಪ್ರಸಿದ್ಧವಿಶೇಷಣಾಸಿದ್ಧವು:-ಉದಾಹರಣೆ:- ಭೂಮಿಯು ಮೊಲದ ಕೋಡಿನಿಂದ ಬರೆಯಲ್ಪಟ್ಟಿದೆ. ಭೂಧರ್ಮವುಳ್ಳದ್ದರಿಂದ, ಈ ಅನುಮಾನದಲ್ಲಿ ಮೊಲದ ಕೋಡೇ ಇಲ್ಲ, ಸಾಧ್ಯ ವಿಶೇಷಣವು ಅಪ್ರಸಿದ್ಧವಾಯಿತು. ಇದನ್ನು ಅಪ್ರಸಿದ್ಧ ವಿಶೇಷಣಾಸಿದ್ಧವೆಂದು ಹೇಳಬೇಕು, ಆದರೆ ಇದು ಹೇತ್ವಾಭಾಸವೇ ಆಗುವದಿಲ್ಲ. ಪ್ರಮಾಣಭಾಧ, ಅವ್ಯಾಪ್ತಿ. ಆಸಿದ್ಧಿ ಎಂಬ ದೋಷಗಳಲ್ಲಿ ಬರಲಾರದು. [ಪ್ರತ್ಯೇಕ ದೋಷವೆಂಬ ಬಗ್ಗೆ] ಉದಾಹರಣೆ ಇಲ್ಲ, ಕಾರಣ ಹೇತ್ವಾಭಾಸವಲ್ಲ] ಆದರೆ ಪ್ರತಿಜ್ಞಾತವಾದ ಅರ್ಥವು ಬಾಧಿತವಾಗುವದರಿಂದ ಬಾಧದಲ್ಲಿಯೂ, ಅಥವಾ ವ್ಯಾಪ್ತಿ ಇಲ್ಲದ ಕಾರಣ ಅವ್ಯಾಪ್ತಿಯಲ್ಲಿಯೂ ಅಂತರ್ಭಾವವಾಗುತ್ತದೆ ಹೊರತು ಪ್ರತ್ಯೇಕ ದೋಷವಾಗಲಾಗದು.

೬] ಅಜ್ಞಾನಾಸಿದ್ಧವು:- ಅಜ್ಞಾನಾಸಿದ್ಧವೆಂದರೆ- ಹೇತುವಿನ ಜ್ಞಾನವು ಸಿದ್ಧಸದಿರುವದೆಂದು ಅರ್ಥವು.

ಉದಾಹರಣೆ- ಇಲ್ಲಿ ಧೂಮ ಇಲ್ಲವೇ ಮಂಜು ಎಂಬ ಸಂಶಯ ಬಂದಾಗ್ಗೆ 'ಧೂಮವಿರುವದರಿಂದ" ಎಂಬ ಹೇತುವನ್ನು ಪ್ರಯೋಗ ಮಾಡಿದರೆ, ಈ ಹೇತುವು ಸ್ವರೂಪಾಸಿದ್ಧವೂ ಅಲ್ಲ, ಅಜ್ಞಾನಾಸಿದ್ಧವೂ ಅಲ್ಲ. ಆದರೆ ಹೇತುವಿನ ಯಥಾರ್ಥಜ್ಞಾನವಾಗದೇ ಇರುವದರಿಂದ 'ಪ್ರಮಿತಿಅಸಿದ್ಧ' ವಾಗುತ್ತದೆ. [ಹೇತುವಿನ ವಿಷಯದಲ್ಲಿ ಸಂದೇಹವಿದ್ದುದರಿಂದ ಪ್ರಮಿತಿ ಹುಟ್ಟಲಾರದ ಕಾರಣ ಪ್ರಮಿತಿ ಅಸಿದ್ಧವು] ಹೀಗಾಗಿ ಸಮುಚಿತ್ ಸ್ಥಳದಲ್ಲಿ ಲಿಂಗದ ಪ್ರಮಿತಿ ಆಗದಿರುವದರಿಂದ ಇದು ಅಸಿದ್ಧಿಯಲ್ಲಿಯೇ ಅಂತರ್ಭಾವವಾಗುತ್ತದೆ.

( २ ) पक्षविपक्षयोरेव वर्तमानो हेतुर्विरुद्धः, यथा—शब्दो नित्यः कृतकत्वात्, अयं विरुद्धो हेतुः साध्याभावेनैव संबंधाद्व्याप्तः, व्याप्तिरहितः तथा च अव्याप्तावंतर्भवति ।

( ३ ) पक्षसपक्षविपक्षवृत्तिः अनैकांतिकः—यथा - शब्दो नित्यः प्रमेयत्वादित्यत्र प्रमेयत्वहेतौ पक्षसपक्षविपक्षवृत्तित्वस्य सत्त्वेन लक्षणसमन्वयः । दलकृत्यं तु - विपक्षवृत्तीत्येवोक्ते विरुद्धहेतावतिव्याप्तिः, तद्वारणाय सपक्षवृत्तीति,

---

೭] ಭಾಗಾಸಿದ್ಧವು:- ಇದೂ ಸಹ ಅಸಿದ್ಧಿಯಲ್ಲಿಯೇ ಅಂತರ್ಭಾವವಾಗುತ್ತದೆಂದು ತಿಳಿಯಬೇಕು.

ಪರವಾದಿಗಳು ಹೇಳುವ ವ್ಯಭಿಚಾರ, ಅನಧ್ಯವಸಿತ ಮೊದಲಾದ ದೋಷಗಳೂ ಅವ್ಯಾಪ್ತಿಯಲ್ಲಿಯೇ ಅಂತರ್ಭಾವವಾಗುತ್ತವೆಂಬುದರ ಸಮರ್ಥನೆ=

ವಿರೋಧವು:- ಪಕ್ಷ-ವಿಪಕ್ಷ ಎರಡರಲ್ಲಿಯೂ ಇರತಕ್ಕ ಹೇತುವು ವಿರುದ್ಧವು ಉದಾಹರಣೆ:-ಶಬ್ಧವು, ನಿತ್ಯವು, ಕೃತಕತ್ವಉಳ್ಳದ್ದರಿಂದ ಎಂಬ ಅನುಮಾನದಲ್ಲಿ 'ಕೃತಕತ್ವ' ಹೇತುವು ಪಕ್ಷವಾದ ಶಬ್ದದಲ್ಲಿಯೂ ವಿಪಕ್ಷವಾದ "ಘಟ"ದಲ್ಲಿಯೂ ಇರುವದರಿಂದ, ವಿರುದ್ಧವು. ಈ ವಿರುದ್ಧ ಹೇತುವು ಸಾಧ್ಯಾಭಾವದಿಂದಲೇ ಸಂಬಂಧವುಳ್ಳದ್ದಾಗಿ ವ್ಯಾಪ್ತಿಯಿಂದ ರಹಿತವಾಗಿರುವದರಿಂದ, ಅವ್ಯಾಪ್ತಿಯಲ್ಲಿಯೇ ಅಂತರ್ಭಾವವಾಗುತ್ತದೆ. [ಕೃತಕತ್ವವು ಅನಿತ್ಯತ್ವಕ್ಕೆ ಸಂಬಂಧವುಳ್ಳದ್ದೇ ಹೊರತು ನಿತ್ಯತ್ವದಿಂದಲ್ಲ]

೩] ಅನೈಕಾಂತಿಕವು- ಪಕ್ಷ, ಸಪಕ್ಷ, ವಿಪಕ್ಷವೃತ್ತಿಯಾದ ಹೇತುವು ಅನೈಕಾಂತಿಕವು- ಉದಾಹರಣೆ, 'ಶಬ್ಧವು ನಿತ್ಯವು ಪ್ರಮೇಯತ್ವವುಳ್ಳದ್ದರಿಂದ' ಎಂಬ ಅನುಮಾನದಲ್ಲಿ 'ಪ್ರಮೇಯತ್ವ' ಹೇತುವು ಪಕ್ಷವಾದ ಶಬ್ದದಲ್ಲಿದೆ, ಸಪಕ್ಷವಾದ 'ಆಕಾಶ'ದಲ್ಲಿದೆ, ಹಾಗೂ ವಿಪಕ್ಷವಾದ 'ಘಟ' ದಲ್ಲಿಯೂ ಇದೆ. ಆದ್ದರಿಂದ ಇಲ್ಲಿ 'ಪ್ರಮೇಯತ್ವ' ಹೇತುವು ಅನೈಕಾಂತಿಕವು.

ದಲಕೃತ್ಯವು- 'ವಿಪಕ್ಷವೃತ್ತಿಯಾದುದು' ಎಂದಿಷ್ಟೇ ಹೇಳಿದರೆ, ವಿರುದ್ಧ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. 'ಶಬ್ದವು, ನಿತ್ಯವು, ಕೃತಕವಾದುದರಿಂದ' ಎಂಬ ಅನುಮಾನದಲ್ಲಿ 'ಕೃತಕತ್ವ' ವಿರುದ್ಧ ಹೇತುವು ವಿಪಕ್ಷವಾದ "ಘಟ" ಮೊದಲಾದವುಗಳಲ್ಲಿಯೂ 'ಕೃತಕತ್ವ' ವುಂಟು, ಕಾರಣ ಅಲ್ಲಿ ಅತಿವ್ಯಾಪ್ತಿಯು. ಇದನ್ನು ಪರಿಹರಿಸಲು, 'ಸಪಕ್ಷವೃತ್ತಿ' ಎಂದು ವಿಶೇಷಣ ಕೊಡಬೇಕು.

---

तस्य सपक्षवृत्तित्वाभावेन नातिव्याप्तिः, सपक्षवृत्तित्वमित्युक्ते सद्धेतौ "पर्वतो वन्हिमान् धूमात्" इत्यत्रातिव्याप्तिः, तद्वारणाय विपक्षवृत्तित्वं विशेषणं देयं । अयमपि साध्यतदभावसंबंधित्वादव्याप्तावंर्भवति, साध्यतदभावसंबंधो नाम साध्याधिकरणवृत्तित्वे सति साध्याभावाधिकरणवृत्तित्वं ज्ञेयम् ।

साध्यासाधकः पक्षएव वर्तमानो हेतुरनध्यवसितः । दलकृत्यं तु—पक्ष एव वर्तमान इत्युक्ते केवलव्यतिरेकिणि गतं, तद्वारणय साध्यासाधकेति वक्तव्यं, तस्य साध्यसा[ध]कत्वान्नातिव्याप्तिः,

---

ಮೇಲಿನ ಅನುಮಾನದಲ್ಲಿಯ 'ಕೃತಕತ್ವ'ವು ವಿಪಕ್ಷವಾದ 'ಆಕಾಶ' ದಲ್ಲಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. 'ಸಪಕ್ಷವೃತ್ತಿ' ಎಂದಿಷ್ಟೇ ಹೇಳಿದರೆ, 'ಪರ್ವತವು ಅಗ್ನಿಯುಳ್ಳದ್ದು ಧೂಮವುಳ್ಳದ್ದರಿಂದ' ಎಂಬ ಸದ್ಧೇತುವಾದ ಧೂಮದಲ್ಲಿ ಅತಿವ್ಯಾಪ್ತಿ ಬರುವದು. ಇದರ ನಿವಾರಣೆಗೆ, 'ವಿಪಕ್ಷವೃತ್ತಿತ್ವ" ವೆಂಬ ವಿಶೇಷಣ ಕೊಡಬೇಕು. ಧೂಮವು ವಿಪಕ್ಷವಾದ "ಸರೋವರ" ದಲ್ಲಿ ಇರಲಾರದ್ದರಿಂದ ಅತಿವ್ಯಾಪ್ತಿ ಇಲ್ಲ. ಪ್ರಕೃತದಲ್ಲಿ ಪ್ರಮೇಯತ್ವಹೇತುವು ಸಾಧ್ಯಕ್ಕೂ, ಸಾಧ್ಯಾಭಾವಕ್ಕೂ ಸಂಬಂಧವುಳ್ಳದ್ದಾಗಿರುವದರಿಂದ ಅವ್ಯಾಪ್ತಿಯಲ್ಲಿ ಅಂತರ್ಭಾವವಾಗುತ್ತದೆ. [ಪ್ರಮೇಯತ್ವಕ್ಕೆ ಸಾಧ್ಯವಾದ ನಿತ್ಯತ್ವದ ಸಂಬಂಧವೂ ಇದೆ, ಸಾಧ್ಯಾಭಾವವಾದ ಅನಿತ್ಯತ್ವದ ಸಂಬಂಧವೂ ಇದೆ. ಕಾರಣ ಈ ಹೇತುವು ವ್ಯಾಪ್ತಿರಹಿತವಾಗಿದೆ] ಸಾಧ್ಯಹಾಗೂ ಸಾಧ್ಯಾಭಾವ ಸಂಬಂಧವೆಂದರೆ, ಸಾಧ್ಯಕ್ಕೆ ಅಧಿಕರಣವಾದುದರಲ್ಲಿದ್ದು, ಸಾಧ್ಯಾಭಾವಕ್ಕೆ ಅಧಿಕರಣ ಯಾವುದೋ ಅಲ್ಲಿಯೂ ಇರುವದೆಂದರ್ಥವು.

೪] ಅನಧ್ಯವಸಿತವು–ಸಾಧ್ಯಕ್ಕೆ ಸಾಧಕವಾಗದೇ, ಪಕ್ಷದಲ್ಲಿಯೇ ಇರತಕ್ಕ ಹೇತುವು ಅನಧ್ಯವಸಿತವು.

ದಲಕೃತ್ಯವು- 'ಪಕ್ಷದಲ್ಲಿಯೇ ಇರತಕ್ಕ ಹೇತುವು' ಎಂದಿಷ್ಟೇ ಲಕ್ಷಣ ಮಾಡಿದರೆ, ಕೇವಲ ವ್ಯತಿರೇಕಿ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು- ['ಜೀವಂತ' ಶರೀರವು, ಆತ್ಮವುಳ್ಳದ್ದು, ಇಂದ್ರಿಯಗಳಿರುವದರಿಂದ' ಎಂಬ ಅನುಮಾನದಲ್ಲಿ 'ಇಂದ್ರಿಯಗಳಿರುವದರಿಂದ' ಹೇತುವು, ಪಕ್ಷವಾದ ಜೀವಂತ ಶರೀರದಲ್ಲಿಯೇ ಇರುವದರಿಂದ ಕೇವಲ ವ್ಯತಿರೇಕಿಯಾಗಿದ್ದು, ಇಲ್ಲಿ ಅತಿವ್ಯಾಪ್ತಿ ಬರುವದು] ಇದನ್ನು ಪರಿಹರಿಸಲು, 'ಸಾಧ್ಯಸಾಧಕವಾಗದೇ [ಸಾಧ್ಯಾಸಾಧಕ] ಎಂದು ವಿಶೇಷಣ ಕೊಡಬೇಕು 'ಇಂದ್ರಿಯಾದಿಗಳಿರುವದರಿಂದ' ಎಂಬ ಹೇತು ಸಾಧ್ಯಸಾಧಕವಾಗಿದಿಯೇ ಹೊರತು ಅಸಾಧಕವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

---

साध्यासाधकेत्युक्ते असिद्धहेतावतिव्याप्तिः, अतः पक्ष एव वर्तमानेति, साध्यासाधकः पक्षे वर्तमान इत्येवोक्ते अनैकांतिकेऽतिव्याप्तिः, अतः पक्ष एवेति विशेषणं देयम् ।

स त्रिविधः--( १ ) सपक्षविपक्षरहितः ( २ ) सपक्षविपक्षसहितः ( ३ ) सपक्षवान् विपक्षरहितश्चेति ।

( १ ) सपक्षविपक्षरहितो यथा—सर्वं अनित्यं सत्त्वात्, सर्वस्यापि पक्षत्वेन सपक्षविपक्षरहितत्वमस्य ।

( २ ) सपक्षविपक्षसहितो यथा--भूः नित्या गंधवत्त्वादित्यत्र आकाशः सपक्षः जलं विपक्षः ।

( ३ ) सपक्षवान् विपक्षरहितो यथा–शब्दो अभिधेयः शब्दत्वात्, अत्र सपक्षो घट इति क्रमेण निदर्शनानि ।

---

'ಸಾಧ್ಯಅಸಾಧಕ' ವೆಂದೆಷ್ಟೇ ಹೇಳಿದಲ್ಲಿ, ಅಸಿದ್ಧ ಹೇತುವಿನಲ್ಲಿ ಅತಿವ್ಯಾಪ್ತಿ ಬರುವದು. 'ಶಬ್ದವು, ನಿತ್ಯವು, ಚಕ್ಷುರಿಂದ್ರಿಯಕ್ಕೆ ವಿಷಯುವಾದ್ದರಿಂದ' ಎಂಬ ಅನುಮಾನದಲ್ಲಿ ಅಸಿದ್ಧವಾದ ಚಾಕ್ಷುಷತ್ವ ಹೇತುವಿನಲ್ಲಿ ಅತಿವ್ಯಾಪ್ತಿಯು. ಇದನ್ನು ನಿವಾರಿಸಲು 'ಪಕ್ಷದಲ್ಲಿಯೇ ಇರತಕ್ಕ' ಎಂದು ದಳ ಕೊಡಬೇಕು. ಅಸಿದ್ಧ ಹೇತು ಪಕ್ಷದಲ್ಲಿಲ್ಲವಾದ್ದರಿಂದ ಅತಿವ್ಯಾಪ್ತಿಯಿಲ್ಲ. [ಹೀಗೆ ಎಲ್ಲ ವಿಶೇಷಣಗಳು ಸಾರ್ಥಕವಾಗಿವೆ.]

ಈ ಅನಧ್ಯವಸಿತವು ಮೂರು ಪ್ರಕಾರವಾಗಿದೆ–i] ಸಪಕ್ಷ ವಿಪಕ್ಷ ರಹಿತವು ii] ಸಪಕ್ಷ ವಿಪಕ್ಷ ಸಹಿತವು iii] ಸಪಕ್ಷವುಳ್ಳದ್ದಾಗಿ ವಿಪಕ್ಷರಹಿತವಾದುದು.

i] ಸಪಕ್ಷ ವಿಪಕ್ಷ ರಹಿತವಾದಅನಧ್ಯವಸಿತವು– 'ಸರ್ವವು, ಅನಿತ್ಯವು, ಸತ್ವವುಳ್ಳದ್ದಾದುದರಿಂದ" ಎಂಬ ಅನುಮಾನದಲ್ಲಿ ಸರ್ವವೂ ಪಕ್ಷವಾದ್ದರಿಂದ ಈ ಅನುಮಾನದ ಹೇತು ಸಪಕ್ಷ ವಿಪಕ್ಷ ರಹಿತವಾಗಿದೆ.

ii] ಸಪಕ್ಷ ವಿಪಕ್ಷಸಹಿತವಾದುದು– 'ಭೂಮಿಯು, ನಿತ್ಯವು, ಗಂಧವುಳ್ಳದ್ದರಿಂದ' ಎಂಬ ಅನುಮಾನದಲ್ಲಿ ಸಪಕ್ಷವು [ನಿತ್ಯತ್ವ ಸಮಾನಧರ್ಮವುಳ್ಳದ್ದು] ಆಕಾಶವು, ವಿಪಕ್ಷವು [ನಿತ್ಯತ್ವಸಮಾನಧರ್ಮ ರಹಿತವಾದದ್ದು] ಜಲ, ಘಟ ಮೊದಲಾದವು ಗಂಧವತ್ವ ಹೇತುವು ಸಪಕ್ಷ ವಿಪಕ್ಷಗಳಿಂದ ಕೂಡಿದ ಅನಧ್ಯವಸಿತವು.

iii] ಸಪಕ್ಷ ಹೊಂದಿ ವಿಪಕ್ಷರಹಿತವಾದುದು. 'ಶಬ್ದವು ಅಭಿಧೇಯವು, ಶಬ್ದತ್ವವುಳ್ಳದ್ದರಿಂದ' ಎಂಬ ಅನುಮಾನದಲ್ಲಿ ಸಪಕ್ಷವು ಘಟವು. [ಎಲ್ಲವೂ ಅಭಿಧೇಯಗಳೇ ಆಗಿವೆ ವಿಪಕ್ಷವೇ ಇಲ್ಲದ್ದರಿಂದ, ಈ 'ಶಬ್ದತ್ವ' ಹೇತು ವಿಪಕ್ಷರಹಿತವಾಗಿದೆ]

अयमत्र विचारः त्रिविधोऽप्ययमनध्यवसितः, व्याप्यत्वासिद्धत्वात्, पृथक् हेत्वाभासो न भवति, तथा हि--

(१) आद्यहेतौ (सत्त्वहेतौ) सपक्षस्यैवाभावेन हेतोः साध्यसंबंधाभावात्, अयं सत्त्वहेतुः, साध्यसंबंधराहित्यरूपव्याप्यत्वासिद्धावन्तर्भवति ।

(२) द्वितीयगंधवत्वहेतोः, तथा (३) तृतीयशब्दत्वहेतोश्च, क्रमेण आकाशघटादिरूपसपक्षसत्त्वेऽपि तत्र हेतुभूतगंधवत्त्वशब्दत्वयोः व्याप्तेर्दर्शयितुमशक्यत्वेन साध्यसंबंधराहित्यरूपव्याप्यत्वासिद्धावंतर्भाव एवेति नैयायिकैकदेशिनः ।

---

ಇದು ಮೂರನೆಯ ಪ್ರಕಾರದ ಅನಧ್ಯವಸಿತವು.

[ವಿವರಣೆ- 'ಸತ್ವ' "ಗಂಧವತ್ವ" ಹಾಗೂ 'ಶಬ್ದತ್ವ' ಈ ಹೇತುಗಳು ಪಕ್ಷದಲ್ಲಿಯೇ ಇದ್ದು ಸಾಧ್ಯಾಸಾಧಕಗಳಾಗಿಲ್ಲವಾದ್ದರಿಂದ ಅನಧ್ಯವಸಿತ ಹೇತುಗಳು]

ಅ] ಪ್ರಾಚೀನ ನೈಯಾಯಿಕರಿಂದ ಅಂಗಿಕೃತವಾದ ಅನಧ್ಯವಸಿತದ ವಿಷಯದಲ್ಲಿ ನವೀನ ನೈಯಾಯಿಕರ, ಬೇರೆಯವರ ಹಾಗೂ ಸಿದ್ಧಾಂತಿಗಳ ಅಭಿಪ್ರಾಯ ಹೀಗಿದೆ- ಈ ಮೂರು ಅನಧ್ಯವಸಿತಗಳೂ ವ್ಯಾಪ್ಯತ್ವಾಸಿದ್ಧದಲ್ಲಿ ಅಂತರ್ಭೂತವಾಗುತ್ತವೆ ಹೊರತು ಪ್ರತ್ಯೇಕ ಹೇತ್ವಾಭಾಸಗಳಿಲ್ಲವೆಂದು ನವೀನ ನೈಯಾಯಿಕರಲ್ಲಿ ಕೆಲವರು ಹೇಳುತ್ತಾರೆ. ಅದು ಹೇಗೆಂದರೆ- i] ಮೊದಲಿನ ಅನುಮಾನದಲ್ಲಿಯ "ಸತ್ವ" ಹೇತುವಿಗೆ ಸಪಕ್ಷವೇ ಇಲ್ಲದ್ದರಿಂದ ಸಾಧ್ಯದ ಸಂಬಂಧವು ಬರಲಿಲ್ಲ. ಕಾರಣ ಈ 'ಸತ್ವ' ಹೇತುವು ಸಾಧ್ಯಸಂಬಂಧವಿಲ್ಲದ 'ವ್ಯಾಪ್ಯತ್ವ ಅಸಿದ್ಧ' ದಲ್ಲಿ ಅಂತರ್ಭೂತವಾಗುತ್ತದೆ. ii] ಎರಡನೆಯ ಅನುಮಾನದಲ್ಲಿಯ 'ಗಂಧವತ್ವ' ಹೇತುವಿಗೆ ಹಾಗೂ ಮೂರನೆಯ ಅನುಮಾನದಲ್ಲಿಯ 'ಶಬ್ದತ್ವ' ಹೇತುವಿಗೆ, ಕ್ರಮದಿಂದ ಆಕಾಶ ಹಾಗೂ ಘಟ, ಹೀಗೆ ಸಪಕ್ಷಗಳಿದ್ದರೂ 'ಗಂದವತ್ವ' 'ಶಬ್ದತ್ವ' ಹೇತುಗಳಿಗೆ ಆಕಾಶ ಘಟಗಳಲ್ಲಿ ವ್ಯಾಪ್ತಿಯನ್ನು ಪ್ರದರ್ಶಿಸಲು ಅಶಕ್ಯವಾದುದರಿಂದ, ಇವೆರಡು ಹೇತುಗಳು ವ್ಯಾಪ್ತಿಯಿಲ್ಲದ್ದರಿಂದ ಸಾಧ್ಯಸಂಬಂಧ ರಾಹಿತ್ಯರೂಪ ವ್ಯಾಪ್ಯತ್ವಾಸಿದ್ಧಿಯಲ್ಲಿ ಅಂತರ್ಭೂತವಾಗುತ್ತದೆ.

[ವಿವರಣೆ- ಆಕಾಶದಲ್ಲಿ ನಿತ್ಯತ್ವ ಇದ್ದರೂ ಗಂಧವತ್ವವಿಲ್ಲ ಮತ್ತು ಎಲ್ಲಿ ಗಂಧವತ್ವವೋ ಅಲ್ಲಿ ನಿತ್ಯತ್ವವೆಂದು ಅನ್ವಯವ್ಯಾಪ್ತಿಯಿಲ್ಲ. ಇದರಂತೆ ಘಟದಲ್ಲಿ ಶಬ್ದತ್ವವಿಲ್ಲ. ಕಾರಣ ಎಲ್ಲಿ ಶಬ್ದತ್ವವೋ ಅಲ್ಲಿ ಅಭಿಧೇಯತ್ವವೆಂದು ಹೇಳಲು ಬರುವದಿಲ್ಲವೆಂದು ಭಾವವು]

अन्ये तु--(१) आद्यः सर्वं अनित्यं सत्त्वादिति, सत्त्वहेतुः सपक्षविपक्षरहितो व्याप्यत्वासिद्धावंतर्भवति ।

(२) द्वितीयः-भूर्नित्या गंधवत्त्वादित्यत्र गंधवत्त्वहेतुः, सति सपक्षे पक्षमात्रवृत्तिः ।

(३) शब्दोऽभिधेयः शब्दत्वादित्यत्र शब्दत्वहेतुः सपक्षवान् विपक्षरहितश्च ।

तथा च पराभिमतौ द्वौ, गंधवत्त्वशब्दत्वहेतू, सपक्षेऽविद्यमानौ अनैकांतिके अंतर्भवतः तथा हि-

सव्यभिचारो हि अनैकांतिकः स्वभूमिमतिक्रम्यान्यत्र वर्तमानत्वं व्यभिचारः, तेन सहितः सव्यभिचार इति यावत्, स च द्विविधः (१) अन्वयमुखेन (२) व्यतिरेकमुखेन चेति ।

---

ಅ] ಬೇರೆ ಕೆಲವರು ಹೀಗೆ ಹೇಳುತ್ತಾರೆ-

i] 'ಸರ್ವವು ಅನಿತ್ಯವು, ಸತ್ವವುಳ್ಳದ್ದರಿಂದ' ಎಂಬ ಮೊದಲಿನ ಅನುಮಾನದಲ್ಲಿ ಸರ್ವವೂ ಪಕ್ಷವಾಗಿದ್ದರಿಂದ 'ಸತ್ವ' ಹೇತುವು ಸಪಕ್ಷ ವಿಪಕ್ಷರಹಿತವಾಗಿದ್ದು [ಸಾಧ್ಯ-ಸಂಬಂಧಾಭಾವರೂಪವ್ಯಾಪ್ಯತ್ವಾಸಿದ್ಧಿಯಲ್ಲಿ ಅಂತರ್ಭೂತವಾಗುತ್ತದೆ.]

ii[ 'ಭೂಮಿಯು ನಿತ್ಯವು ಗಂಧವತ್ವವುಳ್ಳದ್ದರಿಂದ' ಎಂಬ ಎರಡನೆಯ ಅನುಮಾನದಲ್ಲಿ ಗಂಧವತ್ವ ಹೇತುವಿಗೆ ಸಪಕ್ಷವಿದ್ದರೂ [ನಿತ್ಯತ್ವವುಳ್ಳ ಆಕಾಶ ಸಪಕ್ಷವು] ತಾನು ಪಕ್ಷದಲ್ಲಿ ಮಾತ್ರವಿದೆ.

iii] 'ಶಬ್ದವು ಅಭಿಧೇಯವು ಶಬ್ದತ್ವವುಳ್ಳದ್ದರಿಂದ' ಎಂಬ ಮೂರನೆಯ ಅನುಮಾನದಲ್ಲಿ ಶಬ್ದತ್ವ ಹೇತುವಿಗೆ ಅಭಿಧೇಯತ್ವ ಸಮಾನ ಧರ್ಮವುಳ್ಳ ಘಟಾದಿಗಳು ಸಪಕ್ಷವಿದ್ದರೂ ಈ ಹೇತುವಿಗೆ ವಿಪಕ್ಷವಿಲ್ಲ. [ಜಗತ್ತಿನಲ್ಲಿ ಎಲ್ಲವೂ ಅಭಿಧೇಯಗಳೇ ಹೊರತು ಅಭಿಧೇಯವಿಲ್ಲದ್ದು ಇಲ್ಲ]

ಒಟ್ಟಿನಲ್ಲಿ 'ಗಂಧವತ್ವ ಹಾಗೂ 'ಶಬ್ದತ್ವ ಹೇತುಗಳು ಪರರಿಂದ ಅನಧ್ಯವಸಿತವೆಂದು ಪರಿಗಣಿಸಲ್ಪಟ್ಟವೆ. ಆದರೆ, ಇವು ಸಪಕ್ಷದಲ್ಲಿಲ್ಲದಿರುವದರಿಂದ ['ಆಕಾಶ" ಹಾಗೂ 'ಘಟ" ದಲ್ಲಿ ಕ್ರಮವಾಗಿಲ್ಲದ್ದರಿಂದ] ಅನೈಕಾಂತಿಕದಲ್ಲಿ ಅಂತರ್ಭೂತವಾಗುತ್ತವೆ. ಅದು ಹೇಗೆಂದರೆ- 'ವ್ಯಭಿಚಾರದಿಂದ ಕೂಡಿದ್ದು ಅನೈಕಾಂತಿಕವು" ವ್ಯಭಿಚಾರವೆಂದರೆ ತಾನು ಇರಬೇಕಾಗಿದ್ದ ಸ್ಥಳವನ್ನು ಬಿಟ್ಟು ಬೇರೆಡೆಗೆ ಇರುವದು. ಈ ವ್ಯಭಿಚಾರವು ಎರಡು ವಿಧ. i]ಅನ್ವಯ ಮುಖದಿಂದ ಆಗುವ ವ್ಯಭಿಚಾರ ii]ವ್ಯತಿರೇಕ ಮುಖದಿಂದಾಗುವ ವ್ಯಭಿಚಾರ.

(१) तयोर्मध्ये हेतोरन्वयस्थानं पक्षः, सपक्षश्च तदतिरेकेण विपक्षेऽपि वर्तमानो हेतुः साधारणोऽनैकांतिकः ।

(२) हेतोः व्यतिरेकस्थानं विपक्षः सपक्षैकदेशोऽपि, यथा धूमानुमाने, अयःपिंडः—तत्र सर्वस्मिन्सपक्षेऽवर्तमानः असाधारणानैकांतिकः ।

तथा चोक्तप्रकारेण द्वितीयो गंधवत्त्वहेतुः सर्वेभ्यो नित्येभ्यः अनित्येभ्यो व्यावृत्तः सन् पक्षमात्रवृत्तिरित्यनैकांतिको भवति ।

तृतीयः शब्दत्वहेतुः, सर्वसपक्षभूतघटादाववर्तमानः सन् असाधारणनैकांतिको भवति, एवं च द्वावपि अनध्यवसितौ, अनैकांतिकौ, इति तेषामभिप्रायः ।

---

೧] ಈ ಎರಡರಲ್ಲಿ ಹೇತುವಿಗೆ ಪಕ್ಷವೂ ಹಾಗೂ ಸಪಕ್ಷವೂ ಅನ್ವಯಸ್ಥಾನಗಳಾಗಿವೆ. ಇವೆರಡರಲ್ಲಿಲ್ಲದೇ ವಿಪಕ್ಷದಲ್ಲಿಯೂ ಇದ್ದರೆ, ಹೇತುವು ಸಾಧಾರಣ ಅನೈಕಾಂತಿಕವು.

೨] ಹೇತುವಿಗೆ ವ್ಯತಿರೇಕ ಸ್ಥಾನವು ಹಾಗೂ ಸಪಕ್ಷದ ಏಕದೇಶವು. ಇದಕ್ಕೆ ದೃಷ್ಟಾಂತ 'ಪರ್ವತವು ಧೂಮವುಳ್ಳದ್ದು, ಅಗ್ನಿಯುಳ್ಳದ್ದರಿಂದ' ಎಂಬ ವ್ಯತಿರೇಕ ಅನುಮಾನದಲ್ಲಿ ಕಾದ ಕಬ್ಬಿಣ ಗುಂಡು, ಸಪಕ್ಷದ ಏಕದೇಶವಾಗಿದ್ದು ಅಲ್ಲಿ ಧೂಮವಿಲ್ಲ. ಕಾರಣ ಕಾದ ಕಬ್ಬಿಣಗುಂಡು [ಅಯೋಗೋಲಕವು] ವ್ಯತಿರೇಕಸ್ಥಲವು. ಹೀಗೆ ಸರ್ವಸಪಕ್ಷದಲ್ಲಿರದೇ ಏಕದೇಶದಲ್ಲಿದ್ದು, ಏಕದೇಶದಲ್ಲಿಲ್ಲದೇ ಇರುವ ಹೇತುವು ಅಸಾಧಾರಣ ಅನೈಕಾಂತಿಕವಾಗುತ್ತದೆ.

ಅದರಂತೆ, ಮೇಲೆ ಹೇಳಿದ ಎರಡನೆಯದಾದ 'ಗಂಧವತ್ವ' ಹೇತುವು ಸರ್ವನಿತ್ಯ ಪದಾರ್ಥಗಳಿಂದ ಹಾಗೂ ಅನಿತ್ಯ ಪದಾರ್ಥಗಳಿಂದ ಭಿನ್ನ [ವ್ಯಾವೃತ್ತ] ವಾಗಿದ್ದು ಪಕ್ಷಮಾತ್ರ ವೃತ್ತಿಯಾಗಿದೆ [ಭೂಮಿಯಲ್ಲಿ ಮಾತ್ರ] ಆದ್ದರಿಂದ ಅದು ಅನೈಕಾಂತಿಕವಾಗಿದೆ.

ಮೂರನೆಯದಾದ ಶಬ್ದತ್ವ ಹೇತುವು ಸರ್ವಸಪಕ್ಷಗಳಾದ ಘಟಾದಿಗಳಲ್ಲಿ [ಅಭಿಧೇಯವಾದವುಗಳಲ್ಲಿ] ಇರದೇ ಇರುವದರಿಂದ ಅಸಾಧಾರಣ ಅನೈಕಾಂತಿಕವಾಗುತ್ತದೆ. ಹೀಗೆ 'ಗಂಧವತ್ವ' 'ಶಬ್ದತ್ವ" ಎರಡೂ ಹೇತುಗಳು ಅನಧ್ಯವಸಿತಗಳಾಗದೇ, ಅನೈಕಾಂತಿಕಗಳೇ ಆಗುವದೆಂದು ಕೆಲವರ ಮತವು.

**स्वमतरीत्यांतर्भावस्तु** इत्थम्--अनध्यवसितत्वेन वा, पृथक् हेत्वाभासत्वेन वा, व्याप्यत्वासिद्धत्वेन वा, असाधारणानैकांतिकत्वेन वा, सर्वप्रकारेणाव्याप्तावेवांतर्भवति, तत्रापि तृतीयाव्याप्तावंतर्भवति, । उभयसन्बधाभावात् ( तथा च पक्षातिरिक्ते साध्यतदभावोभयसंबंधाभावादिति यावत् । )

पक्षातिरिक्ते, उभयसंबंधाभावश्चतुर्विधः–( १ ) पक्षातिरिक्तस्यैवाभावात् २) पक्षातिरिक्ते साध्यसत्वेऽपि हेतोरभावात् ३) साध्यभावस्याप्रसिद्धत्वात् ४) साध्यस्यैवाप्रसिद्धत्वाच्चेति ।

---

ಸಿದ್ಧಾಂತ ರೀತಿಯಿಂದ ಅಂತರ್ಭಾವದ ಪ್ರಕಾರವು– ಮೇಲೆ ಹೇಳಿದ ಈ ಮೂರು ಹೇತುಗಳು [ಸತ್ವ, ಗಂಧತ್ವ ಹಾಗೂ ಶಬ್ದತ್ವ] [ಪರರು ಹೇಳಿದಂತೆ] ಅನಧ್ಯವಸಿತಗಳಿಂದಾಗಲೀ, ಪ್ರತ್ಯೇಕ ಹೇತ್ವಾಭಾಸಗಳಿಂದಾಗಲಿ, ಅಥವಾ ವ್ಯಾಪ್ಯತ್ವಾಸಿದ್ಧಗಳಿಂದಾಗಲಿ, ಅಥವಾ ಸಾಧಾರಣ–ಅಸಾಧಾರಣ ಅನೈಕಾಂತಿಕಗಳಿಂದಾಗಲಿ, ಹೇಳಿದಾಗ್ಯೂ, ಈ ಎಲ್ಲ ಪ್ರಕಾರಗಳು ಅವ್ಯಾಪ್ತಿಯಲ್ಲಿಯೇ ಅಂತರ್ಭೂತವಾಗುತ್ತವೆ. ಇದರಲ್ಲೂ ಮೂರನೆಯದಾದ ಉಭಯ ಸಂಬಂಧಾಭಾವರೂಪ ಅವ್ಯಾಪ್ತಿಯಲ್ಲಿ ಅಂತರ್ಭೂತವಾಗುತ್ತವೆ. ಏಕೆಂದರೆ ಈ ಹೇತುಗಳಿಗೆ ಪಕ್ಷ ಬಿಟ್ಟು ಬೇರೆ ಸ್ಥಳದಲ್ಲಿ ಸಾಧ್ಯ ಹಾಗೂ ಸಾಧ್ಯಾಭಾವ ಉಭಯ ಸಂಬಂಧಗಳೂ ಇಲ್ಲದಿರುವದರಿಂದ ಉಭಯ ಸಂಬಂಧಾಭಾವ ಪ್ರಕಾರದ ಅವ್ಯಾಪ್ತಿಯಲ್ಲಿ ಬರುವದು.

ಪಕ್ಷಾತಿರಿಕ್ತದಲ್ಲಿ ಉಭಯ ಸಂಬಂಧಾಭಾವವು ನಾಲ್ಕು ಪ್ರಕಾರವಾಗಿದೆ.

೧) ಪಕ್ಷಾತಿರಿಕ್ತವೇ ಇಲ್ಲದ್ದರಿಂದ ಬರುವ ಸಂಬಂಧಾಭಾವವು. ೨] ಪಕ್ಷಾತಿರಿಕ್ತವಾದುದರಲ್ಲಿ ಸಾಧ್ಯವಿದ್ದರೂ, ಹೇತು ಇಲ್ಲದಿರುವದರಿಂದ ಬರುವ ಸಂಬಂಧಾಭಾವವು. ೩] ಸಾಧ್ಯಾಭಾವವು ಅಪ್ರಸಿದ್ಧವಾಗಿರುವದರಿಂದ ಬರುವ ಸಂಬಂಧಾಭಾವವು. ೪] ಸಾಧ್ಯವೇ ಅಪ್ರಸಿದ್ಧವಾಗಿದ್ದುದರಿಂದ ಬರುವ ಸಂಬಂಧಾಭಾವವು.

[ವಿವರಣೆ– i] ಪಕ್ಷಾತಿರಿಕ್ತವಾದುದೇ ಇಲ್ಲದಿದ್ದರೆ, ಹೇತು ಸಾಧ್ಯಗಳಿಗೆ ನಿದರ್ಶನವೇ ಇಲ್ಲದ್ದರಿಂದ ಹೇತು ಸಾಧ್ಯಗಳ ಉಭಯ ಸಂಬಂಧ ಬರುವದಿಲ್ಲ. ೨) ಪಕ್ಷಾತಿರಿಕ್ತವಾದ ವಸ್ತುವಿದ್ದು ಅಲ್ಲಿ ಸಾಧ್ಯವಿದ್ದರೂ ಹೇತುವಿಲ್ಲದಿದ್ದರೆ ಹೇತು ಸಾಧ್ಯಗಳ ಸಂಬಂಧ ಬರುವದಿಲ್ಲ. ೩) ಸಾಧ್ಯಾಭಾವವೇ ಅಪ್ರಸಿದ್ಧವಿದ್ದರೂ ಹೇತು–ಸಾಧ್ಯಗಳ ಉಭಯ ಸಂಬಂಧ ಬರುವದಿಲ್ಲ. ೪) ಸಾಧ್ಯವು ಸಿದ್ಧವಾಗದಿದ್ದಾಗಲೂ ಹೇತು ಸಾಧ್ಯಗಳಿಗೆ ಸಂಬಂಧ ಬರಲಾರದು)

१ पक्षातिरिक्तस्यैवाभावादित्यत्र दृष्टांतो यथा–सर्वं अनित्यं सत्त्वात् । अत्र पक्षातिरिक्तस्यैवाभावेनायं सत्त्वहेतुः, उभयसंबंधाभावरूपाव्याप्तावंतर्भवतीति । एवमुत्तरत्रापि ज्ञेयम् ।

२ पक्षातिरिक्ते साध्यसत्त्वेऽपि हेतोरभावादित्यत्र यथा-भूः नित्या गंधवत्त्वादिति ।

३ साध्याभावस्याप्रसिद्धत्वादित्यत्र यथा-शब्दोऽभिधेयः शब्दत्वादिति ।

४ साध्याभावस्यैवाप्रसिद्धत्वादित्यत्र दृष्टांतो यथा–सर्वं क्षणिकं सत्त्वादिति ।

---

೧) ಪಕ್ಷಾತಿರಿಕ್ತದ ಅಭಾವ ಎಂಬಲ್ಲಿ ದೃಷ್ಟಾಂತವು ಹೀಗಿದೆ. 'ಸರ್ವವು ಅನಿತ್ಯವು ಸತ್ವ (ಅಸ್ತಿತ್ವ) ವುಳ್ಳದಾಗಿರುವದರಿಂದ' (ಈ ಅನುಮಾನದಲ್ಲಿ 'ಸರ್ವವು' ಪಕ್ಷವಾದ್ದರಿಂದ ಪಕ್ಷಾತಿರಿಕ್ತ ವಸ್ತುವೇ ಇಲ್ಲವೆಂದಾಯಿತು. ಆದ್ದರಿಂದ 'ಸತ್ವ' ಹೇತುವು ಉಭಯ ಸಂಬಂಧಾಭಾವ ರೂಪ ಅವ್ಯಾಪ್ತಿಯಲ್ಲಿ ಅಂತರ್ಭೂತವಾಗುವದು]

೨) ಪಕ್ಷಾತಿರಿಕ್ತದಲ್ಲಿ ಸಾಧ್ಯವಿದ್ದರೂ ಹೇತು ಇಲ್ಲದಿರುವದಕ್ಕೆ ದೃಷ್ಟಾಂತವೆಂದರೆ- 'ಭೂಮಿಯು ನಿತ್ಯವು, ಗಂಧವುಳ್ಳದ್ದಾದುದರಿಂದ' [ಈ ಅನುಮಾನದಲ್ಲಿಯ ಪಕ್ಷಾತಿರಿಕ್ತವಾದುದು. ಆಕಾಶವಾಗಿದೆ ಆಕಾಶದಲ್ಲಿ 'ನಿತ್ಯತ್ವರೂಪ ಸಾಧ್ಯವಿದ್ದರೂ, "ಗಂಧವತ್ವ"ವೆಂಬ ಹೇತು ಇಲ್ಲವಾದ್ದರಿಂದ, 'ಗಂಧವತ್ವ' ಹೇತುವು ಉಭಯ ಸಂಬಂಧಾವರೂಪ ಅವ್ಯಾಪ್ತಿಯಲ್ಲಿ ಅಂತರ್ಭೂತವಾಗುವದು]

೩] ಸಾಧ್ಯಾಭಾವವು ಅಪ್ರಸಿದ್ಧವಾದುದಕ್ಕೆ ದೃಷ್ಟಾಂತವೆಂದರೆ- 'ಶಬ್ದವು ಅಭಿಧೇಯವು, ಶಬ್ದತ್ವವುಳ್ಳದ್ದರಿಂದ' ಈ ಅನುಮಾನದಲ್ಲಿ ಸಾಧ್ಯವಾದ 'ಅಭಿಧೇಯತ್ವ'ದ ಅಭಾವವೇ ಅಪ್ರಸಿದ್ಧವು. ಏಕೆಂದರೆ ಜಗತ್ತಿನಲ್ಲಿ ಎಲ್ಲ ಪದಾರ್ಥಗಳು ಅಭಿಧೇಯವಾದವುಗಳೇ ಆಗಿವೆ. ಆದ್ದರಿಂದ ಈ 'ಶಬ್ದತ್ವ' ಹೇತುವು ಉಭಯ ಸಂಬಂಧಾಭಾವರೂಪ ಅವ್ಯಾಪ್ತಿಯಲ್ಲಿ ಅಂತರ್ಭೂತವಾಗುವದು]

೪] ಸಾಧ್ಯವೇ ಅಪ್ರಸಿದ್ಧವಾದುದಕ್ಕೆ ದೃಷ್ಟಾಂತವೆಂದರೆ- 'ಸರ್ವವು ಕ್ಷಣಿಕವು, ಸತ್ವವುಳ್ಳದ್ದಾದುದರಿಂದ' [ಈ ಅನುಮಾನದಲ್ಲಿ ಸಾಧ್ಯವಾದ 'ಕ್ಷಣಿಕತ್ವ' ವು ಅಪ್ರಸಿದ್ಧವಾಗಿದೆ. ಏಕೆಂದರೆ ಜಗತ್ತಿನಲ್ಲಿ ಪದಾರ್ಥಗಳೆಲ್ಲ ಕಾಲಾಂತರದಲ್ಲಿ ನಾಶಹೊಂದುತ್ತವೆ. ಆದ್ದರಿಂದ ಈ ಸತ್ವ ಹೇತು ಉಭಯ ಸಂಬಂಧಾಭಾವರೂಪ ಅವ್ಯಾಪ್ತಿಯಲ್ಲಿ ಅಂತರ್ಭೂತವಾಗುತ್ತದೆ]

एवं रीत्या पक्षातिरिक्ते उभयसंबंधाभावश्चतुर्धा विद्यामानत्वात् पूर्वोक्तहेतवोऽव्याप्तावेवांतर्भवंतीति ध्येयम् ।

**एके तु**–भूः नित्या गंधवत्वादित्यत्र जलादौ व्यतिरेकव्याप्तिसंभवादयमसाधारणानैकांतिकहेत्वाभास एव न भवतीत्याहुः ।

**अपरे तु**–अस्मिन् गंधवत्त्वानुमाने सपक्षे सत्यपि तत्रावर्तमानस्य हेतोः व्याप्तिरेव नास्ति, उत केवलव्यनिरेकिवदस्तीति संदेहविषयत्वात् हेत्वाभासत्वमित्याहुः तथा च तादृशसंशयस्य व्याप्तिग्रहप्रतिबंधकतया अनुमितितत्करणान्यतरसाक्षात्प्रतिबंधकज्ञानविषयत्वरूपहेत्वाभासलक्षणाक्रांतत्वाद्धेत्वाभासत्वं बोध्यं,

---

ಹೀಗೆ ಪಕ್ಷಾತಿರಿಕ್ತವಾದ ಸ್ಥಳದಲ್ಲಿ ಉಭಯ ಸಂಬಂಧಾಭಾವವು ನಾಲ್ಕು ಪ್ರಕಾರವಿರುವದರಿಂದ, ಮೇಲೆ ಹೇಳಿದ ['ಸತ್ವ', 'ಗಂಧವತ್ವ' ಹಾಗೂ ಶಬ್ದತ್ವ] ಹೇತುಗಳು ಅವ್ಯಾಪ್ತಿಯಲ್ಲಿಯೇ ಬರುತ್ತವೆಯೆಂದು ತಿಳಿಯಬೇಕು.

ಇನ್ನು ಕೆಲವರು ಹೀಗೆ ಹೇಳುತ್ತಾರೆ– 'ಭೂಮಿಯು, ನಿತ್ಯವು, ಗಂಧವುಳ್ಳದ್ದರಿಂದ' ಎಂಬ ಅನುಮಾನಕ್ಕೆ 'ಜಲ'ದಲ್ಲಿ ವ್ಯತಿರೇಕ ವ್ಯಾಪ್ತಿಯು ಸಂಭವಿಸುತ್ತದೆ. (ಎಲ್ಲಿ ನಿತ್ಯತ್ವವಿಲ್ಲವೋ ಅಲ್ಲಿ ಗಂಧವತ್ವವಿಲ್ಲ) ಕಾರಣ ಈ ಗಂಧವತ್ವ ಹೇತುವು ಅಸಾಧಾರಣ ಅನೈಕಾಂತಿಕ ಹೇತ್ವಾಭಾಸವೇ ಆಗುವದಿಲ್ಲವೆಂದು ಹೇಳುತ್ತಾರೆ.

ಬೇರೆ ಕೆಲವರು ಹೀಗೆ ಹೇಳುವರು– ಈ ಗಂಧವತ್ವ ಅನುಮಾನದಲ್ಲಿ ಸಪಕ್ಷವಿದ್ದರೂ [ನಿತ್ಯವಾದ 'ಗಗನ'ವಿದೆ] ಆಸಪಕ್ಷವಾದ 'ಆಕಾಶ'ದಲ್ಲಿ 'ಗಂಧವತ್ವ ರೂಪ ಹೇತುವಿಲ್ಲವಾದ್ದರಿಂದ, ಈ ಹೇತುವಿಗೆ, ವ್ಯಾಪ್ತಿಯೇ ಇಲ್ಲವೇ ? ಅಥವಾ ಕೇವಲ ವ್ಯತಿರೇಕಿಯಂತೆ ಮಾತ್ರ ವ್ಯಾಪ್ತಿ ಇದೆಯೇ ಎಂಬ ಸಂಶಯಕ್ಕೆ, ['ಗಂಧವತ್ವ' ಹೇತುವು] ವಿಷಯುವಾಗುವದರಿಂದ ಹೇತ್ವಾಭಾಸವಾಗುವದೆಂದು ಹೇಳುತ್ತಾರೆ. ಹಾಗೂ ಆಸಂಶಯವು ವ್ಯಾಪ್ತಿಜ್ಞಾನಕ್ಕೆ ಪ್ರತಿಬಂಧಕವಾಗುವದರಿಂದ, ಅನುಮಿತಿ ಹಾಗೂ ಅನುಮಿತಿಕರಣಗಳಲ್ಲೊಂದಾದ ವ್ಯಾಪ್ತಿ ಜ್ಞಾನಕ್ಕೆ ಸಾಕ್ಷಾತ್ತಾಗಿ ಪ್ರತಿಬಂಧಕವಾಗಿ ಅನುಮಿತಿಯನ್ನೇ ಹುಟ್ಟಿಸದಿರುವದರಿಂದ ಹೇತ್ವಾಭಾಸವಾಗುತ್ತದೆಂದು ಅವರ ಮತವು.

[ವಿವರಣೆ:– ವ್ಯಾಪ್ತಿಯ ಬಗ್ಗೆ ಸಂಶಯ ಬಂದಲ್ಲಿ ವ್ಯಾಪ್ತಿಯ ನಿಶ್ಚಿತ ಜ್ಞಾನವೇ ಆಗುವದಿಲ್ಲ. ವ್ಯಾಪ್ತಿಜ್ಞಾನವಿಲ್ಲದೇ ಅನುಮಿತಿ ಹುಟ್ಟುವದಿಲ್ಲ. ವ್ಯಾಪ್ತಿಜ್ಞಾನ ಹಾಗೂ ಹೇತು ಜ್ಞಾನಗಳು ಅನುಮಿತಿಯ ಕರಣಗಳಾಗಿದ್ದು, ಇವೆರಡರಲ್ಲಿ ವ್ಯಾಪ್ತಿಜ್ಞಾನಕ್ಕೆ, ವ್ಯಾಪ್ತಿಯ ಸಂದೇಹವು ಪ್ರತಿಬಂಧಕವಾಗುವದು. ಹೀಗೆ ಪ್ರತಿಬಂಧಕಜ್ಞಾನ ವಿಷ–

अयमपि हेत्वाभासोऽव्याप्तावंतर्भवनीति सिद्धांतरीत्या ज्ञेयम् ।
**इति परोक्तानध्यवसितव्यभिचारादीनां अव्याप्तावंतर्भावसमर्थनम् ।**

४ प्रमाणेन निश्चितसाध्याभाववति पक्षे वर्तमानो हेतुः कालात्ययापदिष्टः प्रमाणबाधित इति यावत्, तद्बाधितत्वं च प्रत्यक्षादित्रयेण संभवति । तथाहि—

१ सर्वं तेजः, अनुष्णं द्रव्यत्वादिति, अत्र धर्मिभूततेजोग्राहकेण साध्यप्रतियोगिभूतोष्णत्वग्राहकेण उपजीव्येन प्रत्यक्षेण पक्षो बाधित इति अयं कालात्ययापदिष्टः प्रथमः ।

२ अनुमानरूपप्रमाणबाधितो यथा—चक्षुः, रूपग्राहकं न भवति, इन्द्रियत्वादित्यत्र,

---

ಯವಾಗುವದೇ ಹೇತ್ವಾಭಾಸ ಆಗುವದು. 'ಗಂಧವತ್ವ' ಹೇತುವು ಈ ಲಕ್ಷಣ ಹೊಂದಿದ್ದರಿಂದ ಹೇತ್ವಾಭಾಸವಾಗುವದೆಂದು ಅಭಿಪ್ರಾಯ]

ಆದರೆ, ಸಿದ್ಧಾಂತ ರೀತಿಯಿಂದ, ಮೇಲಿನ ಅನುಮಾನದಲ್ಲಿ ವ್ಯಾಪ್ತಿವಿಷಯದಲ್ಲಿ ಸಂದೇಹ ಬಂದರೂ, ವ್ಯಾಪ್ತಿಜ್ಞಾನವಾಗದ ಮೂಲಕ, ಹೇತುವು ಅವ್ಯಾಪ್ತಿಯಲ್ಲಿಯೇ ಅಂತರ್ಭೂತವಾಗುತ್ತದೆಂದು ತಿಳಿಯಬೇಕು.

**೪] ಅನ್ಯರು ಹೇಳುವ, ಬಾಧ ಸತ್ಪ್ರತಿಪಕ್ಷ ಹಾಗೂ ಪ್ರಕರಣಸಮಗಳಿಗೆ ಪ್ರಬಲ ಹಾಗೂ ಸಮಬಲ ಪ್ರಮಾಣ ವಿರೋಧಗಳಲ್ಲಿಯೇ ಅಂತರ್ಭಾವದ ಸಮರ್ಥನೆ:—**

i) ಪ್ರಮಾಣದಿಂದ ನಿಶ್ಚಿತವಾದ ಸಾಧ್ಯಾಭಾವವುಳ್ಳ ಪಕ್ಷದಲ್ಲಿ ಇರತಕ್ಕ ಹೇತುವು 'ಕಾಲಾತ್ಯಯಾಪದಿಷ್ಟ' ಎಂದರೆ 'ಪ್ರಮಾಣಬಾಧಿತವೆಂದು ತಿಳಿಯಬೇಕು. ಈ ಪ್ರಮಾಣ ಬಾಧಿತತ್ವವು ಹೇತುವಿಗೆ ಪ್ರತ್ಯಕ್ಷ, ಅನುಮಾನ, ಆಗಮ, ಈ ಮೂರರಿಂದಲೂ ಬರುತ್ತದೆ. ಅದು ಹೇಗೆಂದರೆ–

ಅ) ಪ್ರತ್ಯಕ್ಷದಿಂದ ಹೇತುವು ಪ್ರಮಾಣಬಾಧಿತವಾಗುವದಕ್ಕೆ ಉದಾಹರಣೆ– 'ಎಲ್ಲ ತೇಜಸ್ಸು, ಉಷ್ಣರಹಿತವಾದುದು, ದ್ರವ್ಯತ್ವವುಳ್ಳದ್ದರಿಂದ' ಇಲ್ಲಿ ಪಕ್ಷವಾದ ತೇಜಸ್ಸಿನ ಧರ್ಮಿಯನ್ನೂ ಹಾಗೂ ಸಾಧ್ಯಕ್ಕೆ ಪ್ರತಿಯೋಗಿಯಾದ ಉಷ್ಣವನ್ನೂ ಗ್ರಹಿಸತಕ್ಕ ಹಾಗೂ ಉಪಜೀವ್ಯವಾದ ಪ್ರತ್ಯಕ್ಷದಿಂದ ಪಕ್ಷವು [ಪ್ರತಿಜ್ಞೆಯು] ಬಾಧಿತವಾಗುವದು.

ಆ] ಅನುಮಾನದಿಂದ ಪ್ರಮಾಣಬಾಧಿತವಾಗುವ ಹೇತುವಿಗೆ ಉದಾಹರಣೆ:– 'ಚಕ್ಷುರಿಂದ್ರಿಯವು, ರೂಪಗ್ರಾಹಕವಲ್ಲ, ಇಂದ್ರಿಯವಾದುದರಿಂದ" ಈ ಅನುಮಾನಕ್ಕೆ

रूपज्ञानं, करणसाध्यं, क्रियात्वादिति, सामान्यपरिशेषाभ्यां चक्षुषो धर्मिणो ग्रहणात्, येन क्रियात्वानुमानेन चक्षुषः सिद्धिः तेनैव रूपग्राहकत्वेनैव सिद्धेः, चक्षुः, रूपग्राहकं न भवतीत्युक्ते, क्रियात्वानुमानेन पक्षो (साध्यधर्मो) बाधित इति द्वितीयकालात्ययापदिष्टः ।

३ सुरा, ब्राह्मणेन, पेया, द्रवद्रव्यत्वात्, इत्यनुमानं "ब्राह्मणो न सुरां पिबेत्" इत्यागमबाधित इति तृतीयकालात्ययापदिष्टः ( प्रमाणबाधितः )

त्रिविधोऽप्ययं प्रबलप्रमाणविरोध एवांतर्भवतीति ध्येय ।

२. समबलप्रमाणविरुद्धः सत्प्रतिपक्षः,

---

ಕೃತಿಯಾಗಿ 'ರೂಪಜ್ಞಾನವು, ಕರಣಸಾಧ್ಯವು, ಕ್ರಿಯೆಯಾದ್ದರಿಂದ" ಎಂಬ ಸಾಮಾನ್ಯ ಅನುಮಾನದಿಂದ, ರೂಪಜ್ಞಾನಕ್ಕೆ ಕರಣ ಸಾಧ್ಯತ್ವವು ಸಿದ್ಧಿಸುತ್ತದೆ. ಈ ಕರಣವು ಯಾವುದೆಂದರೆ, ಪರಿಶೇಷ ಅನುಮಾನದಿಂದ ರೂಪ ಗ್ರಾಹಕವಾದುದು ಚಕ್ಷುರಿಂದ್ರಿಯವೆಂದೇ ಸಿದ್ಧಿಸುವದು. ಯಾವ ಕ್ರಿಯೆಯುಳ್ಳದೆಂಬ ಅನುಮಾನದಿಂದ ಚಕ್ಷುರಿಂದ್ರಿಯವು ಸಿದ್ಧಿಸುತ್ತದೆಯೋ, ಅದೇ ಕ್ರಿಯೆಯುಳ್ಳದ್ದೆಂಬ ಅನುಮಾನದಿಂದಲೇ ಅದು ರೂಪಗ್ರಾಹಕವೆಂದೂ ಸಿದ್ಧಿಸುತ್ತದೆ ಎಂದ ಮೇಲೆ ಚಕ್ಷುರಿಂದ್ರಿಯವು ರೂಪಗ್ರಾಹಕವಲ್ಲವೆಂದು ಸಾಧನೆ ಮಾಡಿದಲ್ಲಿ ಪೂರ್ವಾನುಮಾನದ ಪ್ರತಿಜ್ಞಾವಾಕ್ಯವಾದ ಚಕ್ಷುರಿಂದ್ರಿಯವು ರೂಪಗ್ರಾಹಕವಲ್ಲ' ವೆಂಬುದೇ ಬಾಧಿತವಾಗುತ್ತದೆ. ಇದು ಎರಡನೆಯ ಕಾಲಾತ್ಯಯಾಪದಿಷ್ಟವು

೩] ಆಗಮದಿಂದ ಪ್ರಮಾಣಬಾಧಿತವಾಗುವ ಹೇತುವಿಗೆ ಉದಾಹರಣೆ– 'ಮದ್ಯವು ಬ್ರಾಹ್ಮಣನಿಂದ ಪೇಯವು, ದ್ರವ ಪದಾರ್ಥವಾದ್ದರಿಂದ" ಈ ಅನುಮಾನವು 'ಬ್ರಾಹ್ಮಣನು ಮದ್ಯವನ್ನು ಕುಡಿಯಲಾಗದು' ಎಂಬ ಆಗಮ ವಾಕ್ಯದಿಂದ ಬಾಧಿತವಾಗಿದೆ. ಇದು ಮೂರನೆಯ ಪ್ರಕಾರದ ಕಾಲಾತ್ಯಯಾಪದಿಷ್ಟವು. ಎಂದರೆ ಪ್ರಮಾಣ ಬಾಧಿತವು.

ಈ ಮೂರು ಪ್ರಕಾರದ ಪ್ರಮಾಣ ಬಾಧಿತ ಹೇತುಗಳು, ಸಿದ್ಧಾಂತ ರೀತಿಯಿಂದ ಪ್ರತಿಜ್ಞಾ ವಿರೋಧದಲ್ಲೊಂದಾದ 'ಪ್ರಬಲ ಪ್ರಮಾಣ ವಿರೋಧ' ದಲ್ಲಿಯೇ ಅಂತರ್ಭೂತವಾಗುತ್ತವೆಯೆಂದು ತಿಳಿಯಬೇಕು.

ಸತ್ಪ್ರತಿಪಕ್ಷ:- ಸಮಬಲ ಪ್ರಮಾಣ ವಿರುದ್ಧವಾದುದೇ ಸತ್ಪ್ರತಿಪಕ್ಷವು. ಉದಾಹರಣೆಗೆ--

यथा-वायुः प्रत्यक्ष प्रत्यक्षस्पर्शाश्रयत्वादिति हेतुः सत्प्रतिपक्षः । अस्य सत्प्रतिपक्षत्वं कुतः? वायुः न प्रत्यक्षः रूपरहितद्रव्यत्वात् इत्यनेन प्रतिरुद्धत्वादिति, अयंसमबलप्रमाणविरोध एवांतर्भवति ।

३. स्वपक्षपरपक्षप्रमेयसाधने प्रयुक्तः त्रिरूपः पक्षवृत्तित्वसपक्षवृत्तित्व विपक्षव्यावृत्तिमान् हेतुः प्रकरणसम इत्युच्यते, यथा -विमतं मिथ्या दृश्यत्वादिति ।

ननु एकस्यैव दृश्यत्वस्य कथं स्वपरपक्षसिद्धयोर्हेतुत्वं? विरोधात् ( स्वपक्षे सत्यत्वस्य, परपक्षे मिथ्यात्वस्य, तयोः परस्परविरोधादिति यावत् ) इति चेन्न ।

---

ವಾಯುವು, ಪ್ರತ್ಯಕ್ಷವು. ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯವಾದ್ದರಿಂದ' ಈ ಅನುಮಾನದಲ್ಲಿಯ ಹೇತುವು ಸತ್ಪ್ರತಿಪಕ್ಷವುಳ್ಳದ್ದು. ಅದು ಹೇಗೆಂದರೆ- 'ವಾಯುವು, ಪ್ರತ್ಯಕ್ಷವಲ್ಲ, ರೂಪರಹಿತ ದ್ರವ್ಯವಾದುದರಿಂದ' ಎಂಬ ಅನುಮಾನದಿಂದ ಮೊದಲಿನ ಅನುಮಾನವು ಪ್ರತಿರೋಧಿಸಲ್ಪಟ್ಟದೆಯಾದ್ದರಿಂದ ಅದು "ಸತ್ಪ್ರತಿಪಕ್ಷ"ವು ಈ ಅನುಮಾನವು ಪ್ರತಿಜ್ಞಾವಿರೋಧದಲ್ಲಿ ಒಂದಾದ "ಸಮಬಲ ಪ್ರಮಾಣ ವಿರೋಧ"ದಲ್ಲಿ ಅಂತರ್ಭೂತವಾಗುತ್ತದೆ. (ಎರಡೂ ಪರಸ್ಪರ ವ್ಯಾಪ್ತಿ, ಪಕ್ಷಧರ್ಮತಾವುಳ್ಳವುಗಳಾಗಿ ಸಮಬಲವುಳ್ಳವುಗಳಾಗಿವೆ]

iii] ಪ್ರಕರಣಸಮಃ– ಸಪಕ್ಷ ಪರಪಕ್ಷಗಳ ಪ್ರಮೇಯ ಸಾಧನೆಯಲ್ಲಿ ಪ್ರಯೋಗಿಸಲ್ಪಡುವ ಮೂರು ಅಂಶವುಳ್ಳ ಎಂದರೆ ಪಕ್ಷವೃತ್ತಿ, ಸಪಕ್ಷವೃತ್ತಿ ಹಾಗೂ 'ವಿಪಕ್ಷ' ವ್ಯಾವೃತ್ತಿಯಾಗಿರುವ, ಹೇತುವು 'ಪ್ರಕರಣಸಮ' ವೆಂದು ಕರೆಯಲ್ಪಡುತ್ತದೆ. ಉದಾಹರಣೆಗೆ- ವಾದಿ–ಪ್ರತಿವಾದಿಗಳಿಗೆ ವಿವಾದಕ್ಕೆ ವಿಷಯವಾದ ಪ್ರಪಂಚವು, ಮಿಥ್ಯಾಭೂತವು, ಕಣ್ಣಿಗೆ ಕಾಣುವದರಿಂದ, [ದೃಶ್ಯತ್ವವುಳ್ಳದ್ದರಿಂದ] ಈ ಅನುಮಾನದ ಹೇತುವು ಪ್ರಕರಣಸಮವು. [ಏಕೆಂದರೆ, ದೃಶ್ಯತ್ವವು ಪಕ್ಷವಾದ ಜಗತ್ತಿನಲ್ಲಿದೆ, ಸಪಕ್ಷವಾದ ಸಿಂಪಿನಲ್ಲಿ ತೋರುವ ಬೆಳ್ಳಿಯಲ್ಲದೆ, ಹಾಗೂ ವಿಪಕ್ಷವಾದ 'ಬ್ರಹ್ಮ' ನಲ್ಲಿಲ್ಲ' ಹೀಗೆ ಮೂರು ಅಂಶಗಳನ್ನು ಹೊಂದಿದ್ದು ಪ್ರಕರಣಸಮವಾಗಿದೆ ]

ಶಂಕಾ– 'ದೃಶ್ಯತ್ವ' [ಕಣ್ಣಿಗೆ ತೋರುವಿಕೆ] ಹೇತುವು ಸ್ವಪಕ್ಷ ಪರಪಕ್ಷಗಳ ಪ್ರಮೇಯವನ್ನು ಹೇಗೆ ಸಾಧನ ಮಾಡಬಲ್ಲದು ? ಸಿದ್ಧಾಂತಪಕ್ಷದಲ್ಲಿ ಸತ್ಯತ್ವವನ್ನೂ ಪರಪಕ್ಷದಲ್ಲಿ ಮಿಥ್ಯಾತ್ವವನ್ನೂ ಜಗತ್ತಿಗೆ ಸಾಧನ ಮಾಡುವದರಿಂದ, ಸತ್ಯತ್ವ ಮಿಥ್ಯಾತ್ವಗಳು ಪರಸ್ಪರ ವಿರುದ್ಧ ಧರ್ಮಗಳಾಗಿದ್ದರಿಂದ, ವಿರೋಧವೇ ಬಂದು ಎರಡೂ ಪಕ್ಷದ

यथा परपक्षे मिथ्यात्वसाधने दृश्यत्वहेतुः प्रयुज्यते, तथा स्वपक्षे सत्यत्वसाधनेऽपि, "विमतं सत्यं दृश्यत्वादिति प्रयुज्यते, तथा च अयं त्रिरुपो हेतुः प्रकरणसम इत्युच्यते। अस्य प्रकरणसमहेतोरंतर्भावविषयेऽयं **विचारः**, अयं त्रिरुपो हेतुः, नैव संभवति इति केचिन्नैयायिका आहुः

तथाहि-मिथ्यात्वप्रयोगे यौ सपक्षविपक्षौ शुक्तिरूप्यब्रह्मस्वरूपौ तौ सत्यत्वप्रयोगे विपक्षसपक्षौ भवतः, तथा च सत्यत्वसाधनदशायां यः सपक्षः तस्य मिथ्यात्वसाधनदशायां विपक्षत्वावश्यंभावेन, मिथ्यात्ववादिपक्षे दृश्यत्वहेतुर्न संभवति,

---

ಅನುಮಾನಗಳಲ್ಲಿ ದೃಶ್ಯತ್ವವು ಹೇತುವಾಗುವದು, ಕೂಡುವದಿಲ್ಲವೆಂದು ಶಂಕೆ ಮಾಡಕೂಡದು.

ಹೇಗೆ ಪರಪಕ್ಷ ಅನುಮಾನದಲ್ಲಿ ಜಗತ್ತಿಗೆ ಮಿಥ್ಯಾತ್ವ ಸಾಧನೆ ಮಾಡುವಲ್ಲಿ 'ದೃಶ್ಯತ್ವ ಹೇತುವನ್ನು ಪ್ರಯೋಗಿಸಲಾಗುತ್ತದೆಯೋ, ಹಾಗೆಯೇ ಸ್ವಪಕ್ಷದಲ್ಲಿ ಜಗತ್ತಿಗೆ ಸತ್ಯತ್ವ ಸಾಧನೆ ಮಾಡುವಲ್ಲಿಯೂ "ದೃಶ್ಯತ್ವ" ಹೇತುವು ಪ್ರಯೋಗಿಸಲ್ಪಡುತ್ತದೆ– 'ವಿವಾದವಿಷಯವಾದ ಜಗತ್ತು ಸತ್ಯವು ದೃಶ್ಯತ್ವವುಳ್ಳದ್ದರಿಂದ [ಕಣ್ಣಿಗೆ ತೋರುವದರಿಂದ]' ಈ ಮೂರು ರೂಪವಾದ ದೃಶ್ಯತ್ವ ಹೇತುವು 'ಪ್ರಕರಣಸಮ' ವೆಂದು ಕರೆಯಲ್ಪಡುತ್ತದೆ. ಈ 'ಪ್ರಕರಣಸಮ ಹೇತು' ವಿನ ಅಂತರ್ಭಾವದ ವಿಷಯದಲ್ಲಿ ಹೀಗೆ ವಿಚಾರವಿದೆ– ಕೆಲವು ನೈಯಾಯಿಕರು ಈ ರೀತಿ ಮೂರು ರೂಪವಾದ ಹೇತುವಿನ ಸಂಭವವೇ ಇಲ್ಲವೆಂದು ಹೇಳುತ್ತಾರೆ. ಅದು ಹೇಗೆಂದರೆ– ಮಿಥ್ಯಾತ್ವ ಪ್ರಯೋಗದಲ್ಲಿ ಯಾವದು ಸಪಕ್ಷ ವಿಪಕ್ಷಗಳು ಇರುವವೋ [ಶಿಂಪಿನಲ್ಲಿ ತೋರುವ ಬೆಳ್ಳಿ ಸಪಕ್ಷ, ಹಾಗೂ ಬ್ರಹ್ಮ ವಿಪಕ್ಷ] ಅವು ಸತ್ಯತ್ವಸಾಧಕ ಪ್ರಯೋಗದಲ್ಲಿ ವಿಪಕ್ಷ ಸಪಕ್ಷಗಳಾಗುವವು. [ಬ್ರಹ್ಮ ಸಪಕ್ಷ ಹಾಗೂ ಶಿಂಪಿನಲ್ಲಿ ತೋರುವ ಬೆಳ್ಳಿ ವಿಪಕ್ಷ] ಹಾಗೂ ಸತ್ಯತ್ವ ಸಾಧನೆಯ ದಶಾದಲ್ಲಿ ಯಾವುದು ಸಪಕ್ಷವೋ, ಅದು ಮಿಥ್ಯಾತ್ವ ಸಾಧನೆ ಮಾಡುವ ಕಾಲದಲ್ಲಿ ವಿಪಕ್ಷವಾಗುತ್ತದೆ. ಆದ್ದರಿಂದ ಮಿಥ್ಯಾತ್ವ ಸಾಧನೆ ಮಾಡುವ ಪಕ್ಷದಲ್ಲಿ 'ದೃಶ್ಯತ್ವ' ವೆಂಬ ಹೇತುವೇ ಕೂಡುವದಿಲ್ಲ. [ಏಕೆಂದರೆ, ದೃಶ್ಯತ್ವವು ಸತ್ಯತ್ವ ವಾದಿಗಳ ಅನುಮಾನದಂತೆ ಬ್ರಹ್ಮನಲ್ಲಿರುವದರಿಂದ, ಬ್ರಹ್ಮನು ಪರವಾದಿಗಳ 'ವಿಪಕ್ಷ' ವಾದುದರಿಂದ, 'ವಿಪಕ್ಷವ್ಯಾವೃತ್ತತ್ವ' ವೆಂಬ ಅಂಗವು ದೃಶ್ಯತ್ವಕ್ಕೆ ಬಾರದೇ, ಅದು ತ್ರಿರೂಪವಾಗಿ ಹೇತುವಾಗದ್ದರಿಂದ ಪರಪಕ್ಷದಲ್ಲಿ 'ದೃಶ್ಯತ್ವ' ಹೇತುವು

यथा-वायुः प्रत्यक्ष प्रत्यक्षस्पर्शाश्रयत्वादिति हेतुः सत्प्रतिपक्षः । अस्य सत्प्रतिपक्षत्वं कुतः ? वायुः न प्रत्यक्षः रूपरहितद्रव्यत्वात् इत्यनेन प्रतिरुद्धत्वादिति, अयंसमबलप्रमाणविरोध एवांतर्भवति ।

३. स्वपक्षपरपक्षप्रमेयसाधने प्रयुक्तः त्रिरूपः पक्षवृत्तित्वसपक्षवृत्तित्व विपक्षव्यावृत्तिमान् हेतुः प्रकरणसम इत्युच्यते, यथा -विमतं मिथ्या दृश्यत्वादिति ।

ननु एकस्यैव दृश्यत्वस्य कथं स्वपरपक्षसिद्धयोर्हेतुत्वं ? विरोधात् ( स्वपक्षे सत्यत्वस्य, परपक्षे मिथ्यात्वस्य, तयोः परस्परविरोधादिति यावत् ) इति चेन्न ।

---

ವಾಯುವು, ಪ್ರತ್ಯಕ್ಷವು. ಪ್ರತ್ಯಕ್ಷ ಸ್ಪರ್ಶಕ್ಕೆ ಆಶ್ರಯವಾದ್ದರಿಂದ' ಈ ಅನುಮಾನದಲ್ಲಿಯ ಹೇತುವು ಸತ್ಪ್ರತಿಪಕ್ಷವುಳ್ಳದ್ದು. ಅದು ಹೇಗೆಂದರೆ- 'ವಾಯುವು, ಪ್ರತ್ಯಕ್ಷವಲ್ಲ, ರೂಪರಹಿತ ದ್ರವ್ಯವಾದುದರಿಂದ' ಎಂಬ ಅನುಮಾನದಿಂದ ಮೊದಲಿನ ಅನುಮಾನವು ಪ್ರತಿರೋಧಿಸಲ್ಪಟ್ಟದೆಯಾದ್ದರಿಂದ ಅದು "ಸತ್ಪ್ರತಿಪಕ್ಷ"ವು ಈ ಅನುಮಾನವು ಪ್ರತಿಜ್ಞಾವಿರೋಧದಲ್ಲಿ ಒಂದಾದ "ಸಮಬಲ ಪ್ರಮಾಣ ವಿರೋಧ"ದಲ್ಲಿ ಅಂತರ್ಭೂತವಾಗುತ್ತದೆ. (ಎರಡೂ ಪರಸ್ಪರ ವ್ಯಾಪ್ತಿ, ಪಕ್ಷಧರ್ಮತಾವುಳ್ಳವುಗಳಾಗಿ ಸಮಬಲವುಳ್ಳವುಗಳಾಗಿವೆ]

iii] ಪ್ರಕರಣಸಮಃ– ಸಪಕ್ಷ ಪರಪಕ್ಷಗಳ ಪ್ರಮೇಯ ಸಾಧನೆಯಲ್ಲಿ ಪ್ರಯೋಗಿಸಲ್ಪಡುವ ಮೂರು ಅಂಶವುಳ್ಳ ಎಂದರೆ ಪಕ್ಷವೃತ್ತಿ, ಸಪಕ್ಷವೃತ್ತಿ ಹಾಗೂ 'ವಿಪಕ್ಷ' ವ್ಯಾವೃತ್ತಿಯಾಗಿರುವ, ಹೇತುವು 'ಪ್ರಕರಣಸಮ' ವೆಂದು ಕರೆಯಲ್ಪಡುತ್ತದೆ. ಉದಾಹರಣೆಗೆ- ವಾದಿ–ಪ್ರತಿವಾದಿಗಳಿಗೆ ವಿವಾದಕ್ಕೆ ವಿಷಯವಾದ ಪ್ರಪಂಚವು, ಮಿಥ್ಯಾಭೂತವು, ಕಣ್ಣಿಗೆ ಕಾಣುವದರಿಂದ, [ದೃಶ್ಯತ್ವವುಳ್ಳದ್ದರಿಂದ] ಈ ಅನುಮಾನದ ಹೇತುವು ಪ್ರಕರಣಸಮವು. [ಏಕೆಂದರೆ, ದೃಶ್ಯತ್ವವು ಪಕ್ಷವಾದ ಜಗತ್ತಿನಲ್ಲಿದೆ, ಸಪಕ್ಷವಾದ ಸಿಂಪಿನಲ್ಲಿ ತೋರುವ ಬೆಳ್ಳಿಯಲ್ಲದೆ, ಹಾಗೂ ವಿಪಕ್ಷವಾದ 'ಬ್ರಹ್ಮ' ನಲ್ಲಿಲ್ಲ' ಹೀಗೆ ಮೂರು ಅಂಶಗಳನ್ನು ಹೊಂದಿದ್ದು ಪ್ರಕರಣಸಮವಾಗಿದೆ ]

ಶಂಕಾ– 'ದೃಶ್ಯತ್ವ' [ಕಣ್ಣಿಗೆ ತೋರುವಿಕೆ] ಹೇತುವು ಸ್ವಪಕ್ಷ ಪರಪಕ್ಷಗಳ ಪ್ರಮೇಯವನ್ನು ಹೇಗೆ ಸಾಧನ ಮಾಡಬಲ್ಲದು ? ಸಿದ್ಧಾಂತಪಕ್ಷದಲ್ಲಿ ಸತ್ಯತ್ವವನ್ನೂ ಪರಪಕ್ಷದಲ್ಲಿ ಮಿಥ್ಯಾತ್ವವನ್ನೂ ಜಗತ್ತಿಗೆ ಸಾಧನ ಮಾಡುವದರಿಂದ, ಸತ್ಯತ್ವ ಮಿಥ್ಯಾತ್ವಗಳು ಪರಸ್ಪರ ವಿರುದ್ಧ ಧರ್ಮಗಳಾಗಿದ್ದರಿಂದ, ವಿರೋಧವೇ ಬಂದು ಎರಡೂ ಪಕ್ಷದ

यथा परपक्षे मिथ्यात्वसाधने दृश्यत्वहेतुः प्रयुज्यते, तथा स्वपक्षे सत्यत्वसाधनेऽपि, "विमतं सत्यं दृश्यत्वादिति प्रयुज्यते, तथा च अयं त्रिरुपो हेतुः प्रकरणसम इत्युच्यते। अस्य प्रकरणसमहेतोरंतर्भावविषयेऽयं **विचारः**, अयं त्रिरुपो हेतुः, नैव संभवति इति केचिन्नैयायिका आहुः

तथाहि - मिथ्यात्वप्रयोगे यौ सपक्षविपक्षौ शुक्तिरूप्यब्रह्मस्वरूपौ तौ सत्यत्वप्रयोगे विपक्षसपक्षौ भवतः, तथा च सत्यत्वसाधनदशायां यः सपक्षः तस्य मिथ्यात्वसाधनदशायां विपक्षत्वावश्यंभावेन, मिथ्यात्ववादिपक्षे दृश्यत्वहेतुर्न संभवति,

---

ಅನುಮಾನಗಳಲ್ಲಿ ದೃಶ್ಯತ್ವವು ಹೇತುವಾಗುವದು, ಕೂಡುವದಿಲ್ಲವೆಂದು ಶಂಕೆ ಮಾಡಕೂಡದು.

ಹೇಗೆ ಪರಪಕ್ಷ ಅನುಮಾನದಲ್ಲಿ ಜಗತ್ತಿಗೆ ಮಿಥ್ಯಾತ್ವ ಸಾಧನೆ ಮಾಡುವಲ್ಲಿ 'ದೃಶ್ಯತ್ವ ಹೇತುವನ್ನು ಪ್ರಯೋಗಿಸಲಾಗುತ್ತದೆಯೋ, ಹಾಗೆಯೇ ಸ್ವಪಕ್ಷದಲ್ಲಿ ಜಗತ್ತಿಗೆ ಸತ್ಯತ್ವ ಸಾಧನೆ ಮಾಡುವಲ್ಲಿಯೂ "ದೃಶ್ಯತ್ವ" ಹೇತುವು ಪ್ರಯೋಗಿಸಲ್ಪಡುತ್ತದೆ– 'ವಿವಾದವಿಷಯುವಾದ ಜಗತ್ತು ಸತ್ಯವು ದೃಶ್ಯತ್ವವುಳ್ಳದ್ದರಿಂದ [ಕಣ್ಣಿಗೆ ತೋರುವದರಿಂದ]' ಈ ಮೂರು ರೂಪವಾದ ದೃಶ್ಯತ್ವ ಹೇತುವು 'ಪ್ರಕರಣಸಮ' ವೆಂದು ಕರೆಯಲ್ಪಡುತ್ತದೆ. ಈ 'ಪ್ರಕರಣಸಮ ಹೇತು' ವಿನ ಅಂತರ್ಭಾವದ ವಿಷಯದಲ್ಲಿ ಹೀಗೆ ವಿಚಾರವಿದೆ– ಕೆಲವು ನೈಯಾಯಿಕರು ಈ ರೀತಿ ಮೂರು ರೂಪವಾದ ಹೇತುವಿನ ಸಂಭವವೇ ಇಲ್ಲವೆಂದು ಹೇಳುತ್ತಾರೆ. ಅದು ಹೇಗೆಂದರೆ– ಮಿಥ್ಯಾತ್ವ ಪ್ರಯೋಗದಲ್ಲಿ ಯಾವದು ಸಪಕ್ಷ ವಿಪಕ್ಷಗಳು ಇರುವವೋ [ಶಿಂಪಿನಲ್ಲಿ ತೋರುವ ಬೆಳ್ಳಿ ಸಪಕ್ಷ, ಹಾಗೂ ಬ್ರಹ್ಮ ವಿಪಕ್ಷ] ಅವು ಸತ್ಯತ್ವಸಾಧಕ ಪ್ರಯೋಗದಲ್ಲಿ ವಿಪಕ್ಷ ಸಪಕ್ಷಗಳಾಗುವವು. [ಬ್ರಹ್ಮ ಸಪಕ್ಷ ಹಾಗೂ ಶಿಂಪಿನಲ್ಲಿ ತೋರುವ ಬೆಳ್ಳಿ ವಿಪಕ್ಷ] ಹಾಗೂ ಸತ್ಯತ್ವ ಸಾಧನೆಯ ದಶಾದಲ್ಲಿ ಯಾವುದು ಸಪಕ್ಷವೋ, ಅದು ಮಿಥ್ಯಾತ್ವ ಸಾಧನೆ ಮಾಡುವ ಕಾಲದಲ್ಲಿ ವಿಪಕ್ಷವಾಗುತ್ತದೆ. ಆದ್ದರಿಂದ ಮಿಥ್ಯಾತ್ವ ಸಾಧನೆ ಮಾಡುವ ಪಕ್ಷದಲ್ಲಿ 'ದೃಶ್ಯತ್ವ' ವೆಂಬ ಹೇತುವೇ ಕೂಡುವದಿಲ್ಲ. [ಏಕೆಂದರೆ, ದೃಶ್ಯತ್ವವು ಸತ್ಯತ್ವ ವಾದಿಗಳ ಅನುಮಾನದಂತೆ ಬ್ರಹ್ಮನಲ್ಲಿರುವದರಿಂದ, ಬ್ರಹ್ಮನು ಪರವಾದಿಗಳ 'ವಿಪಕ್ಷ' ವಾದುದರಿಂದ, 'ವಿಪಕ್ಷವ್ಯಾವೃತ್ತತ್ವ' ವೆಂಬ ಅಂಗವು ದೃಶ್ಯತ್ವಕ್ಕೆ ಬಾರದೇ, ಅದು ತ್ರಿರೂಪವಾಗಿ ಹೇತುವಾಗದ್ದರಿಂದ ಪರಪಕ್ಷದಲ್ಲಿ 'ದೃಶ್ಯತ್ವ' ಹೇತುವು

एवं सत्यत्ववादिपक्षेऽपि न संभवति, मिथ्यात्वसाधनदशायां यः शुक्तिरूप्यः सपक्षः, तस्य सत्यत्वसाधनदशायां विपक्षत्वेनसंभवात्, तथा च एवंरूपहेत्वाभास एव नास्तीति तेषां वादः । तदसत् सत्प्रतिपक्षस्थले परस्परविरुद्धहेत्वोः साध्यतदभावव्याप्यत्वरूपं समबलत्वं, यथा आभिमानिकं तथाऽऽभिमानिकसपक्षत्वादेः संभवात्, अयमपि त्रिरूपो प्रकरणसमहेतुः प्रतिज्ञायाः समबलविरोध एवांतर्भवतीति ध्येयः ।

**इति पराभ्युपगतबाधसत्प्रतिपक्षत्वादेः प्रबलसमबलप्रमाणविरोधेऽन्तर्भावसमर्थनम् ।**

५) ननु हेतुदोषाणां कालात्ययापदिष्टसत्प्रतिपक्षप्रकरणसमानां कथं प्रतिज्ञादोषांतर्भावः इति चेन्न,

---

ಕೂಡುವದಿಲ್ಲವೆಂಬ ಭಾವವು]ಇದೇ ಪ್ರಕಾರವಾಗಿ ಸತ್ಯತ್ವವಾದಿ ಪಕ್ಷದಲ್ಲಿಯೂ ಕೂಡುವದಿಲ್ಲ. ಮಿಥ್ಯಾತ್ವಸಾಧನದಶಾದಲ್ಲಿ ಯಾವ ಸಿಂಪಿನಲ್ಲಿ ತೋರುವ ಬೆಳ್ಳಿ ಸಪಕ್ಷವೋ, ಅದೇ ಸತ್ಯತ್ವಸಾಧನೆದಶಾದಲ್ಲಿ ವಿಪಕ್ಷನಾಗುವದರಿಂದ, ತ್ರಿರೂಪ ಹೊಂದದೇ, ಸತ್ಯತ್ವಸಾಧನೆ ಮಾಡಲಾರದು. ಆದ್ದರಿಂದ ಇಂತಹ ಪ್ರಕಾರದ ಹೇತ್ವಾಭಾಸವೇ ಇಲ್ಲವೆಂದು ಕೆಲವು ನೈಯಾಯಿಕರ ವಾದವಿದೆ. ಆದರೆ ಅದು, ಸರಿಯಲ್ಲ. ಸತ್ಪ್ರತಿಪಕ್ಷದಲ್ಲಿ ಪರಸ್ಪರ ವಿರುದ್ಧವಾದ ಹೇತುಗಳು ಸಾಧ್ಯಕ್ಕೆ ಹಾಗೂ ಸಾಧ್ಯಾಭಾವಕ್ಕೆ ವ್ಯಾಪ್ಯವೆಂದು ಹೇಗೆ ಅಭಿಮಾನಿಕವಾಗಿ[ನಮ್ಮ ಅನುಮಾನಗಳಿಗೆ ವ್ಯಾಪ್ತ್ಯಾದಿಗಳು ಇವೆಯೆಂದು ಅಭಿಮಾನವುಳ್ಳವರಾಗಿ]ತಿಳಿಯುವದರಿಂದ, ಸಮಬಲಗಳಾಗುವವೋ ಹಾಗೆಯೇ ಜಗತ್ತಿಗೆ ಸತ್ಯತ್ವ ಹಾಗೂ ಮಿಥ್ಯಾತ್ವ ಪರಸ್ಪರ ವಿರುದ್ಧ ಧರ್ಮಗಳನ್ನು ಸಾಧನ ಮಾಡತಕ್ಕ ಅನುಮಾನಗಳಲ್ಲಿ ಪ್ರಯೋಗಿಸಲ್ಪಡುವ 'ದೃಶ್ಯತ್ವ' ಹೇತುವಿಗೆ ಪರಸ್ಪರ ಅಭಿಮಾನಿಕವಾಗಿ "ಸಪಕ್ಷ" ವಿಪಕ್ಷಗಳು ಸಂಭವಿಸುವದರಿಂದ, ಈ ತ್ರಿರೂಪವಾದ 'ದೃಶ್ಯತ್ವ' ಹೇತುವು 'ಪ್ರಕರಣಸಮ'ವಾಗುತ್ತದೆ. ಸಿದ್ಧಾಂತ ರೀತಿಯಿಂದ ಈ ಪ್ರಕರಣಸಮ ಹೇತು ಕೂಡ ಪ್ರತಿಜ್ಞಾ ವಿರೋಧಗಳಲ್ಲೊಂದಾದ ಸಮಬಲ ವಿರೋಧದಲ್ಲಿ ಅಂತರ್ಭೂತವಾಗುತ್ತದೆಂದು ತಿಳಿಯಬೇಕು.

**೫] ಹೇತ್ವಾಭಾಸಗಳಿಂದ ಪಕ್ಷಾಭಾಸಗಳು ಪ್ರತ್ಯೇಕವಾದವುಗಳು–**

ಶಂಕಾ. ಹೇತು ದೋಷಗಳಾದ [ಕಾಲಾತ್ಯಯಾಪದಿಷ್ಟ] ಪ್ರಮಾಣಬಾಧ, ಸತ್ಪ್ರತಿಪಕ್ಷ, ಪ್ರಕರಣಸಮ– ಇವುಗಳನ್ನು ಪ್ರತಿಜ್ಞಾ ದೋಷಗಳಾದ ಪ್ರಬಲ ಹಾಗೂ ಸಮಬಲ ಪ್ರಮಾಣ ವಿರೋಧದಲ್ಲಿ ಹೇಗೆ ಅಂತರ್ಭಾವ ಮಾಡುವದು?

हेतूपस्थितेः प्राक् प्रतिज्ञायामेव तेषां स्फुरणात् प्रतिज्ञादोषस्यैवोचितत्वात् 'यो हि यन्निष्ठतया ज्ञातः, अनुमितिप्रतिबंधकः सः तस्यैव दोष इति नियमात् ",अन्यथा प्रतिज्ञाहान्यादिकमपि हेतुहान्यादिकं स्यात् ।

किं च "नित्यो वर्णः" इति तार्किकप्रयुक्तप्रतिज्ञाश्रितोऽपसिद्धांतः, तथा "मूकोहं" "मे माता वंध्या" इति प्रतिज्ञाश्रितौ स्ववचनविरोधस्वक्रियाविरोधौ च, एते च, हेत्वाभासानंतर्भूताः । तस्मात् बाधादेः प्रतिज्ञामात्र एव स्फुरणात्, सत्प्रतिज्ञार्थ विरुद्धार्थ ग्राहित्वाच्च प्रतिज्ञादोषत्वमेव । एतेन पक्षवदाभासंत इति पक्षाभासा बाधादयः, हेतुदोषांतर्गतत्वात् हेतुदोषेभ्यः पृथग् न वक्तव्या इति यदुक्तं नैयायिकैः, तदपि निरस्तं भवति,

---

ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೀಗಿದೆ- ಹೇತುವು ಉಪಸ್ಥಿತವಾಗುವ ಮೊದಲೇ, ಪ್ರತಿಜ್ಞಾದಲ್ಲಿಯೇ ಈ ದೋಷಗಳು ತೋರುವದರಿಂದ, ಅವುಗಳನ್ನು ಪ್ರತಿಜ್ಞಾ ದೋಷಗಳೆಂದು ಪರಿಗಣನೆ ಮಾಡಿದ್ದು ಸರಿಯು. ಏಕೆಂದರೆ, ಯಾವುದು ಯಾವ ಅಂಗದಲ್ಲಿ ಜ್ಞಾತವಾಗಿ ಅನುಮಿತಿ ಪ್ರತಿಬಂಧಕವಾಗುತ್ತದೆಯೋ, ಅದು ಆ ಲಿಂಗದ ದೋಷವೆಂದು ನಿಯಮವಿದೆ. ಇದನ್ನು ಒಪ್ಪದಿದ್ದರೆ 'ಪ್ರತಿಜ್ಞಾಹಾನಿಯೇ ಮೊದಲಾದ ದೋಷಗಳು "ಹೇತುಹಾನಿ" ದೋಷಗಳಾಗಲೆಂಬ ಆಪತ್ತಿ ಬರುವದು.

ಇದಲ್ಲದೇ, ತಾರ್ಕಿಕರು ಹೇಳುವ 'ವರ್ಣವು, ನಿತ್ಯವು' ಎಂಬ ಪ್ರತಿಜ್ಞಾದಲ್ಲಿರುವ 'ಅಪಸಿದ್ಧಾಂತ' ದೋಷವು, ಹಾಗೂ 'ನಾನು ಮೂಕನು' 'ನನ್ನ ತಾಯಿ ಬಂಜೆ' ಎಂಬ ಪ್ರತಿಜ್ಞಾ ವಾಕ್ಯಗಳಲ್ಲಿರುವ ಸ್ವವಚನ ವಿರೋಧ, ಸ್ವಕ್ರಿಯಾವಿರೋಧಗಳು, ಹೇತ್ವಾಭಾಸದಲ್ಲಿ ಅಂತರ್ಭೂತಗಳಾಗಲಾರವೇ, ಎಂದರೆ ಹೇತುದೋಷಗಳಾಗದೇ ಪ್ರತಿಜ್ಞಾ-ವಾಕ್ಯ ಮಾತ್ರದಿಂದಲೇ ಬಾಧ ಮೊದಲಾದ ದೋಷಗಳು ತೋರುವದರಿಂದ ಪ್ರತಿಜ್ಞಾರ್ಥದ ವಿರುದ್ಧಾರ್ಥವನ್ನು ಗ್ರಹಿಸುವದರಿಂದಲೂ, ಪ್ರತಿಜ್ಞಾದೋಷಗಳೇ ಆಗುತ್ತವೆ. ಮೇಲಿನ ನಿಯಮದಿಂದ ಪಕ್ಷದಿಂದ ತೋರುವ ಮಾತ್ರದಿಂದ ಪಕ್ಷಾಭಾಸಗಳಾಗಿರುವ ಬಾಧಾದಿಗಳು ಹೇತು ದೋಷಗಳಲ್ಲಿ ಅಂತರ್ಭಾವ ಹೊಂದುವದರಿಂದ, ಹೇತುದೋಷಗಳಿಂದ ಅವುಗಳನ್ನು ಪ್ರತ್ಯೇಕಿಸಕೂಡದೆಂದು ನೈಯಾಯಿಕರಿಂದ ಹೇಳಲ್ಪಟ್ಟದ್ದು ನಿರಸ್ತವಾಯಿತು.

---

यतः स्वक्रियाविरोधस्वन्यायविरोधप्रमाणबाधादीनां लिंगोक्तिरहित प्रतिज्ञायां स्फुरणात् तथा उदाहरणस्यापि सत्त्वात् हेत्वाभासेभ्यः पक्षाभासानां पृथगदोषत्वं सिद्धम् ।

**इति हेत्वाभासेभ्यः पक्षाभासानां पृथक्त्वसमर्थनम् ।**

६) एवमुदाहरणाभासानपि हेत्वाभासेषु अंतर्भावयंतः, तेषां न पृथक् वाच्यतामाहुः नैयायिकैकदेशिनः, तथाहि—

उदाहरणलक्षरहिताः,उदाहरणवदवभासमानाः उदाहरणाभासाः, उदाहरणं नाम—सम्यग् व्याप्तिप्रदर्शनपूर्वकं दृष्टांतवचनम् ।

उदाहरणाभासो-द्विविधः–(१) साधर्म्योदाहरणाभासः, (२)वैधर्म्योदाहरणाभासश्च ।

(१) तत्राद्यः षड्विधः–१. साध्यविकलः २. साधनविकलः

---

ಏಕೆಂದರೆ, ಸ್ವಕ್ರಿಯಾ ವಿರೋಧ, ಸ್ವನ್ಯಾಯವಿರೋಧ, ಪ್ರಮಾಣವಿರೋಧ, ಬಾಧ, ಮೊದಲಾದವುಗಳು ಲಿಂಗ [ಹೇತು] ಹೇಳುವ ಮೊದಲೇ ಪ್ರತಿಜ್ಞಾದಲ್ಲಿಯೇ ತೋರುತ್ತವೆ. ಹಾಗೆ ಉದಾಹರಣೆಗಳೂ ಉಂಟು. ಆದ್ದರಿಂದ ಪಕ್ಷಾಭಾಸಗಳು ಹೇತ್ವಾಭಾಸಗಳಿಂದ ಭಿನ್ನವಾದ ಪ್ರತ್ಯೇಕ ದೋಷಗಳೆಂದು ಸಿದ್ಧವಾಗುತ್ತದೆ.

೬] ಅನ್ಯರು ಹೇಳುವ ದೃಷ್ಟಾಂತದೋಷಗಳ ಅಂತರ್ಭಾವದ ಪ್ರಕಾರ ಹಾಗೂ ಉದಾಹರಣಾಭಾಸಗಳಿಗೂ, ಹೇತ್ವಾಭಾಸಗಳಿಗೂ ಇರುವ ಭಿನ್ನತೆಯ ಸಮರ್ಥನೆ-

ನೈಯಾಯಿಕರಲ್ಲಿ ಕೆಲವರು ಇದೇ ರೀತಿ ಉದಾಹರಣಾಭಾಸಗಳನ್ನು ಹೇತ್ವಾಭಾಸಗಳಲ್ಲಿ ಅಂತರ್ಭಾವ ಮಾಡಿ, ಪ್ರತ್ಯೇಕ ದೋಷಗಳಿಲ್ಲವೆಂದು ಹೀಗೆ ಸಮರ್ಥಿಸುತ್ತಾರೆ.

ಉದಾಹರಣಾಭಾಸವೆಂದರೆ- ಉದಾಹರಣೆಯ ಲಕ್ಷಣದಿಂದ ರಹಿತವಾಗಿ ಉದಾಹರಣೆಯಂತೆ ತೋರತಕ್ಕವುಗಳು ಉದಾಹರಣಾಭಾಸಗಳು.

ಉದಾಹರಣೆಯೆಂದರೆ–'ಸಮ್ಯಕ್‌ವ್ಯಾಪ್ತಿ ಪ್ರದರ್ಶನಪೂರ್ವಕ ದೃಷ್ಟಾಂತವಾಕ್ಯವು' ಉದಾಹರಣಾಭಾಸಗಳು ಎರಡು ಪ್ರಕಾರ- ಅ] ಸಾಧರ್ಮ್ಯ ಉದಾಹರಣಾಭಾಸವು. ಆ] ವೈಧರ್ಮ್ಯ ಉದಾಹರಣಾಭಾಸವು.

ಅ] ಸಾಧರ್ಮ್ಯ ಉದಾಹರಣಾಭಾಸವು ಆರು ಪ್ರಕಾರವು–

i] ಸಾಧ್ಯ ವಿಕಲವು. ii] ಸಾಧನ ವಿಕಲವು. iii] ಉಭಯ ವಿಕಲವು.

३. उभयविकलः ४. आश्रयहीनः ५. व्याप्त्यभिधानविकलः ६. विपरीतव्याप्त्यभिधानश्च ।

(२) द्वितीयोऽपि षड्विधः १. साध्याभावरहितः २. साधनाभावरहितः ३. उभयाभावरहितः ४. आश्रयहीनः ५. व्याप्त्यभिधानविकलः ६. विपरीतव्याप्त्यभिधानश्चेति ।

(१) साधर्म्योदाहरणाभासे, १ साध्यविकलो यथा–मनोऽनित्यं मूर्तत्वादित्यत्र यन्मूर्तं तदनित्यं यथा परमाणुः, इत्युक्ते परमाणोरनित्यत्वं नास्तीति साध्यविकलो दृष्टांतः ।

(२)साधनविकलो यथा–मनोऽनित्यं मूर्तत्वात् यथाकर्म, मूर्तत्वं नाम–परिच्छिन्नपरिमाणत्वं, कर्मणि च परिमाणगुणाभावात् साधनविकलो दृष्टांतः ।

३. उभयविकलः ( साध्यसाधनविकलः ) यथा–मनोऽनित्यं मूर्तत्वात् यथा आकाशः, दृष्टांतभूताकाशेऽनित्यत्वं नास्ति तथा परिमाणलक्षणगुणसत्त्वेऽपि परिच्छिन्नपरिमाणवत्वाभावादुभयवैकल्यं तत्रास्तीति ज्ञेयम् ।

---

iv] ಆಶ್ರಯ ಹೀನವು v] ವ್ಯಾಪ್ತಿ ಅಭಿದಾನ ವಿಕಲವು [ಅಥವಾ ಅವ್ಯಾಪ್ತಿ ಅಭಿಧಾನವು. vi] ವಿಪರೀತ ವ್ಯಾಪ್ತಿ ಅಭಿಧಾನವು.

i) ಸಾಧ್ಯವಿಕಲ ಸಾಧರ್ಮ್ಯ ಉದಾಹರಣಾಭಾಸವು–'ಮನಸ್ಸು ಅನಿತ್ಯವು. ಮೂರ್ತವಾದುದರಿಂದ" ಇಲ್ಲಿ ಯಾವುದು ಮೂರ್ತವೋ ಅದು ಅನಿತ್ಯವು ಪರಮಾಣುವಿನಂತೆ' ಹೀಗೆ ಉದಾಹರಣೆ ಹೇಳಿದಲ್ಲಿ ದೃಷ್ಟಾಂತವಾದ ಪರಮಾಣುವಿನಲ್ಲಿ ಸಾಧ್ಯವಾದ ಅನಿತ್ಯತ್ವವಿಲ್ಲವಾದ್ದರಿಂದ, ದೃಷ್ಟಾಂತವು ಸಾಧ್ಯವಿಕಲವಾಯಿತು

ii] ಸಾಧನವಿಲಕಸಾಧರ್ಮ್ಯ ಉದಾಹರಣಾಭಾಸವು. 'ಮನಸ್ಸು ಅನಿತ್ಯವು ಮೂರ್ತವಾದ್ದರಿಂದ 'ಕರ್ಮ' ದಂತೆ ಎಂಬಲ್ಲಿ ದೃಷ್ಟಾಂತವಾದ 'ಕರ್ಮ' ದಲ್ಲಿ ಮೂರ್ತತ್ವವಿಲ್ಲ. [ಮೂರ್ತವೆಂದರೆ ಪರಿಚ್ಛಿನ್ನಪರಿಮಾಣವುಳ್ಳದ್ದು ಕರ್ಮದಲ್ಲಿ ಪರಿಮಾಣವೇ ಇಲ್ಲದ್ದರಿಂದ ಮೂರ್ತತ್ವ ಬರಲಿಲ್ಲ] ಕಾರಣ ದೃಷ್ಟಾಂತವು ಸಾಧನ ವಿಕಲವಾಗಿದೆ.

iii] ಉಭಯವಿಕಲ ಸಾಧರ್ಮ್ಯ ಉದಾಹರಣಾಭಾಸವು- 'ಮನಸ್ಸು ಅನಿತ್ಯವು ಮೂರ್ತವಾದುದರಿಂದ, ಆಕಾಶದಂತೆ' ಈ ಅನುಮಾನದಲ್ಲಿಯ ದೃಷ್ಟಾಂತವಾದ ಆಕಾಶದಲ್ಲಿ ಅನಿತ್ಯತ್ವವೂ ಇಲ್ಲ ಮೂರ್ತತ್ವವೂ ಇಲ್ಲವಾದ್ದರಿಂದ ಉಭಯವಿಕಲದೃಷ್ಟಾಂತವಾಗಿದೆ.

४. आश्रयहीनो यथा—मनोऽनित्यं मूर्तत्वात् यथा शशविषाणम्, अत्रापि यन्मूर्तं तदनित्यमिति व्याप्तौ यद्यपि, उभयवैकल्यं शक्यते वक्तुं, तथापि पुरःस्फूर्तिकत्वादसदाश्रयमेवोक्तम् ।

५. अव्याप्त्यभिधानं ( व्याप्त्यभिधानविकलः ) यथा—मनोऽनित्यं मूर्तत्वात् घटवदित्यत्र घटे दृष्टांतीकृते, यन्मूर्तं तदनित्यमिति नानुवर्तते, ततश्चायं व्याप्त्यभिधानविकलः ।

६. वितरीतव्याप्त्यभिधानं यथा—मनोऽनित्यं मूर्तत्वात् यथा घट इत्यत्र यदनित्यं तन्मूर्तमिति साध्यपुरःसरं व्याप्तिर्वक्तव्या, अत एवेदं विपरीतव्याप्त्यभिधानमित्युच्यते ।

(२) वैधर्म्योदाहरणाभासे, १. साध्याभावरहितो यथा—मनोऽनित्यं मूर्तत्वादित्यत्र

---

iv] ಆಶ್ರಯಹೀನಸಾಧರ್ಮ್ಯ ಉದಾಹರಣಾಭಾಸವು-'ಮನಸ್ಸು, ಅನಿತ್ಯವು, ಮೂರ್ತವಾದುದರಿಂದ, ಮೊಲದ ಕೋಡಿನಂತೆ:- ಈ ಅನುಮಾನದಲ್ಲಿಯ ದೃಷ್ಟಾಂತವಾದ 'ಮೊಲದ ಕೋಡೆ ಇಲ್ಲವೆಂದ ಮೇಲೆ ಸಾಧ್ಯಸಾಧನಗಳಿಗೆ ಆಶ್ರಯವೇ ಇಲ್ಲದಂತಾಗಿ ಆಶ್ರಯಹೀನ ದೃಷ್ಟಾಂತವಾಗುವದು" [ಈ ದೃಷ್ಟಾಂತವು ಸಾಧ್ಯ ಹಾಗೂ ಸಾಧನ ವೈಕಲ್ಯವುಳ್ಳದ್ದೂ ಆಗಿದ್ದು, ಆಶ್ರಯಹೀನತ್ವವು ಮೊದಲೇ ಸ್ಫೂರ್ತಿಯಾಗುವದರಿಂದ, ಆಶ್ರಯಹೀನ ದೃಷ್ಟಾಂತವೆಂದು ಪರಿಗಣಿಸಲಾಗಿದೆ]

v] ಅವ್ಯಾಪ್ತಿ ಅಭಿಧಾನ ಸಾಧರ್ಮ್ಯ ಉದಾಹರಣಾಭಾಸವು-'ಮನಸ್ಸು ಅನಿತ್ಯವು ಮೂರ್ತವಾದುದರಿಂದ, ಘಟದಂತೆ' ಎಂಬ ಅನುಮಾನದಲ್ಲಿ 'ಯಾವುದು ಮೂರ್ತವೋ ಅದು ಅನಿತ್ಯ' ವೆಂದು ವ್ಯಾಪ್ತಿ ಹೇಳಲು ಬರುವದಿಲ್ಲ. [ಏಕೆಂದರೆ ಈ ನಿಯಮ ಎಲ್ಲ ಕಡೆಗಿಲ್ಲ. ಮೂರ್ತವಾದ ಕೆಲವು ನಿತ್ಯವೂ ಆಗಬಲ್ಲವು] ಆದ್ದರಿಂದ ದೃಷ್ಟಾಂತವು ವ್ಯಾಪ್ತಿ ಅಭಿಧಾನವಿಕಲವಾಗಿದೆ.

vi] ವಿಪರೀತ ವ್ಯಾಪ್ತಿ ಅಭಿಧಾನ ಸಾಧರ್ಮ್ಯ ಉದಾಹರಣಾಭಾಸವು- 'ಮನಸ್ಸು ಅನಿತ್ಯವು ಮೂರ್ತವಾದುದರಿಂದ ಘಟದಂತೆ' ಈ ಅನುಮಾನದಲ್ಲಿ ಯಾವುದು ಅನಿತ್ಯವೋ ಅದು ಮೂರ್ತವು ಎಂದು ಸಾಧ್ಯ ಪುರಃಸರವಾಗಿ ವ್ಯಾಪ್ತಿ ಹೇಳಿದಲ್ಲಿ, ವಿಪರೀತ ವ್ಯಾಪ್ತಿ ಅಭಿಧಾನ ದೃಷ್ಟಾಂತವೆಂದು ಕರೆಯಲ್ಪಡುತ್ತದೆ.

i] ಸಾಧ್ಯಾಭಾವರಹಿತ ವೈಧರ್ಮ್ಯ ಉದಾಹರಣಾಭಾಸವು- 'ಮನಸ್ಸು ಅನಿತ್ಯವು ಮೂರ್ತವಾದುದರಿಂದ' ಎಂಬ ಅನುಮಾನದಲ್ಲಿ

यदनित्यं न भवति, तन्मूर्तं न भवति, यथा कर्म इत्युक्ते कर्मणि साध्याभावस्याभावत् साध्याभावरहितोऽयं दृष्टांतः ।

२. साधानाभावरहितो यथा–मनोऽनित्यं मूर्तत्वादित्यत्र यथा परमाणुः, परमाणौ साधनाभावस्याभावात् (तस्य मूर्तत्वेन), तथा चायं साधानाभावरहितवैधर्म्योदाहरणाभासः ।

(३) उभयव्यावृत्तो (साध्याभावसाधनाभावरहितः) यथा–मनोऽनित्यं मूर्तत्वात् इत्यत्रयदनित्यं न भवति तन्मूर्तं न भवति, यथा घट इत्युक्ते उभयाभावप्रयुक्तेऽयं दृष्टांताभासः ।

(४) वै. आश्रयहीनो यथा मनोऽनित्यं मूर्तत्वात् इत्यत्र, यदनित्यं न, तन्मूर्तं न, यथा-शशविषाणमित्युक्ते आसदाश्रयोऽयं दृष्टांतः ।

(५) वै. अव्याप्त्यभिधानं यथा–मनोऽनित्यं मूर्तत्वादित्यत्र यदनित्यं न भवति, तन्मूर्तं न भवति, यथाऽऽकाश इत्युक्ते व्याप्त्यभिधानविकलत्वात् दृष्टांताऽऽभासोऽयं ।

---

'ಯಾವುದು ಅನಿತ್ಯವಲ್ಲವೋ ಅದು ಮೂರ್ತವಲ್ಲ, ಕರ್ಮದಂತೆ' ಎಂದು ಉದಾಹರಣೆ ಹೇಳಿದಲ್ಲಿ ಕರ್ಮವು ಅನಿತ್ಯತ್ವರೂಪ, ಸಾಧ್ಯಾಭಾವದ ಅಭಾವ, ಇರುವದರಿಂದ, ಈ ದೃಷ್ಟಾಂತವು ಸಾಧ್ಯಾಭಾವರಹಿತವಾಗಿದೆ.

ii] ಸಾಧನಾಭಾವ ರಹಿತ ವೈಧರ್ಮ್ಯ ಉದಾಹರಣಾಭಾಸವು– 'ಮನಸ್ಸು ಅನಿತ್ಯವು ಮೂರ್ತತ್ವವುಳ್ಳದ್ದರಿಂದ, ಪರಮಾಣುವಿನಂತೆ' ಎಂಬ ಅನುಮಾನದಲ್ಲಿ ಸಾಧನಾಭಾವದ ಅಭಾವ ಇರುವದರಿಂದ [ಅದು ಮೂರ್ತವು], ಪರಮಾಣು ದೃಷ್ಟಾಂತವು ಸಾಧನಾಭಾವರಹಿತ ವೈಧರ್ಮ್ಯ ಉದಾಹರಣಾಭಾಸವು.

iii] ಉಭಯಾಭಾವರಹಿತ ವೈಧರ್ಮ್ಯ ಉದಾಹರಣಾಭಾಸವು- 'ಮನಸ್ಸು ಅನಿತ್ಯವು ಮೂರ್ತತ್ವವುಳ್ಳದ್ದರಿಂದ' ಎಂಬ ಅನುಮಾನದಲ್ಲಿ 'ಯಾವುದು ಅನಿತ್ಯವಲ್ಲವೋ ಅದು ಮೂರ್ತವಲ್ಲ ಘಟದಂತೆ' ಎಂದು ಉದಾಹರಣೆ ಹೇಳಿದರೆ, "ಘಟ"ದಲ್ಲಿ ಸಾಧ್ಯಾಭಾವರಹಿತತ್ವ [ಅನಿತ್ಯತ್ವವು] ವೂ ಇದೆ, ಸಾಧನಾಭಾವರಹಿತತ್ವವೂ [ಮೂರ್ತತ್ವವೂ] ಇದೆ. ಆದ್ದರಿಂದ ಇದು ಉಭಯಾಭಾವರಹಿತವು.

iv] ಆಶ್ರಯಹೀನ ವೈಧರ್ಮ್ಯ ಉದಾಹರಣಾಭಾಸವು- 'ಮನಸ್ಸು ಅನಿತ್ಯವು ಮೂರ್ತತ್ವವುಳ್ಳದ್ದರಿಂದ' ಎಂಬಲ್ಲಿ 'ಯಾವುದು ಅನಿತ್ಯವಲ್ಲವೋ ಅದು ಮೂರ್ತವು ಅಲ್ಲ ಮೊಲದ ಕೋಡಿನಂತೆ' ಎಂದು ಉದಾಹರಣ ವಾಕ್ಯ ಹೇಳಿದಾಗ,

(६) विपरीतव्याप्त्यभिधानं यथा मनोऽनित्यं मूर्तत्वादित्यत्र यन्मूर्तं न भवति तदनित्यं न भवतीति नानुवर्तते, अतो दृष्टांताभासोऽयम् ।

**अत्र-वैधर्म्योदाहरणस्यानुपयुक्तत्वात् कुत इति चेदित्थं-केवलव्यतिरेकिखंडनप्रस्तावे व्यतिरेकव्याप्तेरनुमित्यनंगत्वस्योक्तत्वात् तदाभासत्वकथनमनुपयुक्तं, अव्याप्त्यभिधानं तु न दोषः, तथाहि व्युत्पन्नस्य घटवदित्युक्त्यैव व्याप्तिस्मृतिसंभवात्, अव्युत्पन्नं प्रति कथमिति चेत् तदा न्यूनं दोषं वदामः(अवश्यवक्तव्यस्यावचनं)**

---

'ಮೊಲದ ಕೋಡೇ' ಇಲ್ಲದಿರುವಾಗ ದೃಷ್ಟಾಂತವು ಆಶ್ರಯಹೀನವಾಗುವದು.

v] ವ್ಯಾಪ್ತಿ ಅಭಿಧಾನವಿಕಲ ವೈಧರ್ಮ್ಯ ಉದಾಹರಣಾಭಾಸವು. 'ಮನಸ್ಸು ಅನಿತ್ಯವು ಮೂರ್ತತ್ವವುಳ್ಳದ್ದರಿಂದ" ಎಂಬ ಅನುಮಾನಕ್ಕೆ ಯಾವುದು ಅನಿತ್ಯವಲ್ಲವೋ ಅದು ಮೂರ್ತವೂ ಅಲ್ಲ. ಆಕಾಶದಂತೆ' ಎಂದು ಉದಾಹರಣೆ ವಾಕ್ಯ ಹೇಳಿದಾಗ ಇಲ್ಲಿ ಹೀಗೆ ವ್ಯಾಪ್ತಿಯನ್ನು ಹೇಳಲು ಬರುವದಿಲ್ಲ [ವ್ಯಾಪ್ತಿಯು ಕೂಡುವದಿಲ್ಲ]. ಏಕೆಂದರೆ ಪರಮಾಣುವಿನಂತೆ ಅನಿತ್ಯವಾಗದಿದ್ದರೂ ಮೂರ್ತವಾಗಬಹುದು. ಆದ್ದರಿಂದ ಇಲ್ಲಿ ಆಕಾಶ ದೃಷ್ಟಾಂತವು ವ್ಯಾಪ್ತಿ ಅಭಿಧಾನವಿಕಲವಾಗಿದೆ.

vi] ವಿಪರೀತ ವ್ಯಾಪ್ತಿ ಅಭಿಧಾನ ವೈಧರ್ಮ್ಯ ಉದಾಹರಣಾಭಾಸವು-'ಮನಸ್ಸು ಅನಿತ್ಯವು. ಮೂರ್ತತ್ವವುಳ್ಳದ್ದರಿಂದ, ಘಟದಂತೆ' ಎಂಬ ಅನುಮಾನದಲ್ಲಿ 'ಯಾವುದು ಮೂರ್ತವಲ್ಲವೋ ಅದು ಅನಿತ್ಯವಲ್ಲ' ವೆಂದು ವಿಪರೀತ ವ್ಯಾಪ್ತಿ ಹೇಳಲು ಬರುವದಿಲ್ಲ. ಹೀಗೆ ಹೇಳಿದರೆ ವಿಪರೀತ ವ್ಯಾಪ್ತಿ ಅಭಿಧಾನವುಳ್ಳದ್ದಾಗಿ ದೃಷ್ಟಾಂತವು ಉದಾಹರಣಾ ಭಾಸವಾಗುವದು.

ಮೇಲೆ ಹೇಳಿದ ಸಾಧರ್ಮ್ಯ ಹಾಗೂ ವೈಧರ್ಮ್ಯ ಉದಾಹರಣಾಭಾಸಗಳೆಂದು ಎರಡು ಪ್ರಕಾರದ ದೃಷ್ಟಾಂತ ದೋಷ ಹೇಳುವದು ಸರಿಯಲ್ಲ. ಏಕೆಂದರೆ,- ಕೇವಲ ವ್ಯತಿರೇಕಿ ಖಂಡನದ ಸಮಯದಲ್ಲಿ ವ್ಯತಿರೇಕಿ ವ್ಯಾಪ್ತಿಯು ಅನುಮಿತಿಗೆ ಅಂಗವಾಗಲಾರದೆಂದು ಈಗಾಗಲೇ ಹೇಳಿದ್ದಾಗಿದೆ. ಆದ್ದರಿಂದ ವೈಧರ್ಮ್ಯ ಉದಾಹರಣಾಭಾಸ ಹೇಳುವದು ಅಯುಕ್ತವು. ಅವ್ಯಾಪ್ತಿ ಅಭಿಧಾನವು [ಎಂದರೆ ವ್ಯಾಪ್ತಿಯನ್ನು ಹೇಳದೇ ಇರುವದು] ದೋಷವೇ ಆಗಲಾರದು. ವ್ಯಾಪ್ತಿಯನ್ನು ಹೇಳದಿದ್ದರೂ ವ್ಯುತ್ಪನ್ನನಾದ ಮನುಷ್ಯನಿಗೆ ವ್ಯಾಪ್ತಿಸ್ಮರಣೆ ಬಂದು ಅನುಮಿತಿ ಹುಟ್ಟುವದರಿಂದ, ದೋಷವಾಗುವದಿಲ್ಲ. ಆದರೆ ವ್ಯುತ್ಪನ್ನನಲ್ಲದವನಿಗೆ ವ್ಯಾಪ್ತಿ ಸ್ಮರಣೆ ತಾನೇ ಬರುವದಿಲ್ಲವಾದ್ದರಿಂದ

विपरीतव्याप्त्यभिधानमसंगतावंतर्भवति, अनाकांक्षिताभिधानरूपत्वात्तस्य, विपरीतव्याप्त्यभिधानविषये केषामपि आकांक्षाभावादिति यावत् । **आश्रयहीनत्वं च**—आश्रयासिद्धिवददूषणं, आश्रयासिद्धस्येवास्यापि साधनवैकल्यरूपदृष्टांतदोषासंकीर्णोदाहरणाभावाददोषत्वमिति यावत् । उभयवैकल्यं तु पृथक् दोषांतरत्वेन न गणनीयं, साध्यसाधनयोरन्यतरवैकल्येनैव दृष्टांतस्य दुष्टत्वात्, उभयवैकल्यरूपदोषांतरांगीकारे आधिक्यं दोषः, तस्मात् साध्यवैकल्यंसाधनवैकल्यंचेति द्वयमेव दृष्टांतदूषणमंगीकार्यं ।

अत्र **नैयायिका एवं वदन्ति**—साध्यवैकल्ये दृष्टांतो विपक्षो भवति, तत्र वर्तमानं साधनमनैकांतिकं विरुद्धं वा भवति ।

---

ಆಗ್ಗಿ ದೋಷವಾಗಲೆಂಬುದೂ ಕೂಡುವದಿಲ್ಲ. ನ್ಯೂನ [ಅವಶ್ಯ ವಕ್ತವ್ಯದಅವಚನ]ವೆಂಬ ದೋಷ ಹೇಳಲು ಬರುವದು. ವಿಪರೀತ ವ್ಯಾಪ್ತ್ಯಭಿಧಾನವೂ ಕೂಡ ಅಸಂಗತಿಯಲ್ಲಿ ಅಂತರ್ಭೂತವಾಗುತ್ತದೆ. [ವಿಪರೀತ ವ್ಯಾಪ್ತಿಯ ಆಕಾಂಕ್ಷೆಯು ಯಾರಿಗೂ ಇರುವದಿಲ್ಲ. ಅನಾಕಾಂಕ್ಷಿತವಾದುದನ್ನು ಹೇಳಿದರೆ ಅಸಂಗತಿಯಾಗುವದು.] ಆಶ್ರಯಹೀನತ್ವವೂ ಸಹ, ಆಶ್ರಯಾಸಿದ್ಧಿಯು ಹೇಗೆ ಪ್ರತ್ಯೇಕ ದೋಷವಲ್ಲವೋ ಹಾಗೆಯೇ ಪ್ರತ್ಯೇಕ ದೋಷವಾಗಲಾರದು. ಆಶ್ರಯಾಸಿದ್ಧಿಯು ಪ್ರಮಾಣ ವಿರೋಧದಲ್ಲಿ ಅಂತರ್ಭೂತವಾಗುವಂತೆ ಆಶ್ರಯಹೀನತ್ವವು 'ಸಾಧನವೈಕಲ್ಯ' ದೋಷದಲ್ಲಿ ಅಂತರ್ಭೂತವಾಗುತ್ತದೆ. ಹೀಗಾಗಿ ಪ್ರತ್ಯೇಕ ಹೇಳುವ ಕಾರಣವಿಲ್ಲ. ಉಭಯ ವೈಕಲ್ಯವೂ ಕೂಡ ಪ್ರತ್ಯೇಕದೋಷವಾಗಲಾರದು. ಸಾಧ್ಯ ವೈಕಲ್ಯ ಇಲ್ಲವೇ ಸಾಧನ ವೈಕಲ್ಯ. ಯಾವುದೇ ಒಂದು ದೋಷವಿದ್ದರೂ, ದೃಷ್ಟಾಂತವು ದುಷ್ಟವಾಗುತ್ತಿರಲು, ಉಭಯ ವೈಕಲ್ಯ ಹೇಳುವ ಅವಶ್ಯಕತೆಯಿಲ್ಲ. ಹೀಗೆ ಉಭಯ ವೈಕಲ್ಯವನ್ನು ಪ್ರತ್ಯೇಕ ದೋಷವೆಂದು ಪರಿಗಣಿಸಬೇಕಿಲ್ಲ. ಪ್ರತ್ಯೇಕ ದೋಷವೆಂದು ಹೇಳಿದರೆ 'ಆಧಿಕ್ಯ" ದೋಷ ಬರುವದು. ಆದ್ದರಿಂದ ಸಾಧ್ಯವೈಕಲ್ಯ ಹಾಗೂ ಸಾಧನ ವೈಕಲ್ಯವೆಂಬ ಎರಡೇ ದೃಷ್ಟಾಂತ ದೋಷಗಳೆಂದು ಅಂಗೀಕಾರ ಮಾಡಬೇಕು

ಈ ವಿಷಯದಲ್ಲಿ ನೈಯಾಯಿಕರು ಹೀಗೆ ಹೇಳುತ್ತಾರೆ. ಸಾಧ್ಯವೈಕಲ್ಯದಲ್ಲಿ ದೃಷ್ಟಾಂತವು ವಿಪಕ್ಷವಾಗುತ್ತದೆ. ಈ ವಿಪಕ್ಷದಲ್ಲಿದ್ದ ಹೇತುವು ಅನೈಕಾಂತಿಕವಾಗಲಿ, ವಿರುದ್ಧವಾಗಲೀ ಆಗುವದು.

तथासाधनवैकल्ये-साध्यसंबंधराहित्यरूपा, व्याप्यत्वासिद्धिर्भवतीति, दृष्टांतदोषो हेत्वाभासेऽन्तर्भवति । एवं हेत्वाभासांतर्भावकथनमयुक्तं, तथा हि दृष्टांतदोषोक्त्यनन्तरं प्रतिभासात् "यो यन्निष्टतया ज्ञातः सन् अनुमितिप्रतिबंधकः, सः तस्य दोष" इति नियमात्, तथा च प्रतिभासानुसारेणैव दोषस्योद्भाव्यत्वेन साधानवैकल्यादेः दृष्टांतदोषत्वमेव, अन्यथा बाधे पक्षस्यैव विपक्षत्वात् तत्र हेतुवृत्तौ व्यभिचारः, अवृतौ स्वरूपासिद्धिरिति बाधस्यापि पृथक्दोषत्वासंभवादिति ज्ञातव्यं ।

---

['ಶಬ್ದವು ನಿತ್ಯವು, ಪ್ರಮೇಯತ್ವವುಳ್ಳದ್ದರಿಂದ' ಎಂಬ ಅನುಮಾನಕ್ಕೆ ವಿಪಕ್ಷವಾದ 'ಘಟ' ದಲ್ಲಿ ನಿತ್ಯತ್ವವಿಲ್ಲವ್ವರೂ ಪ್ರಮೇಯತ್ವವಿದೆ. ಹೀಗೆ ವ್ಯಭಿಚಾರವಾಗಲಿ, ಇಲ್ಲವೇ ವಿರೋಧವಾಗಲೀ ಬರುತ್ತದೆ. ಅದರಂತೆಯೇ ಸಾಧನ ವೈಕಲ್ಯದಲ್ಲಿ ಸಾಧ್ಯಸಂಬಂಧ ಅಭಾವರೂಪ ವ್ಯಾಪ್ಯತ್ವಾಸಿದ್ಧಿಯು ಬರುತ್ತದೆ. ಹೀಗೆ ಸಾಧ್ಯವೈಕಲ್ಯ ಸಾಧನ ವೈಕಲ್ಯ-ರೂಪ ದೃಷ್ಟಾಂತ ದೋಷಗಳು ಹೇತ್ವಾಭಾಸದಲ್ಲಿಯೇ ಅಂತರ್ಭೂತವಾಗುತ್ತವೆಯೆಂದು ನೈಯಾಯಿಕರು ಹೇಳುತ್ತಾರೆ.

ಆದರೆ ಹೀಗೆ ಈ ಎರಡೂ ದೋಷಗಳನ್ನು ಹೇತ್ವಾಭಾಸದಲ್ಲಿ ಅಂತರ್ಭಾವ ಮಾಡುವದು ಸರಿಯಲ್ಲ. ಏಕೆಂದರೆ, ಸಾಧ್ಯವೈಕಲ್ಯ ಹಾಗೂ ಸಾಧನ ವೈಕಲ್ಯ ದೋಷಗಳು ದೃಷ್ಟಾಂತ ಹೇಳಿದ ನಂತರವೇ ತೋರುತ್ತವೆ. 'ಯಾವುದು ಎಲ್ಲಿದ್ದು ಜ್ಞಾತವಾಗಿ ಅನುಮಿತಿಗೆ ಪ್ರತಿಬಂಧಕವಾಗುವದೋ, ಅದು ಅದಕ್ಕೆ ದೋಷವು' ಎಂಬ ನಿಯಮದಂತೆ, ಅನುಮಾನದಲ್ಲಿ ದೃಷ್ಟಾಂತ ಹೇಳಿದ ನಂತರ, ಅದರಲ್ಲಿದ್ದು ಅನುಮಿತಿಗೆ ಪ್ರತಿಬಂಧಕವಾಗಿ ಜ್ಞಾತವಾಗುವದರಿಂದ, ಸಾಧ್ಯವೈಕಲ್ಯ ಹಾಗೂ ಸಾಧನವೈಕಲ್ಯ-ವೆಂದು ಪ್ರತ್ಯೇಕ ದೃಷ್ಟಾಂತ ದೋಷಗಳೆಂದು ಹೇಳುವದು ಯುಕ್ತವು. ಇದನ್ನು ಒಪ್ಪದಿದ್ದರೆ, ಬಾಧದಲ್ಲಿ ಪಕ್ಷವೇ ವಿಪಕ್ಷವಾಗುತ್ತದೆ. ಅಲ್ಲಿ ಹೇತು ಬಂದರೆ ವ್ಯಭಿಚಾರ ದೋಷ ಬರುತ್ತದೆ. ಬಾರದಿದ್ದರೆ ಸ್ವರೂಪಾಸಿದ್ಧಿಯು ಬರುತ್ತದೆ. ಹೀಗೆ ಬಾಧವು ಕೂಡ ಪ್ರತ್ಯೇಕ ದೋಷವಾಗದೇ ಹೋಗಲೀ ಎಂದು ಆಪತ್ತಿ ಬರುತ್ತದೆ. [ವಿವರಣೆ-ಪಕ್ಷದಲ್ಲಿ ಸಾಧ್ಯವಿಲ್ಲದಿದ್ದರೆ ಬಾಧವು. ಪ್ರತ್ಯೇಕ ದೋಷವೆಂದು. ಹೇಗೆ ನೈಯಾಯಿಕರು ಹೇಳುತ್ತಾರೆಯೋ ಹಾಗೆಯೇ ಸಾಧ್ಯವೈಕಲ್ಯ ಹಾಗೂ ಸಾಧನವೈಕಲ್ಯ ದೋಷಗಳು ವ್ಯಭಿಚಾರಾದಿಗಳಲ್ಲಿ ಅಂತರ್ಭೂತವಾಗದೇ ಪ್ರತ್ಯೇಕ ದೃಷ್ಟಾಂತದೋಷಗಳಾಗುವವು]

अत्रैव दूषणांतरमुच्यते, तथाहि-पर्वतो वन्हिमात् धूमात्, अयोगोलकवत् इत्यत्र सपक्षांतरे. महानसादौ वर्तमानस्य धूमरूपहेतोः, दृष्टांतेऽयोगोलके सपक्षेऽसत्त्वेऽपि व्याप्यत्वासिद्धिरूपहेत्वाभासत्वासंभवाच्च धूमस्य वन्हिव्याप्त्यक्षतेः, तस्य पृथग्दोषत्वं वाच्यं, सः पृथग्दोषः साधनवैकल्यरूप एव, ननु तत्रापि ( तप्तायःपिंडादौ सपक्षैदेशेऽपि ) व्याप्तिज्ञानाभावात् व्याप्यत्वासिद्धिरिति चेन्न, तथापि महानसवदिति वक्तव्ये अयःपिंडवदित्युक्तेः पुरुषदोषत्वेनार्थदोषत्वाभावाद् अर्थदोषस्यैव हेत्वाभासत्वाच्च, तथा च साधर्म्योदाहरणाभासस्यापि हेत्वाभासात् पृथग्दोषत्वमंगीकार्यम् ।

---

ಉದಾಹರಣಾಭಾಸವನ್ನು ಹೇತ್ವಾಭಾಸದಲ್ಲಿ ಅಂತರ್ಭಾವ ಮಾಡಬೇಕೆನ್ನುವ ವಿಷಯದಲ್ಲಿ, ಬೇರೆ ದೋಷವೂ ಬರುವದೆಂದು ಹೇಳುವೆವು. ಉದಾಹರಣೆಗೆ, 'ಪರ್ವತವು ಅಗ್ನಿಯುಳ್ಳದ್ದು ಧೂಮವಿರುವದರಿಂದ, ಕಾದಕಬ್ಬಿಣಗುಂಡಿನಂತೆ' ಎಂಬ ಅನುಮಾನದಲ್ಲಿ, ದೃಷ್ಟಾಂತವಾದ ಕಾದಕಬ್ಬಿಣಗುಂಡಿನಲ್ಲಿ 'ಧೂಮ' ವೆಂಬ ಹೇತುವಿಲ್ಲದಿದ್ದರೂ, ಸಾಧ್ಯಸಂಬಂಧರಾಹಿತ್ಯರೂಪವಾದ ವ್ಯಾಪ್ಯತ್ವಾಸಿದ್ಧಿ ದೋಷ ಬರುವದಿಲ್ಲ. ಯಾಕೆಂದರೆ ಸಪಕ್ಷದ ಏಕದೇಶವಾದ ಮಹಾನಸದಲ್ಲಿ ಧೂಮಾಗ್ನಿಗಳಿಗೆ ವ್ಯಾಪ್ತಿ ನಿಶ್ಚಿತವಾಗಿರುವವರಿಂದ ಉಕ್ತದೋಷ ಬರಲಾರದು. [ದೃಷ್ಟಾಂತದಲ್ಲಿ] ಕಾದ ಕಬ್ಬಿಣಗುಂಡಿನಲ್ಲಿ ಧೂಮವಿಲ್ಲವೆಂದ ಮೇಲೆ, ಅದಕ್ಕೆ ಪ್ರತ್ಯೇಕದೋಷ ಹೇಳಬೇಕು. ಆ ದೋಷ ಯಾವುದೆಂದರೆ, 'ಸಾಧನವೈಕಲ್ಯವನ್ನೇ ಹೇಳಬೇಕೇ ಹೊರತು ಬೇರೆ ದೋಷ ಹೇಳಲು ಬರುವದಿಲ್ಲ.

ಶಂಕಾ-ಸಪಕ್ಷದ ಏಕದೇಶವಾದ ಕಾದಕಬ್ಬಿಣಗುಂಡಿನಲ್ಲಿ ಧೂಮ-ಅಗ್ನಿಗಳಿಗೆ ವ್ಯಾಪ್ತಿಜ್ಞಾನವಾಗದೇ ಇರುವದರಿಂದ [ಸಾಧ್ಯಸಂಬಂಧವಿಲ್ಲದಿರುವದರಿಂದ] ವ್ಯಾಪ್ಯತ್ವಾಸಿದ್ಧಿ ಏಕೆ ಹೇಳಬಾರದೆಂದು ಶಂಕೆ ಬಂದರೆ, ಸಮಾಧಾನ ಹೀಗಿದೆ- ಧೂಮದ ಅನುಮಾನದಲ್ಲಿ ಅಡುಗೆ ಮನೆಯ ದೃಷ್ಟಾಂತ ಹೇಳುವದನ್ನು ಬಿಟ್ಟು ಕಾದಕಬ್ಬಿಣಗುಂಡಿನ ದೃಷ್ಟಾಂತ ಹೇಳಿದ್ದು ಪುರುಷದೋಷವಾಗುವದೇ ಹೊರತು ಅರ್ಥದೋಷವಾಗಲಾರದು. ಅರ್ಥದೋಷವಾದರೆ ಮಾತ್ರ ಹೇತ್ವಾಭಾಸವಾಗುತ್ತದೆ. ತಥಾಚ ಸಾಧರ್ಮ್ಯ ಉದಾಹರಣಾಭಾಸವನ್ನು ಹೇತ್ವಾಭಾಸದಿಂದ ಪ್ರತ್ಯೇಕವಾದ ದೋಷವೆಂದೇ ಪರಿಗಣಿಸಬೇಕು. [ಅಂದರೆ ದೃಷ್ಟಾಂತ ದೋಷವನ್ನು ಪ್ರತ್ಯೇಕವಾಗಿ ಅಂಗೀಕಾರ ಮಾಡಬೇಕಾಗುವದು]

[ಹೇತ್ವಾಭಾಸ ಪ್ರಕರಣವು ಮುಗಿಯಿತು]

इति परोक्तदृष्टांतदोषाणामंतर्भावकथनं तथा हेत्वाभासेभ्यः
उदाहरणाभासानां पृथक्त्वसमर्थनं च ।

इति हेत्वाभासप्रकरणम् ।

श्री १००८ परमपूज्यपाद श्रीसत्यध्यानतीर्थ-अंतेवासि हुल्मीत्युपाव्ह
हुच्चाचार्यशिष्येण अग्निहोत्रीत्युपाव्ह भीमाचार्यसुतेन वादिराजेन
विरचिते प्रमाणसंग्रहे, अनुमानपरिच्छेदः

समाप्तः



श्री वेदव्यासाय नमः

श्री लक्ष्मीनृसिंहाय नमः

## अथागमपरिच्छेदः

### १. आगमप्रकरणम्

अनुमाननिरूपणानंतरं आगमस्वरूपलक्षणादिकमुच्यते ।

(१) निर्दोषशब्दः आगमः, प्रमाप्रतिबंधकदोषरहितः शब्द, आगम इति यावत्, आगमाभासेऽतिव्याप्तिवारणाय निर्दोषेति, प्रत्यक्षादौ तद्वारणाय शब्देति, निर्दोषत्वस्य प्रत्यक्षे सत्त्वेऽपि तत्र शब्दत्वाभावान्नातिव्याप्तिः ।

शब्दनिष्टदोषास्तु - (१) अबोधकत्वं (२) विपरीतबोधकत्वं (३) ज्ञातज्ञापकत्वं (४) अप्रयोजनत्वं (५) अनभिमतप्रयोजनत्वं (६)अशक्यसाधनप्रतिपादनं (७)लघूपाये सति गुरूपायोपदेशनमिति ।

---

## ಅಥಆಗಮಪರಿಚ್ಛೇದವು

### ೧) ಆಗಮ ಪ್ರಕರಣವು

**ಆಗಮಸ್ವರೂಪ ಕಥನಪೂರ್ವಕ ಶಬ್ದನಿಷ್ಟದೋಷಗಳ ಕಥನವು**

ಅನುಮಾನ ಸ್ವರೂಪವನ್ನು ಹೇಳಿದ ನಂತರ ಆಗಮ ಸ್ವರೂಪ ಹಾಗೂ ಲಕ್ಷಣಾದಿಗಳನ್ನು ಹೇಳಲಾಗುತ್ತದೆ-

೧] ದೋಷರಹಿತವಾದ ಶಬ್ದವು, ಆಗಮವು. ಪ್ರಮಾಕ್ಕೆ [ಯಥಾರ್ಥಜ್ಞಾನಕ್ಕೆ] ಪ್ರತಿಬಂಧಕ ದೋಷರಹಿತವಾದ ಶಬ್ದವು ಆಗಮವು ಎಂದು ಅಭಿಪ್ರಾಯವು. ದಲಕೃತ್ಯ-ಶಬ್ದವು ಆಗಮವು, ಇಷ್ಟೇ ಲಕ್ಷಣ ಮಾಡಿದಲ್ಲಿ ಆಗಮಾಭಾಸದಲ್ಲಿ ಅತಿವ್ಯಾಪ್ತಿಯು. ಇದನ್ನು ಪರಿಹರಿಸಲು ನಿರ್ದೋಷವೆಂಬ ವಿಶೇಷಣ ಕೊಡಬೇಕು. ಆಗಮಾಭಾಸದಲ್ಲಿ ನಿರ್ದೋಷತ್ವ ಇಲ್ಲ ಕಾರಣ ಅತಿವ್ಯಾಪ್ತಿಯೂ ಇಲ್ಲ, ನಿರ್ದೋಷವು ಆಗಮವೆಂದಲ್ಲಿ ಪ್ರತ್ಯಕ್ಷದಲ್ಲಿ ಅತಿವ್ಯಾಪ್ತಿಯು, ಪ್ರತ್ಯಕ್ಷವೂ ನಿರ್ದೋಷವಾಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು, ಶಬ್ದ ಎಂಬ ವಿಶೇಷಣ ಕೊಡಬೇಕು, ಪ್ರತ್ಯಕ್ಷದಲ್ಲಿ ನಿರ್ದೋಷತ್ವವಿದ್ದರೂ ಶಬ್ದತ್ವವಿಲ್ಲ ಕಾರಣ ಅತಿವ್ಯಾಪ್ತಿ ಇಲ್ಲ.

ಶಬ್ದನಿಷ್ಟ ದೋಷಗಳು:- ೧] ಬೋಧವಾಗದಿರುವದು ೨] ವಿಪರೀತ ಬೋಧವಾಗುವದು. ೩] ತಿಳಿಸಿದ್ದನ್ನೇ ತಿಳಿಸುವದು. ೪] ಪ್ರಯೋಜನವಿಲ್ಲದಿರುವದು. ೫] ಅಭಿಮತವಾಗದ ಪ್ರಯೋಜನವುಳ್ಳದ್ದು ೬]ಅಶಕ್ಯವಾದದ್ದನ್ನು ಸಾಧನ ಮಾಡಲು ಹೇಳುವದು.

इति परोक्तदृष्टांतदोषाणामंतर्भावकथनं तथा हेत्वाभासेभ्यः
उदाहरणाभासानां पृथक्त्वसमर्थनं च ।

इति हेत्वाभासप्रकरणम् ।

श्री १००८ परमपूज्यपाद श्रीसत्यध्यानतीर्थ-अंतेवासि हुल्गीत्युपाव्ह हुच्चाचार्यशिष्येण अग्निहोत्रीत्युपाव्ह भीमाचार्यसुतेन वादिराजेन विरचिते प्रमाणसंग्रहे, अनुमानपरिच्छेदः

समाप्तः



श्री वेदव्यासाय नमः
श्री लक्ष्मीनृसिंहाय नमः

## अथागमपरिच्छेदः

### १. आगमप्रकरणम्

अनुमाननिरूपणानंतरं आगमस्वरूपलक्षणादिकमुच्यते ।

(१) निर्दोषशब्दः आगमः, प्रमाप्रतिबंधकदोषरहितः शब्द, आगम इति यावत्, आगमाभासेऽतिव्याप्तिवारणाय निर्दोषेति, प्रत्यक्षादौ तद्वारणाय शब्देति, निर्दोषत्वस्य प्रत्यक्षे सत्त्वेऽपि तत्र शब्दत्वाभावान्नातिव्याप्तिः ।

शब्दनिष्टदोषास्तु - (१) अबोधकत्वं (२) विपरीतबोधकत्वं (३) ज्ञातज्ञापकत्वं (४) अप्रयोजनत्वं (५) अनभिमतप्रयोजनत्वं (६)अशक्यसाधनप्रतिपादनं (७)लघूपाये सति गुरूपायोपदेशनमिति ।

---

## ಅಥಆಗಮಪರಿಚ್ಛೇದವು

### ೧) ಆಗಮ ಪ್ರಕರಣವು

**ಆಗಮಸ್ವರೂಪ ಕಥನಪೂರ್ವಕ ಶಬ್ದನಿಷ್ಟದೋಷಗಳ ಕಥನವು**

ಅನುಮಾನ ಸ್ವರೂಪವನ್ನು ಹೇಳಿದ ನಂತರ ಆಗಮ ಸ್ವರೂಪ ಹಾಗೂ ಲಕ್ಷಣಾದಿಗಳನ್ನು ಹೇಳಲಾಗುತ್ತದೆ-

೧] ದೋಷರಹಿತವಾದ ಶಬ್ದವು, ಆಗಮವು. ಪ್ರಮಾಕ್ಕೆ [ಯಥಾರ್ಥಜ್ಞಾನಕ್ಕೆ] ಪ್ರತಿಬಂಧಕ ದೋಷರಹಿತವಾದ ಶಬ್ದವು ಆಗಮವು ಎಂದು ಅಭಿಪ್ರಾಯವು. ದಲಕೃತ್ಯ-ಶಬ್ದವು ಆಗಮವು, ಇಷ್ಟೇ ಲಕ್ಷಣ ಮಾಡಿದಲ್ಲಿ ಆಗಮಾಭಾಸದಲ್ಲಿ ಅತಿವ್ಯಾಪ್ತಿಯು. ಇದನ್ನು ಪರಿಹರಿಸಲು ನಿರ್ದೋಷವೆಂಬ ವಿಶೇಷಣ ಕೊಡಬೇಕು. ಆಗಮಾಭಾಸದಲ್ಲಿ ನಿರ್ದೋಷತ್ವ ಇಲ್ಲ ಕಾರಣ ಅತಿವ್ಯಾಪ್ತಿಯೂ ಇಲ್ಲ, ನಿರ್ದೋಷವು ಆಗಮವೆಂದಲ್ಲಿ ಪ್ರತ್ಯಕ್ಷದಲ್ಲಿ ಅತಿವ್ಯಾಪ್ತಿಯು, ಪ್ರತ್ಯಕ್ಷವೂ ನಿರ್ದೋಷವಾಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು, ಶಬ್ದ ಎಂಬ ವಿಶೇಷಣ ಕೊಡಬೇಕು, ಪ್ರತ್ಯಕ್ಷದಲ್ಲಿ ನಿರ್ದೋಷತ್ವವಿದ್ದರೂ ಶಬ್ದತ್ವವಿಲ್ಲ ಕಾರಣ ಅತಿವ್ಯಾಪ್ತಿ ಇಲ್ಲ.

ಶಬ್ದನಿಷ್ಠ ದೋಷಗಳು:- ೧] ಬೋಧವಾಗದಿರುವದು. ೨] ವಿಪರೀತ ಬೋಧವಾಗುವದು. ೩] ತಿಳಿಸಿದ್ದನ್ನೇ ತಿಳಿಸುವದು. ೪] ಪ್ರಯೋಜನವಿಲ್ಲದಿರುವದು. ೫] ಅಭಿಮತವಾಗದ ಪ್ರಯೋಜನವುಳ್ಳದ್ದು ೬]ಅಶಕ್ಯವಾದದ್ದನ್ನು ಸಾಧನ ಮಾಡಲು ಹೇಳುವದು.

(१) अत्राबोधकत्वं द्वेधा - १निरभिधेयत्वेन २ अन्वयाभावेन च, निरभिधेयत्वमित्यत्र- (निर्गतं अभिधेयं यस्य तस्य भावः) तथा च वाच्यरहितत्वमित्यर्थः यथा - शशविषाणमस्तीत्यादौ निरभिधेयत्वेनाबोधकत्वम् ।

गौरश्वः पुरुषो हस्ती कुंडमजाजिनं दशदाडिमानि इत्यादौ अन्वयाभावेनाबोधकत्वं ज्ञेयम् ।

(२) विपरीतबोधकत्वं - अविद्यमानार्थकत्वं, तद्यथा - विमतं मिथ्या दृश्यत्वादित्यादिप्रतिवादिवाक्ये द्रष्टव्यम् ।

(३) ज्ञातज्ञापकत्वं - येन योऽर्थः प्रत्यक्षादिना निर्णीतः, तं प्रति तद् बोधकत्वं, यथा - वन्हिः उष्णः, मधुरो गुड इत्यादि,

---

೭] ಲಘೂಪಾಯದಿಂದ ಸಾಧಿಸತಕ್ಕ ಕಾರ್ಯವನ್ನು ಕುರಿತು ಗುರು [ಬಹು] ಉಪಾಯ ಹೇಳುವದು.

೧] ಇಲ್ಲಿ ಬೋಧವಾಗದಿರುವದು ಎರಡು ಪ್ರಕಾರಃ- ೧] ಅಭಿಧೇಯವಿಲ್ಲದಿರುವದರಿಂದ, ೨] ಅನ್ವಯವು ಕೂಡದಿರುವದರಿಂದ [ಇವೆರಡು ದೋಷಗಳಿಂದ ವಾಕ್ಯವು ಅಬೋಧವಾಗುತ್ತದೆಂಬ ಭಾವ] ನಿರಭಿಧೇಯ ಎಂಬಲ್ಲಿ ವಿಗ್ರಹವು-ಯಾವದು ನಿರ್ಗತವಾದ ಅಭಿಧೇಯ ಉಳ್ಳದ್ದೋ ಅದು, ಅಂದರೆ ವಾಚ್ಯಾರ್ಥರಹಿತವಾದದ್ದು [ಅರ್ಥವಿಲ್ಲದ್ದು ] ಹೇಗೆಂದರೆ-ಶಶವಿಷಾಣವಿದೆ ಎಂಬ ವಾಕ್ಯವು ವಾಚ್ಯಾರ್ಥರಹಿತವಾದ್ದರಿಂದ ಅಬೋಧಕವಾಗುತ್ತದೆ.

೨] ಗೋವು, ಕುದುರೆ, ಆನೆ, ಕುಂಡವು, ಹತ್ತು ದಾಳಿಂಬರಿಹಣ್ಣು, ಈ ವಾಕ್ಯದಲ್ಲಿ ಅನ್ವಯವೇ ಕೂಡದಿರುವದರಿಂದ ಈ ವಾಕ್ಯವು ಅಬೋಧಕವಾಗುತ್ತದೆ.

೨] ವಿಪರೀತ ಬೋಧಕವು:- ವಸ್ತುವಿನಲ್ಲಿ ಇರದೇ ಇರತಕ್ಕ ಅಲ್ಲಿ ತೋರತಕ್ಕ ಧರ್ಮವನ್ನು ಹೇಳುವದು ಉದಾಹರಣೆಗೆ:- ಈ ಪ್ರಪಂಚವು, ಸುಳ್ಳು, ಕಾಣುವದರಿಂದ ಇತ್ಯಾದಿ ಪ್ರತಿವಾದಿಗಳ ವಾಕ್ಯದಲ್ಲಿ ಕಾಣಬಹುದು. [ಪ್ರಪಂಚವು ನಿಜವಾಗಿ ಸತ್ಯವು ಆದರೂ ಅಸತ್ಯವೆಂದು ಸಾಧಿಸಿದಲ್ಲಿ ಆವಾಕ್ಯವು ಅವಿದ್ಯಮಾನ ಅರ್ಥ ಹೇಳುವದರಿಂದ ವಿಪರೀತ ಬೋಧಕವು ]

೩] ಜ್ಞಾತಜ್ಞಾಪಕವು- ಯಾವನಿಗೆ ಪ್ರತ್ಯಕ್ಷ ಮೊದಲಾದವುಗಳಿಂದ ಯಾವ ಅರ್ಥವು ನಿಶ್ಚಿತವಾಗಿರುತ್ತದೆಯೋ ಅವನನ್ನು ಕುರಿತು ಆ ನಿಶ್ಚಿತವಾದ ಅರ್ಥ ತಿಳಿಸುವ ವಾಕ್ಯವು ಜ್ಞಾತಜ್ಞಾಪಕವು.ಉದಾಹರಣೆ:- ವಹ್ನಿಯು ಉಷ್ಣವು[ಬೆಂಕಿಯು ಸುಡತಕ್ಕದ್ದು]

न च बहुप्रमाणसंवादश्च दार्ढ्यहेतोरेवेत्युक्तत्वेन कथं ज्ञातज्ञापकत्वं दोष इति वाच्यं, पूर्वप्रमाणेनअप्रामाण्यशंकाकलंकितेन अर्थानि-र्णये, उत्तरोत्तरप्रवृत्तप्रमाणानां तन्निर्णायकत्वेन दार्ढ्यहेतुत्वस्य तदर्थत्वात्, अत्र च निर्णीतज्ञापकत्वमेव दोषत्वेन विवक्षितमिति । अस्योदाहरणं तु स्फीतालोकमध्यवर्तिसमनस्केंद्रियसन्निकृष्टघटप्रति-पादकं वाक्यं, तत्र ज्ञातज्ञापकत्वं दोषो भवत्येव ।

(४) अप्रयोजनत्वं -" काकस्य कति वा दंताः, मेषस्यांडं कियत्पलं, कंबले कति रोमाणि, का वार्ता चोलमंडले " इत्यादि ।

(५) अनभिमतप्रयोजनत्वं-यथा, विरक्तस्य वाणिज्योपदेशः ।

---

ಬೆಲ್ಲವು, ಸಿಹಿ, ಇವೆ ಮೊದಲಾದ ವಾಕ್ಯಗಳು. ಒಂದು ವಸ್ತುವಿನಲ್ಲಿ ಅನೇಕ ಪ್ರಮಾಣಗಳ ಸಂವಾದವಿದ್ದರೆ [ಅಂದರೆ ಒಂದೇ ವಸ್ತುವನ್ನು ಅನೇಕ ಪ್ರಮಾಣಗಳು ಬೋಧಿಸಿದಲ್ಲಿ] ಅವು ದಾರ್ಢ್ಯ ಹುಟ್ಟಿಸುವದರಿಂದ, ಜ್ಞಾತಜ್ಞಾಪಕವು ದೋಷ ಹೇಗೆ ಆಗುತ್ತದೆ? ಹೀಗೆ ಅನ್ನಕೂಡದು. ಅರ್ಥ ನಿಶ್ಚಯದಲ್ಲಿ ಪೂರ್ವ ಪ್ರಮಾಣವು ಅಪ್ರಾ-ಮಾಣ್ಯ ಶಂಕಾ ಕಲಂಕಿತವಾದಲ್ಲಿ, ಉತ್ತರೋತ್ತರ ಪ್ರವೃತ್ತ ಪ್ರಮಾಣಗಳು ಅರ್ಥ ನಿಶ್ಚಾಯಕವಾಗಿ ದಾರ್ಢ್ಯಕ್ಕೆ ಕಾರಣವಾಗುತ್ತವೆ. ಇಲ್ಲಿ ನಿಶ್ಚಿತವಾದ ಅರ್ಥವನ್ನು ಪುನಃ ತಿಳಿಸುವ ವಾಕ್ಯವೇ, ದೋಷಯುಕ್ತವಾಗುವದು ಎಂದು ವಿವಕ್ಷಾ ಇರುತ್ತದೆ. [ಅಂದರೆ ಪ್ರಮೇಯದ ಅರ್ಥ ದಾರ್ಢ್ಯಕ್ಕೆ ವಾಕ್ಯಗಳು ಕಾರಣವಾದಲ್ಲಿ ದೋಷಗಳು ಆಗುವದಿಲ್ಲ, ಈ ಅಭಿಪ್ರಾಯ ಇಲ್ಲದೇ ಹೋದರೆ, ತಿಳಿಸಿದ್ದನ್ನೇ ತಿಳಿಸುವದು ದೋಷವಾಗುತ್ತದೆ. ಎಂಬ ಭಾವ] ಇದಕ್ಕೆ ಉದಾಹರಣೆ: ಸ್ವಚ್ಛವಾದ ಬೆಳಕಿನ ಮಧ್ಯದಲ್ಲಿ ಇರತಕ್ಕ ಇಂದ್ರಿಯ ಸನ್ನಿಕೃಷ್ಟವಾದ ಘಟವನ್ನು ಪ್ರತಿಪಾದನ ಮಾಡತಕ್ಕ ವಾಕ್ಯವು ಜ್ಞಾತಜ್ಞಾಪಕವು [ಯಾಕೆಂದರೆ ಇದು ಘಟವು ಎಂದು ಪ್ರತ್ಯಕ್ಷದಿಂದ ಸಿದ್ಧವಾಗಿದೆ ಆದರೂ ಸಿದ್ಧವಾದ ಘಟವನ್ನೇ ಈ ವಾಕ್ಯವು ಬೋಧಿಸಿದಲ್ಲಿ, ವಾಕ್ಯವು ಜ್ಞಾತಜ್ಞಾಪಕವಾಗುತ್ತದೆಂಬ ಭಾವವು]

೪] ಪ್ರಯೋಜನರಹಿತವಾದುದು-'ಕಾಗೆಗೆ ಹಲ್ಲು ಎಷ್ಟು' ಮೇಷದ [ಕುರಿಯ] ಅಂಡ ಎಷ್ಟು ತೊಲೆ [ಭಾರವು], 'ಕಂಬಳಿಯಲ್ಲಿ ಎಷ್ಟು ಕೂದಲುಗಳು" 'ಚೋಳ ದೇಶದಲ್ಲಿ ಏನು ವಾರ್ತೆಯು' ಇವೇ ಮೊದಲಾದ ವಾಕ್ಯಗಳು ಪ್ರಯೋಜನ ಶೂ-ನ್ಯವಾದವುಗಳು. [ಇವುಗಳ ತಿಳುವಳಿಕೆಯಿಂದ ಯಾವ ಪ್ರಯೋಜನವೂ ಇಲ್ಲವೆಂಬ ಭಾವ]

೫] ಅನಭಿಮತ ಪ್ರಯೋಜನವುಳ್ಳದ್ದು-ವಿರಕ್ತನಿಗೆ ವ್ಯಾಪಾರದ ಉಪದೇಶವು.

(६) अशक्यसाधनप्रतिपादनं-यथा, मृतमुद्दिश्य हिमधरोत्तर-सानुसिद्धमृतिहरसंजीविनीकथनम् ।

७ लधूपाये सति गुरूपदेशनं-पिपासुं दाक्षिणात्यं प्रति गंगातीरे कूपखननोपदेश इत्यादि । एतादृशदोषरहितशब्द आगम इति ज्ञेयम् ।

॥ इति आगमस्वरूपकथनपूर्वकशब्दनिष्टदोषविभागनिरूपणम् ॥

(२) ननु शब्दः पदवाक्यात्मकः न तु वाक्यात्मक एव, सिद्धांते वैदिकानामपि पदानां महायोगवृत्त्या भगवति प्रामाण्यस्योक्तत्वात,

---

೬] ಅಶಕ್ಯಸಾಧನ-ಪ್ರತಿಪಾದನವು- ಯಥಾ, ಮರಣ ಹೊಂದಿದವನನ್ನು ಕುರಿತು ಹಿಮಾಚಲದ ಉತ್ತರ ಭಾಗದ ಬಂಡೆಯ ಮೇಲೆ ಇರುವ ಮರಣ ಪರಿಹಾರಕ ಸಂಜೀವಿನಿ ತರುವ ಬಗೆಯ ಉಪದೇಶವು.

೭] ಅಲ್ಪ ಉಪಾಯ ಸಾಧ್ಯವಿದ್ದರೂ ಗುರೂಪಾಯದ ಉಪದೇಶವು:-ನೀರಡಿಕೆಯಿಂದ ಬಳಲಿದ ದಕ್ಷಿಣ ದೇಶದವನನ್ನು ಕುರಿತು ಗಂಗಾತೀರದಲ್ಲಿ ಭಾವಿ ತೆಗೆದು ನೀರು ತೆಗೆದುಕೊ, ಎಂಬ ಉಪದೇಶವು. ಇವೇ ಮೊದಲಾದ ಉಪದೇಶಪರ ವಾಕ್ಯಗಳು ದೋಷಯುಕ್ತಗಳು. ಇಂಥ ದೋಷಗಳಿಂದ ರಹಿತವಾದ ಶಬ್ದವೇ ಆಗಮವು ಎಂದು ತಿಳಿಯಬೇಕು.

ಇತಿ ಆಗಮದ ಸ್ವರೂಪ ಕಥನಪೂರ್ವಕ ಶಬ್ದನಿಷ್ಟದೋಷಗಳ ಕಥನವು.

೨] ಬೃಹ್ಮತರ್ಕಾನುಸಾರ ಆಗಮದ ಲಕ್ಷಣಾಂತರದ ನಿರೂಪಣೆಯು:-

ಶಬ್ದವು, ಪದ ಮತ್ತು ವಾಕ್ಯಸ್ವರೂಪವು, ಕೇವಲ ವಾಕ್ಯಸ್ವರೂಪವಲ್ಲ. ಸಿದ್ಧಾಂತದಲ್ಲಿ ವೈದಿಕ ಪದಗಳಾದರೂ, ಮಹಾಯೋಗವೃತ್ತಿಯಿಂದ ಪರಮಾತ್ಮ ಸ್ವರೂಪ ಬೋಧಕಗಳಾಗುವದರಿಂದ, ಅವುಗಳಿಗೆ ಪ್ರಾಮಾಣ್ಯವು ಹೇಳಲ್ಪಟ್ಟಿದೆ. [ಕಾರಣ, ಶಬ್ದಗಳು ಕೇವಲ ವಾಕ್ಯಾತ್ಮಗಳು ಅಲ್ಲ. ಆದರೆ ಪದವಾಕ್ಯಸ್ವರೂಪಗಳು ಎಂದು ತಿಳಿಯಬೇಕು.

ಶಂಕಾ- ಯೌಗಿಕ ಪದಗಳು ಪ್ರಕೃತಿ ಪ್ರತ್ಯಯ ವಿಭಾಗದಿಂದ ಸಂಸರ್ಗ [ಸಂಬಂಧ] ಬೋಧಕವಾಗಿರುವದರಿಂದ ವಾಕ್ಯಸ್ವರೂಪಗಳೇ ಆಗುವವು. [ಉದಾಹರಣೆ- ಇಂದ್ರ ಎಂಬ ಪದವು, ಇಲ್ಲಿ ಇದಿ ಐಶ್ವರ್ಯ ಎಂದು ಧಾತ್ವರ್ಥ, ಇದಕ್ಕೆ ಪ್ರತ್ಯಯ ಸೇರಿಸಿದಲ್ಲಿ ಇಂದ್ರ ಎಂಬ ಪದವಾಗುವದು. ಆಗ್ಗೆ ಪ್ರಕೃತಿ ಪ್ರತ್ಯಯ ಸಂಬಂಧದಿಂದ ಐಶ್ವರ್ಯ ಉಳ್ಳವನು ಎಂದು ಈ ಪದದ ಅರ್ಥವಾಗುತ್ತದೆ. ಈ ಸಂದರ್ಭದಲ್ಲಿ ಇಂದ್ರ ಎಂಬ ಪದವು ವಾಕ್ಯಸ್ವರೂಪ ಆಗುವದೆಂಬ ಭಾವ]

न च यौगिकपदानामपि प्रकृतिप्रत्ययविभागेन च संसर्गबोधकतया वाक्यात्मकतैवेति वाच्यं, तथापि पदसमुदायरूपवाक्यात्मकत्वाभावात् केवलवाक्यात्मको न, तथा चात्र लक्षणे पदवाक्योभयविधोऽपि शब्दो लक्ष्यत्वेन विवक्षितः। इति **भावविवरणे** ।

पदसमुदायरूपवाक्यमात्रं लक्षीकृत्य प्रवृत्तं " आगमोऽदुष्टवाक्यं चेति " ब्रह्मतर्कवचनं, तदनुसारेण पदवाक्यादिस्वरूपज्ञापनाय, लक्षणांतरमुच्यते - " **निर्दोषवाक्यमागम** " इति । तथा च निर्दोषवाक्यत्वं वा आगमस्य लक्षणमित्युक्तं भवति ।

वाक्यघटकपदलक्षणं किमिति चेदुच्यते - विभक्त्यंता वर्णाः पदं, जातौ चेदं बहुवचनं

---

ಹೀಗೆ ಎಲ್ಲ ಶಬ್ದಗಳೂ [ಪದಗಳೂ] ವಾಕ್ಯಾತ್ಮಗಳೇ ಆಗುವವೆಂದು ಶಂಕಿಸಕೂಡದು. ಆದರೂ ಶಬ್ದಗಳಿಗೆ ಕೇವಲಪದ ಸಮುದಾಯರೂಪ ವಾಕ್ಯಾತ್ಮಕತ್ವ ಇಲ್ಲದಿರುವದರಿಂದ, ವಾಕ್ಯಸ್ವರೂಪಗಳಲ್ಲ [ಅಂದರೆ ಪ್ರಕೃತಿ ಪ್ರತ್ಯಯ ಸಂಬಂಧಬೋಧಕವಾಗಿ ವಾಕ್ಯಸ್ವರೂಪವಾದರೂ, ಪದಸಮುದಾಯರೂಪ ವಾಕ್ಯರೂಪಗಳಾಗುವದಿಲ್ಲ ಎಂಬ ಭಾವ]

ಆಗಮದ ಲಕ್ಷಣಾಂತರ- ಪದಗಳ ಸಮುದಾಯರೂಪ ವಾಕ್ಯವನ್ನು ಮಾತ್ರ ಲಕ್ಷ್ಯವನ್ನಾಗಿ ಇಟ್ಟುಕೊಂಡು 'ಅದುಷ್ಟ ವಾಕ್ಯವೂ ಸಹ ಆಗಮವಾಗುತ್ತದೆ" ಎಂಬ ಬ್ರಹ್ಮತರ್ಕ ವಚನವು ಪ್ರವೃತ್ತವಾಗಿದೆ. ಈ ಬ್ರಹ್ಮತರ್ಕ ವಚನಾನುಸಾರವಾಗಿ, ಪದ ಮತ್ತು ವಾಕ್ಯಗಳ ಸ್ವರೂಪ ತಿಳಿಯಲು ಲಕ್ಷಣಾಂತರ ಹೇಳಲಾಗುತ್ತದೆ. 'ನಿರ್ದೋಷವಾದ ವಾಕ್ಯವು ಆಗಮವು' ಎಂದು. ತಥಾಚ- ನಿರ್ದೋಷ ವಾಕ್ಯವು ಆಗಮವು ಎಂಬುದು ಆಗಮದ ಬೇರೆ ಲಕ್ಷಣವು, ಎಂದು ಹೇಳಿದಂತಾಯಿತು. [ವಿವರಣೆ- ಕೇವಲ ನಿರ್ದೋಷ ಶಬ್ದವೇ ಆಗಮವೆಂದು ಹೇಳಲು ಬರುವದಿಲ್ಲ, ಯಾಕೆಂದರೆ ಪದ ಸಮುದಾಯರೂಪ ವಾಕ್ಯವು ಸಂಗ್ರಹವಾಗುವದಿಲ್ಲ, ಕಾರಣ ಪದಸಮುದಾಯ ರೂಪ ವಾಕ್ಯವನ್ನು ಸಂಗ್ರಹ ಮಾಡುವದಕ್ಕಾಗಿ ಈ ಲಕ್ಷಣಾಂತರವು ಹೇಳಲ್ಪಟ್ಟಿದೆ ಎಂಬ ಭಾವವು]

ವಾಕ್ಯದಲ್ಲಿ ಘಟಕವಾದ [ಅಡಗಿದ] ಪದದ ಲಕ್ಷಣವೇನು ? ಅಂದರೆ —'ವಿಭಕ್ತಿಯೇ ಅಂತ್ಯವಾಗಿ ಉಳ್ಳ ವರ್ಣಗಳೇ ಪದಗಳು' ಇಲ್ಲಿ ವರ್ಣಾಃ] ವರ್ಣಗಳು ಎಂಬ ಬಹುವಚನವು ವರ್ಣಗಳ ಧರ್ಮ, ವರ್ಣತ್ವಜಾತಿಯನ್ನು ತೆಗೆದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಹೇಳಿದ್ದು

अतो न वर्णद्वयात्मकपदेऽव्याप्तिः, यद्वा **भावदीपे** वर्णा इति बहुवचनमतंत्रं (अविवक्षितं) तेन "अ इति ब्रह्म" "कः छंदसां योगमावेद धीरः" इत्यादौ अः क इत्यादेः पदत्वसिद्धिः । विभक्त्यंता इति व्यधिकरणबहुव्रीहिः, विभक्तिर्नाम सुप्तिङौ "सुप्तिङंतं पदमिति" **पाणिन्युक्तेः**, विभक्त्यंतत्वस्य वर्णाव्यभिचारेऽपि वर्णा इत्युक्तिः स्पष्टार्था ।

लक्षणे दलकृत्यं तु—जबगडदेत्यादिवर्णसमुदायेऽतिव्याप्तिवारणाय विभक्त्यंता इति

---

[ವಿಭಕ್ತಿಯೇ ಅಂತ್ಯವಾಗಿ ಉಳ್ಳ ವರ್ಣತ್ವವು ಎಂಬ ಅಭಿಪ್ರಾಯವು]. ಹೀಗೆ ವಿವಕ್ಷಾ ಮಾಡಿಕೊಳ್ಳುವದರಿಂದ, ಎರಡು ವರ್ಣಗಳುಳ್ಳ 'ರಾಮ' ಇತ್ಯಾದಿ ಪದದಲ್ಲಿ ಅವ್ಯಾಪ್ತಿ ಬರುವದಿಲ್ಲ ಯಾಕೆಂದರೆ ವಿಭಕ್ತಿಯೇ ಅಂತ್ಯವಾಗಿ ಉಳ್ಳವರ್ಣತ್ವವು ರಾಮ ಎಂಬ ಎರಡು ವರ್ಣಗಳಲ್ಲಿಯೂ ಇದೆ. [ವಿವರಣೆಃ 'ವಿಭಕ್ತಿಯೇ ಅಂತ್ಯವಾಗಿ ಉಳ್ಳ ವರ್ಣಗಳು' ಎಂದು ಬಹುವಚನವಿರುವದರಿಂದ, 'ರಾಮಃ' ಎಂಬ ಎರಡು ವರ್ಣಗಳಲ್ಲಿ ಬಹುವಚನ ಸಮಾವೇಶವಾಗದ್ದರಿಂದ ಅವ್ಯಾಪ್ತಿಗೆ ಅವಕಾಶವಿತ್ತು. ಜಾತಿ ವಿವಕ್ಷಾ ಮಾಡಿದಲ್ಲಿ ವರ್ಣತ್ವಜಾತಿಯು, ಎರಡು ವರ್ಣದಲ್ಲಿಯೂ ಇರುವದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲವೆಂಬ ಭಾವ]

ಅಥವಾ ಭಾವ ದೀಪದಲ್ಲಿ ಹೀಗೆ ಹೇಳಿದೆ– ವಿಭಕ್ತಿ ಅಂತ್ಯವರ್ಣಾಃ ಎಂಬಲ್ಲಿ ಬಹುವಚನವು ವಿವಕ್ಷಿತವಾಗಿಲ್ಲವೆಂದು ಹೇಳುವದರಿಂದ– 'ಅ' ಅಂದರೆ ಬ್ರಹ್ಮನು 'ಯಾವನು ವೇದಗಳ ಯೋಗಾರ್ಥವನ್ನು ತಿಳಿದವನು' ಇತ್ಯಾದಿಗಳಲ್ಲಿ 'ಅಃ' 'ಕಃ' ಎಂಬುದಕ್ಕೂ ಪದತ್ವವು ಸಿದ್ಧಿಸುತ್ತದೆ. [ವಿ– ಯಾಕೆಂದರೆ ವರ್ಣಗಳು ಎಂಬಲ್ಲಿ ಬಹುವಚನವೇ ಹೇಳಬೇಕೆಂಬ ಅಭಿಪ್ರಾಯವಿಲ್ಲ, ಕಾರಣ ಒಂದು ಅಕ್ಷರವೂ ಕೂಡ ಪದವಾಗುವದು]

ವಿಭಕ್ತ್ಯಂತ ಎಂಬಲ್ಲಿ, ವಿಭಕ್ತಿಯು ಅಂತ್ಯದಲ್ಲಿ ಯಾವುದಕ್ಕೆ ಇದೆಯೋ ಅದು ಎಂದು ವ್ಯಧಿಕರಣ ಬಹುವ್ರೀಹಿ ಸಮಾಸ ಮಾಡಬೇಕು. 'ವಿಭಕ್ತಿ' ಅಂದರೆ 'ಸುಪ್' 'ತಿಙ' ಇವೇ ಅಂತ್ಯವಾಗುಳ್ಳ ಪದಗಳು. 'ಸುಪ್' 'ತಿಙ' ಇವೇ ಅಂತ್ಯವಾಗಿ ಉಳ್ಳವುಗಳೇ ಪದಗಳು ಎಂಬ ಪಾಣಿನೀಯ ಸೂತ್ರವಿದೆ.

ವಿಭಕ್ತಿಯೇ ಅಂತ್ಯವಾದವುಗಳು. ವರ್ಣಗಳೇ ಆಗುತ್ತವೆ ಎಂಬುದು ನಿರವಕಾಶವಾಗಿದ್ದರೂ 'ವರ್ಣಗಳು' ಎಂದು ಹೇಳಿದ್ದು ಸ್ಪಷ್ಟವಾಗಿ ತಿಳಿಯುವದರ ಸಲುವಾಗಿ ಹೊರತು ಬೇರೆ ಅಭಿಪ್ರಾಯದಿಂದಲ್ಲ. ಲಕ್ಷಣದ ದಲಕೃತ್ಯವುಃ–

जबगडदवर्णानां विभक्त्यंतत्वाभावान्नातिव्याप्तिः, विभक्त्यंता इत्युक्ते, 'पर्वतो वन्हिमान्' इति विभक्त्यन्ते वाक्ये अतिव्याप्तिस्तद्वारणाय वर्णा इति, "पर्वतो वन्हिमान् इति वाक्ये" वर्णानां पदत्वेन प्रवेशेऽपि न वर्णत्वेन प्रवेशः, अतस्तेन तद्व्यावृत्तिरिति ध्येयं, तथा च विभक्त्यंतत्वे सत वर्णत्वं पदस्य लक्षणमित्युक्तं भवति ।

**इति ब्रह्मतर्कानुसारेणागमस्य लक्षणांतरनिरूपणम् ।**

३) वाक्यलक्षणं तु इत्थं-आकांक्षासन्निधियोग्यतावत्पदसमूहोवाक्यं ।

अत्र दलकृत्यं तु—गौरश्वः पुरुषोहस्तीत्यादिनिराकांक्षपदसमूह—व्यवच्छेदाय, आद्यं विशेषणं,

---

'ವರ್ಣಗಳು' ಪದದ ಲಕ್ಷಣವೆಂದಲ್ಲಿ ಜ,ಬ,ಗ,ಡ,ದ, ಇತ್ಯಾದಿ ವರ್ಣ ಸಮುದಾಯದಲ್ಲಿ ಅತಿವ್ಯಾಪ್ತಿಯು. ಅಲ್ಲಿ ಕೂಡ ವರ್ಣತ್ವವಿದೆ. ಇದನ್ನು ಪರಿಹರಿಸಲು ವಿಭಕ್ತಿಯೇ ಅಂತ್ಯವಾಗಿ ಉಳ್ಳ ವರ್ಣಗಳು ಎಂದು ವಿಶಕ್ಷಾ ಮಾಡಬೇಕು. ಜ,ಬ,ಗ,ಡ,ದ, ಇತ್ಯಾದಿಗಳಲ್ಲಿ ವರ್ಣತ್ವವಿದ್ದರೂ ವಿಭಕ್ತ್ಯಂತತ್ವವಿಲ್ಲದ ಕಾರಣ ಅತಿವ್ಯಾಪ್ತಿ ಬರುವದಿಲ್ಲ. 'ವಿಭಕ್ತಿ ಅಂತ್ಯವಾಗಿ ಉಳ್ಳದ್ದು ಪದವು ಹೀಗೆ ಲಕ್ಷಣ ಮಾಡಿದಲ್ಲಿ ಪರ್ವತವು, ವಹ್ನಿಯುಳ್ಳದ್ದು, ಎಂಬ ವಿಭಕ್ತಿಯೇ ಅಂತ್ಯವಾಗಿ ಉಳ್ಳ ವಾಕ್ಯದಲ್ಲಿ ಅತಿವ್ಯಾಪ್ತಿಯು. ಇದನ್ನು ಪರಿಹರಿಸಲು, 'ವರ್ಣಗಳು' ಎಂದು ಲಕ್ಷಣದಲ್ಲಿ ದಲ ಕೊಡಬೇಕು. ಪರ್ವತವು ವಹ್ನಿಯುಳ್ಳದ್ದು ಎಂಬ ವಾಕ್ಯದಲ್ಲಿ, ವರ್ಣಗಳು ಪದತ್ವರೂಪದಿಂದ ಪ್ರವಿಷ್ಟವಾದರೂ ವರ್ಣತ್ವರೂಪದಿಂದ ಪ್ರವಿಷ್ಟವಾಗಿಲ್ಲ, ಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ. ತಥಾಚ: ವಿಭಕ್ತಿಯೇ ಅಂತ್ಯವಾಗಿ ಉಳ್ಳದ್ದಾಗಿ ವರ್ಣವಾದದ್ದು ಪದವು ಎಂದು ಲಕ್ಷಣ ಹೇಳಿದಂತಾಯಿತು

**ಇತಿ ಬ್ರಹ್ಮತರ್ಕಾನುಸಾರವಾಗಿ ಆಗಮ ಲಕ್ಷಣಾಂತರದ ನಿರೂಪಣೆಯು.**

೩] **ವಾಕ್ಯಲಕ್ಷಣವು ಹಾಗೂ ಆಕಾಂಕ್ಷಾದಿ ಪದಾರ್ಥಸ್ವರೂಪ ನಿರೂಪಣೆಯು**

ವಾಕ್ಯದ ಲಕ್ಷಣವು:– ಆಕಾಂಕ್ಷೆ, ಸನ್ನಿಧಾನ, ಯೋಗ್ಯತಾಉಳ್ಳ ಪದ ಸಮೂಹವು ವಾಕ್ಯವು.

ಲಕ್ಷಣದ ದಲಕೃತ್ಯವು:- ಸನ್ನಿಧಿ, ಯೋಗ್ಯತಾವುಳ್ಳ ಪದ ಸಮೂಹವು ವಾಕ್ಯವೆಂದು ಲಕ್ಷಣ ಮಾಡಿದಲ್ಲಿ, ಗೋವು, ಅಶ್ವವು, ಪುರುಷನು, ಹಸ್ತಿ ಇತ್ಯಾದಿ ನಿರಾಕಾಂಕ್ಷೆಯಿಂದ ಕೂಡಿದ ಪದಗಳ ಸಮೂಹದಲ್ಲಿ ಅತಿವ್ಯಾಪ್ತಿಯು.

व्यवधानेनोच्चरितस्य देवदत्त, गामानय, इत्यादिपदसमूहस्य व्यवच्छेदाय, द्वितीयं विशेषणं, अग्निना सिंचेदित्यादिपदजातव्यावृत्त्यर्थं तृतीयं विशेषणं, इति ।

(१) आकांक्षा नाम-जिज्ञासा, सा चेतनधर्मः (श्रोतृधर्म इत्यर्थः) तथा च कथं पदानां साकांक्षता? इति चेदित्थं-पूर्वपदसंजातश्रोतृजिज्ञासाविषयपदार्थबोधकत्वात्, पदान्यपि साकांक्षाणि, तथा च पूर्वपदसंजातजिज्ञासाविषयपदार्थाः आकांक्षासंबंधिनः, संबंधः विषयविषयीभावः, तत्प्रतिपादकत्वात् पदानि साकांक्षाणि.

---

ಯಾಕೆಂದರೆ ಈ ವಾಕ್ಯವು ಸನ್ನಿಧಿ ಯೋಗ್ಯತಾಉಳ್ಳದ್ದಾಗಿದೆ. ಈ ಅತಿವ್ಯಾಪ್ತಿ ಪರಿಹರಿಸಲು ಆಕಾಂಕ್ಷಾ ಎಂಬಪದವನ್ನು ಸೇರಿಸಬೇಕು. ಉಕ್ತ ವಾಕ್ಯದಲ್ಲಿ ಪರಸ್ಪರ ಆಕಾಂಕ್ಷೆ ಇಲ್ಲದ್ದರಿಂದ ಅತಿವ್ಯಾಪ್ತಿ ಬರುವದಿಲ್ಲ. ಆಕಾಂಕ್ಷಾ ಯೋಗ್ಯತಾವುಳ್ಳ ಪದಸಮೂಹವು ವಾಕ್ಯವೆಂದು ಲಕ್ಷಣ ಮಾಡಿದರೆ, ವ್ಯವಧಾನದಿಂದ [ತಡವಾಗಿ] ಉಚ್ಚರಿತವಾದ ದೇವದತ್ತನೇ ಗೋವನ್ನು ತೆಗೆದುಕೊಂಡು ಬಾ, ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿಯು[ಈ ವಾಕ್ಯದಲ್ಲಿ ಆಕಾಂಕ್ಷೆ, ಯೋಗ್ಯತಾ ಅದೆ] ಇದನ್ನು ಪರಿಹರಿಸಲು 'ಸನ್ನಿಧಿ' ಎಂಬ ವಿಶೇಷಣ ಕೊಡಬೇಕು. ಉಕ್ತ ವಾಕ್ಯದಲ್ಲಿ ಸನ್ನಿಧಿಯಿಲ್ಲ. [ಅವಿಲಂಬದಿಂದ ಉಚ್ಚಾರಣೆ ಇಲ್ಲ] ಕಾರಣ ಅತಿವ್ಯಾಪ್ತಿಯೂ ಇಲ್ಲ. ಆಕಾಂಕ್ಷಾ ಸನ್ನಿಧಿಯುಳ್ಳ ಪದಸಮೂಹವುವಾಕ್ಯವೆಂದು ಹೇಳಿದರೆ[ಯೋಗ್ಯತಾ ಪದ ಬಿಟ್ಟರೆ] ಅಗ್ನಿಯಿಂದ ಸೇಚನ ಮಾಡಬೇಕು. [ಸಿಂಪಡಿಸಬೇಕು] ಎಂಬ ವಾಕ್ಯದಲ್ಲಿ ಅತಿವ್ಯಾಪ್ತಿಯು. ಈ ವಾಕ್ಯದಲ್ಲಿ ಆಕಾಂಕ್ಷಾ ಸನ್ನಿಧಿ ಉಂಟು. ಈ ಅತಿವ್ಯಾಪ್ತಿ ಪರಿಹರಿಸಲು ಯೋಗ್ಯತಾ ಎಂಬ ವಿಶೇಷಣ ಕೊಡಬೇಕು. ಉಕ್ತ ವಾಕ್ಯದಲ್ಲಿ ಆಕಾಂಕ್ಷಾ ಸನ್ನಿಧಿಯಿದ್ದರೂ ಯೋಗ್ಯತಾ [ಇಲ್ಲದಿರುವದರಿಂದ ಅತಿವ್ಯಾಪ್ತಿಯು ಇಲ್ಲ. ಹೀಗೆ ಉಕ್ತವಾಕ್ಯ ಲಕ್ಷಣದಲ್ಲಿ ಮೂರು ದಲಗಳ ಸಾರ್ಥಕತೆ ಇದೆ ಆಕಾಂಕ್ಷೆ ಎಂದರೆ ಜಿಜ್ಞಾಸೆಯು ಈ ಜಿಜ್ಞಾಸೆಯು [ತಿಳಿಯುವ ಇಚ್ಛಾ]ಚೇತನಧರ್ಮವು. ಅಂದ ಮೇಲೆ, ಮೇಲಿನ ಲಕ್ಷಣದಲ್ಲಿ ಆಕಾಂಕ್ಷೆಯು ಪದಗಳ ಧರ್ಮವು ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಹಾಗೂ ಪದಗಳು ಸಾಕಾಂಕ್ಷಿತಗಳು ಹೇಗೆ? ಅಂದಲ್ಲಿ ಇದಕ್ಕೆ ಸಮಾಧಾನವು- ಪೂರ್ವಪದಗಳಿಂದ ಹುಟ್ಟಿದ ಶ್ರೋತೃ ಪುರುಷನಜಿಜ್ಞಾಸೆ, ಈ ಜಿಜ್ಞಾಸಾಕ್ಕೆ ವಿಷಯಗಳಾಗಿ ಪದಾರ್ಥವನ್ನು ಬೋಧಿಸುವದರಿಂದ ಪದಗಳೂ ಸಾಕಾಂಕ್ಷಿತಗಳು (ಆಕಾಂಕ್ಷಾ ಉಳ್ಳವುಗಳು)

---

यथा -- गां आनय, इत्यादि पदेषु लक्षणसमन्वयः-पूर्वपदं, गां इत्याकारकपदं तत्पदसंजाता या श्रोतृजिज्ञासा प्रयोजकवृद्धेन गामित्यभिहिते किमानयेत्युच्यते पश्येति वा इति प्रयोज्यवृद्धस्य आनयनसंबंधिनी गवादिविषयकजिज्ञासा, जिज्ञासाविषयीभूतार्थः प्रयोज्यवृद्धश्रुतगवादिपादार्थः, तत्प्रतिपादकत्वं, गामानयेत्यादिपदेष्वस्तीति लक्षणसमन्वयः ।

(२) सन्निधिः—अविलंबेनोच्चरितत्वं, पदधर्म एव नत्वाकांक्षादिवदर्थद्वारा पदधर्मः, तथा च– "गामानय" ( "मृदब्रवीत्" "जलेन सिंचति" ) इत्यादौ गवादिपदानामविलंबेनोच्चारणविषयत्वस्य सत्त्वात् लक्षणसमन्वयः ।

---

ತಥಾಚಃ–ಪೂರ್ವಪದ ಸಂಜಾತ ಜಿಜ್ಞಾಸಾಕ್ಕೆ ವಿಷಯವಾದ ಪದಾರ್ಥಗಳು, ಆಕಾಂಕ್ಷಾಕ್ಕೆ ಸಂಬಂಧ ಉಳ್ಳವುಗಳು, (ಆಕಾಂಕ್ಷಾಕ್ಕೂ ಪದಗಳಿಗೂ ಸಂಬಂಧವು ವಿಷಯ-ವಿಷಯೀ ಭಾವವು) ಇಂಥ ಸಂಬಂಧವನ್ನು ಪದಗಳು ಪ್ರತಿಪಾದನೆ ಮಾಡುವದರಿಂದ ಪದಗಳೂ ಸಾಕಾಂಕ್ಷಿತಗಳು ಆಗಿವೆ. ಇದಕ್ಕೆ ದೃಷ್ಟಾಂತಃ– 'ಗೋವನ್ನು ತೆಗೆದುಕೊಂಡು ಬಾ' ಈ ಪದಗಳಲ್ಲಿ ಉಕ್ತ ಆಕಾಂಕ್ಷೆಯ ಲಕ್ಷಣ ಸಮನ್ವಯವಾಗುತ್ತದೆ. ಪೂರ್ವಪದವೆಂದರೆ, ಗೋವನ್ನು (ಗಾಂ) ಎಂಬ ಪದವು. ಈ ಪದದಿಂದ ಹುಟ್ಟಿದ ಶ್ರೋತೃ ಪುರುಷನ ಜಿಜ್ಞಾಸೆಯು, ಅಂದರೆ, ಪ್ರೇರಣೆ ಮಾಡತಕ್ಕ ಪುರುಷನು ಗೋವನ್ನು ಎಂದು ಹೇಳುತ್ತಿರಲು ಪ್ರೇರಣೆ ಹೊಂದಿದವನಿಗೆ, "ಆನಯ" (ತೆಗೆದುಕೊಂಡು ಬಾ) ಎಂದು ಹೇಳುತ್ತಾನೆಯೋ ಅಥವಾ, ನೋಡು ಎಂದು ಹೇಳುತ್ತಾನೆಯೋ ಎಂಬ ಆನಯನ ಸಂಬಂಧಿಯಾದ ಗೋ ವಿಷಯಕ ಜಿಜ್ಞಾಸೆಯು, ಈ ಜಿಜ್ಞಾಸಾ ವಿಷಯವಾದ ಅರ್ಥವು, ಪ್ರೇರಣೆ ಹೊಂದಿದ ಪುರುಷನಿಂದ ಶ್ರುತನಾದ ಅರ್ಥವು ಗೋವನ್ನು ( ಗಾಂ ) ಆನಯ ಎಂಬ ಪದದ ಅರ್ಥವು, ಈ ಅರ್ಥವನ್ನು ಪ್ರತಿಪಾದನೆ ಮಾಡುತ್ತದೆ. 'ಗಾಂ ಆನಯ' "ಗೋವನ್ನು ತೆಗೆದುಕೊಂಡು ಬಾ" ಎಂಬ ಪದಗಳು ಇವುಗಳಲ್ಲಿ ಉಕ್ತ ಲಕ್ಷಣ ಇರುವದರಿಂದ ಲಕ್ಷಣ ಸಮನ್ವಯವಾಗುತ್ತದೆ.

೨] ಸನ್ನಿಧಿ ಅಂದರೆ– ವಿಲಂಬವಿಲ್ಲದೇ ಉಚ್ಚರಿಸುವದು. ಇದು ಪದದ ಧರ್ಮವೇ ಹೊರತು ಆಕಾಂಕ್ಷಾದಂತೆ ಅರ್ಥದ್ವಾರಾ ಪದದ ಧರ್ಮವಲ್ಲ. ತಥಾಚ–'ಗೋವನ್ನು ತೆಗೆದುಕೊಂಡು ಬಾ' 'ಮಣ್ಣು ಮಾತಾಡಿತು' 'ಜಲದಿಂದ ಸೇಚನೆ ಮಾಡುತ್ತಾನೆ'ಇತ್ಯಾದಿ ಪದಗಳಲ್ಲಿ ವಿಲಂಬವಿಲ್ಲದೇ ಉಚ್ಚಾರಣೆ ಇರುವದರಿಂದ ಲಕ್ಷಣ ಸಮನ್ವಯವಾಗುತ್ತದೆ.

(३) योग्यतालक्षणमुच्यते–प्रतीतान्वयस्य प्रमाणविरोधाभाव योग्यता, पदार्थधर्मः, तद्वाचकत्वात् पदान्यपि योग्यतावंतीत्युच्यंते, तथा च प्रमाणाविरुद्धान्वयप्रतियोग्यर्थप्रतिपादकत्वं पदगतयोग्यता इत्युक्तं भवति, यथा–जलेन सिंचतीत्यत्र लक्षणसमन्वयः, तथाहि-प्रमाणाविरुद्धान्वयः जलसेचनयोः कार्यकारणभावसंसर्गान्वयः तस्य अबाधितत्वात् सेचनस्य जलेन सहान्वयो योग्यता, तत्प्रतियोग्यर्थः जलसेचनरुपक्रियार्थः तत्प्रतिपादकत्वात् तत्र पदगत योग्यताऽस्तीति लक्षणसमन्वयः । अत एवाग्निना सिंचतीति न वाक्यं, योग्यताविरहात्, तत्कथमिति चेत् नह्यग्निसेचनयोः परस्परान्वययोग्यताऽस्तीति ज्ञेयम् ।

**इति वाक्यलक्षणं तथा आकांक्षादिपदार्थस्वरूपनिरूपणं च**

---

३] ಯೋಗ್ಯತಾ ಲಕ್ಷಣವು:– ತೋರತಕ್ಕ ಸಂಬಂಧಕ್ಕೆ ಪ್ರಮಾಣ ವಿರೋಧದ ಅಭಾವವೇ ಯೋಗ್ಯತಾ. ಇದು ಪದಾರ್ಥಧರ್ಮವು, ಈ ಅರ್ಥವನ್ನು ಹೇಳುವ ಪದಗಳು ಯೋಗ್ಯತಾವುಳ್ಳವುಗಳು ಆಗುತ್ತವೆ. (ತಥಾಚ:– ಪದಗತ ಯೋಗ್ಯತೆ ಅಂದರೆ, ಪ್ರಮಾಣಗಳಿಗೆ ವಿರೋಧವಾಗದಿರುವ, ಸಂಬಂಧಕ್ಕೆ ಪ್ರತಿಯೋಗಿಯಾದ, ಅರ್ಥವನ್ನು ಪ್ರತಿಪಾದನೆ ಮಾಡುವುದೇ ಪದಗತ ಯೋಗ್ಯತೆಯು.

'ಜಲದಿಂದ ಸಿಂಪಡಿಸುತ್ತಾನೆ, ಎಂಬ ವಾಕ್ಯದಲ್ಲಿ ಲಕ್ಷಣ ಸಮನ್ವಯವಾಗುತ್ತದೆ. ಪ್ರಮಾಣ ಅವಿರುದ್ಧವಾದ ಸಂಬಂಧವೆಂದರೆ, ಜಲ ಮತ್ತು ಸೇಚನೆಗೆ ಕಾರ್ಯಕಾರಣ ಸಂಬಂಧವು. ಈ ಸಂಬಂಧವು ಅಬಾಧಿತವಾದ್ದರಿಂದಲೇ ಸೇಚನಕ್ಕೆ ಜಲದಿಂದ ಕೂಡಿದ ಸಂಬಂಧವೇ ಯೋಗ್ಯತೆಯು. ಈ ಸಂಬಂಧಕ್ಕೆ ಪ್ರತಿಯೋಗಿಯಾದ ಅರ್ಥವು, ಜಲ ಸೇಚನರೂಪ ಕ್ರಿಯಾರ್ಥವು. ಈ ಅರ್ಥವನ್ನು [ಸೇಚನ ಕ್ರಿಯಾರ್ಥವನ್ನು] ಪ್ರತಿಪಾದನೆ ಮಾಡುವದರಿಂದ ಜಲದಿಂದ ಸೇಚನೆ ಮಾಡಬೇಕು ಎಂಬ ಪದಗಳಲ್ಲಿ ಯೋಗ್ಯತಾ ಇದೆ. ಲಕ್ಷಣ ಸಮನ್ವಯವಾಗುತ್ತದೆ. ಈ ಕಾರಣದಿಂದಲೇ ಅಗ್ನಿಯಿಂದ ಸಿಂಪಡಿಸುತ್ತಾನೆ ಎಂಬ ಪದಗಳಲ್ಲಿ ಯೋಗ್ಯತಾ ಇಲ್ಲದಿರುವದರಿಂದ ಅದು ವಾಕ್ಯವಾಗಲಾರದು. ಹೇಗೆಂದರೆ ಅಗ್ನಿಗೂ ಸೇಚನರೂಪ ಕ್ರಿಯಾಕ್ಕೂ ಪರಸ್ಪರ ಸಂಬಂಧವು ಇಲ್ಲ [ಯೋಗ್ಯತಾ ಇಲ್ಲ] ಕಾರಣ ಅದು ವಾಕ್ಯವಾಗಲಾರದು.

ಇತಿ ವಾಕ್ಯಲಕ್ಷಣ ಹಾಗೂ ಆಕಾಂಕ್ಷ ಪದಾರ್ಥ ಸ್ವರೂಪ ನಿರೂಪಣೆ

---

(४) ननु क्रमविशेषविशिष्टवर्णसमूहस्य पदत्वं वाच्यं, न च नित्येषु व्याप्तेषु च वर्णेषु कालतः (सदातनत्वेन) देशतः (सर्वगतत्वेन)। वा स्वतः क्रमः संभवति, अतः प्रतीतिक्रमेणैव तेषु क्रमो वक्तव्यः। नचैवं समुदाये संभवति, प्रतीतिनामाशुतरविनाशित्वेन मेलनासंभवात्, अतो वर्णेषु पदत्वमेव ज्ञातुमशक्यं, कुतस्तद्घटितवाक्यत्वमिति चेदित्थं--

पूर्वपूर्ववर्णानुभवजनितसंस्कारसहितं वाच्यवाचकभावसंबंधग्रहणसंस्कारानुगृहीतं, अंत्यवर्णसन्निकृष्टं, श्रोत्रं, अनेकेष्वपि वर्णेषु एकां पदबुद्धिं जनयति,

---

೪) ಪದ ಮತ್ತು ವಾಕ್ಯಾರ್ಥಜ್ಞಾನಗಳ ಉತ್ಪತ್ತಿಕ್ರಮ ನಿರೂಪಣೆಯು-

ಶಂಕಾ- ಕ್ರಮ ವಿಶೇಷದಿಂದ ಕೂಡಿದ ವರ್ಣಗಳ ಸಮುದಾಯವೇ ಪದವೆಂದು ಹೇಳಬೇಕು. ನಿತ್ಯವಾದ ಹಾಗೂ ವ್ಯಾಪ್ತವಾದ ವರ್ಣಗಳಲ್ಲಿ ಕಾಲದಿಂದಾಗಲಿ [ಕಾಲವು ಸದಾತನವು] ಅಥವಾ ದೇಶದಿಂದಾಗಲಿ [ದೇಶವು ಎಲ್ಲ ಕಡೆ ಇರುತ್ತದೆ] ಸ್ವಾಭಾವಿಕ ಕ್ರಮವು ಕೂಡುವದಿಲ್ಲ [ವರ್ಣಗಳು ನಿತ್ಯವಾದ್ದರಿಂದ ಯಾವ ಕಾಲದಲ್ಲಿ ಆಗಲಿ ಅಥವಾ ದೇಶದಲ್ಲಿ ಆಗಲಿ ಅವುಗಳಿಗೆ ಕ್ರಮ ಇದೆ ಎಂದು ಹೇಳಲು ಬರುವದಿಲ್ಲ] ಆ ವರ್ಣಗಳ ಪ್ರತೀತಿ ಹೇಗೆ ಬರುತ್ತದೆಯೊ ಹಾಗೆಯೇ ಕ್ರಮ ಕೂಡ ಬರುತ್ತದೆ ಎಂದು ಹೇಳಬೇಕು. ಆದರೆ ವರ್ಣಗಳ ಸಮುದಾಯದಲ್ಲಿ ಪ್ರತೀತಿ ಕ್ರಮನೇ ಕೂಡುವುದಿಲ್ಲ. ಏಕೇದರೆ-ಪ್ರತೀತಿಗಳು ಬಂದ ಕೂಡಲೇ ನಾಶವಾಗುವ ಕಾರಣ [ವಿವರಣೆಃ-ಘಟವೆಂಬ ಪದದಲ್ಲಿ, 'ಘ' ವರ್ಣದಿಂದ ಬರುವ ಜ್ಞಾನವು 'ಟ' ವರ್ಣದಿಂದ ಬರುವ ಜ್ಞಾನ ಪೂರ್ವದಲ್ಲಿಯೇ ನಷ್ಟವಾಗುವದರಿಂದ ಎರಡು ವರ್ಣಗಳ ಕೂಡುವಿಕೆಯೇ ಆಗಲಾರದಕಾರಣ ಪದವು ಹೇಗೆ ಆದೀತು, ಆಗಲಾರದೆಂಬ ಭಾವ] ಸಮೂಹ ಆಗದಿದ್ದರೆ ಪದಗಳು ಆಗಲು ಶಕ್ಯವಿಲ್ಲ. ಪದಗಳೇ ಆಗದೇ ಹೋದರೆ ಪದಗಳಿಂದ ಕೂಡಿ ಆಗುವ ವಾಕ್ಯವಾದರೂ ಹೇಗೆ ಆಗಬೇಕು ಎಂದು ಶಂಕಿಸಿದಲ್ಲಿ- ಸಮಾಧಾನವುಃ- ಪೂರ್ವ ಪೂರ್ವ ವರ್ಣದ ಅನುಭವದಿಂದ ಹುಟ್ಟಿದ ಸಂಸ್ಕಾರದಿಂದ ಸಹಿತವಾದ ವಾಚ್ಯವಾಚಕ ಸಂಬಂಧ ಗೃಹಣದಿಂದ ಜನ್ಯವಾದ ಸಂಸ್ಕಾರದಿಂದ ಕೂಡಿದ ಅಂತ್ಯವರ್ಣದ ಸನ್ನಿಕರ್ಷವುಳ್ಳ, ಶ್ರವಣೇಂದ್ರಿಯವು ಅನೇಕಗಳಾದ ವರ್ಣಗಳಲ್ಲಿ, ಒಂದು ಪದವು ಎಂಬ ಜ್ಞಾನವನ್ನು ಹುಟ್ಟಿಸುತ್ತದೆ.

---

ननु सन्निकर्षाभावे कथं श्रोत्रं वर्णेषु पदबुद्धिं जनयेत् इति चेदत्रैवोक्तं अंत्यवर्णसन्निकृष्टमिति, नचांत्यवर्णश्रवणकाले श्रोत्रस्य अंत्यवर्णसंबंधमात्रसत्त्वेऽपि पूर्ववर्णसन्निकर्षाभावात् कथं पूर्वात्यवर्णेषु पदत्वबुद्धिः? अत्रोक्तं पूर्वपूर्ववर्णानुभवजनितसंस्कारसहितमिति, एवं च यथा पूर्वानुभवसंस्काररूपसहकारिसहकृतस्य चक्षुषः पूर्वोत्तरकालसंबधावगाहिप्रत्यभिज्ञाजनकत्वं, तथा इहापि पूर्वपूर्ववर्णानुभवजनितसंस्काररुपसहकारिसहितत्य श्रोत्रस्य अनेकेषु वर्णेषु एकपदत्वबुद्धिजनकत्वं युज्यते ।

श्रोत्रस्यानेकेषु वर्णेषु, एकं पदमिति प्रतीतिजनकत्वे 'मार' इत्यत्र राम इति प्रतीत्यापत्तिः, यतः 'मार' इत्यत्र यावंतो वर्णाः, तावंत एव राम इत्यत्रापि वर्तते,

---

ಶಂಕಾ:– ಸನ್ನಿಕರ್ಷವು ಆಗದಿದ್ದರೆ, ಶ್ರವಣೇಂದ್ರಿಯವು ವರ್ಣಗಳಲ್ಲಿ ಪದಬುದ್ಧಿಯನ್ನು ಹೇಗೆ ಹುಟ್ಟಿಸಿತು ? ಎಂಬ ಶಂಕೆ ಪರಿಹರಿಸಲು ಅಂತ್ಯವರ್ಣ ಸನ್ನಿಕರ್ಷವೆಂಬ ಪದವನ್ನು ಮೇಲಿನ ವಾಕ್ಯದಲ್ಲಿ ಸೇರಿಸಲಾಗಿದೆ. ಅಂತ್ಯವರ್ಣ ಶ್ರವಣ ಕಾಲದಲ್ಲಿ ಶ್ರೋತ್ರೇಂದ್ರಿಯಕ್ಕೆ ಅಂತ್ಯವರ್ಣದ ಸಂಬಂಧ ಮಾತ್ರ ಇದ್ದರೂ ಪೂರ್ವವರ್ಣ ಸನ್ನಿಕರ್ಷ ಇಲ್ಲದಿರುವ ಕಾರಣ ಪೂರ್ವ ಮತ್ತು ಅಂತ್ಯ ವರ್ಣಗಳಲ್ಲಿ ಪದತ್ವ ಬುದ್ಧಿಯು ಹೇಗೆ ಬರಬೇಕು ? ಎಂದು ಶಂಕಿಸಿದಲ್ಲಿ ಈ ಶಂಕೆ ಪರಿಹರಿಸಲು ಮೇಲಿನ ವಾಕ್ಯದಲ್ಲಿ ಪೂರ್ವಪೂರ್ವ ವರ್ಣಗಳ ಅನುಭವದಿಂದ ಹುಟ್ಟಿದ ಸಂಸ್ಕಾರ ಸಹಿತ, ಎಂಬ ವಿಶೇಷಣ ಕೊಟ್ಟಿದೆ, ಹೀಗೆ ವಿಶೇಷಣ ಕೊಡುವದರಿಂದ– ಪೂರ್ವಪೂರ್ವ ಅನುಭವಜನ್ಯ ಸಂಸ್ಕಾರ ರೂಪ ಸಹಕಾರಿ ಸಹಕೃತವಾದ ಚಕ್ಷುರಿಂದ್ರಿಯವು, ಪೂರ್ವೋತ್ತರ ಕಾಲಸಂಬಂಧವನ್ನು ಗ್ರಹಿಸತಕ್ಕ ಪ್ರತ್ಯಭಿಜ್ಞಾವನ್ನು ಹೇಗೆ ಹುಟ್ಟಿಸುತ್ತದೆಯೋ ಅದರಂತೆ ಇಲ್ಲಿ ಕೂಡ ಪೂರ್ವಪೂರ್ವ ವರ್ಣಗಳ ಅನುಭವದಿಂದ ಜನಿತವಾದ ಸಂಸ್ಕಾರರೂಪ ಸಹಕಾರಿ ಸಹಿತವಾದ ಶ್ರವಣೇಂದ್ರಿಯವು ಅನೇಕವಾದ ವರ್ಣಗಳಲ್ಲಿ ಒಂದು ಪದವು ಎಂಬ ಬುದ್ಧಿಯನ್ನು ಹುಟ್ಟಿಸುತ್ತದೆ, ಕಾರಣ ಪೂರ್ವಶಂಕೆಗೆ ಅವಕಾಶವಿಲ್ಲ.

ಶ್ರವಣೇಂದ್ರಿಯವು ಅನೇಕ ವರ್ಣಗಳಲ್ಲಿ, ಒಂದು ಪದವೆಂಬ ಬುದ್ಧಿಯನ್ನು ಹುಟ್ಟಿಸುತ್ತದೆ, ಹೀಗೆ ಹೇಳಿದಲ್ಲಿ–''ಮಾರ'' ಎಂಬಲ್ಲಿ 'ರಾಮ' ಎಂಬ ಪ್ರತೀತಿಯನ್ನು ಹುಟ್ಟಿಸಲಿ, ಯಾಕಂದರೆ 'ಮಾರ' ಎಂಬಲ್ಲಿ ಎಷ್ಟು ವರ್ಣಗಳು ಇವೆಯೋ ಅಷ್ಟೇ ವರ್ಣಗಳು 'ರಾಮ' ಎಂಬ ಪದದಲ್ಲಿ ಕೂಡ ಇವೆ.

इति शंकापरिहारार्थं अत्रैवोक्तं वाच्यवाचकसंबंधग्रहणसंस्कारानुगृहीतमिति, राम इतिश्रवणकाले वाच्यवाचकसंबंधग्रहणसंस्कारः आकारशिरस्करेफोपरिमकारविषयकसंस्कारः, तदनुगृहीतं, अंत्यवर्णसन्निकृष्ट मकारसन्निकृष्टं श्रोत्रं, र्, आ, म्, अ इति वर्णेषु, राम इति एकां पदबुद्धिं जनयति, न तु मारेति, मारेति श्रवणकाले तत्सदृशसंस्काराभावेन न रामेति पदप्रतीतिः, इति जनार्दनीये ।

तथा पूर्वपूर्वानुभवजनितसंस्कारसहकृतं अंत्यपदविषयं श्रोत्रं अनेकेषु पदेषु आकांक्षाद्यनुसारेण एकां वाक्यबुद्धिं जनयति । तथा च प्रत्येकं वर्णपदप्रतीतीनां उक्तरीत्या मेलनासंभवेऽपि प्रत्यभिज्ञास्थल इव अंत्यवर्णपदसंबद्धपूर्ववर्णपदसंस्कारसहकृतं सत् श्रोत्रं, तावद्वर्णपदविषयकमेकं समूहालंबनप्रत्यक्षरूपं ज्ञानं जनयति,

---

[ಹಾಗೂ ಆ ವರ್ಣಗಳಿಗೆ ಪೂರ್ವವರ್ಣ ಅನುಭವ ಜನ್ಯಸಂಸ್ಕಾರ ಸಹಕೃತತ್ವವೂ ಇದೆ] ಈ ಶಂಕಾಪರಿಹಾರಮಾಡಲು, ಇದೇ ವಾಕ್ಯದಲ್ಲಿ,ವಾಚ್ಯವಾಚಕ ಸಂಬಂಧಗ್ರಹಣ ಸಂಸ್ಕಾರ ಅನುಗ್ರಹಿತವಾದ ಶ್ರೋತ್ರೇಂದ್ರಿಯವೆಂದು ಹೇಳಿದೆ. 'ರಾಮ' ಎಂಬ ಪದ ಶ್ರವಣಕಾಲದಲ್ಲಿ ವಾಚ್ಯವಾಚಕ ಸಂಬಂಧಗ್ರಹಣ ಸಂಸ್ಕಾರವೆಂದರೆ, 'ಆ' ಕಾರದಿಂದ ಕೂಡಿದ 'ರ್' ಕಾರದ ಮುಂದೆ ಒರುವ ಮ ಕಾರ ವಿಷಯಕ ಅರ್ಥಸಂಸ್ಕಾರವು, ಈ ಸಂಸ್ಕಾರದಿಂದ ಅನುಗ್ರಹಿತವಾದ ಅಂತ್ಯವರ್ಣ "ಮ" ಕಾರ ಸನ್ನಿಕೃಷ್ಟವಾದ ಶ್ರೋತ್ರವು ರ್+ಆ+ಮ್+ಅ, ಎಂಬ ವರ್ಣಗಳಲ್ಲಿ ರಾಮ ಎಂಬ ಪದ ಬುದ್ಧಿಯನ್ನು ಹುಟ್ಟಿಸುಸುತ್ತದೆ, ಹೊರತು 'ಮಾರ' ಎಂಬ ಪದಬುದ್ಧಿಯನ್ನು ಹುಟ್ಟಿಸುವದಿಲ್ಲ. ಹಾಗೂ 'ಮಾರ' ಎಂಬ ಪದಶ್ರವಣ ಕಾಲದಲ್ಲಿ [ರಾಮ ಎಂಬ ಪದಶ್ರವಣದ] ಸಂಸ್ಕಾರ ಇಲ್ಲದ್ದರಿಂದ 'ರಾಮ' ಪದಪ್ರತೀತಿ ಬರುವುದಿಲ್ಲ. ಹೀಗೆ ಜನಾರ್ಧನ ಭಟ್ಟೀಯದಲ್ಲಿ ಹೇಳಿದೆ

ಇದರಂತೆ ಪೂರ್ವಪೂರ್ವ ಪದಗಳ ಅನುಭವದಿಂದ ಹುಟ್ಟಿದ ಸಂಸ್ಕಾರ ಸಹಕಾರಿಯಾದ, ಅಂತ್ಯಪದ ಗ್ರಹಿಸಿದ ಶ್ರವಣೇಂದ್ರಿಯವು, ಅನೇಕ ಪದಗಳಲ್ಲಿ ಆಕಾಂಕ್ಷಾದಿಗಳ ಅನುಸಾರವಾಗಿ ಒಂದು ವಾಕ್ಯ ಎಂಬ ಬುದ್ಧಿಯನ್ನು ಹುಟ್ಟಿಸುತ್ತದೆ.

ತಥಾಚ– ಪ್ರತ್ಯೇಕವಾಗಿ ವರ್ಣ ಮತ್ತು ಪದಗಳ ಪ್ರತೀತಿಗೆ ಪೂರ್ವದಲ್ಲಿ ಹೇಳಿದಂತೆ ಮೇಲನ ಕೂಡದಿದ್ದರೂ ಪ್ರತ್ಯಭಿಜ್ಞೆಯಂತೆ ಅಂತ್ಯವರ್ಣ ಮತ್ತು ಪದ ಸಂಬದ್ಧವಾಗಿ, ಹಾಗೂ ಪೂರ್ವಪೂರ್ವ ವರ್ಣ ಪದಸಂಸ್ಕಾರ ಸಹಿತವಾಗಿ,

एवं च एकज्ञानविषयत्वेन तेषु समुदायो युज्यत इति बोध्यं ।

ननु अश्रुतपदार्थसंगतिकस्य, अननुसंहितोपक्रमादिन्यायस्य च पुरुषस्य, वाक्यार्थप्रमित्यनुदयात् अनुप्रमाणलक्षणस्य, यथार्थ-ज्ञानसाधनत्वस्य वाक्ये शब्दे चाभावादव्याप्तिरिति चेदुच्यते ।

आगमोऽपि वाच्यवाचकभावस्मरणसहकृतोपक्रमादिन्यायानुसंहित एव स्वार्थबोधकः, न तु सत्तामात्रेण, तथा च-वाच्यवाचकभा-वस्मरणसहकृतोपक्रमादिन्यायानुसंहितस्यैव शब्दस्य (आगमस्य) लक्ष्यत्वात् तस्य च वाक्यार्थप्रमितिसाधनत्वान्नाव्याप्तिरिति, अत्र वाक्यं करणं, पदार्थस्मृतिरावांतरव्यापारो, वाक्यार्थज्ञानं फलं, इति ध्येयम् ।

॥ इति पदवाक्यार्थज्ञानोत्पत्तिक्रमव्युत्पादनम् ॥

॥ इति आगमविमर्शप्रकरणम् ॥

---

ಶ್ರೋತ್ರೇಂದ್ರಿಯವು ಎಲ್ಲ ವರ್ಣ ಹಾಗೂ ಪದಗಳ, ಸಮೂಹಾಲಂಬನಾತ್ಮಕ ಪ್ರತ್ಯಕ್ಷರೂಪ ಜ್ಞಾನವನ್ನು ಹುಟ್ಟಿಸುತ್ತದೆ. ಈ ರೀತಿಯಿಂದ ಒಂದೇ ಜ್ಞಾನಕ್ಕೆ ವರ್ಣಗಳು ಹಾಗೂ ಪದಗಳು ವಿಷಯಗಳಾಗುವದರಿಂದ ಪದ ವರ್ಣಗಳಲ್ಲಿ, ಸಮುದಾಯವು ಕೂಡುತ್ತದೆ.

ಆಗಮವು ಕೂಡ, ವಾಚ್ಯವಾಚಕಭಾವ ಸ್ಮರಣದಿಂದ ಸಹಕೃತವಾಗಿ ಉಪಕ್ರಮಾದಿ ನ್ಯಾಯಾನುಸಹಿತವಾಗಿಯೇ, ಸ್ವಾರ್ಥಬೋಧಕವಾಗುತ್ತದೆ. ಕೇವಲ [ಆಗಮವು] ತಾನು ಇರುವಿಕೆಯ ಮಾತ್ರದಿಂದ ಅರ್ಥ ಬೋಧಿಸಲಾರದು.

ತಥಾಚ:-ವಾಚ್ಯವಾಚಕ ಭಾವಸ್ಮರಣದಿಂದ ಸಹಕೃತವಾದ, ಉಪಕ್ರಮಾದಿ ನ್ಯಾಯಾನುಸಾರ-ನಾಗಿ ಇರುವ ಆಗಮವೇ ಈ ಲಕ್ಷಣಕ್ಕೆ ಲಕ್ಷ್ಯವು. ಈ ಆಗಮದಲ್ಲಿ ವಾಕ್ಯಾರ್ಥ ಪ್ರಮಿತಿ ಸಾಧನತ್ವರೂಪ ಲಕ್ಷಣವು ಬರುವುದರಿಂದ ಅವ್ಯಾಪ್ತಿದೋಷ ಬರುವುದಿಲ್ಲ [ವಿ. ವಾಕ್ಯಾರ್ಥ ಪ್ರಮಿತಿ ಸಾಧನವಾದದ್ದು ಆಗಮವು ಕೇವಲ ಶಬ್ದಗಳು ಹಾಗೂ ವಾಕ್ಯಗಳು ತಾವು ಇರುವ ಮಾತ್ರಕ್ಕೆ ಜ್ಞಾನ ಹುಟ್ಟಿಸಲಾರವು. ಆದರೂ ವಾಚ್ಯವಾಚಕ ಭಾವ ಸ್ಮರಣ ಸಹಕೃತ ಉಪಕ್ರಮ ನ್ಯಾಯಾನುಸಹಿತವಾಗಿಯೇ ಪ್ರಮಿತಿಗೆ ಸಾಧನವಾಗುವದು. ಹೀಗೆ ಪ್ರಮಿತಿ ಸಾಧನತ್ವ ಅವುಗಳಲ್ಲಿ ಬರುವುದರಿಂದ ಲಕ್ಷಣ ಸಮನ್ವಯವಾಗುತ್ತದೆ ಕಾರಣ ಉಕ್ತಲಕ್ಷಣಕ್ಕೆ ಅವ್ಯಾಪ್ತಿದೋಷ ಇಲ್ಲವೆಂದು ಭಾವವು] ಇಲ್ಲಿ ವಾಕ್ಯವು ಕರಣವು, ಪದಾರ್ಥ ಸ್ಮರಣೆಯು [ಅಥವಾ ಪದಶಕ್ತಿಜ್ಞಾನವು] ಅವಾಂತರ ವ್ಯಾಪಾರವು,

## अथ शक्तिग्रहप्रकरणम्

ननु पूर्वं योग्यता पदार्थधर्म इत्युक्तः, प्रकृते पदार्थस्वरूपं स्वसिद्धांतरीत्या निरूपयितुं पराभिमतान् वादाननूद्य, निराक्रियते

(१) भाट्टाः—पदानां वाच्या जातिरेव, व्यक्तयस्तु लक्ष्या इति, जातेरेकत्वादुपदेशादिना तत्र शक्तिग्रह उपपद्यते, व्यक्तीनामनंतत्वेन प्रतिव्यक्तिग्रहासंभवात् जातिरेव वाच्या, तस्याश्चानयनाद्यनुपपत्त्या तदाश्रयीभूता व्यक्तिर्लक्ष्यत इति वदन्ति ।

---

ವಾಕ್ಯಾರ್ಥಜ್ಞಾನವೇ ಫಲವು, ಹೀಗೆ ತಿಳಿಯಬೇಕು.

**ಇತಿ ವಾಕ್ಯಾರ್ಥಜ್ಞಾನ ಉತ್ಪತ್ತಿಯ ಕ್ರಮದ ನಿರೂಪಣೆ**

**ಅಥಶಕ್ತಿಗ್ರಹ ಪ್ರಕರಣವು**

**೧]ಶಕ್ತಿಗ್ರಹಣ ವಿಷಯದಲ್ಲಿ ಭಾಟ್ಟಮತದ ನಿರೂಪಣೆ ಹಾಗೂ ಅದರ ಖಂಡನೆ.**

ಯೋಗ್ಯತೆಯು ಪದಾರ್ಥ ಧರ್ಮವು ಎಂದು ಹೇಳಿದ್ದಾಯಿತು, ಪ್ರಕೃತ ಪದಾರ್ಥ ಸ್ವರೂಪವು ಸಿದ್ಧಾಂತ ರೀತಿಯಿಂದ ಹೇಳುವುದರ ಸಲುವಾಗಿ, ಪರಾಭಿಮತ, ವಾದ-ಗಳನ್ನು ಅನುವಾದ ಮಾಡಿ ನಿರಾಕರಿಸಲಾಗುತ್ತದೆ.

i] ಭಾಟ್ಟರ ಮತವು– ಪದಗಳಿಗೆ ವಾಚ್ಯಾರ್ಥ ಜಾತಿಯು, ವ್ಯಕ್ತಿಯು ಲಕ್ಷ್ಯವು, [ಘಟದಲ್ಲಿ, ಘಟತ್ವ ಜಾತಿಯು ವಾಚ್ಯಾರ್ಥವು, ವ್ಯಕ್ತಿಯಾದ ಘಟವು ಲಕ್ಷ್ಯವು]ಜಾತಿಯು ಒಂದಾದ ಕಾರಣ, ಉಪದೇಶದಿಂದ ಜಾತಿಯಲ್ಲಿ ಶಕ್ತಿಜ್ಞಾನವು ಕೂಡುತ್ತದೆ. ವ್ಯಕ್ತಿಗಳು ಅನಂತಗಳಾದ ಪ್ರಯುಕ್ತ ಪ್ರತಿವ್ಯಕ್ತಿಯಲ್ಲಿ ಶಕ್ತಿಗ್ರಹ ಆಗುವದು ಸಾಧ್ಯವಿಲ್ಲ. ಆದುದರಿಂದ ಜಾತಿಯಲ್ಲಿಯೇ ಶಕ್ತಿಯನ್ನು ಹೇಳಬೇಕು ಇದೇ ವಾಚ್ಯವು. ಆ ಜಾತಿಗೆ ಆನಯನಾದಿ ಕೂಡುವದಿಲ್ಲ ಕಾರಣ ಜಾತಿಗೆ ಆಶ್ರಯವಾದ ವ್ಯಕ್ತಿಯು ಲಕ್ಷಣಾವೃತ್ತಿಯಿಂದ ಬೋಧ್ಯವೆಂದು ಭಾಟ್ಟರು ಹೇಳುತ್ತಾರೆ. [ವಿ ಗೋವಿನಲ್ಲಿ ಗೋತ್ವಜಾತಿ ಇದೆ, ಈ ಗೋತ್ವ ಜಾತಿಯಲ್ಲಿಯೇ ಗೋ ಪದದ ಶಕ್ತಿಯೂ ಇದೆ ಎಂಬ ಉಪದೇಶದಿಂದ ಗೋತ್ವದಲ್ಲಿ ಶಕ್ತಿಜ್ಞಾನವು ಆಗುತ್ತದೆ ಜಾತಿಯು ಅನೇಕಗಳಲ್ಲ, ಕಿಂತು ಎಲ್ಲ ಗೋ ಗಳಲ್ಲಿ ಗೋತ್ವವೆಂಬ ಒಂದೇ ಜಾತಿ ಇರುತ್ತದೆ. ಈ ಗೋತ್ವದಲ್ಲಿ ಶಕ್ತಿಜ್ಞಾನವಾದಲ್ಲಿ, ಗೋತ್ವ ಜಾತಿಯಿಂದ ಕೂಡಿದ ಎಲ್ಲ ಗೋವ್ಯಕ್ತಿಗಳ ಜ್ಞಾನವು ಸುಲಭವಾಗಿ ಆಗುತ್ತದೆ. ಆದರೆ ಪ್ರತಿವ್ಯಕ್ತಿಗಳಲ್ಲಿ ಶಕ್ತಿ ಇದೆ ಅಂತ ಹೇಳಿದಲ್ಲಿ, ಪ್ರತಿಯೊಂದು ವ್ಯಕ್ತಿಯು ಉಪದೇಶ ಮಾಡಲು ಸಾಧ್ಯವಾಗುವದಿಲ್ಲ. ವ್ಯಕ್ತಿಗಳು ಅನಂತ ಇರುತ್ತವೆ. ಈ ಕಾರಣದಿಂದ ಜಾತಿಯಲ್ಲಿ ಶಕ್ತಿಗ್ರಹವಾಗುತ್ತದೆ, ಎಂದು

तन्नोपपद्यते–अत्र शक्तिग्राहकवृद्धव्यवहारादेर्व्यक्तावेवोपलंभनेन तत्रैव शक्तिग्राहकत्वकल्पना युक्ता न जातौ, तत्रकदापि वृद्धव्यवहाराद्यदर्शनात्, अनुगतजात्यनुपपत्तेर्वक्ष्यमाणत्वात्, तथा गामानयेत्यादौ मुख्यार्थानुपपत्त्यभावेन लक्षणायामपि व्यक्तिलाभासभवाच्च । किं च यस्यां व्यक्तौ गौः शुक्ला, गौर्दीर्घा, गौः सास्नादिमती, गौर्गच्छति, गां बधानेत्यादौ, प्रयोगप्रतीत्योः प्राचुर्यं अस्ति तस्यां व्यक्तौ लक्षणा तद्विपरीतायां जातौ शक्तिरिति कथनं अतिसाहसमित्यादि तर्कतांडवेऽप्युक्तं तत्रैव द्रष्टव्यम् ।

॥ इति **शक्तिग्रहविषये भाट्टमतनिरूपणं तत्खंडनं च** ॥

---

ಭಾಟ್ಟರು ಹೇಳುತ್ತಾರೆ ಎಂಬ ಭಾವವು]

ಹೀಗೆ ಭಾಟ್ಟರು ಹೇಳುವದು ಸರಿಯಲ್ಲ:-ಜ್ಞಾನಿಗಳ ವ್ಯವಹಾರ ಬಲದಿಂದ ಶಕ್ತಿಗ್ರಹವು (ಜ್ಞಾನವು) ವ್ಯಕ್ತಿಯಲ್ಲಿಯೇ ಕಂಡಿದೆ, ಕಾರಣ ವ್ಯಕ್ತಿಯಲ್ಲಿಯೇ ಶಕ್ತಿಗ್ರಹವು ಯುಕ್ತವು. ಜಾತಿಯಲ್ಲಿ ಹೇಳುವುದು ಸರಿಯಲ್ಲ. ಜಾತಿಯಲ್ಲಿ ವೃದ್ಧ ವ್ಯವಹಾರವೂ ಕಂಡಿಲ್ಲ. ಹಾಗೂ ಸಕಲ ವ್ಯಕ್ತಿಗಳಲ್ಲಿ ಒಂದೇ ಜಾತಿ ಇಲ್ಲವೆಂಬುದನ್ನು ಮುಂದೆ ಹೇಳುತ್ತೇವೆ. ಗೋವನ್ನು ತೆಗೆದುಕೊಂಡು ಬಾ (ಗಾಂ ಆನಯ) ಎಂಬ ವ್ಯವಹಾರದಲ್ಲಿ ಗೋರೂಪ ಮುಖ್ಯಾರ್ಥ ತೆಗೆದುಕೊಂಡಲ್ಲಿ ಯಾವ ವಿಧ ಅನುಪಪತ್ತಿಯೂ [ಯುಕ್ತಿವಿರೋಧ] ವಿಲ್ಲ. ಇಂದ ಮೇಲೆ ಗೋತ್ವಜಾತಿಯಲ್ಲಿ ಶಕ್ತಿಯು, ಹಾಗೂ ಲಕ್ಷಣಾವೃತ್ತಿಯಿಂದ ವ್ಯಕ್ತಿಯ ಗ್ರಹಣ ಮಾಡಬೇಕೆಂಬುದು ಸರಿಯಲ್ಲ [ಮುಖ್ಯಾರ್ಥ, ಕೊಡದೇ ಹೋದರೆ ಲಕ್ಷಣಾ ಮಾಡಬೇಕು ಪ್ರಕೃತ ಮುಖ್ಯಾರ್ಥವೇ ಕೂಡುವದರಿಂದ ಲಕ್ಷಣಾ ಮಾಡುವ ಪ್ರಯೋಜನವಿಲ್ಲ] ಮತ್ತು ಗೋರೂಪ ವ್ಯಕ್ತಿಯಲ್ಲಿಯೇ 'ಗೋವು ಶುಕ್ಲವು" 'ಗೋವು ದೀರ್ಘವು' 'ಗೋವು ಗಂಗೆದೊಗಲುಳ್ಳದ್ದು' 'ಗೋವು ಹೋಗುತ್ತದೆ' 'ಗೋವನ್ನು ಕಟ್ಟು' ಇತ್ಯಾದಿ ಪ್ರಯೋಗಗಳು ಹಾಗೂ ಪ್ರತೀತಿಯೂ ಇರುತ್ತದೆ. ಇಂಥ ಗೋವ್ಯಕ್ತಿಯಲ್ಲಿ ಲಕ್ಷಣ ಹಾಗೂ ಯಾವ ಜಾತಿಯಲ್ಲಿ ಮೇಲಿನ ವ್ಯವಹಾರ-ಇಲ್ಲವೋ ಅಲ್ಲಿ [ಜಾತಿಯಲ್ಲಿ] ಶಕ್ತಿಯು ಎಂದು ಹೇಳುವದು. ಅತಿಸಹಾಸವೇ ಸರಿ ಇತ್ಯಾದಿ ವಿಷಯವು ತರ್ಕತಾಂಡವದಲ್ಲಿ ಇದೆ. ಅಲ್ಲಿಯೇ ನೋಡಬೇಕು.

ಇತಿ ಶಕ್ತಿಗ್ರಹಣ ವಿಷಯದಲ್ಲಿ ಭಾಟ್ಟಮತದ ನಿರೂಪಣೆ ಹಾಗೂ ಅವರ ಖಂಡನೆಯು–

---

२. **वैशेषिकास्तु** – जातिविशिष्टव्यक्तयो वाच्या इति केवलव्यक्तीनामनंतत्वेन तास्वेकस्य पदस्य शक्तिग्रहासंभवेऽपि जातिविशिष्टासु तासु एकपदशक्तिग्रहः संभवतीति वदन्ति । अत्रेदं दूषणं - किं जातिविशिष्टं एकमेव शक्यं, प्रवृत्तिनिमित्तं तु विशिष्टत्वमिति, किं वा व्यक्तिरेव शक्या, जातिस्तु प्रवृत्तिनिमित्तमिति प्रष्टव्यं ।

(१) तत्राद्ये विशिष्टस्याप्यानंत्येन विशिष्टत्वस्याजातित्वेन अनुगतत्वासंभवः तथा - शब्दव्यक्तिविशेष्यकजातिप्रकारकबोधस्यैवानुभवेन तदनंगीकारे विशिष्टविशेष्यकविशिष्टत्वप्रकारकबोधापत्तिश्चस्यात् ।

---

೨] ಶಕ್ತಿಗ್ರಹಣ ವಿಷಯದಲ್ಲಿ ವೈಶೇಷಿಕರ ಮತ ಹಾಗೂ **ಅದರಖಂಡನೆಯು**–

ವೈಶೇಷಿಕರುಃ– ಪದಕ್ಕೆ ಜಾತಿ ವಿಶಿಷ್ಟವಾದ ವ್ಯಕ್ತಿಯಲ್ಲಿ **ಶಕ್ತಿಯು** ಇದೆ, ಎಂದು ಹೇಳುತ್ತಾರೆ. ಯಾಕೆಂದರೆ ವ್ಯಕ್ತಿಗಳು ಅನಂತ ಇದ್ದ ಕಾರಣ **ಅವುಗಳಲ್ಲಿ ಒಂದೇ** ಪದಕ್ಕೆ ಶಕ್ತಿಗ್ರಹವಾಗದಿದ್ದರೂ ಜಾತಿವಿಶಿಷ್ಟವಾದ ವ್ಯಕ್ತಿಯಲ್ಲಿ. ಶಕ್ತಿಗ್ರಹಣವು ಆಗುತ್ತದೆ.

ಹೀಗೆ ವೈಶೇಷಿಕರು ಹೇಳುವುದು ಸರಿಯಲ್ಲ. ಜಾತಿಯಿಂದ **ಕೂಡಿದ ಒಂದೇ** ವ್ಯಕ್ತಿಯು ಶಕ್ಯವೋ,[ಶಕ್ತಿವಿಶಿಷ್ಟವೋ]ಪ್ರವೃತ್ತಿ ನಿಮಿತ್ತವಾದುದು **ವಿಶಿಷ್ಟತ್ವವೋ**,ಅಥವಾ ವ್ಯಕ್ತಿಯು ಶಕ್ಯವು, ಪ್ರವೃತ್ತಿ ನಿಮಿತ್ತವಾದದು ಜಾತಿಯೋ **ಅವರನ್ನು** ಹೀಗೆ ಪ್ರಶ್ನೆ ಮಾಡಬೇಕು.

೧] ಆದ್ಯ ಪಕ್ಷವು [ಪ್ರವೃತ್ತಿನಿಮಿತ್ತವು ವಿಶಿಷ್ಟತ್ವವು ಎಂಬುದು] **ಕೂಡುವದಿಲ್ಲ**. ವಿಶಿಷ್ಟಗಳು ಅನಂತವಾದ್ದರಿಂದ **ಅಲ್ಲಿ** ಶಕ್ತಿಗ್ರಹ **ಕೂಡುವದಿಲ್ಲ**. **ಹಾಗೂ ವಿಶಿಷ್ಟತ್ವಕ್ಕೆ** ಜಾತಿತ್ವವೇ ಇಲ್ಲ ಕಾರಣ ಅದು ಅನುಗತವೂ ಆಗಲಾರದು, **ಕಾರಣ ವಿಶಿಷ್ಟತ್ವವು** ಜಾತಿ ಆಗುವದಿಲ್ಲ. ಅಂದ ಮೇಲೆ ವಿಶಿಷ್ಟತ್ವದಿಂದ ಕೂಡಿದ **ವ್ಯಕ್ತಿಯಲ್ಲಿ** ಶಕ್ತಿಗ್ರಹವು ಹೇಗೆ ಆದೀತು ? ಮತ್ತು ವ್ಯಕ್ತಿ ವಿಶೇಷ್ಯಕ ಜಾತಿ ಪ್ರಕಾರಕ [ಉದಾಃ–**ಘಟ** ವಿಶೇಷ್ಯಕ **ಘಟ**ತ್ವ ಪ್ರಕಾರಕ] ಅನುಭವ ಬರುತ್ತದೆ. ಈ ಅನುಭವವನ್ನೂ **ಅಂಗೀಕಾರ ಮಾ**–ಡದಿದ್ದರೆ ವಿಶಿಷ್ಟ ವಿಶೇಷ್ಯಕ ವಿಶಿಷ್ಟತ್ವ ಪ್ರಕಾರಕ ಅನುಭವ **ಬರಲಿ ಎಂದು** ಆಪತ್ತಿ–ಯನ್ನೂ ಮಾಡಬೇಕಾದೀತು ಹಾಗೆ ಅನುಭವ ಬರುವದಿಲ್ಲ **ಕಾರಣ** ಜಾತಿವಿಶಿಷ್ಟ ವ್ಯಕ್ತಿಯಲ್ಲಿ ಶಕ್ತಿಯನ್ನು ಹೇಳಿ ಪ್ರವೃತ್ತಿ ನಿಮಿತ್ತವು ವಿಶಿಷ್ಟತ್ವವು ಎಂದು ಹೇಳುವ ಮೊದಲಿನ ಪಕ್ಷ ಕೂಡುವದಿಲ್ಲ

(२) द्वितीये - ( व्यक्तिरेव शक्या जातिस्तु प्रवृत्तिनिमित्तमित्यत्र ) तत्राप्यसार्वत्रिकत्वं आकाशादिपदेषु जात्यादिपदेषु वा प्रवृत्तिनिमित्तजात्यभावात् प्रकारांतरकल्पने द्वैविध्यकल्पनया कल्पनागौरवमित्यादिदोषो द्रष्टव्यः ।

**इति शक्तिग्रहविषये वैशेषिकमतनिरूपणं तत्प्रकारखंडनं च ।**

३. **वैयाकरणास्तु** - क्वचिज्जातिः, क्वचिद्व्यक्तिरिति, क्वचिज्जातिः गवादिपदेषु, क्वचिद्व्यक्तिः आकाशादिपदेषु संज्ञाशब्दादिषु ( देवदत्तादिषु ) च, इति वदन्ति ।

अत्र दूषणं - एतत्पक्षेऽनुगतवाच्याभावः, तथा द्वैविध्यकल्पनेन कल्पनागौरवप्रसंगदोषश्च स्पष्टएवेति द्रष्टव्यम् ।

इति **वैयाकरणरीत्या** शक्तिग्रहनिरुपणं तत्खंडनं च ।

---

೨] ಎರಡನೇ ಪಕ್ಷವೂ [ವ್ಯಕ್ತಿಯೇ ಶಕ್ಯವು, ಜಾತಿಯು ಪ್ರವೃತ್ತಿ ನಿಮಿತ್ತವು] ಸರಿಯಲ್ಲ:– ಯಾಕೆಂದರೆ, ಸಾರ್ವತ್ರಿಕ ವ್ಯವಹಾರದಲ್ಲಿ ಹೀಗೆ ಹೇಳಲು ಬರುವದಿಲ್ಲ ಆಕಾಶಾದಿಪದಗಳಲ್ಲಿ ಹಾಗೂ ಜಾತಿ ಮೊದಲಾದ ಪದಗಳಲ್ಲಿ ಪ್ರವೃತ್ತಿ ನಿಮಿತ್ತಗಳಾದ ಜಾತಿಗಳೇ ಇಲ್ಲ. [ಆಕಾಶವು ವಂದೇ ವ್ಯಕ್ತಿ, ಆದ್ದರಿಂದ ಅದರಲ್ಲಿ ಆಕಾಶತ್ವ ಜಾತಿ ಇಲ್ಲ. ಹಾಗೂ ಜಾತಿಯಲ್ಲಿ ಕೂಡ ಜಾತಿ ಇಲ್ಲ ಕಾರಣ ಅಲ್ಲಿ ಪ್ರವೃತ್ತಿ ನಿಮಿತ್ತವು ಜಾತಿ ಹೇಗೆ ಆಗುತ್ತದೆ ? ಆ ಜಾತಿ ಇಲ್ಲದಿದ್ದರೆ ವ್ಯಕ್ತಿಯಲ್ಲಿ ಶಕ್ತಿಗ್ರಹ ಹೇಗೆ ಆಗುತ್ತದೆ ಎಂಬ ಭಾವವು] ಗೋ ಮೊದಲಾದವುಗಳಲ್ಲಿ ಗೋತ್ವಜಾತಿಯು ಪ್ರವೃತ್ತಿ ನಿಮಿತ್ತವು. ಆಕಾಶಾದಿಗಳಲ್ಲಿ ಪ್ರವೃತ್ತಿನಿಮಿತ್ತವು ಬೇರೆ ವಿಧವೆಂದು ಹೇಳಿದಲ್ಲಿ, ಎರಡು ರೀತಿಯಿಂದ ಕಲ್ಪನಾ ಮಾಡುವದರಿಂದ ಕಲ್ಪನಾಗೌರವ ದೋಷ ಬರುತ್ತದೆ ಎಂದು ತಿಳಿಯಬೇಕು. [ಕಾರಣ ವೈಶೇಷಿಕರ ಪಕ್ಷ ಸರಿಯಲ್ಲ]

೩) **ವೈಯಾಕರಣ ಪ್ರಕಾರ ಶಬ್ದಶಕ್ತಿಗ್ರಹಣ ನಿರೂಪಣೆ ಹಾಗೂ ಅದರ ಖಂಡನೆ.**

ಕೆಲವು ಕಡೆ ಜಾತಿಯಲ್ಲಿ ಶಕ್ತಿಗ್ರಹವು, ಹಲವು ಕಡೆ ವ್ಯಕ್ತಿಯಲ್ಲಿ ಶಕ್ತಿಗ್ರಹವು ಹೇಗೆಂದರೆ:–ಗವಾದಿ ಪದಗಳಲ್ಲಿ ಗೋತ್ವ ಜಾತಿಯಲ್ಲಿ ಶಕ್ತಿಗ್ರಹವು. ಆಕಾಶಾದಿ ಪದಗಳಲ್ಲಿ [ಜಾತಿ ಇರುವದಿಲ್ಲ ಕಾರಣ] ಸಂಜ್ಞಾಪದ ದೇವದತ್ತ ಮೊದಲಾದವುಗಳಲ್ಲಿ ವ್ಯಕ್ತಿಯಲ್ಲಿ ಶಕ್ತಿಗ್ರಹವು. ಎಂದು ವೈಯಾಕರಣರು ಹೇಳುತ್ತಾರೆ.

ಈ ಮತದ ದೂಷಣವು:– ಇವರ ಪಕ್ಷದಲ್ಲಿ, ಅನುಗತವಾದ ವಾಚ್ಯಾರ್ಥವಿಲ್ಲ. ಒಂದು ಕಡೆ ಒಂದು ರೀತಿ, ಬೇರೊಂದು ಕಡೆ ಬೇರೆ ರೀತಿ ಎಂದು ಹೇಳಿದಲ್ಲಿ

४. **नैयायिकास्तु** - क्वचिज्जातिः, क्वचिद्व्यक्तिः, क्वचिदाकृतिरिति च वदन्ति ।

(१) जात्यादिपदेषु गोत्वघटत्वादिषु तत्र जात्यंतराभावेन तद्विशिष्टानुपपत्त्या जातेरेव वाच्यत्वात् ।

(२) क्वचिद्व्यक्तिः—आकाशव्यक्त्यादिपदेषु तत्र एकव्यक्तित्वेन आकाशत्वादेः, तथा व्यक्तित्वस्य सत्तातुल्यत्वेन, अजातित्वेन, जातिविशिष्टस्यावाच्यत्वात् व्यक्तिरेव वाच्या ।

(३) क्वचिदाकृतिः - सास्नादिमच्छब्दे पृथिवीत्वादिना सांकर्येणाऽकृतित्वस्याजातितया तद्विशिष्टासंभवेन आकृतेरेव वाच्यत्वमिति तेषामाशयः ।

---

ಪೂರ್ವದಂತೆ ಕಲ್ಪನಾಗೌರವ ದೋಷ ಬರುತ್ತದೆ.

**೪] ನೈಯಾಯಿಕರ ಮತ ಪ್ರಕಾರ ಶಕ್ತಿಗ್ರಹ ನಿರೂಪಣೆ ಅದರ ಖಂಡನೆಯೂ**

ಕೆಲವು ಕಡೆ ಜಾತಿಯಲ್ಲಿ ಶಕ್ತಿಗ್ರಹವು ಕೆಲವು ಕಡೆವ್ಯಕ್ತಿಯಲ್ಲಿ ಶಕ್ತಿಗ್ರಹವು, ಕೆಲವುಕಡೆ ಆಕೃತಿಯಲ್ಲಿ ಶಕ್ತಿಗ್ರಹವು ಎಂದು ನೈಯಾಯಿಕರು ಹೇಳುತ್ತಾರೆ ಹೇಗೆಂದರೆ ೧] ಜಾತಿಮೊದಲಾದ ಪದಗಳಲ್ಲಿ ಎಂದರೆ ಗೋತ್ವ, ಘಟತ್ವಾದಿಗಳಲ್ಲಿ ಬೇರೆಜಾತಿಗಳುಇಲ್ಲದಿರುವದರಿಂದ (ಜಾತಿ ವಿಶಿಷ್ಟಜಾತಿ ಹೇಳಲು ಬರದಿರುವದರಿಂದ) ಜಾತಿಯೇ ವಾಚ್ಯವು (ಅಂದರೆ ಜಾತಿಯಲ್ಲಿಯೇ ಶಕ್ತಿಯು) ೨] ಕೆಲವು ಕಡೆ ವ್ಯಕ್ತಿಯಲ್ಲಿ ಶಕ್ತಿಯು. ಆಕಾಶ ಹಾಗೂ ವ್ಯಕ್ತಿ ಮೊದಲಾದವುಗಳಲ್ಲಿ ಅವು ಒಂದೇ ವ್ಯಕ್ತಿ ಆದ್ದರಿಂದ ಅವುಗಳಲ್ಲಿ ಜಾತಿ ಇಲ್ಲ [ಆಕಾಶತ್ವವು ಜಾತಿಯಲ್ಲ 'ನಿತ್ಯಂ ಅನೇಕಾನುಗತಂ' ನಿತ್ಯವೂ ಅನೇಕಾನುಗತವು. ಜಾತಿ ಎಂದು ಹೇಳಿದ್ದಾರೆ, ಆಕಾಶವು ಒಂದೇ ವ್ಯಕ್ತಿ ಆದಕಾರಣ ಆಕಾಶತ್ವಕ್ಕೆ ಅನೇಕಾನುಗತತ್ವ ಬರುವದಿಲ್ಲ ಆದ್ದರಿಂದ ಅದು ಜಾತಿ ಆಗುವದಿಲ್ಲ ಇದರಂತೆ ವ್ಯಕ್ತಿಯಲ್ಲಿಯೂ ವ್ಯಕ್ತಿತ್ವ ಎಂಬ ಜಾತಿ ಇಲ್ಲ. ಯಾಕೆಂದರೆ ಸತ್ತಾ, ಹೇಗೆ ಜಾತಿಯಲ್ಲವೋ ಅದರಂತೆ ವ್ಯಕ್ತಿತ್ವವೂ ಜಾತಿ ಆಗಲಾರದು ಎಂಬ ಭಾವವು] ಈ ಕಾರಣದಿಂದ ಆಕಾಶ, ವ್ಯಕ್ತಿ ಮೊದಲಾದವುಗಳು ಜಾತಿ ವಿಶಿಷ್ಟವಾಗದ್ದರಿಂದ ಅವು-ಗಳಲ್ಲಿ ಶಕ್ತಿಗ್ರಹಣ ಆಗದೇ ಹೋಗಬೇಕಾದೀತು, ಕಾರಣ ವ್ಯಕ್ತಿಯಲ್ಲಿಯೇ ಶಕ್ತಿಗ್ರಹಣವಾಗುತ್ತದೆ ಎಂದು ಹೇಳಬೇಕು. ೩] ಕ್ವಚಿತ್ **ಆಕೃತಿಯು**- ಸಾಸ್ನಾದಿಯುಕ್ತದ್ದು [ಸಾಸ್ನಾದಿಮತ್] ಎಂಬ ಪದದಲ್ಲಿ ಆಕೃತಿತ್ವವು ಜಾತಿ ಆಗಲಾರದು, ಯಾಕೆಂದರೆ, ಪೃಥಿವೀತ್ವ ಆಕೃತಿತ್ವಗಳಿಗೆ ಸಾಂಕರ್ಯವಿರುತ್ತದೆ, ಆಕೃತಿತ್ವ ವಿಶಿಷ್ಟವೇ

अत्र दूषणं—एतत्पक्षेऽनुगतवाच्याभावः, तथा गवादिपदानां आकृतिविशिष्टव्यक्तौ शक्त्यंगीकारे च वैशेषिकपक्षोक्तविकल्पानुपपत्तिरूपदोषापरिहारः, आकृतेरपि गवादिपदवाच्यत्वे 'सास्नादिमान्गौ'रित्यत्र सास्नादिमत्पदं पुनरुक्तं स्यात् इत्यादि दोषोऽपरिहार्यः

**इति पदशक्तिग्रहे नैयायिकमतनिरूपणं तत्खंडनं च**

५ **अन्यापोह इति बौद्धाः**, अन्यापोहो नाम-येन पदेन यः पदार्थः प्रतीयते तदन्यान्यत्वमित्यर्थः ( अतद्व्यावृत्तिरिति यावत् ) तथा च घट इत्युक्ते अघटो न भवतीत्यर्थः, घट इत्यस्य घटान्यान्यत्वे शक्तिरिति ।

---

ಕೊಡುವದಿಲ್ಲ ಅಂದಮೇಲೆ ಆಕೃತಿತ್ವ ವಿಶಿಷ್ಟ ಆಕೃತಿಯಲ್ಲಿ ಶಕ್ತಿ ಹೇಗೆ ಇರಬೇಕು? ಆದ್ದರಿಂದ ಆಕೃತಿಯಲ್ಲಿಯೇ ಶಕ್ತಿ ಹೇಳಬೇಕೆಂದು ಅವರ ಅಭಿಪ್ರಾಯವು.

ಇಲ್ಲಿ ದೂಷಣವು:- ಈ ಪಕ್ಷದಲ್ಲಿಯೂ ಅನುಗತವಾದ ವಾಚ್ಯತ್ವವು ಇಲ್ಲ. [ಒಂದೊಂದರಲ್ಲಿ ಒಂದೊಂದು ವಿಧವಾಗಿ ಹೇಳಬೇಕಾಗುವದು] ಹಾಗೂ ಗವಾದಿ ಪದಗಳಲ್ಲಿ ಆಕೃತಿತ್ವವಿಶಿಷ್ಟ ವ್ಯಕ್ತಿಯಲ್ಲಿ ಶಕ್ತಿಯನ್ನು ವೈಶೇಷಿಕರಂತೆ ಅಂಗೀಕಾರ ಮಾಡಿದಲ್ಲಿ, ವೈಶೇಷಿಕರ ಪಕ್ಷದಲ್ಲಿ ಉಕ್ತವಾದ ವಿಕಲ್ಪಗಳು ಇಲ್ಲಿ ಕೂಡ ಪರಿಹಾರವಾಗದೇ ಆ ದೋಷಗಳು ಬಂದೇ ಬರುತ್ತವೆ. ಆಕೃತಿಯೇ ಗವಾದಿ ಪದದಿಂದ ವಾಚ್ಯವಾಗಿ ಸಾಸ್ನಾದಿಉಳ್ಳದ್ದು ಗೋವು ಎಂಬಲ್ಲಿ 'ಸಾಸ್ನಾದಿಮಾನ್' ಈ ಪದವು ಪುನರುಕ್ತವಾಗುವದು [ಆಕೃತಿಯು "ಗೊ"ಪದದಿಂದ ಕರೆಯಲ್ಪಟ್ಟರೆ, ಗೊ ಪದದಿಂದಲೇ ಅದರ ಆಕೃತಿ [ಗಂಗೆ ತೊಗಲು ಮೊದಲಾದವುಗಳು] ತೋರುವದರಿಂದ ಪುನಃ ಸಾಸ್ನಾದಿಮಾನ್ ಅಂದಲ್ಲಿ ಪುನರುಕ್ತತೆಯು ಇತ್ಯಾದಿ ದೋಷಗಳು ಈ ಪಕ್ಷದಲ್ಲಿ ಅಪರಿಹಾರ್ಯವಾದ್ದಗಳು ಬರುತ್ತವೆ.

ಇತಿ ಪದಶಕ್ತಿಗ್ರಹದಲ್ಲಿ ನೈಯಾಯಿಕರ ಮತ ನಿರೂಪಣೆ ಅದರ ಖಂಡನೆ-

೮] **ಶಬ್ದಶಕ್ತಿವಿಷಯದಲ್ಲಿ ಬೌದ್ಧಮತ ನಿರೂಪಣೆ ಅದರ ಖಂಡನೆ:-**

ಅನ್ಯಾಪೋಹದಲ್ಲಿ ಶಕ್ತಿಯು ಎಂದು ಬೌದ್ಧರು- ಅನ್ಯಾಪೋಹವೆಂದರೆ, ಯಾವ ಪದದಿಂದ ಯಾವ ಪದಾರ್ಥವು ಪ್ರತೀತವಾಗುತ್ತದೆಯೊ ಅದರ ಅನ್ಯಾನ್ಯತ್ವವು. ಅತದ್ವ್ಯಾವೃತ್ತಿಯು ಉದಾ:- ಘಟ ಎಂಬ ಪದಕ್ಕೆ ಅಘಟವು ಅಲ್ಲ ಎಂಬ ಅರ್ಥವು [ಘಟ ಪದಕ್ಕೆ ಅಘಟದ ಅಭಾವದಲ್ಲಿ ಶಕ್ತಿಯು] ಹೀಗೆ ಅವರು ಹೇಳುತ್ತಾರೆ.

अत्र दूषणं तु—घटशब्दस्याघटान्यार्थकत्वादघटशब्दस्य घटभिन्नार्थकत्वात्, घटपदार्थप्रतिपत्तौ अघटपदार्थप्रतिपत्तिः अघटपदार्थप्रतिपत्तौ घटपदार्थप्रतीतिरिति अन्योन्याश्रयो दोषो द्रष्टव्यः ।

इति **पदशक्तिग्रहे बौद्धमतनिरूपणं तत्खंडनं च**

**अत्रआचार्याणां सिद्धांतस्तु**–व्यक्त एव वाच्याः समयप्रतिपत्तौ (वाच्यवाचक सम्बन्धज्ञाने) सादृश्यं शक्तिग्रहे निमित्तमिति । तदभिप्रायस्तु-शक्तिग्राहकस्यानयनादिव्यवहारस्य व्यक्तिष्वेव संभवात् सैव वाच्या, गुणक्रियाजात्यदिकं तु विशेषणभूतं प्रवृत्तिनिमित्तं प्रवृत्तिनिमित्तानां तु शक्तिं प्रति विषयतया भासमानत्वेऽपि न शक्यत्वं,

**उक्तं च सुधायां**–" ते ते व्यावृत्ताकारा एव तैस्तैर्व्यावृत्तैर्द्रव्यगुणक्रियासामान्यैर्निमित्तैस्तत्तच्छद वाच्या " इति ।

---

ಈ ಪಕ್ಷದಲ್ಲಿ ದೂಷಣವು:- ಘಟ ಶಬ್ದಕ್ಕೆ ಅಘಟ ಅನ್ಯಾರ್ಥಕತ್ವವು ಅಘಟ ಶಬ್ದಕ್ಕೆ ಘಟಭಿನ್ನಾರ್ಥಕತ್ವವು ಹೀಗೆ ಹೇಳುವದರಿಂದ, ಘಟ ಪದಾರ್ಥದ ಜ್ಞಾನವಾದರೆ ಅಘಟ ಪದಾರ್ಥ ಜ್ಞಾನವಾಗುತ್ತದೆ. ಅಘಟ ಪದಾರ್ಥಜ್ಞಾನವಾದರೆ ಘಟಪದಾರ್ಥಜ್ಞಾನವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷಬರುವದರಿಂದ ಈ ಪಕ್ಷ ಸರಿಯಲ್ಲ.

**ಪದಶಕ್ತಿಗ್ರಹಣ ವಿಷಯದಲ್ಲಿ ಸಿದ್ಧಾಂತವು:-**

ಈ ವಿಷಯದಲ್ಲಿ ಆಚಾರ್ಯರ ಸಿದ್ಧಾಂತವು ಹೀಗೆ ಇದೆ:- ವ್ಯಕ್ತಿಗಳೇ ವಾಚ್ಯಗಳು. ವಾಚ್ಯವಾಚಕ ಸಂಬಂಧಜ್ಞಾನದಲ್ಲಿ ಸಾದೃಶ್ಯವು ನಿಮಿತ್ತವು [ವಿವರಣೆ:-ಸಾದೃಶ್ಯವು, ಗೋ ವ್ಯಕ್ತಿಯಂತೆ ವಾಚ್ಯವಲ್ಲ, ಗೋತ್ವದಂತೆ ಪ್ರವೃತ್ತಿ ನಿಮಿತ್ತವೂ ಅಲ್ಲ ಆದರೆ(ಪ್ರತ್ಯಾಸತ್ತಿ) ಸಂಬಂಧ ಮಾತ್ರದಿಂದ ಗೋತ್ವಾದಿ ವಿಶಿಷ್ಟ ವ್ಯಕ್ತಿಯ ಜ್ಞಾಪಕವು(ಜ್ಞಾನಹುಟ್ಟಿಸುವದು) ಆಗುವದು. ಈ ಕಾರಣದಿಂದ ಸಕಲ ಗೋ ವ್ಯಕ್ತಿಗಳಲ್ಲಿ ಗೋ ಪದಶಕ್ತಿ ಗ್ರಹವು ಬರುವದು, ಗೋಪದ ಶಕ್ತಿಗ್ರಹ ಸಲುವಾಗಿ ಅನುಗತ ಜಾತಿ ಅಂಗೀಕಾರ ಮಾಡುವ ಆವಶ್ಯಕತೆ ಇಲ್ಲವೆಂಬ ಭಾವವು] ಶಕ್ತಿಗ್ರಾಹಕ(ಶಕ್ತಿ ಜ್ಞಾನದಿಂದ ಆಗತಕ್ಕ) ಆನಯನಾದಿ(ಕೊಡತೆಗೆದುಕೊಳ್ಳುವ) ವ್ಯವಹಾರವು ವ್ಯಕ್ತಿಯಲ್ಲಿಯೇ ಕಾಣುವದರಿಂದ, ವ್ಯಕ್ತಿಯೇ ಗೋಪದ ವಾಚ್ಯವು (ಗೋ ಪದಕ್ಕೆ ಗೋ ವ್ಯಕ್ತಿಯಲ್ಲಿಯೇ ಶಕ್ತಿಯು]

ವ್ಯಕ್ತಿಯಲ್ಲಿಯ ವಿಶೇಷಣಗಳಾದ ಗುಣಕ್ರಿಯಾ, ಜಾತಿಮೊದಲಾದವುಗಳು ಗೋ ಶಬ್ದ ಪ್ರವೃತ್ತಿ ನಿಮಿತ್ತಗಳು, ಇವುಗಳು ಶಕ್ತಿಯನ್ನು ಕುರಿತು ವಿಷಯಗಳಾಗಿ ತೋರಿದರೂ ಅವುಗಳಿಗೆ(ಜಾತಿಕ್ರಿಯಾದಿಗಳಿಗೆ) ಶಕ್ಯತ್ವವು (ಶಕ್ತಿವಿಷಯತಾ) ಬರುವದಿಲ್ಲ. 'ಸುಧಾ'ದಲ್ಲಿ

न च विशेष्यवद्विशेषणानामपि शक्ति प्रति विषयतया भासमानत्वे शक्यत्वमस्तु इति वाच्यं, शक्ति प्रति विषयतया भासमानं यद्विशेष्यं तस्यैव शक्यशब्दार्थत्वात्, अन्यथा विशेषणानामपि शक्यत्वेन तेषु शक्यवृत्तित्वासंभवेन शक्यतावच्छेदकत्वरूपप्रवृत्तिनिमित्तत्वायोगात् विशेष्यमात्रस्य शक्यत्वे तु विशेषणानां तदनतिरिक्तवृत्तित्वेन शक्यतावच्छेदकत्वोपपत्तेः,

---

ಈ ಪ್ರಕಾರ ಹೇಳಲಾಗಿದೆಃ-ದ್ರವ್ಯ. ಗುಣ, ಕ್ರಿಯಾ, ಜಾತಿ ಮೊದಲಾದ ಸಾಮಾನ್ಯ ಧರ್ಮಗಳ ನಿಮಿತ್ತದಿಂದ, ಇತರ ವ್ಯಾವೃತ್ತವಾದ ವ್ಯಕ್ತಿಗಳೇ (ಇತರ ಪದಾರ್ಥದಿಂದ ಭಿನ್ನವಾದ ವ್ಯಕ್ತಿಗಳೇ) ಆ, ಆ ಶಬ್ದಗಳಿಂದ ವಾಚ್ಯಗಳು, ಎಂದು ಹೇಳಿದೆ' ವಿಶೇಷ್ಯ (ವ್ಯಕ್ತಿ)ದಂತೆ ವಿಶೇಷಗಳು ಕೂಡ, ಶಕ್ತಿಯನ್ನು ಕುರಿತು ವಿಷಯವಾಗಿ ತೋರಿದಲ್ಲಿ (ಅಂದರೆ ವಿಶೇಷಣಗಳು ಶಕ್ತಿಗೆ ವಿಷಯವಾದಲ್ಲಿ) ಅವುಗಳಲ್ಲಿ ಕೂಡ ಶಕ್ತಿ ಇದೆ ಎಂದಾಗಲಿ ? ಎಂದು ಶಂಕಿಸಕೂಡದು- ವ್ಯಕ್ತಿಯನ್ನು ಕುರಿತು ವಿಷಯವಾಗಿ ತೋರಿದ ವಿಶೇಷ್ಯವೇ (ವ್ಯಕ್ತಿಯೇ) ಶಕ್ಯವು (ಶಕ್ತಿವಿಶಿಷ್ಟವೆಂದು ಕರೆಯಲ್ಪಡುತ್ತದೆ.) ಈ ರೀತಿಯನ್ನು ಒಪ್ಪದೇಹೋದರೆ, ವಿಶೇಷಣಗಳೂ ಕೂಡ ಶಕ್ಯವಾಗಬೇಕಾದೀತು, ಹಾಗಾದಲ್ಲಿ-ವಿಶೇಷಣಗಳು, ಶಕ್ಯವೃತ್ತಿ ಧರ್ಮ ಆಗದೇ ಹೋಗಬೇಕಾಗುವದು. [ವಿವರಣೆಃ- ಗೋತ್ವದಲ್ಲಿ ಗೋರೂಪ ಅರ್ಥವು ಶಕ್ಯವು, ಶಕ್ಯತಾವಚ್ಛೇದಕವು ಗೋತ್ವವು, [ಸಾಸ್ನಾದಿಮತ್ವವು] ಈ ಗೋತ್ವವೇ ಪ್ರವೃತ್ತಿ ನಿಮಿತ್ತವು ಕೂಡ ಪ್ರಕೃತ, ಗೋವ್ಯಕ್ತಿಯಂತೆ ಗೋತ್ವದಲ್ಲಿಯೂ ಶಕ್ತಿಯನ್ನು ಹೇಳಿದಲ್ಲಿ, ಗೋತ್ವವೂ ಶಕ್ಯವಾಗುವದು, ಗೋತ್ವವು ಶಕ್ಯವಾದರೆ ಅದಕ್ಕೆ ಶಕ್ಯವಾದ ಗೋವೃತ್ತಿತ್ವ ಸರ್ವಥಾ ಕೂಡುವದಿಲ್ಲ, ಗೋವು ಹಾಗೂ ಗೋತ್ವವೂ ಎರಡೂ ಶಕ್ಯವಾದಲ್ಲಿ ಅವುಗಳಲ್ಲಿ ಇನ್ನೊಂದು ಪ್ರವೃತ್ತಿ ನಿಮಿತ್ತ [ವಿಶೇಷಣ] ವೆಂದು ಹೇಳಬೇಕೆ ವಿನಾ ಗೋತ್ವಾದಿಗಳೇ ಪ್ರವೃತ್ತಿ ನಿಮಿತ್ತ [ವಿಶೇಷಣವಾದ]ಧರ್ಮಗಳಾಗಲಾರವು ಕಾರಣ ಗೋವ್ಯಕ್ತಿಯಲ್ಲಿಯೇ ಶಕ್ತಿ ಇದೆ ಎಂಬ ಭಾವವು]

ವಿಶೇಷ್ಯವಾದ ಗೋವ್ಯಕ್ತಿಯೇ ಶಕ್ಯವಾದಲ್ಲಿ ವಿಶೇಷಣಗಳು ಇದನ್ನು ಬಿಟ್ಟು ಬೇರೆಡೆ ಇರಲಾರವು. ಕಾರಣ, ಅವುಗಳಿಗೆ, [ಗೋತ್ವಾದಿಗಳಿಗೆ] ಶಕ್ಯತಾವಚ್ಛೇದಕತ್ವವು ಕೂಡುತ್ತದೆ. [ಅವಚ್ಛೇದಕವೆಂದರೆ ಅನ್ಯೂನಾನತಿರಿಕ್ತವಾದ ಧರ್ಮವು ಗೋತ್ವಾವು ನ್ಯೂನವೃತ್ತಿ ಆಗಿಲ್ಲ ಅಧಿಕವೃತ್ತಿಯೂ ಆಗಿಲ್ಲ ಗೋವಿನಲ್ಲಿ ಮಾತ್ರವಿದೆ ಕಾರಣ ಇದು ಅವಚ್ಛೇದಕವು]

न चैवं शब्दाद्विशेषणानां प्रतीतिर्न स्यात् इति वाच्यं, "शक्यत्ववत् तदवच्छेदकत्वस्यापि शब्दधीविषयत्वे तंत्रत्वात्" कथमन्यथा परमते, आकाशादिपदाशक्यस्य शब्दाश्रयत्वस्य धीः स्यात् इति (भावविवरणे) ननु अनुगतजात्यभावे व्यक्तीनामानंत्येन शक्तिग्रहायोग इति चेन्नतत्र साहश्यं निमित्तमित्युक्तं, तद्विवरणं **भावदीपरीत्या** क्रियते, तथाहि :–

चक्षुःसन्निकृष्टे पुरोवृतिगोपिंडादौ विद्यमानेन अतीतानागतसर्वप्रतियोगिकेन साहश्येन स्वप्रतियोगिषु अनंतगवादिषु प्रतियोगितासंबंधेनोपस्थापितेषु गवादिपदशक्तिग्रहसंभवादिति,

---

ಹೀಗೆ ಹೇಳಿದಲ್ಲಿ–ಶಬ್ದದಿಂದ [ಗೋಶಬ್ದದಿಂದ] ವಿಶೇಷಣಗಳ ಪ್ರತೀತಿಯು ಹುಟ್ಟದೇ ಹೋಗಲೀ, [ಅವುಗಳಲ್ಲಿ ಶಕ್ತಿಯೇ ಇಲ್ಲದ ಮೇಲೆ ಆವಿಶೇಷಣಗಳ ಜ್ಞಾನ ಹೇಗೆ ಆಗಬೇಕು] ಈ ಪ್ರಕಾರ ಶಂಕಿಸಕೂಡದು. ಶಕ್ಯದಂತೆ ಶಕ್ಯತಾವಚ್ಛೇದಕವೂ ಶಬ್ದಜ್ಞಾನಕ್ಕೆ ವಿಷಯವಾಗುವದು ಎಂಬ ನಿಯಮವಿರುವದರಿಂದ, ಶಕ್ಯತಾವಚ್ಛೇದಕಗಳಾದ ವಿಶೇಷಣಗಳ ಜ್ಞಾನವೂ ಆಗುತ್ತದೆ. ಪರಮತದಲ್ಲಿ ಕೂಡ ಆಕಾಶಾದಿ ಪದದಿಂದ ಅಶಕ್ಯವಾದ [ಶಕ್ತಿಜ್ಞಾನಕ್ಕೆ ವಿಷಯವಾಗದ] ಆಕಾಶಗತ ಶಬ್ದಾಶ್ರಯತ್ವದ ಜ್ಞಾನವು ಹೇಗೆ ಆದೀತು ? [ವಿ. ಮೇಲೆ ಹೇಳಿದ ನಿಯಮವನ್ನು ಒಪ್ಪಲೇಬೇಕು. ಯಾಕೆಂದರೆ- ಪರಮತದ ಪ್ರಕಾರ ಆಕಾಶದಲ್ಲಿ ಶಬ್ದಾಶ್ರಯತ್ವವು ಇದೆ ಆದರೆ ಆ ಶಬ್ದಾಶ್ರಯತ್ವವು, ಆಕಾಶಪದಶಕ್ತಿಯ ವಿಷಯವಲ್ಲ. ಆದರೂ ಶಬ್ದಾಶ್ರಯತ್ವಜ್ಞಾನವಾಗುತ್ತದೆ ಮೇಲಿನ ನಿಯಮದಂತೆ. ಅದರಂತೆಯೇ ಇಲ್ಲಿಯೂ ವಿಶೇಷಣಗಳ ಜ್ಞಾನವಾಗುತ್ತದೆ ಎಂದು ತಿಳಿಯಬೇಕು ಹೀಗೆ ಭಾವ ವಿವರಣದಲ್ಲಿ ಹೇಳಿದೆ.] ಶಂಕಾ:–ಅನುಗತವಾದ ಜಾತಿ [ಧರ್ಮ] ಯನ್ನು ಅನುಸರಿಸದಿದ್ದರೆ ವ್ಯಕ್ತಿಗಳು ಅನಂತವಾದ್ದರಿಂದ ಅವುಗಳಲ್ಲಿ ಶಕ್ತಿಗ್ರಹ ಆಗುವದಿಲ್ಲವೆಂದು ಹೇಳಿದ್ದೇವೆ, ಹೀಗೆ ಶಂಕಿಸಿದರೆ ಇದಕ್ಕೆ ಸಮಾಧಾನವು- ಪದಾರ್ಥಗಳಿಗೆ ಅನ್ಯೋನ್ಯ ಸಾದೃಶ್ಯವು ಪ್ರಯೋಜಕವು ಎಂದು ಈ ಪೂರ್ವದಲ್ಲಿ [ಸಾದೃಶ್ಯವು ನಿಮಿತ್ತವು] ಹೇಳಿದೆ. ಇದರ ವಿವರಣೆಯನ್ನು ಭಾವದೀಪ ರೀತಿಯಿಂದ ಮಾಡಲಾಗುತ್ತದೆ

ಚಕ್ಷುರಿಂದ್ರಿಯ ಸನ್ನಿಕರ್ಷ ಉಳ್ಳ, ಮುಂದಿರುವ ಒಂದು ಗೋವ್ಯಕ್ತಿಯಲ್ಲಿ ಇದ್ದ. ಅತೀತ (ಗತಿಸಿದ) ಅನಾಗತ (ಬರುವ) ಸರ್ವ ಗೋ ಪ್ರತಿಯೋಗಿಕ ಸಾದೃಶ್ಯದಿಂದ, ಸಾದೃಶ್ಯ ಪ್ರತಿಯೋಗಿ ಆದ ಅನಂತ ಗೋಗಳು ಪ್ರತಿಯೋಗಿತಾಸಂಬಂಧದಿಂದ

तथा च सादृश्येनैवातीतानागतादिसकलगोव्यक्त्युपस्थितिसंभवात् उपस्थापितसकलव्यक्तिषु पदस्य शक्तिग्रहः संभवति । अतो नैतदर्थं अनुगतसामान्यमंगीकार्यमिति बोध्यम् ।

ननु समयो नाम—पदानां पदार्थानां च वाच्यवाचकभावसंबंधः, स च संबंधिष्वज्ञातेषु ज्ञातुमशक्य इति पदार्थज्ञानस्य (पदार्थरूपसंबंधिज्ञानस्य) शक्तिज्ञानात्प्रागेव सद्भावात् किमागमस्य प्रयोजनं इति चेत् उच्यते—यथा, व्याप्तिग्रहकाले ज्ञातयोरपि साध्यपक्षयोः संसर्गोऽनुमानेन बोध्यते, तथा ज्ञातानामेव पदार्थानां क्रियाकारकादिरूपान्वयविशेषस्य, आगमो बोधकः तथा च 'घटमानय' इत्यत्र

---

ಉಪಸ್ಥಾಪಿತವಾಗುತ್ತಿರಲು ಅವುಗಳಲ್ಲಿ ಗೋಪದದಿಂದ ಶಕ್ತಿಗ್ರಹವು ಆಗುತ್ತದೆ. ತಥಾಚ-ಅನ್ಯೋನ್ಯಸಾದೃಶ್ಯದಿಂದಲೇ ಅತೀತಾನಗತ[ಹೋದ,ಮುಂದೆ ಬರುವ]ಎಲ್ಲ ಗೋಗಳಜ್ಞಾನವು ಉಪಸ್ಥಿತವಾಗುತಿರಲು ಎಲ್ಲ ಗೋಗಳಲ್ಲಿ ಗೋಪದ ಶಕ್ತಿಗ್ರಹವು ಆಗುತ್ತದೆ. ಇದಕ್ಕಾಗಿ ಅನುಗತ ಜಾತಿಯನ್ನು ಅಂಗೀಕಾರ ಮಾಡುವ ಆವಶ್ಯಕತೆ ಇಲ್ಲ ಎಂದು ತಿಳಿಯಬೇಕು. ಹಿಂದೆ ಹೇಳಿದ [ಸಮಯ ಪ್ರತಿಪತ್ತಿ ಎಂಬಲ್ಲಿ] ಸಮಯವೆಂದರೆ, ಪದಪದಾರ್ಥಗಳ ವಾಚ್ಯವಾಚಕ ಭಾವಸಂಬಂಧವು. ಸಂಬಂಧವು ಸಂಬಂಧಿಗಳು ತಿಳಿಯದೇ ಇದ್ದಲ್ಲಿ ಉಕ್ತ ಸಂಬಂಧ [ವಾಚ್ಯವಾಚಕಭಾವ] ತಿಳಿಯುವದು ಅಶಕ್ಯವು. ಅಂದಮೇಲೆ ಪದಾರ್ಥರೂಪಸಂಬಂಧಿಗಳ ಜ್ಞಾನವು [ಪದಾರ್ಥಜ್ಞಾನವು] ಶಕ್ತಿಜ್ಞಾನಕ್ಕಿಂತ ಪೂರ್ವದಲ್ಲಿಯೇ ಇರುವುದರಿಂದ ಆಗಮದಿಂದ ಪ್ರಯೋಜನವೇನು ? [ವಿವರಣೆ- ಪದಪದಾರ್ಥಗಳ ಸಂಬಂಧವೇ ಸಮಯ ಅಥವಾ ಶಕ್ತಿಯು ಈ ಸಂಬಂಧಜ್ಞಾನವಾಗಬೇಕಾದರೆ ಸಂಬಂಧಿಯಾದ ಪದಾರ್ಥಜ್ಞಾನ ಬೇಕು. ಪದಪದಾರ್ಥದ ಸಂಬಂಧ ಎರಡರಲ್ಲಿಯೂ ಇದೆ, ಈ ಪದಾರ್ಥಜ್ಞಾನವು ಶಕ್ತಿ[ಸಂಬಂಧ]ಜ್ಞಾನದಕ್ಕಿಂತಲೂ ಮೊದಲೇ ಆದ ಪ್ರಯುಕ್ತ ಆಗಮದಿಂದ ಪ್ರಯೋಜನವಿಲ್ಲವೆಂಬ ಭಾವವು] ಹೀಗೆ ಶಂಕಿಸಿದಲ್ಲಿ ಇದಕ್ಕೆ ಸಮಾಧಾನವು:-ಹೇಗೆ ವ್ಯಾಪ್ತಿಯನ್ನು ಗ್ರಹಣ ಮಾಡತಕ್ಕ ಕಾಲದಲ್ಲಿ ಸಾಧ್ಯಪಕ್ಷಗಳ ಜ್ಞಾನವಿದ್ದರೂ ಅನುಮಾನದಿಂದ [ಉದಾ:-ಧೂಮಜ್ಞಾನದಿಂದ] ಪರ್ವತ ವಹ್ನಿಗಳ ಸಂಬಂಧವು ಜ್ಞಾತವಾಗುತ್ತದೆಯೋ] ಅದರಂತೆ, ಪದಾರ್ಥಗಳ ಜ್ಞಾನವಿದ್ದರೂ ಕ್ರಿಯಾಕಾರಕರೂಪ ಸಂಬಂಧ ವಿಶೇಷದ ಜ್ಞಾನವನ್ನು ಆಗಮವು ಮಾಡಿಕೊಡುತ್ತದೆ. ಉದಾ:-"ಘಟ ತೆಗೆದುಕೊಂಡು ಬಾ" ಎಂಬಲ್ಲಿ

घटकर्मकमानयनमित्यादिरूपसंसर्गविशेषस्य पदकदंबरूपागमो बोधक इति ज्ञेयम् ।

**इति पदशक्तिग्रहेस्वसिद्धांतसमर्थनम् ।**

---

## (३) अथ अन्वयबोधविमर्शप्रकरणम्

ननु पदानां पदार्थमात्रज्ञापकत्वेन अन्वयसामान्यस्य अन्वयविशेषस्य वा ज्ञापकं न किंचिदस्ति, तथा च अन्वयविशेषबोधकत्वेनागमस्य सार्थक्योपपादनमयुक्तमिति चेत्, अत्र, वाद्यंतरोक्तपरिहाराननूद्य दूषणंक्रियते :-

१. **वैयाकरणास्तु**–वर्णपदाभिव्यक्तः, एकः, वाक्यात्मकः स्फोटाख्यः, अखंडः, ( वर्णावयररहितः ) वाक्यात्मकशब्दः, पदार्थानां सामान्यान्वयस्य विशेषान्वयस्य च ज्ञापक इति ।

---

ಘಟಂ, ಆನಯ, ಎಂದು ಪದಾರ್ಥಜ್ಞಾನ ಮೊದಲು ಇದ್ದರೂ, ಈ ವಾಕ್ಯರೂಪ ಆಗಮವು, ಘಟವಿಷಯಕವಾದದ್ದು ಆನಯನವು [ತರುವದು] ಎಂಬ ಸಂಬಂಧ ವಿಶೇಷವನ್ನು ಬೋಧಿಸುತ್ತದೆ ಕಾರಣ ಈ ಆಗಮದಿಂದ ಪ್ರಯೋಜನ ಉಂಟೆಂದು ತಿಳಿಯಬೇಕು.

**೩] ಅಥಅನ್ವಯ ಬೋಧವಿಮರ್ಶ ಪ್ರಕರಣವು**

**ಪದಾರ್ಥಾನ್ವಯ ಬೋಧದಲ್ಲಿ ವೈಯಾಕರಣ ಪ್ರಕ್ರಿಯಾನಿರೂಪಣೆ ಹಾಗು ಅವರ ಖಂಡನೆ—**

ಶಂಕಾ– ಪದಗಳು, ಪದಾರ್ಥಮಾತ್ರ ಜ್ಞಾನಜನಕಗಳು (ಜ್ಞಾನ ಹುಟ್ಟಿಸುತ್ತವೆ) ಆದರೆ ಅನ್ವಯ [ಸಂಬಂಧ] ಸಾಮಾನ್ಯದ ಹಾಗು ಅನ್ವಯವಿಶೇಷದ [ಸಂಬಂಧ ವಿಶೇಷದ], ಜ್ಞಾನಜನಕಗಳು ಎಂದು ಹೇಳಲು ಯಾವ ಲಿಂಗಗಳೂ ಇಲ್ಲ. ಕಾರಣ ಪೂರ್ವದಲ್ಲಿ ಆಗಮವು [ಸಂಬಧ] ವಿಶೇಷ ಬೋಧಕವೆಂದು ಹೇಳಿದ್ದು ಸರಿಯಲ್ಲ [ವಿ.ಪದಗಳು ಪದಾರ್ಥಜ್ಞಾನ ಮಾಡಿಕೊಡುತ್ತವೆ. ಆದರೆ ಪದಪದಾರ್ಥಗಳ ಸಂಬಂಧ ವಿಶೇಷ ಜ್ಞಾನವನ್ನು ಯಾವದು ಮಾಡಿಕೊಡುತ್ತದೆ? ಪದಗಳೆ ಮಾಡಿಕೊಡುತ್ತವೆಯೊ ಅಥವಾ ಬೇರೆ ಯಾವದಾದರೂವಸ್ತು ಉಂಟೋ? ಎಂಬ ಭಾವ] ಈ ವಿಷಯದಲ್ಲಿ ವಾದಿಗಳಿಂದ ಉಕ್ತವಾದ ಪರಿಹಾರವನ್ನು ಅನುವಾದಿಸಿ ದೂಷಿಸಲಾಗುತ್ತದೆ

[ಅನ್ವಯ ಬೋಧ ವಿಷಯದಲ್ಲಿ] ವೈಯಾಕರಣರು:- ವರ್ಣಪದಗಳಿಂದ ಅಭಿವ್ಯಕ್ತವಾದ ಒಂದೇ ಆದ ವಾಕ್ಯರೂಪವಾದ ಅಖಂಡವಾದ [ವರ್ಣಗಳ ಅವಯವ ಆಗದೇ ಇದ್ದ]

तत्र प्रमाणं तु-अनेकेषु वर्णेषु, च 'एकं पदं'' 'एकं वाक्यं' इत्येकत्वो ल्लेखिप्रत्यक्षप्रतीतिरप्यस्तीति । स्फोटो नाम **पतंजलिना महाभाष्ये** एवमुक्तं 'अथ गौरित्यत्रैकश्शब्दः, येनोच्चरितेन सास्नालांगूलखुरककुदविषाणानां संप्रत्ययो भवति स स्फोटः शब्द' इति । स्फोट इत्यत्र विग्रहं, स्फोटशब्दार्थं च वैयाकरणा द्वेधा निरुक्तवंतः । स्फुटयते व्यज्यते वर्णैरिति स्फोटो वर्णाभिव्यंग्यः । तथा स्फुटयति स्फुटीभवति अर्थ इति स्फोटोऽर्थ प्रत्यायक इति । तत्रापि, यथा स्फोटविषये प्रत्यक्षं प्रमाणं, तथा अर्थापत्तिरूपप्रमाणमप्यस्ति, तथा हि ( **भावविवरणे** ) :—वर्णाः पदानि च न, प्रत्येकमर्थमुपस्थापयंति, समुदायोऽपि नाशुतरविनाशिनां संभवति,

---

ಸ್ಫೋಟವು, ಪದಾರ್ಥಗಳ ಸಾಮಾನ್ಯ ಅನ್ವಯ ವಿಶೇಷ್ಯಾನ್ವಯವನ್ನು ಬೋಧಿಸುತ್ತವೆ ಎಂದು ಹೇಳುತ್ತಾರೆ. ಈ ವಿಷಯದಲ್ಲಿ ಪ್ರಮಾಣವು– ಅನೇಕ ವರ್ಣಗಳಲ್ಲಿ ಏಕಪದವು [ಒಂದು ಪದವು], ಅನೇಕ ಪದಗಳಲ್ಲಿ ಒಂದು ವಾಕ್ಯವು ಎಂದು ಏಕತ್ವವನ್ನು ವಿಷಯೀಕರಿಸತಕ್ಕ ಪ್ರತ್ಯಕ್ಷ ಪ್ರತೀಯು ಇದೆ. [ಇದೇ ಪ್ರಮಾಣವು] ಸ್ಫೋಟವೆಂದರೆ:– ಪತಂಜಲಿಯು ಮಹಾಭಾಷ್ಯದಲ್ಲಿ ಹೀಗೆ ವ್ಯಾಖ್ಯಾನ ಮಾಡಲಾಗಿದೆ, ಗೋವು ಎಂಬಲ್ಲಿ ಗೋಶಬ್ದವು ಯಾವನಿಂದ ಉಚ್ಚರಿತವಾಗಿ, ಗಂಗೆ ತೊಗಲು, ಬಾಲ, ಖುರ, ಇಣಿ, ಕೋಡುಗಳ ಜ್ಞಾನ ಮಾಡಿಕೊಡುತ್ತದೆಯೋ ಅದೇ ಸ್ಫೋಟವು. ಸ್ಫೋಟವೆಂಬಲ್ಲಿ ವಿಗ್ರಹವು– ವೈಯಾಕರಣರಿಂದ, ಎರಡು ರೀತಿಯಿಂದ ನಿರುಕ್ತವಾಗಿದೆ. 'ಸ್ಫುಟ್ಯತೆ [ವ್ಯಕ್ತವಾಗುತ್ತದೆ] ವರ್ಣಗಳಿಂದ ಇತಿ ಸ್ಫೋಟವು' ಅಂದರೆ ವರ್ಣಗಳಿಂದ ಅಭಿವ್ಯಂಗ್ಯವಾದದ್ದು. ಅಥವಾ 'ಸ್ಫುಟವಾಗುತ್ತದೆ' [ಅರ್ಥವು] ಈ ಕಾರಣದಿಂದ ಸ್ಫೋಟವು, ಅಂದರೆ ಅರ್ಥವಿಷಯಕ ಜ್ಞಾನಜನಕವು ಎಂದು ಹೇಳುತ್ತಾರೆ. ಹಾಗೂ ಸ್ಫೋಟ ವಿಷಯದಲ್ಲಿ ಹೇಗೆ ಪ್ರತ್ಯಕ್ಷವು ಪ್ರಮಾಣವಿದೆಯೋ ಅದರಂತೆ ಅರ್ಥಾಪತ್ತಿ ಪ್ರಮಾಣವೂ ಇರುತ್ತದೆ. ಅದು ಹೇಗೆಂದರೆ:– [ಭಾವವಿವರಣದಲ್ಲಿ ಈ ವಿಷಯ ಹೇಳಲಾಗುತ್ತದೆ] ವರ್ಣಗಳು ಪದಗಳೂ ಪ್ರತ್ಯೇಕವಾಗಿ ಅರ್ಥಜ್ಞಾನವನ್ನು ಹುಟ್ಟಿಸಲಾರವು. ಸಮುದಾಯದಿಂದಲೂ ಸಾಧ್ಯವಿಲ್ಲ, ಯಾಕೆಂದರೆ– ವರ್ಣಗಳು, ಪದಗಳು, ಉಚ್ಚರಿತವಾದಕ್ಷಣವೇ. ನಾಶವಾಗುತ್ತವೆ. ಅಂದ ಮೇಲೆ ಅವುಗಳ ಸಮುದಾಯ ಹೇಗಾದೀತು? [ಅಂದರೆ ಅವುಗಳಿಂದ ಅನ್ವಯ ಬೋಧ ಸಾಧ್ಯವಿಲ್ಲ]

नित्यत्वेऽपि प्रतीयमानानामबोधकत्वेन आशुतरविनाशप्रतीतिसमुदायस्याप्यसंभवेन तावद्वर्णपदविषयकैकसमूहालंबनांगीकारे चावश्यकक्रमानुपपत्त्यार्थप्रतीत्यनुपपत्तेः एतावत्पदाभिव्यक्तं स्फोटाख्यं वाक्यं चांगीकर्तव्यमित्यर्थप्रत्यायकत्वान्यथानुपपत्तिरेव तत्र मानमिति ।

अत्र दूषणं तु-**भावविवरणे ( वेदेशीये )** तथा हि--स्फोटे, अर्थापत्तिरूपप्रमाणमुपन्यस्त तदनुपपन्नं, **अप्रतीतार्थस्य** प्रत्यायकत्वेऽतिप्रसंगेन प्रमाणांतरस्य च तत्प्रापकस्याभावेन तयैवार्थापत्त्या तत्प्रतीतौ, इतरेतराश्रयत्वप्रसंगात् ।

---

ಪದವರ್ಣಗಳು ನಿತ್ಯವಾಗಿ ಪ್ರತೀತವಾದರೂ ಅನ್ವಯ ಬೋಧ ಕಂಡಿಲ್ಲ. ಆ ಪದವರ್ಣಗಳಿಂದ ಬರುವ ಪ್ರತೀತಿಯಾದರೂ ಆಶುತರ ವಿನಾಶ ಹೊಂದುವದರಿಂದ ಪ್ರತೀತಿ ಸಮುದಾಯವೂ ಕೂಡುವದಿಲ್ಲ. ಒಂದು ಪಕ್ಷ ಒಂದೊಂದು ಪದಗಳ ವಿಷಯಕ ಸಮೂಹಾಲಂಬನಾತ್ಮಕ ಜ್ಞಾನವನ್ನು ಅಂಗೀಕಾರ ಮಾಡಿದರೂ ಆ ವರ್ಣ ಪದಗಳಿಗೆ ಅವಶ್ಯವಾದ ಕ್ರಮವು ಉಪಪತ್ತಿಯಾಗದಲೇ ಅರ್ಥಜ್ಞಾನವು ಆಗದೇ ಹೋಗುತ್ತದೆ, ಆದರೆ ಪದ ಹಾಗೂ ವರ್ಣಗಳಿಂದ ಅರ್ಥಜ್ಞಾನವು ಆಗುತ್ತದೆ, ಅಂದಮೇಲೆ ಪದವರ್ಣಗಳಿಗೆ ಅರ್ಥಪ್ರತೀತಿಜನಕತ್ವ ಕೂಡಬೇಕಾದರೆ ಅರ್ಥಾಪತ್ತಿಯಿಂದ, ವರ್ಣ ಮತ್ತು ಪದಗಳಿಂದ ಅಭಿವ್ಯಂಗ್ಯವಾದ ಸ್ಫೋಟಾತ್ಮಕ ವಾಕ್ಯವನ್ನು ಅಂಗೀಕಾರ ಮಾಡಬೇಕು [ಆ ವರ್ಣಪದಗಳಿಂದ, ಮೇಲೆ ಹೇಳಿದ ರೀತಿಯಿಂದ ಪ್ರತೀತಿಯೂ ಹುಟ್ಟದಿದ್ದರೂ, ಯಾವದೋ ರೀತಿಯಿಂದ ಪ್ರತೀತಿಯಂತೂ ಹುಟ್ಟುತ್ತದೆ. ಅಂದ ಮೇಲೆ ಅರ್ಥಪ್ರತೀತ್ಯನ್ಯಥಾಅನುಪತ್ತಿರೂಪ ಅರ್ಥಾಪತ್ತಿಯೇ ಸ್ಫೋಟ ವಿಷಯದಲ್ಲಿ ಪ್ರಮಾಣವೆಂದು ಸಿದ್ಧವಾಗುತ್ತದೆ. ಎವಂಚ ಸ್ಫೋಟ ವಿಷಯದಲ್ಲಿ ಅರ್ಥಾಪತ್ತಿಯು ಪ್ರಮಾಣವೆಂದಾಯಿತು]

ಈ ವಿಷಯದಲ್ಲಿ ದೂಷಣವು:-[ಭಾವವಿವರಣದಲ್ಲಿ ಹೀಗೆ ಹೇಳಲಾಗಿದೆ] ಸ್ಫೋಟ ವಿಷಯದಲ್ಲಿ ಅರ್ಥಾಪತ್ತಿ ಪ್ರಮಾಣ ಹೇಳಿದ್ದು ಸರಿಯಲ್ಲ, ಯಾವ ಸ್ಫೋಟವು ಪ್ರತೀತಿಗೆ ವಿಷಯವೇ ಆಗಲ್ಲವೋ ಅಂಥ ಸ್ಫೋಟವು ಪ್ರತೀತಿಗೆ ವಿಷಯವಾಗುತ್ತದೆ ಎಂದು ಹೇಳಿದಲ್ಲಿ ಅತಿಪ್ರಸಂಗ ಬರುವದು. [ಯಾವನಿಗೆ ಯಾವ ವಸ್ತುವಿನ ಜ್ಞಾನವಿಲ್ಲವೋ ಅವನಿಗೂ ಆ ವಸ್ತುವಿನ ಜ್ಞಾನ ಬರಬೇಕಾದೀತು ಇದೇ ಅತಿ ಪ್ರಸಂಗವು) ಹಾಗೂ ಸ್ಫೋಟ ತಿಳಿಸತಕ್ಕ ಪ್ರಮಾಣಾಂತರಗಳು ಇಲ್ಲ ಪೂರ್ವೋಕ್ತ ಅರ್ಥಾಪತ್ತಿಯಿಂದಲೇ ಸ್ಫೋಟವು ಪ್ರತೀತವಾಗುತ್ತದೆ [ತಿಳಿಯುತ್ತದೆ] ಅಂದಲ್ಲಿ ಅನ್ಯೋನ್ಯಾಶ್ರಯ ದೋಷ ಬರುತ್ತದೆ.

प्रतीते हि स्फोटेऽर्थप्रतीतिः तस्यां च सत्यां तदन्यथानुपपत्या स्फोटप्रतीतिरिति ।

नचैकं पदं एकं वाक्यमित्येकार्थावलंबिनी प्रत्यक्षप्रतीतिः, तत्र प्रमाणांतरमस्तीत्युक्तमिति वाच्यं, अनेकेषु 'एकं वनं' इतिवदुपपत्तेः, अन्यथा तत्राप्यनेक वृक्षातिरिक्तैकवनस्वीकारापत्तिरिति स्यात् ।

॥ इति पदार्थान्वयबोधे वैयाकरणप्रक्रियानिरूपणं तत्खडनं च ॥

२. वाक्यांत्यवर्णो, अन्वयबोधक इत्यन्ये—

एतत्पक्षे अश्रुतपूर्ववर्णस्यापि अंत्यवर्णश्रवणमात्रेणान्वयबोधापत्तिः,

---

ಹೇಗೆಂದರೆ- ಸ್ಫೋಟವು ಪ್ರತೀತವಾದಲ್ಲಿ ಅದರಿಂದ ಪದಾರ್ಥ ವಿಷಯಕ ಪ್ರತೀತಿಯು, ಪದಾರ್ಥ ವಿಷಯಕ ಪ್ರತೀತಿ ಬಂದಲ್ಲಿ, ಅರ್ಥಪ್ರತೀತಿಅನ್ಯಥಾಅನುಪಪತ್ತಿ. ಯಿಂದ ಸ್ಫೋಟ ಪ್ರತೀತಿಯು ಬರಬೇಕಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. [ಸ್ಫೋಟವಿಷಯದಲ್ಲಿ ಅರ್ಥಾಪತ್ತಿಯು ಪ್ರಮಾಣವಾಗಲಾರದು]

'ಒಂದೇ ಪದವು' 'ಒಂದೇ ವಾಕ್ಯವು' ಎಂಬ ಪದಾರ್ಥ ವಿಷಯಕ ಪ್ರತ್ಯಕ್ಷ ಪ್ರತೀತಿಯು. ಸ್ಫೋಟದಲ್ಲಿ ಪ್ರಮಾಣವು ಎಂದು ಹೇಳಿದ್ದು ಸರಿಯಲ್ಲ. ಅನೇಕ ವೃಕ್ಷಗಳಲ್ಲಿ ಒಂದೇವನ ಎಂಬ ಪ್ರತೀತಿಯು ಹೇಗೆ ಬರುತ್ತದೆಯೋ ಅದರಂತೆ ಅನೇಕ ಪದಗಳಲ್ಲಿ ಒಂದು ವಾಕ್ಯವು ಎಂಬ ಪ್ರತೀತಿಯು ಬರುತ್ತದೆ. ಇದನ್ನು ಒಪ್ಪದೇಹೋದರೆ ಅನೇಕ ವೃಕ್ಷಗಳಲ್ಲಿ ಒಂದೇ ವನವು ಎಂಬ ಪ್ರತೀತಿಯಲ್ಲಿ ಕೂಡ ಒಂದು ವನವು ಎಂಬುವದು ಅನೇಕ ವೃಕ್ಷಗಳಿಂದ ಅತಿರಿಕ್ತವಾಗಿ ತೋರಬೇಕಾದೀತು [ವಿ. ಹೇಗೆ ಅನೇಕ ವೃಕ್ಷಾತಿರಿಕ್ತವಾದ ವನವು ಪ್ರತ್ಯೇಕ ಇಲ್ಲವೋ ಅದರಂತೆ ಅನೇಕ ವರ್ಣ ಪದಾತಿರಿಕ್ತವಾದ ಸ್ಫೋಟವೂ ಇಲ್ಲ. ಕಾರಣ ಸ್ಫೋಟ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲಾರದೆಂಬ ಭಾವ]

---

ಇತರ ವಾದಿಗಳ ಪ್ರಕ್ರಿಯಾ ನಿರೂಪಣೆ ಹಾಗೂ ಅದರ ಖಂಡನೆ-

೧] ವಾಕ್ಯದ ಅಂತ್ಯವರ್ಣವು ಅನ್ವಯ [ಪದಪದಾರ್ಥಗಳ ಸಂಬಂಧ] ಬೋಧಕವೆಂದು ಕೆಲವರು ಹೇಳುತ್ತಾರೆ. ಇವರ ಪಕ್ಷದಲ್ಲಿ- ಪೂರ್ವ ವರ್ಣಗಳು ಶ್ರುತವಾಗದಿದ್ದರೂ ಅಂತ್ಯವರ್ಣಶ್ರವಣದಿಂದಲೇ ಅನ್ವಯ ಬೋಧವಾಗಲಿ ಎಂಬ ಆಪತ್ತಿಯು ಬರುತ್ತದೆ. ಈ ಆಪತ್ತಿಯನ್ನು ಪರಿಹರಿಸಲು

पूर्वपूर्ववर्णानुभवजनितसंस्कारसहकृतेत्यादिविशेषणदानेन च अस्मत्सिद्धांतानतिरेक इति दूषणं द्रष्टव्यम् ।

आकांक्षायोग्यतावत्पदानां सन्निधिः अन्वयबोधक इति केचित् ।

अत्र दूषणं - पदस्यैवान्वयबोधकत्वेन पदसान्निध्यस्यान्वयबोधकत्वकल्पनस्याप्रामाणिकत्वात् । किञ्च पदसान्निध्यस्यार्थबोधकत्वे पदस्यान्विते शक्तिग्रहात्, शक्तिग्राहकप्रमाणविरोधाच्चेत्यादि दूषणं, द्रष्टव्यं ।

।। इति **पदार्थान्वयबोधेऽन्येषां प्रक्रियानिरूपणं तत्खंडनं च** ।।

३. पदैरभिहिताः पदार्था एवाकांक्षाशालिनः संतः, अन्वयबोधका इति **भाट्टाः** । अत्रापि पदार्थानामतीतानागतादिरूपत्वेनान्वयबोधकत्वं न संभवति, कुतः, अतीताद्यर्थानामिदानीमभावात् ।

---

ಪೂರ್ವಪೂರ್ವವರ್ಣಜನಿತ ಸಂಸ್ಕಾರ ಸಹಕೃತ ಇತ್ಯಾದಿ ವಿಶೇಷಣಗಳನ್ನು ಕೊಟ್ಟಲ್ಲಿ ನಮ್ಮ ಸಿದ್ಧಾಂತಕ್ಕೆ ಹೊಂದಿಕೊಂಡಂತೇ ಆಗುತ್ತದೆ ಹೊರತು ಪೃಥಕ್ ಸಿದ್ಧಾಂತವಾಗುವದಿಲ್ಲ. ಇವೇ ಮೊದಲಾದ ದೂಷಣಗಳು ಬರುವದರಿಂದ ಈ ಪಕ್ಷ ಸರಿಯಲ್ಲವೆಂದು ತಿಳಿಯಬೇಕು.

ಆಕಾಂಕ್ಷಾ ಹಾಗೂ ಯೋಗ್ಯತಾಉಳ್ಳ ಪದಗಳ ಸನ್ನಿಧಿಯು, ಅನ್ವಯಬೋಧಕವೆಂದು ಕೆಲವರು. ಈ ಪಕ್ಷವೂ ಸರಿಯಲ್ಲ ಯಾಕಂದರೆ, ಪದವೇ ಅನ್ವಯ ಬೋಧಕವಾಗುವದು ಕಂಡಿದೆ, ಇದನ್ನೂ ಬಿಟ್ಟು ಪದಗಳ ಸನ್ನಿಧಿಯು ಅನ್ವಯ ಬೋಧಕವೆಂದು ಕಲ್ಪನೆಯು ಅಪ್ರಾಮಾಣಿಕವು ಹಾಗೂ ಪದಸಾನ್ನಿಧ್ಯಕ್ಕೆ ಅರ್ಥಬೋಧಕತ್ವ ಅಂಗೀಕರಿಸಿದಲ್ಲಿ, ಅನ್ವಿತವಾದಪದಿಂದ ಶಕ್ತಿಜ್ಞಾನವು ಅನುಭೂತವಾಗಿದೆ. ಆ ಪ್ರಮಾಣ ವಿರೋಧ ಕೂಡ ಬರುತ್ತವೆ. ಇತ್ಯಾದಿ ದೋಷಗಳು, ಈ ಪಕ್ಷದಲ್ಲಿ ಬರುತ್ತವೆ ಎಂದು ತಿಳಿಯಬೇಕು.

---

೩] ಭಾಟ್ಟರು ಈ ವಿಷಯದಲ್ಲಿ ಹೀಗೆ ಹೇಳುತ್ತಾರೆ-

ಪದಗಳಿಂದ ಪ್ರತಿಪಾದ್ಯವಾದ ಅರ್ಥವೇ ಆಕಾಂಕ್ಷಾಶಾಲಿಗಳಾಗಿ ಅನ್ವಯಬೋಧಕಗಳು. ಈ ಪಕ್ಷದಲ್ಲಿ ಹೀಗೆ ದೂಷಣವು:-ಪದಗಳ ಅರ್ಥಗಳು [ಘಟಪಟಾದಿ ವಸ್ತುಗಳು] ಅತೀತ ಹಾಗೂ ಅನಾಗತ [ಬರುವ] ಗಳು ಅವು ವರ್ತಮಾನ ಕಾಲದಲ್ಲಿ ಇಲ್ಲ. ಇಂಥ ಪದಾರ್ಥಗಳು ಹೇಗೆ ಅನ್ವಯ ಬೋಧಕಗಳಾಗುವವು ?

शब्देनायमर्थो ज्ञात इत्यनुभवबाधश्चेत्यादि दूषणम् ।

**।। इति पदपदार्थान्वयबोधे भाट्टमतनिरुपणं तत्खंडनं च ।।**

४. एवं सर्वेषां पक्षाणामप्रामाणिकत्वात् " पदैरेवामुं प्रत्येमीत्यनुभवरूपप्रमाणविरुद्धत्वाच्च " पदान्येवान्वितस्वार्थाभिधायिनीति प्रेक्षावंतः **प्राभाकरा वयं च** ।

ननु पदानामन्विताभिधानविषये प्राभाकराणामस्माकं च किं सर्वात्मना साम्यं,? नास्त्येव, तत्कथमिति चेदित्थं - प्राभाकरास्तु पदानां सामान्यतो योग्येतरान्वितस्वार्थाभिधायित्वमस्तु, तथापि विशेषान्वयबोधकं न किंचिदस्तीति चोद्यस्य किमुत्तरमिति जिज्ञासायां एवं समाधानं कुर्वंति

---

[ಪದಾರ್ಥಗಳು ಇದ್ದರಲ್ಲವೇ ಆಕಾಂಕ್ಷಾಉಳ್ಳವುಗಳಾಗಿ ಅನ್ವಯಬೋಧಕಗಳಾಗಬೇಕು, ಅವೇಇಲ್ಲದ ಮೇಲೆ ಅನ್ವಯ[ಸಂಬಂಧ] ಜ್ಞಾನವಾಗಲು ಸಾಧ್ಯವಿಲ್ಲವೆಂದು ತಿಳಿಯಬೇಕು] ಮತ್ತು ಶಬ್ದದಿಂದ ಅರ್ಥಜ್ಞಾನವಾಗುತ್ತದೆ ಎಂಬ ಅನುಭವ ವಿರೋಧವೂ ಬರುತ್ತದೆ [ವಿ. ಪದಾರ್ಥದಿಂದ ಅನ್ವಯ ಬೋಧವಾಗುತ್ತದೆ ಅಂದಲ್ಲಿ ಶಬ್ದದಿಂದ ಅರ್ಥಬೋಧವಾಗುತ್ತದೆ ಎಂಬ ಅನುಭವ ವಿರೋಧವೂ ಬರುತ್ತದೆ ಎಂಬ ಭಾವ]

೪] ಪ್ರಾಭಾಕರರ ಪ್ರಕ್ರಿಯಾ ನಿರೂಪಣೆಃ-

ಈ ರೀತಿಯಿಂದ ಎಲ್ಲ ಪಕ್ಷಗಳೂ ಅಪ್ರಮಾಣಿಕವಾದ್ದರಿಂದ ಹಾಗೂ 'ಪದಗಳಿಂದಲೇ ಅರ್ಥವನ್ನು ತಿಳಿಯುತ್ತೇನೆ" ಎಂಬ ಅನುಭವರೂಪ ಪ್ರಮಾಣ ವಿರುದ್ಧವಾಗಿದ್ದರಿಂದಲೂ ಎಲ್ಲ ಪಕ್ಷಗಳು ನಿರುಪಯುಕ್ತಗಳು.

ಈ ಅನ್ವಯಬೋಧವಿಷಯದಲ್ಲಿಪ್ರೇಕ್ಷಾವಂತರಾದ ಪ್ರಾಭಾಕರರೂ ಹಾಗೂ ಸಿದ್ಧಾಂತಿಗಳೂ ಅನ್ವಿತಪದಗಳೇ ಸ್ವಾರ್ಥಬೋಧಗಳೆಂದು ಹೇಳುತ್ತಾರೆ.

ಶಂಕಾಃ- ಪದಗಳು ಅನ್ವಿತವಾಗಿಯೇ ಸ್ವಾರ್ಥಬೋಧಕಗಳು [ಪದಗಳು ಇನ್ನೊಂದು ಪದದಿಂದ ಸಂಬದ್ಧವಾಗಿಯೇ ತನ್ನ ಅರ್ಥವನ್ನು ಹೇಳುತ್ತವೆ] ಎಂಬ ವಿಷಯದಲ್ಲಿ [ಅನ್ವಿತಾಭಿಧಾನವಾದದಲ್ಲಿ] ಪ್ರಾಭಾಕರರಿಗೂ ಹಾಗೂ ಸಿದ್ಧಾಂತಿಗಳಿಗೂ ಸಾಮ್ಯವಿದೆಯೇ ? ಎಂದಲ್ಲಿ, ಇಲ್ಲವೆಂದು ಹೇಳಬೇಕಾಗುತ್ತದೆ. ಹೇಗೆಂದರೆ- ಪ್ರಾಭಾಕರರು ಪದಗಳು ಸಾಮಾನ್ಯವಾಗಿ ತನಗೆ ಯೋಗ್ಯವಾದ ಇತರ ಪದದಿಂದ ಸಂಬದ್ಧವಾಗಿ ಸ್ವಾರ್ಥಬೋಧಕಗಳು ಆಗಲಿ, [ಉದಾಃ 'ಘಟಂ ಆನಯ" ಇಲ್ಲಿ ಘಟವೆಂಬ ಪದವು ಸಾಮಾನ್ಯವಾಗಿ ತನಗೆ ಯೋಗ್ಯವಾದ ಇತರ ಪದನೆಂದರೆ 'ಆನಯ' ಎಂಬ ಪದ

"प्रत्येकमपि (पदान्तरसमभिव्याहारेऽपि) पदानि पदान्वयविशेषाभिधानसमर्थानि," तथा च पदांतरसमभिव्यवहारेऽपि पदानि अन्वयविशेषस्य कारकविशेषेण वा कारकविशेषस्य क्रियाविशेषेण वा यः संसर्गः तस्याभिधावृत्त्या बोधने समर्थानि शक्तानीति यावत् ( अन्वयविशेषाभिधानसमर्थानीत्यर्थः ) इति ।

---

विशेषान्विताभिधानवादिप्राभाकरमतस्यासाधुत्वं तथा तन्मताद्वैलक्षण्यं स्वमतस्य कथं? इति चेदित्थं--

अत्र प्रष्टव्यं - किं पदांतरसापेक्षाण्येव पदानि विशेषान्वितस्वार्थाभिधायीनि उत तन्निरपेक्षाणि ।

---

ಈ ಪದಕ್ಕೆ ಸಂಬಂಧ್ಧವಾಗಿ ಸ್ವಾರ್ಥಬೋಧಕವಾಗುತ್ತದೆ. ಆನಯನ ಸಂಬಂಧೀ ಘಟವು [ಘಟವನ್ನು ತರಬೇಕು] ಹೀಗೆ ಅರ್ಥಜ್ಞಾನ ಮಾಡಿಕೊಡುತ್ತದೆ. ಆದರೆ ಕೇವಲ 'ಘಟ' ಈ ಪದವು ಅರ್ಥಬೋಧಕವಾಗಲಾರದು ಎಂಬ ಭಾವ] ಆದರೆ ವಿಶೇಷಾನ್ವಯ [ಸಂಬಂಧ ವಿಶೇಷ] ಬೋಧಕವಾದ ಯಾವ ಪದವೂ ಇಲ್ಲವೆಂದು ಯಾವ ವಾದಿಗಳಾದರೂ ಅಂದಲ್ಲಿ ಇದಕ್ಕೆ ಉತ್ತರವೇನು ? ಹೀಗೆ ಜಿಜ್ಞಾಸೆ ಬಂದರೆ, ಪ್ರಾಭಾಕರರು ಈ ರೀತಿಯಿಂದ ಸಮಾಧಾನ ಮಾಡುತ್ತಾರೆ:- ಪ್ರತ್ಯೇಕ ಪದಗಳು ಪದಾಂತರ ಸಂಬದ್ಧವಾಗಿದ್ದರೂ ಪದಗಳ ಅನ್ವಯ ವಿಶೇಷವನ್ನೇ ಬೋಧಿಸುತ್ತವೆ. ತಥಾಚ-. ಪದಗಳು ಪದಾಂತರ ಸಂಬಂಧವುಳ್ಳವುಗಳಾಗಿ ಅನ್ವಯ ವಿಶೇಷಕ್ಕೆ ಕಾರಕ ವಿಶೇಷದಿಂದಲೂ ಕಾರಕ ವಿಶೇಷಕ್ಕೆ ಕ್ರಿಯಾ ವಿಶೇಷದಿಂದಲೂ ಅಭಿಧಾವೃತ್ತಿಯಿಂದಲೇ ಬೋಧಿಸುವದರಲ್ಲಿ ಸಮರ್ಥಗಳಾಗಿರುತ್ತವೆ. [ವಿ. ಪದಗಳಿಗೆ ಸಾಮಾನ್ಯವಾಗಿ ಪದಾಂತರ ಸಂಬಂಧವಿದ್ದರೂ ಕ್ರಿಯಾ ಮಾತ್ರ ಕಾರಕ ವಿಶೇಷ ಸಂಬಂಧವನ್ನು ಬೋಧ ಮಾಡುವದರಿಂದ ಅನ್ವಯ ವಿಶೇಷವನ್ನು ಬೋಧ ಮಾಡುತ್ತವೆ ಎಂದು ಅವರ ಅಭಿಪ್ರಾಯವು] ವಿಶೇಷಾನ್ವಿತಾಭಿಧಾನವಾದಿಯಾದ ಪ್ರಾಭಾಕರರ ಮತವು ಹೇಗೆ ಅಸಾಧುವಾಗುವದು, ಹಾಗೂ ಅವರ ಮತದಿಂದ ಸ್ವಮತಕ್ಕೆ ವಿಶೇಷವೇನು ? ಎಂದು ಶಂಕಾ ಮಾಡಿದಲ್ಲಿ, ಈ ಶಂಕೆಯನ್ನು ಪರಿಹರಿಸಲು ಪ್ರಾಭಾಕರರನ್ನು ಕುರಿತು ಹೀಗೆ ಪ್ರಶ್ನೆ ಮಾಡಬೇಕು. ಪದಗಳು ಪದಾಂತರ ಅಪೇಕ್ಷಿಸಿಯೇ ವಿಶೇಷಾನ್ವಿತವಾಗಿ ಸ್ವಾರ್ಥಬೋಧಕಗಳೇ ಅಥವಾ ಪದಾಂತರಗಳನ್ನು ಅಪೇಕ್ಷಿಸದೇ ವಿಶೇಷಾನ್ವಿತವಾಗಿ ಸ್ವಾರ್ಥಬೋಧಕಗಳೇ ?

नाद्यः, क्रियापदेनानयनरूपक्रियाविशेषेऽभिहिते घटपदेन तदन्वितार्थाभिधानं घटपदेन घटरूपकारकविशेषेऽभिहिते क्रियापदेन तदन्वितस्वार्थाभिधानं इत्यन्योन्याश्रयात् । नचायं दोषः सामान्यान्वितस्वार्थाभिधानवादेऽस्ति, अन्योन्यनिरपेक्षाणामेव पदानां सामान्यान्वितस्वार्थाभिधायित्वस्यानुभवसिद्धत्वात्, तदुक्तं **सुधायां**–

"स्यादिदं विशेषाभिधानवादिनां दूषणं नास्मकं, सामान्यभिधानवादे तु नायं दोषः, प्रत्येकं पदानि आकांक्षितसन्निहितयोग्यान्वितस्वार्थाभिधानसमर्थानि पदांतरमपेक्षंत इति नेतरेतराश्रयत्वम्" ।

न द्वितीयः (पदांतरनिरपेक्षाणि), – पदांतरनिरपेक्षस्यैकस्य पदस्य विशेषान्वितस्वार्थबोधकत्वस्यानुभवविरुद्धत्वात्

---

ಪ್ರಥಮ ಪಕ್ಷ ಕೂಡುವದಿಲ್ಲ. ['ಘಟಂ ಆನಯ' ಘಟವನ್ನು ತೆಗೆದುಕೊಂಡು ಬಾ ಎಂಬಲ್ಲಿ] ಸಾಮಾನ್ಯವಾದ ಕ್ರಿಯಾಪದದಿಂದ ಆನಯನರೂಪ ಕ್ರಿಯಾ ವಿಶೇಷವು ಹೇಳಲ್ಪಟ್ಟಲ್ಲಿ, ಘಟಪದದಿಂದ ಆನಯನಾನ್ವಿತ ಘಟಪದಾರ್ಥಾಭಿಧಾನವು ಕೂಡುತ್ತದೆ, ಘಟದಿಂದ ಕಾರಕರೂಪ ಘಟವಿಶೇಷವನ್ನು ಹೇಳಿದಲ್ಲಿ ಕ್ರಿಯಾಪದದಿಂದ ಕ್ರಿಯಾನ್ವಿತ ಘಟರೂಪಾರ್ಥಾಭಿಧಾನವು ಕೂಡುತ್ತದೆ.

ಈ ರೀತಿಯಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ. (ಕಾರಣ ಮೊದಲಿನ ಪಕ್ಷ ಕೂಡುವದಿಲ್ಲ] ಈ ದೋಷವು ಸಾಮಾನ್ಯಾನ್ವಿತ ಸ್ವಾರ್ಥ ಅಭಿಧಾನವಾದದಲ್ಲಿ ಇಲ್ಲ. ಅನ್ಯೋನ್ಯ ನಿರಪೇಕ್ಷವಾದ ಪದಗಳೇ ಸಾಮಾನ್ಯಾನ್ವಿತವಾಗಿ ಸ್ವಾರ್ಥಾಭಿಧಾಯಕಗಳು ಆಗುತ್ತವೆಂಬುದು ಅನುಭವಸಿದ್ಧವಾಗಿರುತ್ತದೆ. ಈ ರೀತಿಯಿಂದ 'ಸುಧಾ' ದಲ್ಲಿ ಹೇಳಿದೆ. "ಈ [ಅನ್ಯೋನ್ಯಾಶ್ರಯ] ದೋಷವು ವಿಶೇಷಾನ್ವಿತ ಸ್ವಾರ್ಥಾಭಿಧಾನ ವಾದಿಗಳಾದ ಪ್ರಾಭಾಕರರಿಗೆ ಬರಲಿ, ನಮಗೆ [ಸಿದ್ಧಾಂತಿಗಳಿಗೆ] ಇದು ದೋಷವಾಗಲಾರದು. ನಾವು ಪ್ರತ್ಯೇಕವಾಗಿ ಪದಗಳು ಆಕಾಂಕ್ಷಾ ಯೋಗ್ಯತಾ ಸನ್ನಿಧಿ ಉಳ್ಳವುಗಳಾಗಿ, ಸ್ವಾರ್ಥಬೋಧಕಸಮರ್ಥಗಳಾಗಿ ಪದಾಂತರಗಳನ್ನು ಅಪೇಕ್ಷಿಸುತ್ತವೆ ಎಂದು ಹೇಳುವದರಿಂದ ಅನ್ಯೋನ್ಯಾಶ್ರಯ ದೋಷವು ಬರುವದಿಲ್ಲ"

ಎರಡನೇ ಪಕ್ಷವು [ಪದಾಂತರ ನಿರಪೇಕ್ಷಗಳಾಗಿ ಎಂಬುದು] ಕೂಡುವದಿಲ್ಲ. ಪದಾಂತರ ನಿರಪೇಕ್ಷವಾದ ಒಂದು ಪದವು ವಿಶೇಷಾನ್ವಿತ ಸ್ವಾರ್ಥಬೋಧಕವಾಗುತ್ತದೆ. ಎಂಬುದು ಅನುಭವ ವಿರುದ್ಧವು.

(पदविशेषसन्निधाने, अन्वयविशेषानुभव इति तावदनुभवसिद्धं, तद्विरोधादिति भावः) एवंप्रकारेण प्राभाकरमतस्याधुत्वं बोध्यम् ।

**स्वसिद्धांतस्तु** – प्रयत्येकं पदानि सामान्यतः आकांक्षितसन्निहितयोग्येतरान्वितस्वार्थाभिधानसमर्थानि, न पदांतरमपेक्षंत इति प्राभाकरमत इव नान्योन्याश्रयत्वं तथा च सामान्यतः योग्येतरान्वितस्वार्थाभिधायीनि पदानि, इत्यंगीकारेण तन्मतात्स्वमतस्य वैलक्षण्यं ज्ञेयम् ।

ननु पदानां विशेषान्विते शक्त्यभावे कथं तद्विशेषान्वयप्रतीतिः? पदांतरं च कथं प्रयोजनवत् इति चेदित्थं-पदांतरस्य विशेषान्वयप्रतीतार्थत्वेनैव सार्थक्यं,

---

[ಪದ ವಿಶೇಷ ಸನ್ನಿಧಾನದಿಂದ ಅನ್ವಯ ವಿಶೇಷದ ಅನುಭವವು ಎಂಬುದು ಅನುಭವಸಿದ್ಧವಾಗಿರುತ್ತದೆ ಕಾರಣ] ಈ ಅನುಭವ ಪ್ರಕಾರ ಪ್ರಾಭಾಕರರಮತವು ಅಸಾಧುವೆಂದು ತಿಳಿಯಬೇಕು.

ಸ್ವಸಿದ್ಧಾಂತವು– ಪ್ರತ್ಯೇಕ ಪದಗಳು, ಸಾಮಾನ್ಯವಾಗಿ ಆಕಾಂಕ್ಷಾ ಯೋಗ್ಯತಾ ಸನ್ನಿಧಿಉಳ್ಳವುಗಳಾಗಿ ತನಗೆ ಯೋಗ್ಯವಾದ ಇತರ ಪದಗಳಿಂದ ಅನ್ವಿತವಾಗಿಯೇ ತನ್ನ ಅರ್ಥವನ್ನು ಬೋಧಿಸುತ್ತವೆ. ಪ್ರಾಭಾಕರರ ಮತದಂತೆ ಪದಾಂತರಗಳನ್ನು ಅಪೇಕ್ಷಿಯೇ ವಿಶೇಷಾರ್ಥ ಬೋಧಕಗಳಾಗುವದಿಲ್ಲ. ಕಾರಣ ನಮ್ಮ ಪಕ್ಷದಲ್ಲಿ ಅನ್ಯೋನ್ಯಾಶ್ರಯಕ್ಕೆ ಅವಕಾಶವಿಲ್ಲ (ವಿ. ಪ್ರಾಭಾಕರರಿಗೂ ನಮಗೂ ವ್ಯತ್ಯಾಸವೇನೆಂದರೆ ಪ್ರಾಭಾಕರರು ಪದಗಳು ಪದಾಂತರಗಳನ್ನು ಅಪೇಕ್ಷಿಸಿಯೇ ವಿಶೇಷಾನ್ವಯ ಬೋಧಕಗಳೆಂದು ಹೇಳುತ್ತಾರೆ. ನಾವು. ಪದಗಳು ಸಾಮಾನ್ಯವಾಗಿ ಯೋಗ್ಯೇತರಾನ್ವಿತ ಸ್ವಾರ್ಥ ಬೋಧಕಗಳು ಪದಸನ್ನಿಧಾನವಿಶೇಷದಿಂದ ವಿಶೇಷಾರ್ಥ ಬೋಧಿಸುತ್ತವೆ. ಕಾರಣ ಅನ್ಯೋನ್ಯಾಶ್ರಯವು ಬರುವದಿಲ್ಲವೆಂಬ ಭಾವ] ತಥಾಚ-ಪದಗಳು ಸಮಾನ್ಯವಾಗಿ ಯೋಗ್ಯೆತರಾನ್ವಿತ ಸ್ವಾರ್ಥಾಭಿದಾಯಿಗಳು[ಸ್ವಾರ್ಥಜ್ಞಾನವನ್ನು ಮಾಡಿಕೊಡುವವು] ಎಂದು ಅಂಗೀಕಾರ ಮಾಡಿರುವದರಿಂದ,ಪ್ರಾಭಾಕರರಮತದಿಂದ ನಮ್ಮಮತಕ್ಕೆ ವೈಲಕ್ಷಣ್ಯವು ಇದೆಎಂದುತಿಳಿಯಬೇಕು

ಶಂಕಾ–ಪದಗಳಿಗೆ ವಿಶೇಷಾನ್ವಯ ಶಕ್ತಿ ಇಲ್ಲದೆ ಹೋದರೆ, ಆ ವಿಶೇಷಾನ್ವಯ ಪ್ರತೀತಿಯು ಹೇಗೆ ಆಗುತ್ತದೆ? ಹಾಗೂ ಪದಾಂತರಗಳು ಹೇಗೆ ಪ್ರಯೋಜನವುಳ್ಳವುಗಳಾಗುತ್ತವೆ ಎಂದು ಶಂಕಿಸಿದಲ್ಲಿ, ಇದಕ್ಕೆ ಸಮಾಧಾನವು:– ಪದಾಂತರಗಳು, ವಿಶೇಷಾನ್ವಯ ಪ್ರತೀತಿ ಹುಟ್ಟಿಸುವದರಿಂದಲೇ ಸಾರ್ಥಕಗಳಾಗುವವು.

न चैवं पदानां सामान्यतो योग्येतरान्वये शक्तिः, पदांतरसमभिव्याहरेण विशेषान्वये च शक्तिरिति शक्तिद्वयकल्पने कल्पनागौरवमिति वाच्यम् ।

या शक्तिः पदांतरसमभिव्याहारनिरपेक्षा सामान्यान्वयबोधिका तस्या एव पदांतरसमभिव्याहारसापेक्षतया विशेषान्वयबोधे पर्यवसानांगीकारात् न शक्तिद्वयकल्पनेन कल्पनागौरवमिति **भावविवरणे** :

———

ननु पदानां सामान्यान्विताभिधायित्वे किं मानमिति चेदुच्यतेः–
" **तथाऽनुभवादित्याचार्योक्त्या** " अनुभव एव प्रमाणं, तथाहि

---

ನೀವು ಈ ರೀತಿಯಿಂದ ಹೇಳಿದಲ್ಲಿ, ಪದಗಳು ಸಾಮಾನ್ಯವಾಗಿ ಯೋಗ್ಯೇತರಾನ್ವಿತಸ್ವಾರ್ಥದಲ್ಲಿ ಶಕ್ತಿಯುಳ್ಳವುಗಳು ಮತ್ತು ಪದಾಂತರಗಳ ಸನ್ನಿಧಾನದಿಂದ ವಿಶೇಷಾನ್ವಯದಲ್ಲಿಯೂ, ಶಕ್ತಿಯುಳ್ಳವುಗಳೆಂದು ಹೇಳಿದಂತಾಯಿತು. ಹೀಗೆ ಒಂದೇ ಪದಕ್ಕೆ ಎರಡು ಕಡೆ [ಸಾಮಾನ್ಯ ಹಾಗೂ ವಿಶೇಷದಲ್ಲಿ] ಶಕ್ತಿಕಲ್ಪನಾ ಮಾಡುವದರಿಂದ ಕಲ್ಪನಾಗೌರವದೋಷ ಬರುತ್ತದೆ. ಎಂಬ ಶಂಕಾ ಮಾಡುವ ಆವಶ್ಯಕತೆ ಇಲ್ಲ. ಯಾವ ಶಕ್ತಿಯು ಪದಾಂತರ ಸನ್ನಿಧಾನನಿರಪೇಕ್ಷವಾಗಿದೆಯೋ ಹಾಗೂ ಸಾಮಾನ್ಯಾನ್ವಯ ಬೋಧಿಸುತ್ತದೆಯೋ, ಆ ಶಕ್ತಿಯೇ ಪದಾಂತರ ಸನ್ನಿಧಾನವನ್ನು ಅಪೇಕ್ಷಿಸಿ ವಿಶೇಷಾನ್ವಯ ಬೋಧದಲ್ಲಿ ಪರ್ಯವಸಾನಹೊಂದುವದು. ಹೀಗೆ ಹೇಳುವದರಿಂದ ಎರಡು ಶಕ್ತಿಗಳ ಕಲ್ಪನೆಮಾಡುವ ಅವಶ್ಯಕತೆಇಲ್ಲ. ಕಾರಣ ಕಲ್ಪನಾಗೌರವಕ್ಕೆ ಅವಕಾಶವಿಲ್ಲ ಎಂದು ಭಾವವಿವರಣದಲ್ಲಿ ಹೇಳಿದೆ. [ವಿಶೇಷಃ–ಒಂದು ಪದಕ್ಕೆ ಪದಾಂತರ ಸನ್ನಿಧಾನವನ್ನು ಅಪೇಕ್ಷಿಸದೇ ಸಾಮಾನ್ಯಾನ್ವಿತವಾಗಿ ಅರ್ಥಬೋಧಕ ಶಕ್ತಿಯನ್ನು ಹಾಗೂ ಪದಾಂತರ ಸನ್ನಿಧಾನದಿಂದ ವಿಶೇಷಾರ್ಥ ಬೋಧಕ ಶಕ್ತಿಯನ್ನು ಹೀಗೆ ಎರಡು ಶಕ್ತಿಗಳನ್ನು ಹೇಳಿದರೂ ಅವು ಪ್ರಾಮಾಣಿಕಗಳೇ ಆಗಿದ್ದರಿಂದ ಕಲ್ಪನಾಗೌರವದೋಷ ಬರಲಾರದ ಎಂದು ತಿಳಿಯಬೇಕು]

ಶಂಕಾಃ– ಪದಗಳು, ಸಾಮಾನ್ಯಾನ್ವಿತಸ್ವಾರ್ಥ ಬೋಧಕಗಳು ಎಂಬಲ್ಲಿ ಪ್ರಮಾಣವೇನು ? ಅಂದರೆ ಇದಕ್ಕೆ ಉತ್ತರ. 'ಹಾಗೆ ಅನುಭವವಿರುತ್ತದೆ' ಎಂಬ ಆಚಾರ್ಯರ ಉಕ್ತಿಯೇ ಇರುವದರಿಂದ ಆ ಅನುಭವವೇ ಪ್ರಮಾಣವು. ಹೇಗೆಂದರೆ–

कारकपद ( घटपद ) निरपेक्षाणामेव क्रियापदानां ( आनयनरूपक्रियापद) कारकघटसामान्यान्वितस्वार्थेऽभिधाशक्तिः क्रियापदनिरपेक्षाणां कारकपदानां क्रियासामान्यान्वितस्वार्थे, अभिधारूपा शक्तिः अतएव पदानि प्रत्येकं सामान्यतो योग्येतरान्वितस्वार्थज्ञापनशक्तिमंति भवंति, तथैवानुभवादिति ।

**इति प्राभाकरमतनिरूपणपूर्वकं तत्खडनं, तथा सिद्धांतरीत्या-पदार्थान्वयबोधसमर्थनं च ॥**

( ५ ) शक्तिग्राहकथनप्रसंगाच्छब्दवृत्तिर्निरूप्यते :–

शाब्दबोधौपायिका शक्तिर्नवधा-(शक्तिर्नाम वाच्यवाचकभावसंबंधः)

१. रूढिः २. योगः ३. योगरूढिः ४. लक्षणा, ५. रूढलक्षणा ६. उपचारः ७. रूढोपचारः ८. महायोगः ९. महारूढिश्चेतिभेदात् ।

तत्र, लोके सप्त, भगवति च वृत्तिद्वयं ज्ञेयं, तत्प्रकाराश्चेत्थम्–

१. प्रयोगमात्रबाहुल्यं समुदायशक्तिः वा, **रूढिः**, रूढया अर्थप्रतिपादकशब्दाः रूढाः, ते च घटादिशब्दाः

---

ಕಾರಕ ದನಿರಪೇಕ್ಷವಾದ ಕ್ರಿಯಾಪದವು-ಕಾರಕಪದ[ಘಟ] ಸಾಮಾನ್ಯಾನ್ವಿತ ಸ್ವಾರ್ಥದಲ್ಲಿ ಶಕ್ತಿಯುಳ್ಳದ್ದು. ಇದರಂತೆ ಕ್ರಿಯಾಪದ ನಿರಪೇಕ್ಷವಾದ ಕಾರಕಪದವು. ಕ್ರಿಯಾ ಸಾಮಾನ್ಯಾನ್ವಿತ ಸ್ವಾರ್ಥದಲ್ಲಿ ಶಕ್ತಿಉಳ್ಳದ್ದು. ಈ ಕಾರಣದಿಂದಲೇ ಪ್ರತಿಯೊಂದು ಪದಗಳು ಸಾಮಾನ್ಯವಾಗಿ ತನಗೆ ಯೋಗ್ಯವಾದ ಪದಾನ್ವಿತ ಸ್ವಾರ್ಥಾಭಿದಾಯಿಗಳು ಆಗುತ್ತವೆ- ಹೀಗೆಯೇ ಅನುಭವವಿದ್ದುದೆ.

**ಒಂಬತ್ತು ಪ್ರಕಾರ ಶಕ್ತಿಗಳನ್ನು ಹೇಳುವ ಮೂಲಕ ರೂಢಿಯೋಗ ಮೊದಲಾದವುಗಳ ಲಕ್ಷಣ ನಿರೂಪಣೆಯು**

೧) ಶಕ್ತಿಗ್ರಹಪ್ರಸಂಗದಿಂದ ಶಬ್ದಶಕ್ತಿಯು ನಿರೂಪಿಸಲ್ಪಡುತ್ತದೆ- ಶಾಬ್ದಬೋಧಕ್ಕೆ ಉಪಯುಕ್ತವಾದ ಶಕ್ತಿಯು ಒಂಬತ್ತು ಪ್ರಕಾರಗಳು- [ಶಕ್ತಿ ಅಂದರೆ ವಾಚ್ಯವಾಚಕ ಭಾವ ಸಂಬಂಧವು] ೧] ರೂಢಿಯು ೨] ಯೋಗವು ೩] ಯೋಗರೂಢಿಯು ೪] ಲಕ್ಷಣಾ ೫] ರೂಢಲಕ್ಷಣಾ ೬] ಉಪಚಾರ ೭] ರೂಢೋಪಚಾರ ೮] ಮಹಾಯೋಗ ೯] ಮಹಾರೂಢಿ ಈ ಭೇದದಿಂದ ಒಂಬತ್ತು ಪ್ರಕಾರಗಳು. ಇವುಗಳಲ್ಲಿ ಜಗತ್ತಿನಲ್ಲಿ ಏಳು ಪ್ರಕಾರಗಳು ಪ್ರಸಿದ್ಧ ಇವೆ. ಪರಮಾತ್ಮನಲ್ಲಿ ಎರಡು ವೃತ್ತಿಗಳು ಇವೆ.

೧) ರೂಢಿಯು: ಒಂದು ವಸ್ತುವಿನಲ್ಲಿ ಪ್ರಯೋಗ ಬಾಹುಳ್ಯವು

२. **योगः**—अवयवशक्तिर्योगः, योगेनैवार्थप्रतिपादका यौगिकाः, ते च पाचकपाठकदंडिकुंडल्यादयः ।

३. अवयवार्थसापेक्षसमुदायशक्तिः, योगरूढिः । योगरूढ्यार्थ-प्रतिपादकाः शब्दा योगरूढाः, ते च पंकजादयः शब्दाः ।

४. लक्षणा-मुख्यार्थसंबंधं निमित्तीकृत्य वृत्तिः (शक्यार्थसंबंधः) लक्षणा, सा द्विविधा—(१) जहल्लक्षणा (२) अजहल्लक्षणा चेति (आदर्श) ।

(१) **जहल्लक्षणा**—लक्ष्यतावच्छेदकेन रूपेण लक्ष्यमात्रबोध-प्रयोजिका, यथा-गंगायां घोषः इत्यत्र गंगारूप प्रवाहसंबंधि लक्ष्यं तीरं, लक्ष्यतावच्छेदकं तीरत्वं, तेन रूपेण (तीरत्वेन रूपेण) लक्ष्यमात्रबोधप्रयोजिका तीरमात्रबोधप्रयोजिकेति लक्षणसमन्वयः।

---

ಅಥವಾ ಪ್ರಕೃತಿ ಪ್ರತ್ಯಯ ಸಮುದಾಯ ಶಕ್ತಿಯು. ರೂಢಿಯು ಈ ರೂಢಿಯಿಂದ ಅರ್ಥಪ್ರತಿಪಾದನ ಮಾಡತಕ್ಕ ಶಬ್ದಗಳು ರೂಢಶಬ್ದಗಳು- ಉದಾಃ-ಘಟ, ಘಟಾದಿಗಳು.

೨) ಯೋಗವು:- ಪದಗಳ ಅವಯವ ಶಕ್ತಿಯು ಯೋಗವು. ಯೋಗದಿಂದ ಅರ್ಥಪ್ರತಿಪಾದನ ಮಾಡತಕ್ಕ ಶಬ್ದಗಳು ಯೌಗಿಕಗಳು. ಉದಾಃ-ಪಾಚಕ, ಪಾಠಕ ದಂಡೀ, ಕುಂಡಲಿ, ಇತ್ಯಾದಿ ಶಬ್ದಗಳು [ಪಚತೀತಿ ಪಾಚಕಃ, ಹೀಗೆ ವಿಗ್ರಹಮಾಡಿ ಅವಯವ ಶಕ್ತಿ ಹೇಳುವದೇ ಯೋಗವು.]

೩) ಯೋಗರೂಢಿಯುಃ-ಅವಯವಾರ್ಥವನ್ನು ಅಪೇಕ್ಷಿಸಿ ಬರುವ ಸಮುದಾಯಶಕ್ತಿಯು ಯೋಗರೂಢಿಯು. ಯೋಗರೂಢಿಯಿಂದ ಅರ್ಥಪ್ರತಿಪಾದನ ಮಾಡತಕ್ಕ ಶಬ್ದಗಳು ಯೋಗರೂಢಗಳು. ಉದಾಃ- ಪಂಕಜ ಮೊದಲಾದ ಶಬ್ದಗಳು [ಪಂಕೇಜಾಯತೆ ಇತಿ ಪಂಕಜಃ. ಹೀಗೆ ಯೋಗದಿಂದಲೂ ಹಾಗೂ ರೂಢಿಯಿಂದ [ಸಮುದಾಯಶಕ್ತಿ] ಇಂದ, ಸಮುದಾಯವೆಂದರೆ ಪ್ರಕೃತಿ ಪ್ರತ್ಯಯ ಸಮೂಹ, ಇಲ್ಲಿ ಪ್ರಕೃತಿ ಪಂಕಜಶಬ್ದ, ಪ್ರತ್ಯಯ ಜಸ್, ಈ ಸಮುದಾಯ ಶಕ್ತಿಇಂದ ಕಮಲವೆಂದು ಅರ್ಥವಾಗುತ್ತದೆ.] ಈ ಪಂಕಜ ಶಬ್ದವು ಯೋಗರೂಢವು.

೪) ಲಕ್ಷಣಾಃ- ಮುಖ್ಯಾರ್ಥ ಸಂಬಂಧನಿಮಿತ್ತ ಶಕ್ತಿಯು. [ಶಕ್ಯಾರ್ಥ ಸಂಬಂಧವು] ಲಕ್ಷಣಾ. ಈ ಲಕ್ಷಣಾ ಎರಡು ಪ್ರಕಾರ ೧) ಜಹಲ್ಲಕ್ಷಣಾ ೨) ಅಜಹಲ್ಲಕ್ಷಣಾ

೧] ಜಹಲ್ಲಕ್ಷಣಾ:- ಲಕ್ಷ್ಯವಾದ ಪದಾರ್ಥದ ಅಸಾಧಾರಣ ಧರ್ಮದಿಂದ ಸಹಿತ-ವಾಗಿ ಕೇವಲ ಲಕ್ಷ್ಯವಸ್ತುವನ್ನೇ ಬೋಧಿಸುವ ಪ್ರಯೋಜನವುಳ್ಳದ್ದು ಜಹಲ್ಲಕ್ಷಣಾ

तथा च गंगायां घोष इत्यस्य गंगातीरे घोषइत्यर्थः । लक्षणाबीजं तु–प्रवाहे, घोषान्वयानुपपत्तिः, अतस्तीरे लक्षणांगीकृता, ज्ञेया ।

(२) **अजहल्लक्षणा** नाम–लक्ष्यतावच्छेदकेन रूपेण लक्ष्यशक्योभयबोधप्रयोजिका, यथा काकेभ्यो दधि रक्ष्यतामित्यत्र, लक्ष्यं दध्युपघातकद्रव्यं मार्जारादिकं, शक्यं काकाः लक्ष्यशक्योभयबोधप्रयोजकत्वाल्लक्षणसमन्वयः । तथा च काकेभ्योदधिरक्ष्यतामित्यत्र दध्युपघातकद्रव्यत्वावच्छिन्ने लक्षणा, तेन काकेभ्यो मार्जारादिभ्यश्च दधि रक्ष्यतामित्यर्थो भवति ।

---

ಉದಾ:–'ಗಂಗಾ ನದಿಯಲ್ಲಿ ಹಳ್ಳಿಯು' ಇಲ್ಲಿ ಗಂಗಾ ಪದಕ್ಕೆ ಲಕ್ಷ್ಯವಾದ ಅರ್ಥವು ತೀರವು [ದಂಡೆಯು] ಇದರ ಅಸಾಧಾರಣ ಧರ್ಮ, ತೀರತ್ವವು. ಈ ತೀರತ್ವದಿಂದ ಕೂಡಿದ ಲಕ್ಷ್ಯವಸ್ತುವು ತೀರವು ಈ ತೀರವನ್ನೇ ಬೋಧಿಸುವ ಪ್ರಯೋಜನವುಳ್ಳದ್ದಾಗಿದೆ. 'ಗಂಗಾ ತೀರದಲ್ಲಿ ಘೋಷವು' [ಹಳ್ಳಿಯು] ಎಂಬ ವಾಕ್ಯವು, ಇಲ್ಲಿ ಲಕ್ಷಣ ಸಮನ್ವಯವಾಗುತ್ತದೆ. ತಥಾಚ–ಗಂಗಾ ನದಿಯಲ್ಲಿ ಹಳ್ಳಿಯು ಎಂಬಲ್ಲಿ ಗಂಗಾ ತೀರದಲ್ಲಿ ಎಂಬ ಅರ್ಥ ಮಾಡಬೇಕು. [ಯಾಕಂದರೆ, ಗಂಗಾ ಪ್ರವಾಹದಲ್ಲಿ ಹಳ್ಳಿ ಇರಲು ಸಾಧ್ಯವಿಲ್ಲ. ಕಾರಣ ತೀರದಲ್ಲಿ ಹಳ್ಳಿಯೆಂದು ಲಾಕ್ಷಣಿಕಾರ್ಥ ಹೇಳಬೇಕು. ಇಲ್ಲಿ ಗಂಗಾ ಪ್ರವಾಹಕ್ಕೂ ಹಳ್ಳಿಗೂ ಸಂಬಂಧ ಕೂಡದಿರುವದರಿಂದ [ಅನ್ವಯಾನುಪಪತ್ತಿಯಿಂದ] ಲಕ್ಷಣಾ ಮಾಡಬೇಕಾಗುತ್ತದೆ. ಅಂದರೆ ಗಂಗಾ ಪ್ರವಾಹದಲ್ಲಿ ಹಳ್ಳಿ ಎಂದು ಅಲ್ಲ. ಗಂಗಾ ತೀರದಲ್ಲಿ ಹಳ್ಳಿ ಎಂದು ಅರ್ಥ ಹೇಳಬೇಕಾಗುತ್ತದೆ]

೨) ಅಜಹಲ್ಲಕ್ಷಣಾ:– ಲಕ್ಷ್ಯತಾವಚ್ಛೇದಕದಿಂದ ಕೂಡಿದ, ಲಕ್ಷ್ಯ ಹಾಗೂ ಶಕ್ಯಾರ್ಥವನ್ನು ಬೋಧಿಸುವ ಪ್ರಯೋಜನವುಳ್ಳದ್ದು. ಅಜಹಲ್ಲಕ್ಷಣಾ. ಉದಾ–'ಕಾಗಿಗಳಿಂದ ಮೊಸರನ್ನು ರಕ್ಷಿಸಬೇಕು' ಈ ವಾಕ್ಯದಲ್ಲಿ ಲಕ್ಷ್ಯವು, ಮೊಸರಿಗೆ ನಾಶಕವಾದ ದ್ರವ್ಯಗಳು. ಅಂದರೆ ಮಾರ್ಜಾರಾದಿಗಳು [ಬೆಕ್ಕು ಮೊದಲಾದವುಗಳು] ಶಕ್ಯಾರ್ಥವು ಕಾಗಿಯು. ಲಕ್ಷ್ಯತಾವಚ್ಛೇದಕವು [ಲಕ್ಷ್ಯದಲ್ಲಿದ್ದ ಅಸಾಧಾರಣ ಧರ್ಮವು] ಮೊಸರು ನಾಶ ಮಾಡತಕ್ಕ ದ್ರವ್ಯ ಧರ್ಮಗಳು [ದಧ್ಯುಪಘಾತಕ ದ್ರವ್ಯತ್ವವು] ಈ ಧರ್ಮದಿಂದ ಕೂಡಿ, ಕಾಗೆ, ಬೆಕ್ಕು ಮೊದಲಾದ ದಧಿ ನಾಶಕ ದ್ರವ್ಯಗಳನ್ನು ಬೋಧಿಸಿ ಈ ಕಾಗೆ ಬೆಕ್ಕು ಮೊದಲಾದವುಗಳಿಂದ ಮೊಸರನ್ನು ರಕ್ಷಿಸಬೇಕೆಂಬ ಪ್ರಯೋಜನವುಳ್ಳದ್ದಾಗಿದೆ. ಕಾರಣ ಈ ವಾಕ್ಯದಲ್ಲಿ ಲಕ್ಷಣ ಸಮನ್ವಯವಾಗುತ್ತದೆ.

(५) **रुढलक्षणा**--शक्यार्थसंबंधे प्रयोगबाहुल्यं, यथा-ग्रामो गच्छतीत्यत्र ग्रामस्थाः गच्छंतीत्यर्थः, अत्र प्रयोगबाहुल्यसद्भावेनेयं रूढलक्षणा ज्ञेया ।

(६) **उपचारः**–मुख्यर्थगुणयुक्तार्थांतरे वृत्तिः यथा-सिंहो देवदत्त इत्यत्र मुख्यार्थः सिंहः, तद्‌गुणः गांभीर्यादिः, तद्युक्ते देवदत्ते सिंह इति प्रयोगः । तथा च सिंहसदृशो देवदत्त इति अयमुपचार इत्युच्यते

---

ತಥಾಹ-'ಕಾಗೆಗಳಿಂದ ಮೊಸರು ರಕ್ಷಣೆ ಮಾಡಬೇಕೆಂಬಲ್ಲಿ, ದಧಿಗೆ ನಾಶಕವಾದ ದ್ರವ್ಯಗಳಾದ ಕಾಗೆ, ಬೆಕ್ಕು ಮೊದಲಾದವುಗಳಿಂದ ಮೊಸರು ರಕ್ಷಿಸಬೇಕೆಂಬುದು ಅರ್ಥವಾಗುತ್ತದೆ [ಹೀಗೆ ಬೋಧಿಸುವದೇ ಅಜಹಲ್ಲಕ್ಷಣಾದ ಪ್ರಯೋಜನವು]

೫] ರೂಢಲಕ್ಷಣಾ:- ಶಕ್ಯಾರ್ಥ ಸಂಬಂಧದಲ್ಲಿ ಪ್ರಯೋಗಬಾಹುಲ್ಯವು. ಉದಾ:- ಗ್ರಾಮವು ಹೋಗುತ್ತದೆ [ಗ್ರಾಮೋಗಚ್ಛತಿ] ಇಲ್ಲಿ, ಗ್ರಾಮದಲ್ಲಿ ಇದ್ದವರು ಹೋಗುತ್ತಾರೆ, ಎಂದು ಅರ್ಥವು. "ಗ್ರಾಮವು ಹೋಗುತ್ತದೆ" ಈ ವಾಕ್ಯದಲ್ಲಿ ಶಕ್ಯಾರ್ಥವು ಗ್ರಾಮರೂಪ ಅರ್ಥವು ಇದಕ್ಕೆ ಸಂಬಂಧಿಯಾದವರು ಗ್ರಾಮದಲ್ಲಿ ಇರತಕ್ಕವರು ಇದರಲ್ಲಿಯೇ ಪ್ರಯೋಗ ಬಾಹುಲ್ಯವು ಇದೆ (ಅಂದರೆ ಗ್ರಾಮದಲ್ಲಿ ಇರತಕ್ಕವರನ್ನು ಹೇಳಬೇಕೆಂಬ ಅಭಿಪ್ರಾಯದಿಂದಲೇ 'ಗ್ರಾಮೊಗಛ್ಛತಿ' ಎಂಬ ಪ್ರಯೋಗಬಾಹುಲ್ಯವದೆ) ಕಾರಣ ಉಕ್ತವಾಕ್ಯದಲ್ಲಿ ಲಕ್ಷಣ ಸಮನ್ವಯವಾಗುತ್ತದೆ. (ಹೀಗೆ ಲೋಕದಲ್ಲಿ ಅನೇಕ ಪ್ರಯೋಗಗಳು ಕಂಡಿವೆ ಇವು ರೂಢಲಕ್ಷಣಾದಿಂದ ಪ್ರವೃತ್ತವಾದವುಗಳು ಎಂದು ತಿಳಿಯಬೇಕು (ಈ ರೂಢ ಲಕ್ಷಣಾಕ್ಕೆ ಪ್ರಯೋಜನವಿಲ್ಲ)

೬] ಉಪಚಾರ:–ಮುಖ್ಯಾರ್ಥ ಗುಣದಿಂದ ಕೂಡಿದ ಅರ್ಥಾಂತರದಲ್ಲಿ ಶಕ್ತಿಯು. ಉದಾ:-ದೇವದತ್ತನು ಸಿಂಹನು, ಎಂಬಲ್ಲಿ ಮುಖ್ಯಾರ್ಥವು, ಸಿಂಹವು ಇದರ ಗುಣಗಳು ಗಾಂಭೀರ್ಯಾದಿಗಳು ಈ ಗುಣಗಳಿಂದ ಕೂಡಿರುವಅರ್ಥಾಂತರ, ದೇವದತ್ತನು ಈ ದೇವದತ್ತನಲ್ಲಿ ಶಕ್ತಿ ಇದೆ ಕಾರಣ ಸಿಂಹನು ದೇವದತ್ತನು ಎಂಬ ಪ್ರಯೋಗವು ಉಪಚಾರವು. ತಥಾಚ– 'ಸಿಂಹನು ದೇವದತ್ತನು' ಅಂದರೆ ಸಿಂಹನಿಂದಅಭಿನ್ನನು ಎಂದು ಅರ್ಥವಲ್ಲ ಆದರೆ ಸಿಂಹದಲ್ಲಿಯಗಾಂಭೀರ್ಯಾದಿಗುಣಗಳು ಇವನಲ್ಲಿ ಇರುವವರಿಂದ ಸಿಂಹಸದೃಶನು ಎಂದು ಅರ್ಥ ಹೇಳಬೇಕು (ಇಂಥ ಪ್ರಯೋಗಳು ಔಪಚಾರಿಕಗಳೆಂದು ತಿಳಿಯಬೇಕು )

(७) **रूढोपचारः**—मुख्यार्थगुणयुक्तार्थांतरे प्रयोगबाहुल्यं, यथा चित्रलिखितसिंहादौ अयं सिंह इति प्रयोगः ।

(८) **महारुढिः**-प्रयोगबाहुल्ये सति निरवधिकनिमित्तसापेक्षा वृत्तिः, तयावृत्त्याऽर्थप्रतिपादकाः शब्दा महारूढाः, ते च नारायणादिशब्दा ज्ञेयाः ।

१. प्रयोगबाहुल्याभावे सति निरवधिकवृत्तिसापेक्षा वृत्तिः, **महायोगः**, तयावृत्त्याऽर्थप्रतिपादकाः शब्दाः महायौगिकाः, ते चेन्द्रादिशब्दा ज्ञेयाः ।

---

೭) ರೂಢೋಪಚಾರವು- ಮುಖ್ಯಾರ್ಥಗುಣದಿಂದ ಯುಕ್ತ ಅರ್ಥಾಂತರದಲ್ಲಿ ಪ್ರಯೋಗ ಬಾಹುಲ್ಯವು. ಉದಾ:- (ಚಿತ್ರದಲ್ಲಿ ಬರೆದ ಸಿಂಹದಲ್ಲಿ) 'ಇದು ಸಿಂಹವು' ಎಂಬ ಪ್ರಯೋಗವು (ಚಿತ್ರದಲ್ಲಿ ಬರೆದ ಸಿಂಹವು ನಿಜವಾದ ಸಿಂಹವಲ್ಲ ಆದರೂ ಅದಕ್ಕೆ ಸಿಂಹವೆಂದು ಬಹು ಜನರು ಪ್ರಯೋಗ ಮಾಡುತಾರೆ) ಈ ಪ್ರಯೋಗದಲ್ಲಿ ಮುಖ್ಯಾರ್ಥ ವೆಂದರೆ ಸಿಂಹರೂಪ ಅರ್ಥವು, ಈ ಮುಖ್ಯಾರ್ಥದ ಗುಣಗಳು, ಗಾಂಭಿರ್ಯಾದಿಗಳು ಈ ಗುಣಗಳಿಂದ ಕೂಡಿದುದು, ಚಿತ್ರದ ಸಿಂಹವು. ಇಲ್ಲಿ ಬಹುಜನರು ಸಿಂಹವೆಂದು ಪ್ರಯೋಗ ಮಾಡುತ್ತಾರೆ. [ವಿ. ಚಿತ್ರದಲ್ಲಿ ಬರೆದ ಸಿಂಹದಲ್ಲಿ, ಸಿಂಹದ ಆಯಾಲು, ಗಾಂಭಿರ್ಯಾದಿಗಳನ್ನು ಕಂಡು, ಇದು ಸಿಂಹವೆಂದು ಬಹು ಜನರ ವ್ಯವಹಾರವಿದೆ ಈ ಪ್ರಯೋಗಬಾಹುಲ್ಯವೇ ರೂಢೋಪಚಾರವು]

೮) ಮಹಾರೂಢಿಯು- ಬಹು ಪ್ರಯೋಗವಿದ್ದು ನಿರವಧಿಕವಾದ ಪ್ರವೃತ್ತಿ ನಿಮಿತ್ತ-ವನ್ನಪೇಕ್ಷಿಸಿ ಪ್ರವೃತ್ತವಾದ ವೃತ್ತಿಯು, ಮಹಾರೂಢಿಯು. ಮಹಾರೂಢಿಯಿಂದ ಅರ್ಥ ಪ್ರತಿಪಾದಕ ಶಬ್ದಗಳು ಮಹಾರೂಢಗಳು ಅವು ನಾರಾಯಣಾದಿ ಶಬ್ದಗಳು. [ಈ ನಾರಾ-ಯಣ ಶಬ್ದದಲ್ಲಿ ಪ್ರಯೋಗ ಬಾಹುಲ್ಯವಿದೆ ಹಾಗೂ ನಾರಾಯಣ ಶಬ್ದ ಪ್ರವೃತ್ತಿ [ಗುಣ ಪರಿಪೂರ್ಣತ್ವವೂ] ಇವೆ. ಕಾರಣ ನಾರಾಯಣ ಶಬ್ದವು ಮಹಾ ರೂಢವು]

೯] ಮಹಾಯೋಗಃ- ಪ್ರಯೋಗ ಬಾಹುಲ್ಯವಿಲ್ಲದೆ ನಿರವಧಿಕ ಪ್ರವೃತ್ತಿ ನಿಮಿತ್ತವನ್ನಪೇಕ್ಷಿಸಿ ವೃತ್ತಿಯು ಮಹಾಯೋಗವು, ಮಹಾಯೋಗದಿಂದ ಪ್ರವೃತ್ತವಾದ ಶಬ್ದಗಳು ಮಹಾಯೌಗಿಕಗಳು ಅವು ಇಂದ್ರಾದಿ ಶಬ್ದಗಳು. [ಉದಾ: ಇಂದ್ರ ಶಬ್ದವು ಯೋಗದಿಂದ ಪರಿಮಿತ ಐಶ್ವರ್ಯವುಳ್ಳ ಇಂದ್ರನನ್ನು ಬೋಧಿಸಿದರೂ ನಿರವಧಿಕ ಪ್ರವೃತ್ತಿ ನಿಮಿತ್ತದಿಂದ ಇದೇ ಇಂದ್ರ ಶಬ್ದವು ನಿರವಧಿಕ ಐಶ್ವರ್ಯವುಳ್ಳ ನಾರಾಯಣನನ್ನು ಬೋ-ಧಿಸುತ್ತದೆ. ಆದ್ದರಿಂದ ಈ ಇಂದ್ರ ಶಬ್ದವು ಮಹಾ ಯೌಗಿಕವು ಆಗುತ್ತದೆ.)

**।। इति नवधा शक्तिकथनपूर्वकरुढियोगादि लक्षणनिरुपणम् ।।**

(६) एवमागमसामान्यलक्षणमभिधाय, इदानीं सर्वेप्यागमाः पौरुषेया इतिमतं कुमतमिति ज्ञापनार्थं तद्विभागो निरूप्यते, आगमो द्विविधः । १. अपौरुषेयः २. पौरुषेयश्चेति ।

१. तत्रापौरुषेयो वेदः २. पौरुषेयोऽन्य इति ।

आगमे उक्तविभागानुपपत्तिमाशंक्य निराक्रियते, यद्यपि वर्णाः, लोके वेदे च निर्विकारतया नित्याः सर्वगताश्च, पदान्यपि नियतक्रमान्येव, सर्वस्याप्यागमस्य नियतानुपूर्वीकपदात्मकत्वात् । तेषां पदार्थो वाच्यवाचकसबंधोऽपि स्वाभाविक एव । नन्वेवं सति केन हेतुना पौरुषेयापौरुषेयविभाग इति चेदित्थं--

एवमुक्तरीत्या सर्वसाम्येऽपि, आगमे वाक्ये पदानां आनुपूर्वीक्रमविशेषस्य स्वतंत्रपुरुषपूर्वकत्वसद्भावतदभावाभ्यां (आगमे) पौरुषेयापौरुषेयभेदोऽवगंतव्यः ।

---

೬) **ಆಗಮ ವಿಭಾಗ ನಿರೂಪಣ-**

ಆಗಮ ಸಾಮಾನ್ಯ ಲಕ್ಷಣ ಹೇಳಿದ್ದಾಯಿತು. ಈಗ ಎಲ್ಲ ಆಗಮಗಳೂ ಪೌರುಷೇಯವೇ ಎಂಬ ಮತವು ಕುಮತವು ಎಂದು ತಿಳಿಸಲು, ಆಗಮದ ವಿಭಾಗ ಮಾಡಬೇಕಾಗುತ್ತದೆ.

ಆಗಮವು ಎರಡು ಪ್ರಕಾರ- ೧) ಅಪೌರುಷೇಯವು ೨) ಪೌರುಷೇಯವು.

೧) ಇವುಗಳಲ್ಲಿ ಅಪೌರುಷೇಯವು ವೇದವು. ೨) ಈ ಅಪೌರುಷೇಯದಿಂದ ಭಿನ್ನವಾದದ್ದು ಪೌರುಷೇಯವು, ಆದರೆ ಈ ಪ್ರಕಾರ ಆಗಮದಲ್ಲಿ ಎರಡು ವಿಭಾಗಮಾಡಿದ್ದು ಕೂಡುವದಿಲ್ಲ ಎಂಬ ಶಂಕೆಯನ್ನು ನಿರಾಕರಿಸಲಾಗುತ್ತದೆ- ಯದ್ಯಪಿ ವರ್ಣಗಳು ಲೋಕದಲ್ಲಿ (ಲೌಕಿಕ ವಾಕ್ಯದಲ್ಲಿ) ಹಾಗೂ ವೇದಗಳಲ್ಲಿ, ನಿರ್ವಿಕಾರಗಳಾಗಿ ನಿತ್ಯವಾಗಿ ಸರ್ವಗತವಾಗಿಯೂ ಇರುತ್ತವೆ. ಪದಗಳು ನಿಯತವಾದ ಕ್ರಮವುಳ್ಳವುಗಳೇ, ಆಗಿವೆ ಈ ಪದಗಳ ಅರ್ಥವು (ಅಂದರೆ ವಾಚ್ಯ ವಾಚಕಭಾವಸಂಬಂಧವು) ಸ್ವಾಭಾವಿಕವಾಗಿಯೇ ಇರುತ್ತದೆ ಹಿಗೆ ಇದ್ದರೂ ಯಾವ ಕಾರಣದಿಂದ 'ಪೌರುಷೇಯ' ಅಪೌರುಷೆಯ, ವಿಭಾಗವನ್ನು ಆಗಮದಲ್ಲಿ ಮಾಡುವದು? (ವಿ. ವರ್ಣಗಳು, ನಿತ್ಯವಾಗಿವೆ' ಸರ್ವಗತವಾಗಿವೆ ವೇದಗಳಲ್ಲಿ ಹಾಗೂ ಲೌಕಿಕ ವಾಕ್ಯದಲ್ಲಿ ಕ್ರಮವು ನಿಯತವಾಗಿದೆ, ಅರ್ಥವು ಸ್ವಾಭಾವಿಕವೇ ಇದೆ ಹೀಗೆ ಎರಡರಲ್ಲಿಯೂ ಸಾಮ್ಯವಿರುವದರಿಂದ, ಯಾವ ಕಾರಣದಿಂದ ಆಗಮದಲ್ಲಿ ಪೌರುಷೇಯ ಅಪೌರುಷೇಯ

स्वतंत्रपुरुषस्तु--सजातोयोच्चारणमनपेक्ष्योच्चारयिता, पुरुषः। यथा, भारतस्य व्यासः। तथा च पुरुषजन्यं पौरुषेयमिति यावत्
वैदिके तु-स्वतंत्रपुरुषपूर्वकत्वाभावः, अतस्तदागमोऽपौरुषेयः, एवं चोभयत्र वर्णपदपदार्थसंबंधविभागावेऽपि वाक्यगतक्रमविशेषे स्वतंत्रपुरुषपुर्वकर्तृकत्वभावाभावाभ्यां विभागो युक्त इति ध्येयम्।

इति आगमविभागनिरूपणम् ।

इति अन्वयबोधविमर्शप्रकरणम् ।

---

(४) अथ अनुप्रमाणानां त्रैमिध्यसमर्थनप्रकरणम् ।

(१) ननु त्रिविधं प्रमाणं, प्रत्यक्षं अनुमानं आगमश्चेत्युक्तं, तत्र आगमस्यानुमानांतर्भावादनुप्रमाणत्रैविध्यमयुक्तमिति

---

ವಿಭಾಗ ಮಾಡಲಾಗುತ್ತದೆ ಎಂಬ ಭಾವ) ಇದಕ್ಕೆ ಸಮಾಧಾನವು:- ಆಗಮಕ್ಕೆ ಈ ರೀತಿಯಿಂದ ಸರ್ವಸಾಮ್ಯವಿದ್ದರೂ, ಲೌಕಿಕ ವಾಕ್ಯದಲ್ಲಿ ಪದಗಳ ಆನುಪೂರ್ವಿಕಕ್ರಮ ವಿಶೇಷವು, ಸ್ವತಂತ್ರ ಪುರುಷ ಪೂರ್ವಕವಾಗಿರುತ್ತದೆ. ವೇದದಲ್ಲಿ ಸ್ವತಂತ್ರ ಪುರುಷ ಪೂರ್ವಕತ್ವ' ಇಲ್ಲ ಈ ವೈಷಮ್ಯದಿಂದ ಆಗಮದಲ್ಲಿ ಪೌರುಷೇಯ ಅಪೌರುಷೇಯವಿಭಾಗಕೂಡುತ್ತದೆ.

ಸ್ವತಂತ್ರಪುರುಷನೆಂದರೆ:-ಸಜಾತಿಯ ಉಚ್ಚಾರಣೆಯನ್ನು ಅಪೇಕ್ಷೆಮಾಡದೇ ಉಚ್ಚಾರಣ ಮಾಡತಕ್ಕ ಪುರುಷನು. ಉದಾ:-ಭಾರತಕ್ಕೆ ವ್ಯಾಸರು [ಸ್ವತಂತ್ರ ಪುರುಷರು, ಅಂದರೆ ಇನ್ನೊಬ್ಬರ ಉಚ್ಚಾರದ ಸಜಾತೀಯ ಉಚ್ಚಾರ ಮಾಡಿದವನಲ್ಲ]
ತಥಾಚ:-ಪುರುಷ ಜನ್ಯವಾದದು ಪೌರುಷೇಯವು ಎಂದು ತಿಳಿಯಬೇಕು- ವೇದದಲ್ಲಿ ಸ್ವತಂತ್ರ ಪುರುಷನ ಉಚ್ಚಾರವಿಲ್ಲ [ಏಕಪ್ರಕಾರ ಕ್ರಮ ಇರುವದರಿಂದ] ಈ ಕಾರಣ ಆಗಮವು ಅಪೌರುಷೇಯವು- ಹೀಗೆ ಎರಡು ಕಡೆಯಲ್ಲಿ ವರ್ಣ, ಪದ, ಪದಾರ್ಥಗಳ ಸಂಬಂಧ ಇವುಗಳಲ್ಲಿ ಭೇದವಿಲ್ಲದಿದ್ದರೂ, ವಾಕ್ಯಗತ ಕ್ರಮವಿಶೇಷದಲ್ಲಿ ಸ್ವತಂತ್ರ ಪುರುಷ ಪೂರ್ವಕತ್ವ, ಹಾಗೂ ಅದರ ಅಭಾವದಿಂದ ಪೌರುಷೇಯ ಅಪೌರುಷೇಯ ವಿಭಾಗವು ಆಗಮದಲ್ಲಿ ಕೂಡುವದು

೪] ಅಥ ಅನುಪ್ರಮಾಣಗಳಿಗೆ ತ್ರೈವಿಧ್ಯ ಸಮರ್ಥನ ಪ್ರಕರಣವು

ಶಂಕಾ:-ಅನುಪ್ರಮಾಣವು ಮೂರು ವಿಧ- ಪ್ರತ್ಯಕ್ಷ ಅನುಮಾನ, ಆಗಮ, ಎಂದು ಪೂರ್ವದಲ್ಲಿ ಉಕ್ತವಾಗಿದೆ. ಈ ಮೂರರಲ್ಲಿ ಆಗಮವು ಅನುಮಾನದಲ್ಲಿ ಅಂತರ್ಭಾವವಾಗುವದರಿಂದ ಅನುಪ್ರಮಾಣಗಳು ಮೂರು ಎಂದು ಹೇಳಿದ್ದು ಅಯುಕ್ತವು.

शंका स्यात् तद्वारणाय, अनुमानांतर्भववादिनां मतं दूषयितुमनूद्यते ।

आगमोऽनुमान एवांतर्भवतीति **वैशेषिका** आहुः, तथा हि ज्योतिष्टोमेन स्वर्गकामो यजेतेति प्रयोजकवृद्धवाक्यश्रवणानंतरं प्रयोज्यवृद्धो, अनुमिमीते-"इमानि पदानि, स्वस्मारितपदार्थसंसर्गज्ञानपूर्वकाणि, आकांक्षादिमत्पदकदंबकत्वात्, गामानयेतिपदकदंबकवत्" तथाचानुमानविधयैवागमः प्रमाणं भवतीति तेषामाशयः, एवं च त्रिविधमनुप्रमाणमिति विभागोऽनुपपन्न इति । तदसत्, तथाहि-व्याप्तिसमुचितदेशवृत्तित्वपक्षज्ञानाभावदशायामेव वाक्याद्, वाक्यार्थज्ञानस्य जननात्, वाक्यार्थज्ञानकरणक वाक्यं नानुमानांतर्भूतमिति,

---

ಎಂಬ ಶಂಕಾ ಬಂದಲ್ಲಿ ಇದನ್ನು ಪರಿಹರಿಸಲು ಅನುಮಾನವನ್ನು ಆಗಮದಲ್ಲಿ **ಅಂತರ್ಭಾವ** ಮಾಡತಕ್ಕ ಮತವನ್ನು ದೂಷಿಸಲು ಅನುವಾದ ಮಾಡಲಾಗುತ್ತದೆ-

ಆಗಮವು ಅನುಮಾನದಲ್ಲಿ ಅಂತರ್ಭೂತವಾಗುತ್ತದೆ ಎಂದು ವೈಶೇಷಿಕರು ಹೇಳುತ್ತಾರೆ- ಅದು ಹೇಗೆಂದರೆ- ಸ್ವರ್ಗವನ್ನು ಅಪೇಕ್ಷಿಸುವವನು ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕು. ಎಂಬ ಪ್ರಯೋಜಕವೃದ್ಧ [ಪ್ರೇರೆಪಿಸತಕ್ಕ ವೃದ್ಧ]ನ ವಾಕ್ಯವನ್ನು ಶ್ರವಣ ಮಾಡಿದ ಮೇಲೆ [ಪ್ರಯೋಜ್ಯವೃದ್ಧನು] [ಪ್ರೇರ್ಯ ಪುರುಷನು] ಹೀಗೆ ಅನುಮಾನ ಮಾಡಿಕೊಳ್ಳುತ್ತಾನೆ, ಪದಗಳು, "ಸ್ವಸ್ಮಾರಿತ" [ತನ್ನಿಂದ ಸ್ಮಾರಿತವಾದ] ಪದಾರ್ಥಗಳ ಸಂಸರ್ಗ [ಸಂಬಂಧ] ವಿಷಯಕ ಜ್ಞಾನಪೂರ್ವಕಗಳು, ಆಕಾಂಕ್ಷಾದಿವುಳ್ಳ ಪದಗಳ ಸಮೂಹಗಳಾದ್ದರಿಂದ, ಗೋವನ್ನು ತೆಗೆದುಕೊಂಡು ಬಾ ಎಂಬ ಪದಗಳ ಸಮೂಹದಂತೆ. [ಹೀಗೆ ಅನುಮಾನ ಮಾಡುತ್ತಾನೆ]. ತಥಾಚ- ಆಗಮವು ಈ ರೀತಿ ಅನುಮಾನ ವಿಧದಿಂದ ಬೋಧಕವಾಗಿ ಪ್ರಮಾಣವಾಗುತ್ತದೆ ಎಂದು ಅವರ ಅಭಿಪ್ರಾಯವು. ಅಂತೂ ಮೂರು ವಿಧವು ಅನುಪ್ರಮಾಣವು ಎಂಬ ವಿಭಾಗವು ಸರಿಯಲ್ಲ. [ಅನುಮಾನವು ಆಗಮದಲ್ಲಿ ಅಂತರ್ಭಾವವಾದ್ದರಿಂದ ಎರಡು ಅನುಪ್ರಮಾಣಗಳಾದವೆಂಬ ಭಾವ ]

ಹೀಗೆ ಹೇಳುವದು ಯೋಗ್ಯವಲ್ಲ. ಏಕೆಂದರೆ- ವ್ಯಾಪ್ತಿಯು, ಸಮುಚಿತ ದೇಶ ವೃತ್ತಿತ್ವ, [ಪಕ್ಷಧರ್ಮತಾ] ಜ್ಞಾನ, ಆವು ಅನುಮಾನಕ್ಕೆ ಅವಶ್ಯಕ ಇವುಗಳು ಇಲ್ಲದಿದ್ದರೂ, ವಾಕ್ಯದಿಂದ ವಾಕ್ಯಾರ್ಥ ಜ್ಞಾನವು ಆಗುವದರಿಂದ, ವಾಕ್ಯಾರ್ಥಜ್ಞಾನಕ್ಕೆ ಕಾರಣವಾದ ವಾಕ್ಯವು, ಅನುಮಾನದಲ್ಲಿ ಅಂತರ್ಭಾವವಾಗುವದಿಲ್ಲ

तस्मात् प्रत्यक्षानुमानागमेषु एकस्यान्यत्रानंतर्भावादेतानि प्रत्यक्षदीनि त्रीण्येव प्रमाणानीति ज्ञेयम् ।

इति आगमस्यानुमानांतर्भावनिराकरणपूर्वकं अनुप्रमाणस्य त्रित्वसमर्थनम्

(२) ननु कथं अनुप्रमाणत्रित्वं अर्थापत्त्यादीनामन्येषां पृथक्प्रमाणनां सत्त्वादिति चेदुच्यते

प्रत्यक्षानुमानागमेष्वेव यथासंभवमंतर्भावसंभवात्, तेषु प्रकृते, अर्थापत्तिमनुमानेऽन्तर्भावयितुं तल्लक्षणमुच्यते – अर्थापत्तिरित्यत्र "अर्थतः प्राप्तिरेवार्थापत्तिरित्यभिधीयत इति वचनानुसारेण, अर्थतः, आपत्तिरर्थापत्तिरिति विग्रहो द्रष्टव्यः, तदर्थस्तु - अर्थतः, अनुपपद्यमानस्यार्थस्य दर्शनात्, प्राप्तिः तदुपपादकार्थांतरप्रमितिरित्यर्थः,

---

ಈ ಪ್ರಕಾರದಿಂದಪ್ರತ್ಯಕ್ಷ,ಅನುಮಾನ, ಆಗಮ. ಇವುಗಳಲ್ಲಿಒಂದು ಇನ್ನೊಂದರಲ್ಲಿ ಅಂತರ್ಭಾವಹೊಂದದಲೇ ಇರುವದರಿಂದ,ಮೂರೇ ಅನುಪ್ರಮಾಣಗಳೆಂದು ಹೇಳಿದ್ದು ಯುಕ್ತವೆಂದು ತಿಳಿಯಬೇಕು.

**ಅರ್ಥಾಪತ್ತಿಗೆ ಸ್ವತಂತ್ರಪ್ರಮಾಣತ್ವವನ್ನು ನಿರಾಕರಿಸಿ ಅದಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು.**

೨] ಶಂಕಾ:-ಅನುಪ್ರಮಾಣಗಳು ಮೂರೇ ಎಂಬುದು ಹೇಗೆ ಹೇಳುವದು? ಅರ್ಥಾಪತ್ತಿ ಮೊದಲಾದ ಅನೇಕ ಪ್ರಮಾಣಗಳು ಇರುತ್ತವೆ. ಅಂದಲ್ಲಿ ಇದಕ್ಕೆ ಉತ್ತರ ಹೇಳಲಾಗುತ್ತದೆ.

ಪ್ರತ್ಯಕ್ಷ, ಅನುಮಾನ, ಆಗಮಗಳಲ್ಲಿಯೇ ಯಥಾಪ್ರಕಾರವಾಗಿ ಇತರ ಪ್ರಮಾಣಗಳ ಅಂತರ್ಭಾವ ಮಾಡಲಾಗುವದು. ಪ್ರಕೃತ ಅರ್ಥಾಪತ್ತಿಯನ್ನು ಅನುಮಾನದಲ್ಲಿ ಅಂತರ್ಭಾವ ಮಾಡಲು ಅದರ ಲಕ್ಷಣವು ಹೇಳಲ್ಪಡುತ್ತದೆ. ಅದು ಹೇಗೆಂದರೆ:- "ಅರ್ಥಾಪತ್ತಿ ಎಂಬಲ್ಲಿ [ವಿಗ್ರಹವು] ಅರ್ಥದಿಂದ ಪ್ರಾಪ್ತಿಯು ಅರ್ಥಾಪತ್ತಿಯೆಂದು ಹೇಳಲಾಗುತ್ತದೆ" ಎಂಬ ವಚನಾನುಸಾರವಾಗಿ ಅರ್ಥಾತ್ ಆಪತ್ತಿಯು ಅರ್ಥಾಪತ್ತಿಯು ಎಂದು ತಿಳಿಯಬೇಕು. ಇದರ ಅರ್ಥವು-ಅರ್ಥತಃ [ಅಂದರೆ] ಅನುಪಪದ್ಯಮಾನ ಅರ್ಥದರ್ಶನದಿಂದ, ಪ್ರಾಪ್ತಿಃ [ಆಪತ್ತಿಃ ಅಂದರೆ] ಅದನ್ನು ಉಪಪಾದನ ಮಾಡತಕ್ಕ ಅರ್ಥಾಂತರದ [ಬೇರೆ ಅರ್ಥದ] ಪ್ರಮಿತಿಯು [ಯಥಾರ್ಥಜ್ಞಾನವು] ಎಂದು ಅರ್ಥವು.

तथा च अर्थापत्तिर्नाम - अनुपपद्यमानार्थविषयकयथार्थज्ञानजन्योपपादकार्थविषयकयथार्थज्ञानमिति यावत् । यथा जीवंश्चैत्रो गृहे नास्तीति ज्ञाने, बहिःसत्त्वज्ञानं, अत्र लक्षणसमन्वयः- अनुपपद्यमानार्थो जीवनत्त्वविशिष्टगृहेऽसत्त्वरूपार्थः नद्विषयकयथार्थज्ञानं, जीवनवत्त्वविशिष्टगृहेऽसत्त्वज्ञानं, तज्जन्यमुपपादकार्थविषकज्ञानं, बहिःसत्त्वज्ञानं. तत्र लक्षणसमन्वयः । अत्रानुपपद्यमानार्थदर्शनं करणं, उपपादकबुद्धिः फलं, अनुपपत्तिज्ञानमेव व्याप्तिज्ञानं (अनुपपत्तिरविनाभावइत्यनर्थान्तरं) उभयत्रापि (करणे फले च) अर्थापत्तिशब्दः प्रवर्तते, तत्कथमितिचेदित्थं-अर्थापत्तिरित्यत्र अर्थस्यापत्तिः अर्थापत्तिरिति षष्टीसमासेन (अर्थविषयकज्ञानं) अर्थापत्तिशब्दो बहिःसत्त्वज्ञानरूपफले वर्तते,

---

ತಥಾಚ:- ಅರ್ಥಾಪತ್ತಿ ಅಂದರೆ, ಅನುಪಪದ್ಯಮಾನವಾದ ಅರ್ಥವಿಷಯಕ ಯಥಾರ್ಥಜ್ಞಾನ, ಈ ಜ್ಞಾನದಿಂದ ಹುಟ್ಟಿದ ಉಪಪಾದಕವಾದ ಅರ್ಥವಿಷಯಕ ಜ್ಞಾನವು. ಎಂಬ ಭಾವವು. ಹೇಗೆಂದರೆ- ಜೀವವುಳ್ಳ ಚೈತ್ರನು ಗೃಹದಲ್ಲಿ ಇಲ್ಲವೆಂಬ ಜ್ಞಾನವಾದಲ್ಲಿ [ನಂತರ] ಹೊರಗೆ ಇದ್ದಾನೆ ಎಂಬ ಜ್ಞಾನವು. ಆಗುತ್ತದೆ ಈ ಜ್ಞಾನದಲ್ಲಿ ಲಕ್ಷಣ ಸಮನ್ವಯವು ಅನುಪಪದ್ಯಮಾನವಾದ ಅರ್ಥ [ಅಂದರೆ] ಜೀವನದಿಂದ ಕೂಡಿದ ದೇವದತ್ತನು ಗೃಹದಲ್ಲಿ ಇಲ್ಲದಿರುವದು ಎಂಬ ಅರ್ಥವು ಈ ಅರ್ಥವಿಷಯಕ ಯಥಾರ್ಥಜ್ಞಾನವೆಂದರೆ, ಜೀವನತ್ವ ವಿಶಿಷ್ಟ ದೇವದತ್ತನು ಗೃಹದಲ್ಲಿ ಇಲ್ಲ[ಅಭಾವ] ಎಂಬ ಜ್ಞಾನವು. ಈ ಜ್ಞಾನದಿಂದ ಹುಟ್ಟಿದ ಉಪಪಾದಕ ವಿಷಯಕ ಜ್ಞಾನ ಅಂದರೆ 'ಹೊರಗೆ ಇದ್ದಾನೆ' ಎಂಬ ಜ್ಞಾನವು ಇದರಲ್ಲಿ ಜ್ಞಾನತ್ವ ಬಂದಿತಾದ ಕಾರಣ ಲಕ್ಷಣ ಸಮನ್ವಯವು ಇಲ್ಲಿ ಅನುಪಪದ್ಯಮಾನ ಅರ್ಥದರ್ಶನವು ಕರಣವು. [ಸಾಧನವು]. 'ಉಪಪಾದಕ ಜ್ಞಾನವು' ಫಲವು. ಅನುಪಪತ್ತಿಯು ಜ್ಞಾನವೇ ವ್ಯಾಪ್ತಿಜ್ಞಾನ ಸ್ಥಾನದಲ್ಲಿದ್ದುದೆಂದು ತಿಳಿಯಬೇಕು. [ಅನುಪಪತ್ತಿ ಅಂದರೆ ಅವಿನಾಭಾವವು] ಕರಣದಲ್ಲಿಯೂ ಹಾಗೂ ಫಲದಲ್ಲಿಯೂ, ಎರಡರಲ್ಲಿಯೂ ಅರ್ಥಾಪತ್ತಿ ಶಬ್ದವು ಪ್ರವೃತ್ತಿಸುತ್ತದೆ. ಅದು ಹೇಗೆಂದರೆ 'ಅರ್ಥಾಪತ್ತಿ' ಎಂಬಲ್ಲಿ ಅರ್ಥದ ಪ್ರಾಪ್ತಿಯು ಎಂದು ಷಷ್ಠಿ ತತ್ಪುರುಷ ಮಾಡಿದಲ್ಲಿ ಅರ್ಥ ವಿಷಯಕ ಜ್ಞಾನವೆಂದು ಅರ್ಥಾಪತ್ತಿ ಶಬ್ದದ ಅರ್ಥವು ಬಹಿಃ ಸತ್ವಜ್ಞಾನರೂಪ ಫಲದಲ್ಲಿ ಪ್ರವೃತ್ತ ಆಗುತ್ತದೆ. ಅದರಂತೆ ಅರ್ಥದ ಆಪತ್ತಿಯು ಯಾವುದರ ದೆಸೆಯಿಂದ ಆಗುತ್ತದೆಯೋ ಅದು ಅರ್ಥಾಪತ್ತಿ

तथा अर्थस्य आपत्तिर्यस्मात् सा अर्थापत्तिरिति बहुव्रीहिसमासेन, अर्थापत्तिशब्दः करणे वर्तते, इति करणफलसाधारणोऽयमर्थापत्तिशब्दः ।

अनुपपद्यमानार्थ इत्यत्र अनुपपद्यमानं, यन्नोपपद्यते तदनुपपद्यमानं, उपपादकबुद्धिरित्यत्र उपपादकं, येन विना यन्नोपपद्यते तदुपपादकम् ।

अस्याऽनुमानांतर्भावस्तु—

जीवन् चैत्रः, बहिरस्ति, जीवनवत्त्वे सति गृहेऽसत्त्वात्, यो जीवन् यत्र नास्ति, स, ततोऽन्यत्रास्तीति व्याप्तिरस्ति, यथा अहमिति,

---

ಎಂದು ಬಹುವ್ರೀಹಿ ಸಮಾಸ ಮಾಡಿದಲ್ಲಿ ಅರ್ಥಾಪತ್ತಿ ಶಬ್ದವು ಜೀವದಿಂದ ಕೂಡಿದವನಾಗಿ ಗೃಹದಲ್ಲಿ ಇಲ್ಲದಿರುವದರಿಂದ ಎಂಬ ಕರಣದಲ್ಲಿ ಪ್ರವೃತ್ತ ಆಗುವದು. ಹೀಗೆ ಕರಣ ಮತ್ತು ಫಲ ಇವುಗಳಲ್ಲಿ ಅರ್ಥಾಪತ್ತಿ ಶಬ್ದವು ಸಾಧಾರಣವಾಗಿದೆ. [ಎಂದು ತಿಳಿಯಬೇಕು]

'ಅನುಪಪದ್ಯಮಾನ ಅರ್ಥ' ಎಂಬಲ್ಲಿ ಅನುಪಪದ್ಯಮಾನವೆಂದರೆ– ಯಾವದು ಉಪಪತ್ತಿಯಾಗುವದಿಲ್ಲವೋ ಅದು ಅನುಪಪದ್ಯಮಾನವೆಂದರ್ಥವು 'ಉಪಪಾದಕ ಬುದ್ಧಿ' ಎಂಬಲ್ಲಿ ಉಪಪಾದಕವೆಂದರೆ, ಯಾವುದರಿಂದ ಹೊರತಾಗಿ [ಯಾವದು ಇಲ್ಲದಿದ್ದರೆ] ಯಾವ ಅರ್ಥ ಕೂಡುವದಿಲ್ಲವೋ ಅದೇ ಉಪಪಾದಕವು. ಪ್ರಕೃತ ಬಹಿಃ ಸತ್ವಜ್ಞಾನವು ಉಪಾದಕವು, ಯಾಕೆಂದರೆ ಜೀವದಿಂದ ಕೂಡಿದದೆ ದೇವದತ್ತನು ಮನೆಯಲ್ಲಿ ಇಲ್ಲ ಎಂಬ ಜ್ಞಾನವು ಹೊರಗೆ ಇದ್ದಾನೆ ಎಂಬ ಜ್ಞಾನದವಿನಾ ಕೂಡುವದಿಲ್ಲ. ಕಾರಣ ಜೀವನತ್ವ ವಿಶಿಷ್ಟ ಗೃಹೇ ಅಸತ್ವಜ್ಞಾನಕ್ಕೆ, ಬಹಿಃ ಸತ್ವಜ್ಞಾನವು, ಉಪಾದಕವು. ಹಾಗೂ ಜೀವನತ್ವ ವಿಶಿಷ್ಟ ಗೃಹೆ ಅಸತ್ವಜ್ಞಾನವು, ಅನುಪಪದ್ಯಮಾನವು, ಎಂದು ತಿಳಿಯಬೇಕು. ಈ ಅರ್ಥಾಪತ್ತಿಗೆ ಅನುಮಾನದಲ್ಲಿ ಅಂತರ್ಭಾವವು. ಜೀವದಿಂದಿದ್ದ ಚೈತ್ರನು, ಹೊರಗೆ ಇರುತ್ತಾನೆ, ಜೀವವುಳ್ಳವನಾಗಿ ಮನೆಯಲ್ಲಿ ಇಲ್ಲವಾದ್ದರಿಂದ,

ಯಾವನು ಜೀವನದಿಂದ ಇದ್ದು ಮನೆಯೊಳಗೆ ಇಲ್ಲವೋ ಅವನು ಹೊರಗೆ ಇರುತ್ತಾನೆ ಎಂಬ ವ್ಯಾಪ್ತಿಯು ತನ್ನಲ್ಲಿಯೇ ಕಂಡಿದೆ [ತಾನು ಜೀವದಿಂದ ಇದ್ದು ಮನೆಯಲ್ಲಿ ಇಲ್ಲದಾಗ್ಯೆ ಹೊರಗೆ ಇರುವದು ಕಂಡಿದೆ. ಇದರಂತೆ ತಿಳಿಯಬೇಕು. ]

---

अर्थापत्तेः पृथक्त्वे तु एतानि दूषणानि वक्तव्यानि, तस्या अनुमानेऽन्तर्भावस्योक्तत्वेन अनुमानदोषा एवार्थापत्तिदोषा मन्तव्या इति ।

ननु जीवनवत्त्वे सति गृहासत्त्वरूपानुपपद्यमानेऽर्थ इत्यत्र, जीवनवत्त्व, क्वापि गृहासत्त्वयोर्विशेषणविशेष्यभावः कथमुपपद्यते, तयोः सहावस्तानरूपविरोधात्, तथाहि - जीवित्वेऽपि देशांतर इव गृहेऽपि सत्त्वस्य प्राप्तत्वात्, जीवनवत्त्वगृहासत्त्वयोर्विरोधः, तथा च कथं विशिष्टस्य बहिःसत्त्वज्ञानं प्रति लिङ्गत्वमिति चेदुच्यते--

जीवनस्य, क्वापि सत्त्वाभावस्य चान्योन्यं विरोधेऽपि सामान्यविशेषयोरविरोधस्य स्वस्मिन्नेव दृष्टत्वात्,

---

೫] ಪ್ರಮಾಣವಿರುದ್ಧತ್ವವು- ಇವುಗಳಲ್ಲಿ ಅರ್ಥವು- ೧] ಪ್ರಮಿತತ್ವನಾಗದೆ ಇರೋಣವು, ಅನುಪಪತ್ತಿ ಎಂದರೆ, ಬೇರೆ ರೀತಿಯಿಂದ ಉಪಪತ್ತಿ ಹೊಂದುವದು, ಅನ್ಯಥಾ ಉಪಪತ್ತಿ ಹೊಂದೋಣ, ಪ್ರಮಾಣಕ್ಕೆ ವಿರುದ್ಧ ಆಗುವದು. ಅರ್ಥಾಪತ್ತಿಯು ಪೃಥಕ್ ಪ್ರಮಾಣವೆಂದಲ್ಲಿ ಇವು ದೋಷಗಳಾಗುವವು. ಈ ಅರ್ಥಾಪತ್ತಿಯು ಅನುಮಾನದಲ್ಲಿ ಅಂತರ್ಭೂತವಾದ್ದರಿಂದ ಅನುಮಾನ ದೋಷಗಳೇ ಅರ್ಥಾಪತ್ತಿಯ ದೋಷಗಳೆಂದು ತಿಳಿಯಬೇಕು.

ಶಂಕಾ-ಜೀವನತ್ವವನ್ನು ಕುರಿತು ಗೃಹೇ ಅಸತ್ವರೂಪ ಅನುಪಪದ್ಯಮಾನ ಅರ್ಥ ಎಂಬಲ್ಲಿ ಜೀವನತ್ವಕ್ಕೂ, ಯಾವ ಗೃಹದಲ್ಲಿಯೂ ಇಲ್ಲ ಎಂಬುದಕ್ಕೂ, [ಗೃಹೆ ಅಸತ್ವ] ವಿಶೇಷಣ ವಿಶೇಷ್ಯ ಭಾವವು ಹೇಗೆ ಕೂಡುತ್ತದೆ? ಅವುಗಳಿಗೆ ಹೊಂದಾಣಿಕೆ ಇಲ್ಲ. [ಜೀವದಿಂದ ಇದ್ದಾನೆ. ಎಲ್ಲಿಯೂ ಇಲ್ಲ, ಎಂಬುದಕ್ಕೆ ಸಹಾವಸ್ಥಾನ ವಿರೋಧವು [ಇವೆರಡು ಒಂದು ಕಡೆ ಕೂಡುವದಿಲ್ಲವೆಂಬ ಭಾವ] ಜೀವದಿಂದ ಇದ್ದಲ್ಲಿ ದೇಶಾಂತರದಲ್ಲಿ ಇದ್ದಂತೆ ಗೃಹದಲ್ಲಿ ಕೂಡ ಇರುವದು ವಿಹಿತವು. ಅಂದಮೇಲೆ ಜೀವನ ಮತ್ತು ಯಾವ ಗೃಹದಲ್ಲಿಯೂ ಇಲ್ಲದಿರುವಿಕೆ, ಇವೆರಡಕ್ಕೂ ಪರಸ್ಪರ ವಿರೋಧವು. ತಥಾಚ- ಇವುಗಳಿಗೆ ವಿಶೇಷಣ ವಿಶೇಷ್ಯ ಭಾವವೇ ಕೂಡದಿದ್ದಾಗ ಜೀವನತ್ವ ವಿಶಿಷ್ಟ ಗೃಹಾಸತ್ವರೂಪ ಹೇತುವಿಗೆ ಬಹಿಃ ಸತ್ವಜ್ಞಾನವನ್ನು ಕುರಿತು, ಲಿಂಗತ್ವವು ಹೇಗೆ? ಎಂದು ಶಂಕಿಸಿದಲ್ಲಿ, ಇದಕ್ಕೆ ಸಮಾಧಾನವು- ಜೀವನಕ್ಕೂ ಯಾವ ಗೃಹದಲ್ಲಿಯೂ ಇಲ್ಲವೆಂಬುದಕ್ಕೂ, (ಕ್ವಾಪಿಸತ್ವಾಭಾವಕ್ಕೂ) ಅನ್ಯೋನ್ಯವಾಗಿ ವಿರೋಧವಿದ್ದರೂ ಸಾಮಾನ್ಯ ವಿಶೇಷ್ಯಗಳಿಗೆ ವಿರೋಧವಿಲ್ಲವೆಂಬುದು ತನ್ನಲ್ಲಿಯೇ ಕಂಡಿದೆ.

अत्र सामान्यं जीवनवत्त्वं विशेषः क्वचित्-गृहप्रदेशेऽसत्त्वं तयोरविरोधः, स्वस्मिन्नेव गृहाद्बहिर्गते दर्शनादिति यावत्, तथा च न तयोर्विरोधइति, विशिष्टस्य बहिःसत्त्वज्ञानं प्रति भवत्येव लिङ्गत्वम् ।

ननु जीवनगृहाभावयोः आत्यंतिकविरोधे देशकालव्यवस्तया, अपरिहार्यविरोधे प्राप्ते सति कथमिति चेत् तदा विप्रतिसंदेह एव भवति, तताहि—

अयं तावच्चैत्रो जीवन्नित्युक्त्वा नास्तीत्याहुः, न चार्थद्वयसामावेशो युक्तः, परस्परविरुद्धत्वात्, ततश्च तत्र किं वा आद्यवाक्यानुसारेण सत्त्वं प्रतीम, उत नास्तीत्युत्तरवाक्यानुसारेणासत्त्वं प्रतीम इति संदेह एव भवति, नार्थापत्तिः प्रवर्तत इति बोध्यम् ।

---

ಇಲ್ಲಿ ಸಾಮಾನ್ಯವು ಜೀವನವು, ವಿಶೇಷವು ಕ್ವಚಿತ್ ಗೃಹ ಪ್ರದೇಶದಲ್ಲಿ ಇಲ್ಲದೇ ಇರುವದು. ಇದು ತನ್ನಲ್ಲಿ ಕಂಡಿದೆ. ತಾನು ಹೊರಗೆ ಹೋದಾಗ ಜೀವನವು ಇದೆ. ಕ್ವಚಿತ್ ಪ್ರದೇಶದಲ್ಲಿ (ಮನೆಯಲ್ಲಿ) ಇಲ್ಲದೆ ಇರುವಿಕೆ ಇದೆ, ಕಾರಣ ಜೀವನ ಹಾಗೂ ಗೃಹಾಸತ್ವಗಳಿಗೆ ವಿಶೇಷಣ ವಿಶಿಷ್ಯಭಾವ ಕೊಡುವದರಿಂದ ಜೀವನತ್ವ ವಿಶಿಷ್ಟ ಗೃಹಾಸತ್ವರೂಪ ಹೇತುವಿಗೆ ಬಹಿಃ ಸತ್ವಜ್ಞಾನವನ್ನು ಕುರಿತು ಲಿಂಗತ್ವವು ಅತ್ಯಂತ ಉಚಿತವಾಗುತ್ತದೆ.

ಶಂಕಾ- ಜೀವನ ಹಾಗೂ ಗೃಹಾಭಾವ (ಜೀವನವು. ಗೃಹದಲ್ಲಿ ಇಲ್ಲದೇ ಇರುವದು) ಇವುಗಳಿಗೆ ಅತ್ಯಂತ ವಿರೋಧ ಬಂದಲ್ಲಿ (ಅಂದರೆ ದೇಶಕಾಲದಿಂದಲೂ ವಿರೋಧ ಪರಿಹಾರ ಮಾಡಲು ಅಶಕ್ಯವಾದಲ್ಲಿ) ಹೇಗೆ ವಿಶಿಷ್ಟ ಹೇತುವು ಲಿಂಗವಾಗುವದು. ಅಂಥ ವಿರೋಧ ಬಂದಲ್ಲಿ ವಿಪ್ರಪತ್ತಿಯ ಮೂಲಕ ಸಂಶಯುವೇ ಹುಟ್ಟುತ್ತದೆ? ಅದು ಹೇಗೆಂದರೆ- ಈ ಚೈತ್ರನು ಜೀವದಿಂದ ಇದ್ದಾನೆ ಎಂದು ಹೇಳಿ (ಚೈತ್ರನು) ಇಲ್ಲವೆಂದು ಹೇಳುತ್ತಾನೆ. ಇವೆರಡು ಅರ್ಥಗಳಿಗೆ ಸಮಾವೇಶವಿಲ್ಲ (ಇದ್ದಾನೆ, ಇಲ್ಲ) ಅವು ಪರಸ್ಪರ ವಿರುದ್ಧಗಳಾಗಿವೆ. ಕಾರಣ ಚೈತ್ರನು ಇದ್ದಾನೆ ಎಂಬ ಪ್ರಥಮ ವಾಕ್ಯಾನುಸಾರವಾಗಿ ಅವನ ಸತ್ವವನ್ನು ತಿಳಿಯೋಣವೇ ? ಅಥವಾ (ನಾಸ್ತಿ) ಇಲ್ಲ ಎಂಬ ದ್ವಿತೀಯ ವಾಕ್ಯಾನುಸಾರವಾಗಿ ಅವನ ಅಸತ್ವವನ್ನು ತಿಳಿಯೋಣವೇ ? ಎಂದು ಸಂದೇಹ ಬರುತ್ತದೆ. ಇಂಥ ಸ್ಥಳದಲ್ಲಿ ಅರ್ಥಾಪತ್ತಿಯು ಪ್ರವೃತ್ತವೇ ಆಗುವದಿಲ್ಲವೆಂದು ತಿಳಿಯಬೇಕು.

ಇತಿ ಅರ್ಥಾಪತ್ತಿಗೆ ಸ್ವತಂತ್ರ ಪ್ರಮಾಣತ್ವವನ್ನು ನಿರಾಕರಿಸಿ ಅದಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು

अर्थापत्तेः पृथक्त्वे तु एतानि दूषणानि वक्तव्यानि, तस्या अनुमानेऽन्तर्भावस्योक्तत्वेन अनुमानदोषा एवार्थापत्तिदोषा मन्तव्या इति ।

ननु जीवनवत्त्वे सति गृहासत्त्वरूपानुपपद्यमानेऽर्थे इत्यत्र, 'जीवनवत्त्व, क्वापि गृहासत्त्वयोर्विशेषणविशेष्यभावः कथमुपपद्यते, तयोः सहावस्तानरूपविरोधात्, तथाहि - जीवित्वेऽपि देशांतर इव गृहेऽपि सत्त्वस्य प्राप्तत्वात्, जीवनवत्त्वगृहासत्त्वयोर्विरोधः, तथा च कथं विशिष्टस्य बहिःसत्त्वज्ञानं प्रति लिङ्गत्वमिति चेदुच्यते--

जीवनस्य, क्वपि सत्त्वाभावस्य चान्योन्यं विरोधेऽपि सामान्यविशेषयोरविरोधस्य स्वस्मिन्नेव दृष्टत्वात्,

---

೫] ಪ್ರಮಾಣವಿರುದ್ಧತ್ವವು. ಇವುಗಳಲ್ಲಿ ಅರ್ಥವು- ೧] ಪ್ರಮಿತತ್ವನಾಗದೆ ಇರೋಣವು, ಅನುಪಪತ್ತಿ ಎಂದರೆ, ಬೇರೆ ರೀತಿಯಿಂದ ಉಪಪತ್ತಿ ಹೊಂದದಿರುವದು, ಅನ್ಯಥಾ ಉಪಪತ್ತಿ ಹೊಂದೋಣ, ಪ್ರಮಾಣಕ್ಕೆ ವಿರುದ್ಧ ಆಗುವದು. ಅರ್ಥಾಪತ್ತಿಯು ಪೃಥಕ್ ಪ್ರಮಾಣವೆಂದಲ್ಲಿ ಇವು ದೋಷಗಳಾಗುವವು. ಈ ಅರ್ಥಾಪತ್ತಿಯು ಅನುಮಾನದಲ್ಲಿ ಅಂತರ್ಭೂತವಾದ್ದರಿಂದ ಅನುಮಾನ ದೋಷಗಳೇ ಅರ್ಥಾಪತ್ತಿಯ ದೋಷಗಳೆಂದು ತಿಳಿಯಬೇಕು.

ಶಂಕಾ-ಜೀವನತ್ವವನ್ನು ಕುರಿತು ಗೃಹೇ ಅಸತ್ವರೂಪ ಅನುಪಪದ್ಯಮಾನ ಅರ್ಥ ಎಂಬಲ್ಲಿ ಜೀವನತ್ವಕ್ಕೂ, ಯಾವ ಗೃಹದಲ್ಲಿಯೂ ಇಲ್ಲ ಎಂಬುದಕ್ಕೂ, [ಗೃಹೆ ಅಸತ್ವ] ವಿಶೇಷಣ ವಿಶೇಷ್ಯ ಭಾವವು ಹೇಗೆ ಕೂಡುತ್ತದೆ? ಅವುಗಳಿಗೆ ಕೂಡಿಕೆಯೇ ಇಲ್ಲ. [ಜೀವದಿಂದ ಇದ್ದಾನೆ, ಎಲ್ಲಿಯೂ ಇಲ್ಲ, ಎಂಬುದಕ್ಕೆ ಸಹಾವಸ್ಥಾನ ವಿರೋಧವು [ಇವೆರಡು ಒಂದು ಕಡೆ ಕೂಡುವದಿಲ್ಲವೆಂಬ ಭಾವ] ಜೀವದಿಂದ ಇದ್ದಲ್ಲಿ ದೇಶಾಂತರದಲ್ಲಿ ಇದ್ದಂತೆ ಗೃಹದಲ್ಲಿ ಕೂಡ ಇರುವದು ವಿಹಿತವು. ಅಂದಮೇಲೆ ಜೀವನ ಮತ್ತು ಯಾವ ಗೃಹದಲ್ಲಿಯೂ ಇಲ್ಲದಿರುವಿಕೆ, ಇವೆರಡಕ್ಕೂ ಪರಸ್ಪರ ವಿರೋಧವು. ತಥಾಚ- ಅವುಗಳಿಗೆ ವಿಶೇಷಣ ವಿಶೇಷ್ಯ ಭಾವವೇ ಕೂಡದಿದ್ದಾಗ ಜೀವನತ್ವ ವಿಶಿಷ್ಟ ಗೃಹಾಸತ್ವರೂಪ ಹೇತುವಿಗೆ ಬಹಿಃ ಸತ್ವಜ್ಞಾನವನ್ನು ಕುರಿತು, ಲಿಂಗತ್ವವು ಹೇಗೆ? ಎಂದು ಶಂಕಿಸಿದಲ್ಲಿ, ಇದಕ್ಕೆ ಸಮಾಧಾನವು- ಜೀವನಕ್ಕೂ ಯಾವ ಗೃಹದಲ್ಲಿಯೂ ಇಲ್ಲವೆಂಬುದಕ್ಕೂ, (ಕ್ವಾಪಿಸತ್ವಾಭಾವಕ್ಕೂ) ಅನ್ಯೋನ್ಯವಾಗಿ ವಿರೋಧವಿದ್ದರೂ ಸಾಮಾನ್ಯ ವಿಶೇಷ್ಯಗಳಿಗೆ ವಿರೋಧವಿಲ್ಲವೆಂಬುದು ತನ್ನಲ್ಲಿಯೇ ಕಂಡಿದೆ.

अत्र सामान्यं जीवनवत्त्वं विशेषः क्वचित्-गृहप्रदेशेऽसत्त्वं तयोरविरोधः, स्वस्मिन्नेव गृहाद्बहिर्गते दर्शनादिति यावत्, तथा च न तयोर्विरोधइति, विशिष्टस्य बहिःसत्त्वज्ञानं प्रति भवत्येव लिङ्गत्वम् ।

ननु जीवनगृहाभावयोः आत्यंतिकविरोधे देशकालव्यवस्तया, अपरिहार्यविरोधे प्राप्ते सति कथमिति चेत् तदा विप्रतिसंदेह एव भवति, तताहि—

अयं तावच्चैत्रो जीवन्नित्युक्त्वा नास्तीत्याहुः, न चार्थद्वयसामावेशो युक्तः, परस्परविरुद्धत्वात्, ततश्च तत्र किं वा आद्यवाक्यानुसारेण सत्त्वं प्रतीम, उत नास्तीत्युतरवाक्यानुसा णासत्त्वं प्रतीम इति संदेह एव भवति, नार्थापत्तिः प्रवर्तत इति बोध्यम् ।

---

ಇಲ್ಲಿ ಸಾಮಾನ್ಯವು ಜೀವನವು, ವಿಶೇಷವು ಕ್ವಚಿತ್ ಗೃಹ ಪ್ರದೇಶದಲ್ಲಿ ಇಲ್ಲದೇ ಇರುವದು. ಇದು ತನ್ನಲ್ಲಿ ಕಂಡಿದೆ. ತಾನು ಹೊರಗೆ ಹೋದಾಗ ಜೀವನವು ಇದೆ. ಕ್ವಚಿತ್ ಪ್ರದೇಶದಲ್ಲಿ (ಮನೆಯಲ್ಲಿ) ಇಲ್ಲದೆ ಇರುವಿಕೆ ಇದೆ, ಕಾರಣ ಜೀವನ ಹಾಗೂ ಗೃಹಾಸತ್ವಗಳಿಗೆ ವಿಶೇಷಣ ವಿಶಿಷ್ಯಭಾವ ಕೊಡುವದರಿಂದ ಜೀವನಸತ್ವ ವಿಶಿಷ್ಟ ಗೃಹಾಸತ್ವರೂಪ ಹೇತುವಿಗೆ ಬಹಿಃ ಸತ್ವಜ್ಞಾನವನ್ನು ಕುರಿತು ಲಿಂಗತ್ವವು ಅತ್ಯಂತ ಉಚಿತವಾಗುತ್ತದೆ.

ಶಂಕಾ- ಜೀವನ ಹಾಗೂ ಗೃಹಾಭಾವ (ಜೀವನವು, ಗೃಹದಲ್ಲಿ ಇಲ್ಲದೇ ಇರುವದು) ಇವುಗಳಿಗೆ ಅತ್ಯಂತ ವಿರೋಧ ಬಂದಲ್ಲಿ (ಅಂದರೆ ದೇಶಕಾಲದಿಂದಲೂ ವಿರೋಧ ಪರಿಹಾರ ಮಾಡಲು ಅಶಕ್ಯವಾದಲ್ಲಿ) ಹೇಗೆ ವಿಶಿಷ್ಟ ಹೇತುವು ಲಿಂಗವಾಗುವದು. ಅಂಥ ವಿರೋಧ ಬಂದಲ್ಲಿ ವಿಪ್ರತಿಪತ್ತಿಯ ಮೂಲಕ ಸಂಶಯವೇ ಹುಟ್ಟುತ್ತದೆ? ಅದು ಹೇಗೆಂದರೆ– ಈ ಚೈತ್ರನು ಜೀವದಿಂದ ಇದ್ದಾನೆ ಎಂದು ಹೇಳಿ (ಚೈತ್ರನು) ಇಲ್ಲನೆಂದು ಹೇಳುತ್ತಾನೆ. ಇವೆರಡು ಅರ್ಥಗಳಿಗೆ ಸಮಾವೇಶವಿಲ್ಲ (ಇದ್ದಾನೆ, ಇಲ್ಲ) ಅವು ಪರಸ್ಪರ ವಿರುದ್ಧಗಳಾಗಿವೆ. ಕಾರಣ ಚೈತ್ರನು ಇದ್ದಾನೆ ಎಂಬ ಪ್ರಥಮ ವಾಕ್ಯಾನುಸಾರವಾಗಿ ಅವನ ಸತ್ವವನ್ನು ತಿಳಿಯೋಣವೇ ? ಅಥವಾ (ನಾಸ್ತಿ) ಇಲ್ಲ ಎಂಬ ದ್ವಿತೀಯ ವಾಕ್ಯಾನುಸಾರವಾಗಿ ಅವನ ಅಸತ್ವವನ್ನು ತಿಳಿಯೋಣವೇ ? ಎಂದು ಸಂದೇಹ ಬರುತ್ತದೆ. ಇಂಥ ಸ್ಥಳದಲ್ಲಿ ಅರ್ಥಾಪತ್ತಿಯು ಪ್ರವೃತ್ತವೇ ಆಗುವದಿಲ್ಲವೆಂದು ತಿಳಿಯಬೇಕು.

ಇತಿ ಅರ್ಥಾಪತ್ತಿಗೆ ಸ್ವತಂತ್ರ ಪ್ರಮಾಣತ್ವವನ್ನು ನಿರಾಕರಿಸಿ ಅದಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು

**।। इति अर्थापत्तेः स्वतंत्रप्रमाणत्वं निराकृत्य, अनुमाने अंतर्भावसमर्थनम् ।।**

---

(६) उपमानस्य प्रत्यक्षानुमानागमेष्वंतर्भावं वक्तुं तल्लक्षणमुच्यते–सादृश्यज्ञानसाधनं उपमानं, इति **मीमांसकाः** । उपमीयते अनेनेति उपमानमित्युपमानशब्दः करणसाधनोज्ञातव्यः । सादृश्यज्ञानसाधनस्य प्रत्यक्षादिजन्यत्वासंभवाद् किंचित् अतिरिक्तकारणं अभ्युपेयं तदेवोपमानमिति वदन्ति ।

तच्च, उपमानं त्रिविधं––(१) गृह्यमाणे गवये स्मर्यमाणगोसादृश्यप्रमा, "गोसदृशोऽयं गवय" इतिप्रमा, तत्साधनं उपमानं, तथा च गोसदृशोऽयं गवय इति चक्षुरुन्मीलनानंतरं जायमानं ज्ञानं (उपमितिः) तत्साधनं उपमानमिति यावत्

---

೬] **ಮೀಮಾಂಸಕರು ಹೇಳುವ ಉಪಮಾನವು ಅನುಮಾನದಲ್ಲಿಯೇ ಅಂತರ್ಭಾವವಾಗುವದೆಂಬುದರ ಸಮರ್ಥನೆಯು.**

ಉಪಮಾನವನ್ನು ಪ್ರತ್ಯಕ್ಷ ಅನುಮಾನ,ಆಗಮದಲ್ಲಿ ಅಂತರ್ಭಾವ ಮಾಡುವದರ ಸಲುವಾಗಿ ಅದರ ಲಕ್ಷಣವು ಹೇಳಲಾಗುತ್ತದೆ ಸಾದೃಶ್ಯಜ್ಞಾನಕ್ಕೆ ಸಾಧನವಾದದ್ದು ಉಪಮಾನವು. ಎಂದು ಮೀಮಾಂಸಕರು ಹೇಳುತ್ತಾರೆ 'ಉಪಮಿತಿ' ಯಾವುದರಿಂದ ಹುಟ್ಟುತ್ತದೆಯೋ ಅದು ಉಪಮಾನವು ಎಂದು ಕರಣಸಾಧನದಲ್ಲಿ 'ಉಪಮಾನ ಶಬ್ದವು ಪ್ರಯುಕ್ತವಾಗಿದೆ ಸಾದೃಶ್ಯಜ್ಞಾನ ಸಾಧನಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಜನ್ಯತ್ವ ಕೂಡದಿರುವದರಿಂದ ಅವುಗಳಿಂದ ಪ್ರತ್ಯೇಕವಾದ ಬೇರೊಂದು ಸಾಧನವನ್ನು ಅಂಗೀಕಾರ ಮಾಡಬೇಕಾಗುವದು. ಅದೇ ಉಪಮಾನವು [ಎಂದು ಹೇಳುತ್ತಾರೆ]

ಈ ಉಪಮಾನವು ಮೂರು ಪ್ರಕಾರ–೧] ಪ್ರತ್ಯಕ್ಷದಿಂದ ಗೃಹೀತವಾದ ಗವಯದಲ್ಲಿ [ಕಾಡು ಆಕಳಿನಲ್ಲಿ] ಸ್ಮರಣೆಗೆ ಬಂದ ಗೋವಿನ ಸಾದೃಶ್ಯ ಯಥಾರ್ಥಜ್ಞಾನಕ್ಕೆ ಸಾಧನವು ಉಪಮಾನವು. ಯಥಾ–ಗೋವನ್ನು ನೋಡಿ ವನಕ್ಕೆ ಹೋದ ಪುರುಷನಿಗೆ ಗವಯುವನ್ನು ಪ್ರತ್ಯಕ್ಷದಿಂದ ನೋಡಿದಾಗ ಗೃಹೀತವಾದ ಗವಯದಲ್ಲಿ ಗೃಹದಲ್ಲಿ ಇದ್ದ ಗೋವು ಸ್ಮರಣೆಗೆ ಬಂದು, 'ಈ ಗವಯುವು, ಗೋ ಸದೃಶವು,' ಎಂಬ ಪ್ರಮಾ ಹುಟ್ಟುತ್ತದೆ. ಈ ಪ್ರಮಾಕ್ಕೆ ಸಾಧನವಾದದ್ದೇ ಉಪಮಾನವು. [ತಥಾಚ–ಚಕ್ಷುರಿಂದ್ರಿಯದಿಂದ ನೋಡಿದಾಕ್ಷಣ 'ಈ ಗವಯುವು ಗೋ ಸದೃಶವು' ಎಂಬ ಜ್ಞಾನವು

२) गोगवयौ सदृशौ इति उपदेशानंतरं जायमानं ज्ञानं, (उपमितिः) तत्साधनं उपमानं ३) गृह्यमाणपदार्थस्य साद‍ृश्यज्ञानात् स्मर्यमाणपदार्थगतसाद‍ृश्यज्ञानं, उपमानं, अत्र "गोसदृशोऽयं गवय" इत्याकारकं स्मर्यमाणप्रतियोगिकगृह्यमाणगवयगतसाद‍ृश्यज्ञानं करणांशः एवं तत्सदृशो मदीयो गौरित्याकारकं गृह्यमाणगवयप्रतियोगिकस्मर्यमाणगोनिष्टसाद‍ृश्यज्ञानं फलांश इति ज्ञेयं । एवं त्रिविधज्ञानसाधनं उपमानमिति ।

एतादृशोपमानत्रयस्यपि प्रत्यक्षानुमानागमेष्वंतर्भाव उच्यते तथा हि–: १. तत्र तेनायं सदृश इति वा, इमौ सदृशौ इति वा ज्ञानं प्रत्यक्षरूपप्रमाणजन्यं, एतादृशसाद‍ृश्यप्रमायाः प्रत्यक्षफलत्वेन तत्प्रमाकरणं उपामानं प्रत्यक्षेऽन्तर्भवति ।

---

ಉಪಮಿತಿಯು. ಇದಕ್ಕೆ ಸಾಧನವಾದದ್ದೇ-ಎಂದರೆ ಸ್ಮರಣೆಗೆ ಬಂದ ಗೋ ಸಾದೃಶ್ಯಜ್ಞಾನವು ಉಪಮಾನ ಎಂದು ಅಭಿಪ್ರಾಯವು.] ೨) 'ಗೋವು, ಗವಯವು ಎರಡೂ ಸದೃಶವಾದವುಗಳು,' ಎಂಬ ಉಪದೇಶಾನಂತರದಲ್ಲಿ ಹುಟ್ಟತಕ್ಕ ಪ್ರಮಿತಿಯು, ಉಪಮಿತಿಯು ಅದಕ್ಕೆ ಸಾಧನವಾದ ಉಪದೇಶವು ಉಪಮಾನವು. ೩] ಪ್ರತ್ಯಕ್ಷದಿಂದ ನೋಡಿದ ಪದಾರ್ಥದಲ್ಲಿರುವ [ಗವಯದಲ್ಲಿರುವ] ಸಾದೃಶ್ಯಜ್ಞಾನದಿಂದ ಸ್ಮರಣೆಗೆ ಬಂದ ಪದಾರ್ಥಗತವಾದ [ಮನೆಯಲ್ಲಿಯ ಆಕಳಲ್ಲಿರುವ] ಸಾದೃಶ್ಯಜ್ಞಾನ ಸಾಧನವು ಉಪಮಾನವು. ಇಲ್ಲಿ "ಗೋ ಸದೃಶವಾದದ್ದು ಗವಯವು" ಇತ್ಯಾಕಾರಕವಾದ ಸ್ಮರ್ಯಮಾಣ ಪದಾರ್ಥ ಪ್ರತಿಯೋಗಿಕವಾದ ಗೃಹ್ಯಮಾಣ ಗವಯಗತವಾದ ಸಾದೃಶ್ಯಜ್ಞಾನವು' ಕರಣವು [ಸಾಧನವು]. ಇದರಿಂದ ಹುಟ್ಟಿದ 'ಈ ಗವಯಸದೃಶವಾದದ್ದು ನನ್ನ ಗೋವು" ಇತ್ಯಾಕಾರಕ ಗೃಹ್ಯಮಾಣ ಗವಯ ಪ್ರತಿಯೋಗಿಕ ಸ್ಮರ್ಯಮಾಣ ಗೋವಿನಲ್ಲಿ ಇದ್ದ ಸಾದೃಶ್ಯಜ್ಞಾನವು ಫಲವು [ಉಪಮಿತಿಯು] ಎಂದು ತಿಳಿಯಬೇಕು. ಹೀಗೆ ಮೂರು ವಿಧ ಜ್ಞಾನ ಸಾಧನವಾದದ್ದೇ, ಉಪಮಾನವು.

ಈ ಮೂರು ವಿಧವಾದ ಉಪಮಾನವನ್ನು ಪ್ರತ್ಯಕ್ಷ, ಅನುಮಾನ, ಆಗಮಗಳಲ್ಲಿ ಅಂತರ್ಭಾವ ಮಾಡಲಾಗುತ್ತದೆ. ಅದು ಹೇಗೆಂದರೆ–

೧] ಈ ಮೂರರ ಮಧ್ಯದಲ್ಲಿ 'ಇದರಿಂದ ಇದು ಸದೃಶವು' ಎಂಬ ಜ್ಞಾನ ಅಥವಾ ಇವೆರಡೂ [ಪರಸ್ಪರ] ಸದೃಶವಾದವು ಎಂಬ ಜ್ಞಾನ ಇವೆರಡು ಪ್ರತ್ಯಕ್ಷ ಪ್ರಮಾಣಜನ್ಯಗಳು. ಈ ಸಾದೃಶ್ಯಜ್ಞಾನವು ಪ್ರತ್ಯಕ್ಷದ ಫಲವು.

२. गोगवयौ सदृशौ इति वाक्यजं ज्ञानन्त्वागम एवान्तर्भवति ।

३. गृह्यमाणपदार्थस्य सादृश्यज्ञानात् स्मर्यमाणपदार्थगतसादृश्यज्ञानमुपमानमिति मीमांसकानामुपमानमप्यनुमान एवान्तर्भवति, तथा हि--

पट्टणे गामनुभूय वनं गतस्य गवयदर्शने सति गृह्यमाणे गवये, स्मर्यमाणपट्टणस्थगोसादृश्यं दृष्टवा, स्मर्यमाणा (नगरस्थ) गोपिण्डे गृह्यमाणगवयसादृश्यं प्रत्येति, 'गृहे स्थिता गौः (वने) गृह्यमाणगवयसदृशी, एतस्य (गवयस्य) तत्सदृशत्वादिति, तत्र गवयनिष्टसादृश्यज्ञानमुपमानत्वेन परसम्मतं, तदनुमानमेव ।

अत्रानुपपत्ति मीमांसकः शंकते--तग्दवयत्वेन गृह्यमाणे वस्तुनि प्रतीयमानं गोसादृश्यं करणं, तेन स्मर्यमाणगोगतसादृश्यं प्रमातव्यं,

---

ಕಾರಣ ಈ ಪ್ರಮಾಣಕ್ಕೆ ಕರಣವಾದ ಉಪಮಾನವು ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುತ್ತದೆ.

೨] 'ಗೋ ಮತ್ತು ಗವಯಗಳು, ಸದೃಶಗಳು" ಎಂಬ ವಾಕ್ಯದಿಂದ ಹುಟ್ಟಿದ ಜ್ಞಾನವು. ಆಗಮದ ಫಲವಾದ ಕಾರಣ ಅದಕ್ಕೆ ಸಾಧನವಾದ ಉಪಮಾನ ಕೂಡ ಆಗಮದಲ್ಲಿ ಅಂತರ್ಭೂತವಾಗುತ್ತದೆ [ಹೊರತು ಅದಕ್ಕೆ ಪ್ರತ್ಯೇಕತೆ ಇಲ್ಲ]

೩] ಗೃಹ್ಯಮಾಣ ಪದಾರ್ಥಗತ ಸಾದೃಶ್ಯಜ್ಞಾನದಿಂದ ಸ್ಮರ್ಯಮಾಣ ಪದಾರ್ಥಗತ ಸಾದೃಶ್ಯಜ್ಞಾನವು ಉಪಮಾನವೆಂದು ಹೇಳುವ ಮೀಮಾಂಸಕರ ಈ ಉಪಮಾನವು ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ. ಅದು ಹೇಗೆಂದರೆ–

ಪಟ್ಟಣದಲ್ಲಿ ಗೋವಿನ ಅನುಭವ ಹೊಂದಿ, ವನಕ್ಕೆ ಹೋದ ಪುರುಷನಿಗೆ ಗವಯ ದರ್ಶನವಾಗುತ್ತಿರಲು, ಪ್ರತ್ಯಕ್ಷದಿಂದ ಗವಯವನ್ನು ನೋಡಿ ಅದರಲ್ಲಿ ಸ್ಮರಣೆಗೆ ಬಂದ ಗೋವಿನ ಸಾದೃಶ್ಯವನ್ನು ಕಂಡು, ಸ್ಮರ್ಯಮಾಣವಾದ ನಗರದಲ್ಲಿದ್ದ, ಗೋಪಿಂಡದಲ್ಲಿ ವನದಲ್ಲಿ ಗ್ರಹಿತವಾದ ಗವಯ ಸಾದೃಶ್ಯವನ್ನು ಅನುಮಾನ ಮಾಡಿಕೊಳ್ಳುತ್ತಾನೆ. ಗೃಹದಲ್ಲಿದ್ದ ಗೋವು, [ವನದಲ್ಲಿ] ಗೃಹ್ಯಮಾಣ ಗವಯದ ಸದೃಶವು, ಈ ಗವಯಕ್ಕೆ ಆ ಗೋವಿನ ಸಾದೃಶ್ಯವಿರುವದರಿಂದ, ಎಂದು ಅನುಮಾನ ಮಾಡಿಕೊಳ್ಳುತ್ತಾನೆ. ಇದರಲ್ಲಿ ಗವಯದಲ್ಲಿದ್ದ ಗೋ ಸಾದೃಶ್ಯಜ್ಞಾನವು, ಉಪಮಾನವೆಂದು ಪರನು ಏನು ಹೇಳುತ್ತಾನೆಯೋ ಅದು ಅನುಮಾನವೇ [ಅನುಮಿತಿಜನಕ] ಎಂದು ತಿಳಿಯಬೇಕು. ಈ ವಿಷಯದಲ್ಲಿ ಮೀಮಾಂಸಕರು ಹೀಗೆ ಶಂಕೆ ಮಾಡುತ್ತಾರೆ– ಗೃಹ್ಯಮಾಣವಾದ

तथा च करणभूतगोसादृश्यस्य गवयनिष्टत्वं, प्रमेय भूतगवयगतसादृश्यस्य गोनिष्टत्वमिति व्यधिकरणयोरेतयोः कथं लिङ्गलिङ्गिभावः इति चेदित्थं--स गौः, एतग्दवयसदृशः, अस्य गवयस्य तग्दोसदृशत्वात् यो यत्सदृशः स तत्सदृशः यथा यमो यमान्तरेणेति व्याप्तिसंभवेन व्यधिकरणस्यादोषत्वात्, व्याप्त्यभावस्थल एव हेतुसाध्ययोः, वैयधिकरण्य दोषः, तार्किकैरपि "भूभूधरादिकं, सकर्तृकं, कार्यत्वात्, घटवत्" इत्यत्र कार्यत्वहेतोः व्यधिकरणत्वेऽपि साधकत्वं चोपपादितं, तथाहि-ः भूभूधरादिनिष्ठकार्यत्वेन हेतुना, ईश्वरे सर्वज्ञत्वसिद्ध्यङ्गीकारात्, तथा च अत्रहेतुर्भूम्यादिनिष्ठः साध्यं ईश्वरनिष्टमिति हेतुसाध्ययोर्वैयधिकरण्येऽपि प्रामाण्योपगमात् न कुत्रापि वैयधिकरण्यं दोष इति

---

ಗವಯದಲ್ಲಿ ತೋರತಕ್ಕ ಗೋ ಸಾದೃಶ್ಯವು ಕರಣವು ಈ ಜ್ಞಾನದಿಂದ ಹುಟ್ಟಿದ ಸ್ಮರಣೆಗೆ ಬಂದ ಗೋವಿನಲ್ಲಿ ಗವಯಸಾದೃಶ್ಯ ಜ್ಞಾನವು ಹುಟ್ಟುತ್ತದೆ.

ತಥಾಚ. ಕರಣವಾದ ಗೋಸಾದೃಶ್ಯವು ಗವಯದಲ್ಲಿದೆ. ಮತ್ತು ಪ್ರಮೇಯಭೂತಗವಯಗತ ಸಾದೃಶ್ಯವು ಗೋವಿನಲ್ಲಿ ಇರುವದು ಕಂಡಿದೆ. ಹೀಗೆ ವ್ಯಧಿಕರಣಗಳಾದ ಇವುಗಳಿಗೆ ಹೇಗೆ ಲಿಂಗ, ಲಿಂಗೀ ಭಾವ [ಸಾಧನ ಸಾಧ್ಯ ಭಾವವು] ವು ಕೂಡುವದು ? ಎಂದು ಶಂಕಿಸಿದಲ್ಲಿ ಇದಕ್ಕೆ ಸಮಾಧಾನವು– ಆ ಗೃಹದಲ್ಲಿಯ ಗೋವು, ಈ ಗವಯ ಸದೃಶವು. ಈ ಗವಯಕ್ಕೆ[ವನಗವಯಕ್ಕೆ, [ಪಟ್ಟಣದಲ್ಲಿದ್ದ] ಗೋ ಸಾದೃಶ್ಯವಿರುವದರಿಂದ, ಯಾವದು ಯಾವುದರ ಸದೃಶವೋ, ಅದು ಅದಕ್ಕೆ ಸದೃಶವು. ಹೇಗೆಂದರೆ: ಯಮ ಯಮಾಂತರದಿಂದ ಎಂಬಂತೆ [ಯಮ ಅಂದರೆ ಅವಳಿ ಮಕ್ಕಳು ಒಂದಕ್ಕೊಂದು ಸದೃಶವಾಗಿರುತ್ತವೆ] ಹೀಗೆ ವ್ಯಾಪ್ತಿ ಇರುವದರಿಂದ ಹೇತು ಸಾಧ್ಯಗಳಿಗೆ ವೈಧಿಕರಣ್ಯವಿದ್ದರೂ ಅದು ದೋಷವಾಗಲಾರದು. ಎಲ್ಲಿ ವ್ಯಾಪ್ತಿ ಇರುವದಿಲ್ಲವೋ ಆ ಸ್ಥಳದಲ್ಲಿಯೇ ವೈಧಿಕರಣ್ಯವು ದೋಷವಾಗುತ್ತದೆ. ತಾರ್ಕಿಕರಿಂದಲೂ "ಭೂಭೂಧರಾದಿಕವು, [ಭೂಮಿ ಪರ್ವತಗಳು] ಸಕರ್ತೃಕವು [ಕರ್ತೃವಿನಿಂದ ಕೂಡಿದ್ದು] ಕಾರ್ಯವಾಗಿರುವದರಿಂದ, ಘಟವಂತೆ" ಎಂಬ ಅನುಮಾನದಲ್ಲಿ ಕಾರ್ಯತ್ವ ಹೇತುವು, ಭೂಭೂಧರಾದಿಗಳಲ್ಲಿರುತ್ತದೆ. ಆದರೆ, ಸಕರ್ತೃಕತ್ವ ಎಂದರೆ ಕರ್ತೃಕತ್ವವು [ಸಾಧ್ಯವು] ಈಶ್ವರನಲ್ಲಿರುತ್ತದೆ. ಹೇತು ಸಾಧ್ಯಗಳಿಗೆ ಹೀಗೆ ವೈಧಿಕರಣ್ಯವಿದೆ. ಆದರೂ ವ್ಯಾಪ್ತಿಯು ಇರುವದರಿಂದ ಅನುಮಿತಿ ಹುಟ್ಟುತ್ತಿದೆ. ಎಂದು ತಾರ್ಕಿಕರಿಂದ ಅಂಗೀಕೃತವಾಗಿದೆ.

यद्वा, सगौः, तग्दवयसदृशः, तग्दवयसादृश्यप्रतियोगित्वात्, यो यग्दतसादृश्यप्रतियोगी, सः तत्सदृशः, यथा यमो यमांतरेणेति प्रयोगेण सामानाधिरण्य संभवाच्च ।

॥ इति मीमांसकाभिमतोपमानस्य, अनुमानेऽन्तर्भावसमर्थनम् ॥

४. अभावाख्यं प्रमाणं अनुमानादिष्वंतर्भावयितुं तल्लक्षणमुच्यतेः–

१. अभावज्ञानकरणमभावाख्यं प्रमाणं (अनुपलब्धिप्रमाणमिति) तदन्तर्भावप्रकारस्तु इत्थं–इदानीं कौरवाद्यभावो भारताद्यागमादवगम्यते, साम्प्रतं तत्र प्रत्यक्षाद्यप्रवृत्तेरिति,, कैरवाद्यभावज्ञानकारणं भारताद्यागम एवेत्यनुपलब्धिरूपप्रमाणं तदर्थं नाभ्युपेयम् ।

---

ತಥಾಚ- ಈ ಅನುಮಾನದಲ್ಲಿ ಹೇತುವು ಭೂಭೂಧರಾದಿಗಳಲ್ಲಿ ಅದೆ ಸಾಧ್ಯವು ಈಶ್ವರನಿಷ್ಟವಾಗಿದೆ ಹೀಗೆ ಹೇತುಸಾಧ್ಯಗಳಿಗೆ ವೈಧಿಕರಣ್ಯವಿದ್ದರೂ ಅನುಮಾನಕ್ಕೆ ಪ್ರಾಮಾಣ್ಯವನ್ನು ಸ್ವೀಕಾರ ಮಾಡಿದ್ದರಿಂದ, ಎಲ್ಲಿಯೂ ವೈಧಿಕರಣ್ಯವು ದೋಷವಾಗಲಾರದು.

ಹಾಗೂ ತುಷ್ಯತು ದುರ್ಜನ ಎಂಬ ನ್ಯಾಯದಿಂದ, ಸಮಾನಾಧಿಕರಣ್ಯವನ್ನೂ ಈ ಅನುಮಾನದಲ್ಲಿ ಸಂಪಾದಿಸಲಾಗುತ್ತಿದೆ. ಅದು ಹೇಗೆಂದರೆ- ಆ [ಪಟ್ಟಣದ] ಗೋವು, ಈ [ವನದಲ್ಲಿಯ] ಗವಯಸದೃಶವು, ಈ ಗವಯದ ಸಾದೃಶ್ಯ ಪ್ರತಿಯೋಗಿಯಾಗಿದ್ದರಿಂದ, ಯಾವದು ಯಾವುದರಲ್ಲಿಯ ಸಾದೃಶ್ಯಕ್ಕೆ ಪ್ರತಿಯೋಗಿಯೋ, ಅದು ಅದಕ್ಕೆ ಸದೃಶವು. ಯಥಾ- ಯಮನು ಯಮಾಂತರನಿಂದ ಎಂದು ಸಮಾನಾಧಿಕರಣ್ಯ ಪ್ರಯೋಗ ಮಾಡಲು ಬರುತ್ತದೆ.

**ಇತಿ ಮೀಮಾಂಸಕಾಭಿಮತ ಉಪಮಾನವು ಅನುಮಾನದಲ್ಲಿ ಅಂತರ್ಭಾವವಾಗುವದೆಂದು ಸಮರ್ಥನೆಯು.**

**೪) ಅನುಪಲಬ್ಧಿ ಪ್ರಮಾಣಕ್ಕೆ ಪ್ರತ್ಯಕ್ಷ ಅನುಮಾನ ಆಗಮಗಳಲ್ಲಿ ಅಂತರ್ಭಾವ ಸಮರ್ಥನೆಯು**

ಅಭಾವವೆಂಬ ಪ್ರಮಾಣವು ಅನುಮಾನಾದಿಗಳಲ್ಲಿ ಅಂತರ್ಭೂತವಾಗುವದೆಂದು ಸಮರ್ಥನೆ ಮಾಡಲು ಅದರ ಲಕ್ಷಣವು ಹೇಳಲ್ಪಡುತ್ತದೆ.

೧] ಅಭಾವದ ಜ್ಞಾನಕ್ಕೆ ಕರಣವಾದದ್ದು, ಅಭಾವಾಖ್ಯ ಪ್ರಮಾಣವು [ಅನುಪಲಬ್ಧಿ ಪ್ರಮಾಣವು] ಇದರ ಅಂತರ್ಭಾವ ಪ್ರಕಾರವು ಹೀಗೆ ಅದೆ. ಈಗ ಕೌರವರ ಅಭಾವವು ಭಾರತಾದಿಗಳಿಂದ ಉಪಲಬ್ಧವಾಗುತ್ತದೆ ಈ ವಿಷಯದಲ್ಲಿ ಪ್ರತ್ಯಕ್ಷಾದಿಗಳು ಪ್ರವೃತ್ತವಾಗುವದಿಲ್ಲ ಕೌರವಾದಿಗಳ ಅಭಾವಜ್ಞಾನಕ್ಕೆ ಕರಣವು ಭಾರತಾದಿ ಆಗಮವೇ.

२. देवदत्तस्य चक्षुराद्यभावः, रूपाद्यदर्शनलिङ्गगम्यः, तथा च देवदत्तः, न चक्षुष्मान् रूपादिज्ञानाभावादित्यनुमानगम्य इति ।

३. सुखाद्यभावप्रमितिः,—साक्षिप्रत्यक्षेणैव भवतीति न तदर्थं पृथक्-प्रामाण्यमनुपलब्धेरङ्गीकार्यम् ।

४. पुरोवर्तिनीन्द्रियसन्निकृष्टदेशे व्याप्त्याद्यनुसन्धानाभावकालेऽपि जायमानघटाद्यभावप्रमितिस्तु प्रत्यक्षरूपकरणसाध्यैव नत्वनुपलब्धिप्रमाणजन्या, घटाद्यभावं साक्षात्करोमीत्यनुभवात् ।

ननु अनुपलब्धेरभावज्ञानं प्रति करणत्वाभावे अनुपलब्ध्यभावेऽपि पटाभावप्रमितिः स्यादितिचेन्न, अनुपलब्धिस्तु, अवर्जनीयसन्निधिरेव,

---

ಆಗವುದರಿಂದಲೇ ಈ ಅಭಾವ ಜ್ಞಾನವಾಗುತ್ತಿರಲು, ಅಭಾವಜ್ಞಾನ ಆಗುವದರ ಸಲು-ವಾಗಿ ಪ್ರತ್ಯೇಕ ಅನುಪಲಬ್ಧಿ ಪ್ರಮಾಣ ಅಂಗೀಕಾರ ಮಾಡುವ ಕಾರಣವಿಲ್ಲ.

೨] ದೇವದತ್ತನಿಗೆ ಚಕ್ಷುರಿಂದ್ರಿಯ ಇಲ್ಲವೆಂಬುದು ರೂಪಾದಿಗಳ ಅದರ್ಶನದಿಂದ ಗೊತ್ತಾಗುತ್ತದೆ. ಹೇಗೆಂದರೆ–ದೇವದತ್ತನು. ಚಕ್ಷುರಿಂದ್ರಿಯ ಅಭಾವವುಳ್ಳವನು, ರೂ-ಪಾದಿ ಜ್ಞಾನ ಆಗದಿರುವದರಿಂದ, ಹೀಗೆ ದೇವದತ್ತನಿಗೆ ಚಕ್ಷುರಭಾವಜ್ಞಾನವು ರೂಪಾ-ದ್ಯದರ್ಶನ ಲಿಂಗದಿಂದ ಗೊತ್ತಾಗುತ್ತದೆ. ತಥಾಚ. ಉಕ್ತ ಅನುಮಾನದಿಂದ ಅಭಾವಜ್ಞಾನವಾಗುವದರಿಂದ ಪ್ರತ್ಯೇಕ ಅನುಪಲಬ್ಧಿ ಪ್ರಮಾಣ ಬೇಕಿಲ್ಲ.

೩] ಸುಖದ ಅಭಾವಜ್ಞಾನವಾಗುತ್ತದೆ. ಈ ಸುಖಾದ್ಯಭಾವ ಪ್ರಮಿತಿಯು ಸಾಕ್ಷಿ ಪ್ರತ್ಯಕ್ಷದಿಂದ ಆಗುತ್ತದೆ. ಕಾರಣ, ಸುಖಾಭಾವ ಜ್ಞಾನಾರ್ಥವಾಗಿ ಪ್ರತ್ಯೇಕ ಅನುಪ-ಲಬ್ಧಿಗೆ ಪ್ರಾಮಾಣ್ಯ ಅಂಗೀಕಾರ ಮಾಡುವ ಅವಶ್ಯಕತೆಯಿಲ್ಲ.

೪] ಪುರೋವೃತ್ತಿಯಾದ ದೇಶಕ್ಕೆ ಇಂದ್ರಿಯ ಸನ್ನಿಕರ್ಷವಾಗಲು ವ್ಯಾಪ್ತಿ ಮೊದಲಾದ ಅನುಸಂಧಾನವಿಲ್ಲದಿದ್ದರೂ ಘಟಾಭಾವದ ಪ್ರಮಿತಿಯು ಹುಟ್ಟುತ್ತದೆ. ಈ ಘಟಾಭಾವಜ್ಞಾನವು ಪ್ರತ್ಯಕ್ಷರೂಪಕರಣದಿಂದ ಹುಟ್ಟಿದ್ದು. ಅನುಪಲಬ್ಧಿ ಪ್ರಮಾಣ ಜನ್ಯವಲ್ಲ. [ಕಾರಣ ಪ್ರತ್ಯೇಕ ಅನುಪಲಬ್ಧಿಯ ಅವಶ್ಯಕತೆಯಿಲ್ಲ] ಹಾಗೂ ಘಟಾಭಾವ ಪ್ರಮಿತಿಯು ಪ್ರತ್ಯಕ್ಷಜನ್ಯವೆಂದು ಒಪ್ಪಿಕೊಳ್ಳಬೇಕು.

ಶಂಕಾ:- ಅನುಪಲಬ್ಧಿಯು ಅಭಾವವನ್ನು ಕುರಿತು ಕರಣವಾಗದಿದ್ದರೆ, ಅನುಪಲಬ್ಧಿಯ ಅಭಾವವಿದ್ದರೂ ಘಟಾಭಾವ ಪ್ರಮಿತಿ ಹುಟ್ಟಲಿ ಎಂದು ಆಪತ್ತಿಮಾಡಕೂಡದು. [ಅಭಾವ ಪ್ರಮಿತಿಯನ್ನು ಕುರಿತು] ಅನುಪಲಬ್ಧಿಯು ಅವರ್ಜನೀಯ ಸನ್ನಿಧಿ ಮಾತ್ರ.

तथा च पटादिकं प्रति अन्यथासिद्धरासभतन्तुरूदादिवदवर्जनीयसन्निधिः, न तु करणं, तथाचावर्जनीयसन्निधेः प्रतिबन्धकत्वाभावत्वेन नियतपूर्ववृत्तित्वमात्रं वर्तते, नतु करणत्वमिति भावः ।

ननु पुरोवर्तिनि देशे यदात्वन्धकारे करचरणप्रसरणादिरूपेणान्वेषणेन घटाद्यनुपलम्भे सति तदभावं जानाति, तदा घटाभावज्ञानं प्रति अनुपलब्धिः पृथक् प्रमाणं भवतीति चेन्न, तत्रानुपलब्धिरूपलिङ्गज्ञानमेवाभावज्ञाने करणमित्यनुपलब्धेर्लिङ्गतयैव करणत्वं न पृथक्प्रमाणत्वेन ।

न च लिङ्गस्य ज्ञातस्यैव करणत्वात् अनुपलब्धेरपि, अभावत्वेन तज्ज्ञानस्य अनुपलब्ध्यन्तरापेक्षयामनवस्थितिरिति शङ्क्यम् ।

---

ತಥಾಚ–ಘಟವನ್ನು ಕುರಿತು ರಾಸಭ ಹಾಗೂ ಪಟವನ್ನು ಕುರಿತು ತಂತುರೂಪಗಳಂತೆ ಅವರ್ಜನೀಯ ಸನ್ನಿಧಿಯು ಎಂದು ತಿಳಿಯಬೇಕು [ಪಟ ಹುಟ್ಟುವ ಕಾಲಕ್ಕೆ ತಂತುರೂಪವು ಹೇಗೆ ಅವರ್ಜನೀಯವೋ ಅದರಂತೆ ಅನುಪಲಬ್ಧಿಯು ಅವರ್ಜನೀಯ ಸನ್ನಿಧಿಯೆಂದು ತಿಳಿಯಬೇಕು. ಅದು ಕರಣವಲ್ಲ. ಅವರ್ಜನೀಯ ಸನ್ನಿಧಿಯು, ಕಾರ್ಯನಿಯತ ಪೂರ್ವವೃತ್ತಿಯಾಗಿ [ಕಾರ್ಯೋತ್ಪತ್ತಿಗೆ] ಪ್ರತಿಬಂಧಕವನ್ನು ನಿವಾರಿಸುತ್ತದೆ ಹೊರತು ಕರಣವಾಗುವದಿಲ್ಲ ಎಂಬ ಭಾವ]

ಶಂಕಾ– ಪುರೋವೃತ್ತಿಯಾದ ದೇಶದಲ್ಲಿ ಯಾವಾಗ ಅಂಧಃಕಾರದಲ್ಲಿ ಕರಚರಣ ಪ್ರಸಾರಣಾದಿ [ಕೈಕಾಲು ಚಾಚುವದು] ಗಳಿಂದ ಅನ್ವೇಷಣ ಮಾಡಿದಲ್ಲಿ ಕೂಡ ಘಟವು ಉಪಲಬ್ಧವಾಗದೇ ಹೋದಲ್ಲಿ ಘಟಾಭಾವ ಪ್ರಮಿತಿಯು ಹುಟ್ಟುತ್ತದೆ. ಆವಾಗ್ಯೆ ಘಟಾಭಾವಜ್ಞಾನವನ್ನು ಕುರಿತು ಅನುಪಲಬ್ಧಿಯು ಪೃಥಕ್ ಪ್ರಮಾಣವಾಗುತ್ತದೆ. ಘಟದ ಅನುಪಲಬ್ಧಿಯಿಂದಲೇ ಅದರ ಅಭಾವಜ್ಞಾನ ಹುಟ್ಟುತ್ತದೆ. ಅಭಾವ ಜ್ಞಾನಕ್ಕೆ ಅನುಪಲಬ್ಧಿ ಸಾಧನವಾದ್ದರಿಂದ ಅದು ಪ್ರಮಾಣವು. ಅಂದಲ್ಲಿ ಇದು ಸರಿ ಹೋಗುವದಿಲ್ಲ. ಆ ಸ್ಥಳದಲ್ಲಿ ಅಭಾವ ಜ್ಞಾನವನ್ನು ಕುರಿತು ಅನುಪಲಬ್ಧಿ ರೂಪ ಲಿಂಗಜ್ಞಾನವೇ ಕರಣವು. ತಥಾಚ– ಅನುಪಲಬ್ಧಿಯು ಲಿಂಗರೂಪದಿಂದ ಕರಣವೇ ಹೊರತು ಪೃಥಕ್ ಪ್ರಮಾಣವಾಗಿ ಕರಣವಲ್ಲ.

ಲಿಂಗವು ಜ್ಞಾತವಾಗಿಯೇ ಕರಣವಾಗುತ್ತದೆ. (ಅಂದರೆ ಲಿಂಗದ ಜ್ಞಾನವೇ ಕರಣವು) ಅನುಪಲಬ್ಧಿಯೂ ಕೂಡಾ ಅಭಾವರೂಪವಾದ್ದರಿಂದ ಆ ಅನುಪಲಬ್ಧಿ ಅಭಾವಜ್ಞಾನಕ್ಕೆ ಇನ್ನೊಂದು ಅನುಪಲಬ್ಧಿಯನ್ನು ಅಪೇಕ್ಷೆ ಮಾಡಿದಲ್ಲಿ ಅದು ಅಭಾವರೂಪವಾದ್ದರಿಂದ

तस्याः साक्षिप्रत्यक्षसिद्धत्वेनानवस्थाऽभावात् । तथा च नानुपलब्धेर्लिङ्गत्वेन ज्ञापकत्वपक्षे अनवस्थादोष इति ( **प्र. ल. टी. भावदीपे** )

पूर्वोक्तेयमनुपलब्धिरपि अनुमान एवान्तर्भवति, तदित्थ-अत्र घटो नास्ति, योग्यत्वे सत्यनुपलभ्यमानत्वादिति अत्र, अतीन्द्रिये व्यभिचारवारणाय योग्यत्वे सतीत्युक्तं, घटादौ तत्परिहाराय अनुपलभ्यमानत्वमिति विशेष्यदलं, तथा चेयमनुपलब्धिरपि अनुमानएव अन्तर्भवतीति ज्ञेयम् ।

---

ಆದರ ಜ್ಞಾನಕ್ಕೆ ಮತ್ತೊಂದು ಅನುಪಲಬ್ಧಿಯನ್ನು ಅಪೇಕ್ಷಿಸಿದಲ್ಲಿ ಅನವಸ್ಥಾದೋಷ ಬರುತ್ತದೆ ಎಂದು ಶಂಕಾ ಮಾಡಿದಲ್ಲಿ ಇದಕ್ಕೆ ಸಮಾಧಾನವು:- ಅಭಾವಜ್ಞಾನಕ್ಕೆ ಕಾರಣವಾದ ಅನುಪಲಬ್ಧಿಯು ಸಾಕ್ಷೀ ಪ್ರತ್ಯಕ್ಷಸಿದ್ಧವಾದ್ದರಿಂದ [ಮತ್ತೊಂದು ಅನುಪಲಬ್ಧಿಯ ಅಪೇಕ್ಷೆ ಇಲ್ಲ] ಅನವಸ್ಥಾದೋಷ ಬರುವದಿಲ್ಲ. ತಥಾಚ- ಅನುಪಲಬ್ಧಿಯು ಲಿಂಗವು ಜ್ಞಾತವಾಗಿಯೇ ಕರಣವಾಗುತ್ತದೆ ಎಂದು ಹೇಳಿದರೂ ಕೂಡಾ ಅನವಸ್ಥಾದೋಷಕ್ಕೆ ಅವಕಾಶವಿಲ್ಲ ಎಂದು ಪ್ರ. ಲ. ಟೀಕಾಭಾವದೀಪದಲ್ಲಿ ಹೇಳಿದೆ.

ಪೂರ್ವದಲ್ಲಿ ಹೇಳಿದ ಅನುಪಲಬ್ಧಿಯೂ ಕೂಡಾ ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ. ಅದು ಈ ರೀತಿ ಇದೆ 'ಇಲ್ಲಿ ಘಟವು ಇಲ್ಲ. ಉಪಲಬ್ಧಿಗೆ ಯೋಗ್ಯವಾಗಿ ಅನುಪಲಭ್ಯಮಾನವಾದ್ದರಿಂದ' ಈ ಅನುಮಾನದಲ್ಲಿ ಅತೀಂದ್ರಿಯದಲ್ಲಿ ವ್ಯಭಿಚಾರ ಪರಿಹಾರ ಮಾಡುವದರ ಸಲುವಾಗಿ 'ಯೋಗ್ಯತ್ವ' ವಿಶೇಷಣ ಕೊಡಬೇಕು. ಅಂದರೆ ಕೇವಲ ಅನುಪಲಭ್ಯಮಾನತ್ವಾತ್ ಇಷ್ಟೇ ಹೇತು ಮಾಡಿದಲ್ಲಿ ಸತ್ತಾಯುಳ್ಳ ಅತೀಂದ್ರಿಯಗಳಲ್ಲಿ, ಅನುಪಲಭ್ಯಮಾನತ್ವ ಇರುವದರಿಂದ ವ್ಯಭಿಚಾರವು. ಇದನ್ನು ಪರಿಹರಿಸಲು 'ಯೋಗ್ಯತ್ವ' ವಿಶೇಷಣ ಕೊಡಬೇಕು. ಅತೀಂದ್ರಿಯಗಳು ಉಪಲಬ್ಧಿಗೆ ಯೋಗ್ಯವಲ್ಲವಾದ್ದರಿಂದ ವ್ಯಭಿಚಾರವಿಲ್ಲ. ಘಟಾದಿಗಳಲ್ಲಿ ಉಪಲಬ್ಧಿಯೋಗ್ಯತ್ವ ಇರುವದರಿಂದ ವ್ಯಭಿಚಾರವು ಅದನ್ನು ವಾರಣ ಮಾಡಲು ಅನುಪಲಭ್ಯಮಾನತ್ವ ದಲ ಕೊಡಬೇಕು. ಘಟದಲ್ಲಿ ಉಪಲಭ್ಯಮಾನತ್ವ ಇದೆ ಹೊರತು, ಅನುಪಲಭ್ಯಮಾನತ್ವ ಇಲ್ಲ ಕಾರಣ ವ್ಯಭಿಚಾರವಿಲ್ಲ. [ಅಂದರೆ ಯೋಗ್ಯತ್ವಾತ್ ಇಷ್ಟೇ ಹೇತು ಮಾಡಿದಲ್ಲಿ ಪೂರ್ವೋಕ್ತ ವ್ಯಭಿಚಾರವು. ಅದನ್ನು ಪರಿಹರಿಸಲು ಅನುಪಲಬ್ಧಿ ದಲ ಕೊಡಬೇಕೆಂಬ ಭಾವ] ತಥಾಚ- ಈ ಅನುಪಲಬ್ಧಿಯೂ ಕೂಡಾ ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ ಎಂದು ತಿಳಿಯಬೇಕು.

ननु कश्चित्पुमान् मार्गेण राजमन्दिरं गच्छन्, तदा गजास्तित्वनास्तित्वयोरुदासीन एव गच्छति, वस्तुतो मार्गे प्रातर्गजो नाभूत्, पुनर्गजवार्तानभिज्ञ एव स्वगृहमेति, तं प्रति सायं कश्चित् पृच्छति, वस्तुतस्तत्र गजोऽभूद्वा नवेति, एवं प्रष्टारं प्रति राजमंदिरादागतो वदति, प्रातस्तत्र गजो नाभूदिति, "इदं ज्ञानं इन्द्रियजं न, असन्निकर्षात्" नापि लिङ्गशब्दाभ्यां जातं तदानीमभावात् तस्मात्प्रत्यक्षानुमानागमातिरिक्तमनुपलब्धिप्रमाणजन्यमित्यङ्गीकार्यमिति चेन्न, कुतो नेतिचेदिदमपि ज्ञानमनुलब्धिलिङ्गजन्यमेव, तथाहि—राजद्वारे प्रातर्गजो नासीत्, योग्यत्वे सतितदानीमनुपलम्भादिति,

---

ಶಂಕಾ– ಕಶ್ಚಿತ್ ಪುರುಷನು ಮಾರ್ಗದಿಂದ ರಾಜಮಂದಿರವನ್ನು ಕುರಿತು ಹೋಗುವದಾಗಿ ಸಮೀಪದಲ್ಲಿದ್ದ ಆನೆ ಮುಂತಾದ ವಸ್ತುಗಳನ್ನು ನೋಡಿ ಗಜಾದಿಗಳ ಅಸ್ತಿತ್ವ [ಇರುವಿಕೆ] ನಾಸ್ತಿತ್ವ [ಇಲ್ಲದಿರುವಿಕೆ] ಇವುಗಳ ವಿಷಯದಲ್ಲಿ ಉದಾಸೀನವಾಗಿ ಹೋಗುತ್ತಾನೆ, ಅಂದರೆ ಗಜಗಳು ಅವೆ ಅಥವಾ ಇಲ್ಲವೆಂಬ ನಿಶ್ಚಯವಿಲ್ಲದೆ ಹೋಗುವನು. ವಾಸ್ತವಿಕವಾಗಿ ಮಾರ್ಗದಲ್ಲಿ ಗಜವು ಇದ್ದಿಲ್ಲ. ಮತ್ತು ಗಜವಾರ್ತೆಯನ್ನು ತಿಳಿಯದಲೇ ಮನೆಗೆ ಬರುತ್ತಾನೆ ಅವನನ್ನು ಸಾಯಂಕಾಲದಲ್ಲಿ ಇನ್ನೊಬ್ಬ ಪ್ರಶ್ನೆ ಮಾಡುತ್ತಾನೆ (ನೀವು ರಾಜ್ಯ ಮಾರ್ಗದಲ್ಲಿ ಹೋಗಿದ್ದಿರಿ) ಅಲ್ಲಿ ಗಜವು ಇತ್ತೇ? ಇಲ್ಲವೇ? ಎಂದು, ಆಗ್ಗೆ ಪ್ರಶ್ನೆ ಮಾಡತಕ್ಕವನನ್ನು ಕುರಿತು ರಾಜಮಂದಿರದಿಂದ ಬಂದವನು ಹೀಗೆ ಹೇಳುತ್ತಾನೆ ಪ್ರಾತಃ ಕಾಲದಲ್ಲಿ ಗಜವು (ರಾಜ್ಯ ಮಾರ್ಗದಲ್ಲಿ) ಇದ್ದಿಲ್ಲ. ಉತ್ತರ ಹೇಳತಕ್ಕವನಿಗೆ ಗಜಾಭಾವಜ್ಞಾನವಾಯಿತು ಈ ಗಜಾಭಾವಜ್ಞಾನವು ಇಂದ್ರಿಯದಿಂದ ಹುಟ್ಟಿಲ್ಲ. ಯಾಕೆಂದರೆ ಅವನಿಗೆ ಗಜದ ಸನ್ನಿಕರ್ಷವಿಲ್ಲ. ಲಿಂಗ ಶಬ್ದಗಳಿಂದಲೂ ಹುಟ್ಟಿಲ್ಲ. ಆಗ್ಯೆ ಅವು ಇಲ್ಲ. ಈ ಕಾರಣದಿಂದ ಪ್ರತ್ಯಕ್ಷ ಅನುಮಾನ ಆಗಮಾತಿರಿಕ್ತವಾದ ಅನುಪಲಬ್ಧಿ ಪ್ರಮಾಣದಿಂದ ಹುಟ್ಟಿದ್ದು ಎಂದು ಒಪ್ಪಿಕೊಳ್ಳಬೇಕು. ಹೀಗೆ ಅಂದಲ್ಲಿ ಇದು ಅಯುಕ್ತವು. ಏಕೆ ಅಯುಕ್ತವೆಂದರೆ? ಸಮಾಧಾನವು ಹೀಗಿದೆ. ಈ ಜ್ಞಾನವು (ಗಜಾಭಾವಜ್ಞಾನವು) ಕೂಡಾ ಅನುಪಲಬ್ಧಿಲಿಂಗಜನ್ಯವೇ ಆಗಿದೆ. ಹೇಗೆಂದರೆ– ರಾಜ್ಯಮಾರ್ಗದಲ್ಲಿ ಪ್ರಾತಃ ಕಾಲದಲ್ಲಿ ಗಜಾಭಾವವಿತ್ತು. (ಉಪಲಬ್ಧಿಗೆ) ಕಾಣಲು ಯೋಗ್ಯವಾಗಿದ್ದು ಆ ಕಾಲದಲ್ಲಿ ಅನುಪಲಬ್ಧವಾದ್ದರಿಂದ

प्रयोगसंभवेनानुपलब्धिलिङ्गजन्यमेव न पृथक् तस्याः प्रामाण्यं अङ्गीकार्यमिति ।

ननु पुरोवृत्तिझटितिजायमाना घटाद्यभावप्रमितिस्तु प्रत्यक्षजन्येत्युक्तं, तत्राभावस्येन्द्रियेण सन्निकर्षानुपपत्तिः, अभावस्य द्रव्यत्वायुतसिद्धत्वाभावेनेन्द्रियाभावयोः संयोगसमवायसंबन्धाभावात् । तथा च कथं घटाद्यभावप्रमितिः प्रत्यक्षजन्या भवेदिति चेन्न ।

घटादिभाववत् तदभावस्यापीन्द्रियेण सन्निकर्षाङ्गीकारे बाधकाभावात्, तयोः सन्निकर्षाभाव एव बाधक इति चेन्न, 'द्रव्ययोरेव संयोग' इति नैयायिकनियमस्याप्रामाणिकत्वेनानङ्गीकारात्, अभावस्याऽपि इन्द्रियेण सन्निकर्षाङ्गीकारे बाधकाभावात् तथा च घटाद्यभावप्रमितिस्तु प्रत्यक्षजन्यैवेति ज्ञेया ।

---

ಎಂಬ ಅನುಮಾನ ಪ್ರಯೋಗ ಸಂಭವಿಸುವದರಿಂದ ಅನುಮಾನದಲ್ಲಿಯೇ ಅಂತರ್ಭೂತವಾಗುತ್ತಿದೆ ಕಾರಣ ಅನುಪಲಬ್ಧಿಗೆ ಪ್ರತ್ಯೇಕ ಪ್ರಾಮಾಣ್ಯವು ಅಂಗಿಕಾರಯೋಗ್ಯವಲ್ಲ.

ಶಂಕಾ:– ಪುರೋವೃತ್ತಿ ದೇಶದಲ್ಲಿ ಶೀಘ್ರನಾಗಿ ಘಟಾಭಾವ ಪ್ರಮಿತಿ ಹುಟ್ಟುತ್ತದೆ. ಅದು ಪ್ರತ್ಯಕ್ಷದಿಂದ ಹುಟ್ಟಿದ್ದು ಎಂದು ಹೇಳಿದ್ದಾಯಿತು. ಈ ವಿಷಯದಲ್ಲಿ ಅಭಾವಕ್ಕೆ ಇಂದ್ರಿಯ ಸನ್ನಿಕರ್ಷವೇ ಆಗುವದಿಲ್ಲ. ಅಭಾವವು ದ್ರವ್ಯವೂ ಅಲ್ಲ. ಹಾಗೆ, ಅಯುತ ಸಿದ್ಧವೂ ಅಲ್ಲ. (ಒಂದನ್ನೊಂದು ಬಿಟ್ಟು ಇರದೆ ಇರುವದು ಅಯುತ ಸಿದ್ಧವು) ಕಾರಣ ಸಂಯೋಗವಾಗಲಿ, ಸಮವಾಯವಾಗಲೀ ಸಂಬಂಧವು ಕೂಡುವದಿಲ್ಲ. (ಅಂದರೆ ಅಭಾವವು ದ್ರವ್ಯವಲ್ಲ ಕಾರಣ ಇಂದ್ರಿಯಕ್ಕು ಅಭಾವಕ್ಕೂ ಸಂಯೋಗ ಸನ್ನಿಕರ್ಷವಿಲ್ಲ. ಅಭಾವವು [ರೂಪಾದಿಗಳಂತೆ] ಅಯುತಸಿದ್ಧವಲ್ಲ ಕಾರಣ ಸಮವಾಯ ಸಂಬಂಧವಿಲ್ಲ] ಅಂದ ಮೇಲೆ ಘಟಾಭಾವಜ್ಞಾನವು ಪ್ರತ್ಯಕ್ಷದಿಂದ ಹೇಗೆ ಹುಟ್ಟುವದು ? ಎಂದು ಶಂಕಿಸಿದಲ್ಲಿ ಇದು ಯೋಗ್ಯವಲ್ಲ. ಘಟ ಮೊದಲಾದವುಗಳಂತೆ ಘಟಾಭಾವವು ಕೂಡಾ ಇಂದ್ರಿಯ ಸನ್ನಿಕರ್ಷವುಳ್ಳದ್ದು ಎಂದು ಅಂಗೀಕರಿಸಿದರೆ ಯಾವ ಬಾಧಕವೂ ಇಲ್ಲ. ಘಟಾಭಾವ, ಇಂದ್ರಿಯಗಳಿಗೆ ಸನ್ನಿಕರ್ಷ ಕೂಡುವದಿಲ್ಲವೆಂಬುದೇ ಬಾಧಕವು ಅಂದಲ್ಲಿ, ಇದು ಸರಿಯಲ್ಲ. ದ್ರವ್ಯಗಳಿಗೇನೇ ಸಂಯೋಗವಿದೆ ಎಂಬ ನೈಯಾಯಿಕರ ಮತವು ಅಪ್ರಾಮಾಣಿಕವಾಗಿದ್ದು, ಅಂಗೀಕಾರಕ್ಕೆ ಯೋಗ್ಯವಲ್ಲ. ಕಾರಣ ಅಭಾವಕ್ಕೆ ಕೂಡಾ ಇಂದ್ರಿಯದಿಂದ ಸನ್ನಿಕರ್ಷವನ್ನು ಅಂಗೀಕರಿಸಿದಲ್ಲಿ ಬಾಧಕವು ಇಲ್ಲ. ತಥಾಚ- ಘಟಾಭಾವ ಪ್ರಮಿತಿಯು ಪ್ರತ್ಯಕ್ಷದಿಂದ ಹುಟ್ಟಿದ್ದು ಎಂದು ತಿಳಿಯಬೇಕು.

**॥ इति अनुपलब्धिप्रमाणस्य प्रत्यक्षानुमानागमेष्वन्तर्भावसमर्थनम् ॥**

(४) सम्भवप्रमाणं अनुमानेऽन्तर्भावयितुं तत्स्वरूपमुच्यते—

बहुत्वसङ्ख्याविशिष्टवस्तुज्ञाने सति न्यूनत्वसङ्ख्याविशिष्टार्थज्ञानं यज्जायते तत्सम्भवाख्यप्रमाणं, तद्यथा-शतमस्तीति ज्ञाने पञ्चाशदस्तीति ज्ञानमिति । एतदप्यनुमान एवान्तर्भवति, तथाहि-देवदत्तः पञ्चाशद्वान्, शतवत्त्वात् यथा अहमिति, एवं प्रयोगसम्भवादिति ज्ञेयम् ।

॥ **इति सम्भवाख्यप्रमाणस्य, अनुमानेऽन्तर्भावसमर्थनम्** ॥

---

(६) परिशेषप्रमाणमनुमाने अन्तर्भावयितुं तल्लक्षणमुच्यते–

प्रसक्तप्रतिषेधे परिशिष्यमाणे बुद्धिः परिशेषाख्यं प्रमाणं, यथा-'देवदत्तयज्ञदत्तावेतौ' इति ज्ञाने सति एकस्मिन् नायं यज्ञदत्त इति प्रतिषेधे, परिशिष्यमाणे देवदत्तत्वबुद्धिः,

---

ಇತಿ ಅನುಪಲಬ್ಧಿ ಪ್ರಮಾಣವು ಪ್ರತ್ಯಕ್ಷ ಅನುಮಾನ ಆಗಮದಲ್ಲಿ ಅಂತರ್ಭೂತವಾಗುತ್ತದೆಂದು ಸಮರ್ಥನೆಯು.

೫) **ಸಂಭವ ಪ್ರಮಾಣಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು**

ಸಂಭವ ಪ್ರಮಾಣವನ್ನು ಅನುಮಾನದಲ್ಲಿ ಅಂತರ್ಭಾವ ಮಾಡಲು ಅದರ ಲಕ್ಷಣವು ಹೇಳಲ್ಪಡುತ್ತದೆ. ಬಹುಸಂಖ್ಯಾದಿಂದ ಕೂಡಿದ ವಸ್ತು ಜ್ಞಾನವಾಗುತ್ತಿರಲು ನ್ಯೂನ ಸಂಖ್ಯಾದಿಂದ ಕೂಡಿದ ಅರ್ಥಜ್ಞಾನವು ಏನು ಹುಟ್ಟುತ್ತದೆ, ಅದು ಸಂಭವಾಖ್ಯ ಪ್ರಮಾಣವು. ಅದು ಹೇಗೆಂದರೆ- **ನೂರು** ಅದೆ ಎಂದು ಜ್ಞಾನವಾದಲ್ಲಿ ಐವತ್ತು ಅದೆ ಎಂಬ ಜ್ಞಾನವು. [ಸಂಭವ ಪ್ರಮಾಣವು] ಈ ಸಂಭವ ಪ್ರಮಾಣವು ಅನುಮಾನದಲ್ಲಿ ಅಂತರ್ಭೂತವಾಗುತ್ತದೆ. ಅದು ಹೇಗೆಂದರೆ- 'ದೇವದತ್ತನು, ಐವತ್ತು ವಸ್ತುವುಳ್ಳವನು, ನೂರು ವಸ್ತುವುಳ್ಳವನಾದ್ದರಿಂದ ನನ್ನಂತೆ" ಎಂದು ಪ್ರಯೋಗವು ಸಂಭವಿಸುತ್ತದೆ ಎಂದು ತಿಳಿಯಬೇಕು.

ಇತಿ ಸಂಭವ ಪ್ರಮಾಣಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು

೬) ಪರಿಶೇಷ ಪ್ರಮಾಣಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು

ಪರಿಶೇಷ ಪ್ರಮಾಣವನ್ನು ಅನುಮಾನದಲ್ಲಿ ಅಂತರ್ಭಾವ ಮಾಡುವದಕ್ಕೋಸಲುವಾಗಿ ಅದರ ಲಕ್ಷಣವು ಹೇಳಲ್ಪಡುತ್ತದೆ.

अत्र प्रसक्तप्रतिषेधः करणपरिशेषः, परिशिष्यमाणे बुद्धिः फलपरिशेष इति ज्ञातव्यम् । इयं बुद्धिरप्यनुमानजन्या, तथाहि–

अयं, देवदत्तः, देवदत्तयज्ञदत्तयोरन्यतरत्वे सति अयज्ञदत्तत्वात्, व्यतिरेकेण यज्ञदत्तवदिति प्रयोगोपपत्तेः, अतः परिशेषाख्यप्रमाणमनुमान एवान्तर्भवति, तस्य न पृथक्प्रामाण्यं सम्भवतीति ज्ञेयम् ।

॥ **इति परिशेषरूपप्रमाणस्यानुमानेऽन्तर्भावसमर्थनम्** ॥

---

(७) उपक्रमादिप्रमाणानामनुमानेऽन्तर्भाव उच्यते–

---

ಪ್ರಸಕ್ತವಾದವುಗಳಲ್ಲಿ (ಒಂದನ್ನು) ಪ್ರತಿಷೆಧ ಮಾಡಿದಲ್ಲಿ ಪರಿಶಿಷ್ಯಮಾಣವಾದ ವಸ್ತುವಿನಲ್ಲಿ ಬುದ್ದಿಯು, ಪರಿಶೇಷ ಪ್ರಮಾಣವು ಹೇಗೆಂದರೆ: ದೇವದತ್ತ. ಯಜ್ಞದತ್ತರು (ಇಬ್ಬರು) ಎಂಬ ಜ್ಞಾನ ಬಂದ, ನಂತರ, ಒಬ್ಬನಲ್ಲಿ ಇವನು ಯಜ್ಞಾದತ್ತನಲ್ಲವೆಂದು ಪ್ರತಿಷೇಧ ಮಾಡಿದರೆ, ಪರಿಶಿಷ್ಯ ಮಾಣನಾದ ದೇವದತ್ತನ ಜ್ಞಾನವು. ಬರುವದು. (ದೇವದತ್ತನಲ್ಲಿ ಬುದ್ಧಿಯು; ಪರಿಶೇಷ ಪ್ರಮಾಣವು) ಇಲ್ಲಿ ಪ್ರಸಕ್ತ ಪ್ರತಿಷೇಧವು ಕರಣ ಪರಿಶೇಷವು, ಪರಿಶಿಷ್ಯಮಾಣದಲ್ಲಿ ಬುದ್ಧಿಯು ಫಲ ಪರಿಶೇಷವು. ಎಂದು ತಿಳಿಯಬೇಕು ಈ ಬುದ್ಧಿ ಕೂಡಾ ಅನುಮಾನವೇ ಆಗಿದೆ. ಅದು ಹೇಗೆಂದರೆ. ಇವನು, ದೇವದತ್ತನು. ದೇವದತ್ತ ಯಜ್ಞದತ್ತರ ಮಧ್ಯದಲ್ಲಿ- ಅಯಜ್ಞದತ್ತನಾದ್ದರಿಂದ, ವ್ಯತಿರೇಕದಿಂದ, ಯಜ್ಞದತ್ತನಂತೆ, (ಯಜ್ಞದತ್ತನಲ್ಲಿ ದೇವದತ್ತತ್ವವಿಲ್ಲ ದೇವದತ್ತ ಯಜ್ಞದತ್ತರಲ್ಲಿ ಅನ್ಯತರವಾಗಿ ಅಯಜ್ಞದತ್ತತ್ವವೂ ಇಲ್ಲ, ಎಂಬ ವ್ಯತಿರೇಕದಿಂದ) ಹೀಗೆ ಅನುಮಾನ ಪ್ರಯೋಗ ಸಂಭವಿಸುತ್ತದೆ. ಪರಿಶೇಷಾಖ್ಯ ಪ್ರಮಾಣವು ಅನುಮಾನದಲ್ಲಿ ಅಂತರ್ಭೂತವಾಗುತ್ತದೆ. ಆ ಪರಿಶೇಷಕ್ಕೆ ಪೃಥಕ್ ಪ್ರಾಮಾಣ್ಯ ಕೂಡದಿರುವದರಿಂದ ಅದು ಪ್ರತ್ಯೇಕ ಪ್ರಮಾಣವಾಗಲಾರದೆಂದು ತಿಳಿಯಬೇಕು.

ಇತಿ ಪರಿಶೇಷಾಖ್ಯ ಪ್ರಮಾಣಕ್ಕೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು

೭) ಉಪಕ್ರಮಾದಿ ಪ್ರಮಾಣಗಳಿಗೆ ಅನುಮಾನದಲ್ಲಿಯೇ ಅಂತರ್ಭಾವ ಸಮರ್ಥನೆಯು

ಉಪಕ್ರಮಾದಿ ಪ್ರಮಾಣಗಳು ಅನುಮಾನದಲ್ಲಿಯೇ ಅಂತರ್ಭಾವ ಹೊಂದುತ್ತವೆ ಎಂದು ಹೇಳಲಾಗುತ್ತದೆ–

"उपक्रमोपसंहाराभ्यासापूर्वताफलार्थवादोपपत्तयः" तथा "श्रुतिलिङ्गवाक्यप्रकरणस्थानसमाख्याः" अपि न पृथक्प्रमाणानि, किन्त्वनुमानेष्वेवान्तर्भवन्ति, तथाहि--

"इदं वाक्यं, एतत्तात्पर्यकं तदुपक्रमवत्त्वात्" यत् यदुपक्रमवत् तद्वाक्यं तत्परं यथा सम्मतं, इत्यादिरूपेण व्याप्तिमपेक्ष्य तात्पर्यगमकत्वादनुमानमेवेति ध्येयं. एवमन्यत्रापि द्रष्टव्यम् ।

**॥ इति उपक्रमादीनां प्रमाणामनुमानेष्वेवान्तर्भावसमर्थनम् ॥**

(८) एवमैतिह्याख्यप्रमाणस्यापि, आगमेऽन्तर्भावं वक्तुमैतिह्यस्य स्वरूपमुच्यते—

अनिर्दिष्टप्रवक्तृकं ( विशेषतोऽपरिज्ञातवक्तृकं ) प्रवादापरपर्यायं ऐतिह्यं, यथा ! 'अत्र वैश्रवणोऽस्तीति वाक्यं" एतदागम एव, "वटे वटे वैश्रवणः चत्वरे चत्वरे शिवः । पर्वते पर्वते रामः सर्वत्र मधुसूदनः" इत्यागम एवान्तर्भवतीति तदपि न पृथक् प्रमाणम् ।

---

ಉಪಕ್ರಮ, ಉಪಸಂಹಾರ ಅಭ್ಯಾಸ, ಅಪೂರ್ವತಾ ಫಲ, ಅರ್ಥವಾದ, ಉಪಪತ್ತಿಗಳು, ಅದರಂತೆ ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಇವುಗಳು ಕೂಡಾ ಪ್ರತ್ಯೇಕ ಪ್ರಮಾಣವಲ್ಲ. ಅನುಮಾನದಲ್ಲಿಯೇ ಅಂತರ್ಭಾವಗಳಾಗುತ್ತವೆ. ಹೇಗೆಂದರೆ– ಈ ವಾಕ್ಯವು, ಈ ವಿಷಯದಲ್ಲಿ ತಾತ್ಪರ್ಯಉಳ್ಳದ್ದು, ಇಂಥ ಉಪಕ್ರಮಉಳ್ಳದ್ದಾದುದರಿಂದ, ಯಾವುದು ಯಾವ ಉಪಕ್ರಮ ಉಳ್ಳದ್ದೋ ಆ ವಾಕ್ಯವು ಅದೇ ತಾತ್ಪರ್ಯಉಳ್ಳದ್ದು. ಹೀಗೆ ಅನುಮಾನದಿಂದ ವ್ಯಾಪ್ತಿಯನ್ನು ಅಪೇಕ್ಷಿಸಿ ತಾತ್ಪರ್ಯಜ್ಞಾನ ಮಾಡಿಕೊಡುತ್ತದೆ. ಕಾರಣ ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ ಎಂದು ತಿಳಿಯಬೇಕು ಅದರಂತೆ ಉಳಿದವುಗಳನ್ನು ಅನುಮಾನದಲ್ಲಿ ಅಂತರ್ಭಾವ ಮಾಡಬೇಕು.

**ಇತಿ ಉಪಕ್ರಮಾದಿಗಳಿಗೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು.**

**೮] ಐತಿಹ್ಯ (ಪ್ರವಾದ) ಮೊದಲಾದ ಪ್ರಮಾಣಗಳಿಗೆ ಆಗಮ ಅನುಮಾನ ಪ್ರತ್ಯಕ್ಷಗಳಲ್ಲಿಯೇ ಅಂತರ್ಭಾವ ಸಮರ್ಥನೆಯು**

೮ ಐತಿಹ್ಯ ಪ್ರಮಾಣವನ್ನು ಆಗಮಾದಿಗಳಲ್ಲಿ ಅಂತರ್ಭಾವ ಮಾಡಲು ಐತಿಹ್ಯದ ಸ್ವರೂಪವು ಹೇಳಲ್ಪಡುತ್ತದೆ. ವಿಶೇಷವಾಗಿ ವಕ್ತೃವಿನ ಜ್ಞಾನವಿಲ್ಲದ. ಪ್ರವಾದ ಅದರ ಪರ್ಯಾಯವಾದದ್ದು. ಐತಿಹ್ಯ ಪ್ರಮಾಣ. ಹೇಗೆಂದರೆ– ಇಲ್ಲಿ ವೈಶ್ರವಣನು [ಕುಬೇರನು–ಯಕ್ಷನು] ಇದ್ದಾನೆ ಎಂಬ ವಾಕ್ಯವು.

एवमन्यान्यपि नयनाङ्गुल्यादिचेष्टावर्णज्ञापकरेखादीन्यनुमानादिषु यथासम्भवमन्तर्भाव्यानि ।

अयं भावः—शकुनस्येष्टार्थानुमापकत्वेन शाकुनमनुमानान्तर्भूतं, अपशकुनस्येष्टार्थविघातकत्वेन अपशकुनमप्यनुमानान्तर्भूतं लिप्यक्षरचेष्टयोश्च वर्णस्मरणहेतुतया प्रत्यक्षेऽन्तर्भावः, इत्यादि यथासम्भवं द्रष्टव्यम् ।

**।। इति ऐतिह्यादिप्रमाणानामपि, अनुमानादिष्वन्तर्भावसमर्थनम् ।।**

**।। इति अनुप्रमाणानां त्रैविध्यसमर्थनप्रकरणम् ।।**

## ( ५ ) अथ प्रामाण्यवादप्रकरणम्

(१) नन्वेतासां प्रमितीनां तत्साधनानां च यथार्थत्वं, यथार्थसाधनत्वरूपप्रामाण्यं च, तथा अप्रमितीनां तत्साधनानां च अयथार्थत्वं, तत्साधनत्वरूपाप्रामाण्यं च केनोत्पद्यते, केन ज्ञायते, इति चेदुच्यते —:

---

ಆಗಮದಲ್ಲಿ ಅಂತರ್ಭಾವವಾಗುತ್ತದೆ. ಕಾರಣ ಆಗಮವೇ. 'ವಟದಲ್ಲಿ [ಆಲದ ಮರದಲ್ಲಿ] ವೈಶ್ರವಣನು, ಚತ್ವರದಲ್ಲಿ ಶಿವನು, ಪರ್ವತದಲ್ಲಿ ರಾಮನು, ಸರ್ವತ್ರದಲ್ಲಿ ಮಧುಸೂಧನನು' ಎಂಬ ಆಗಮವಾಕ್ಯವಿರುವದರಿಂದ ಆಗಮದಲ್ಲಿ ಅಂತರ್ಭೂತವಾಗುವದರಿಂದ, ಈ ಐತಿಹ್ಯವು ಪ್ರತ್ಯೇಕ ಪ್ರಮಾಣವಲ್ಲವು.

ಈ ಪ್ರಕಾರ ಅನ್ಯಗಳಾದ ನಯನ್ನ ಅಂಗುಲಿಚೇಷ್ಟಾ ಹಾಗೂ ವರ್ಣಜ್ಞಾಪಕ ರೇಖಾದಿಗಳು, ಅನುಮಾನಾದಿಗಳಲ್ಲಿ ಅಂತರ್ಭೂತವಾಗುತ್ತವೆ. ಇಲ್ಲಿ ಹೀಗೆ ಅಭಿಪ್ರಾಯವು ಇದೆ. ಶಕುನವು ಇಷ್ಟವಾದ ಅರ್ಥವಿಷಯಕಜ್ಞಾನ ಹುಟ್ಟಿಸುತ್ತದೆ. ಕಾರಣ ಅನುಮಾನದಲ್ಲಿ ಅಂತರ್ಭೂತವಾಗುತ್ತದೆ. ಅಪಶಕುನವು ಅನಿಷ್ಟಾರ್ಥವಿಷಯಕ ಜ್ಞಾನ ಹುಟ್ಟಿಸಿ ಅನುಮಾನದಲ್ಲಿಯೇ ಅಂತರ್ಭೂತವಾಗುತ್ತದೆ. ಲಿಪಿಭೂತ ಅಕ್ಷರ, ಹಾಗೂ ಚೇಷ್ಟಾಗಳು, ವರ್ಣಗಳ ಸ್ಮರಣಕ್ಕೆ ಕಾರಣವಾಗಿ ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುತ್ತವೆ ಈ ರೀತಿ ಅಂತರ್ಭಾವ ತಿಳಿದುಕೊಳ್ಳಬೇಕು.

**ಇತಿ ಐತಿಹ್ಯಾದಿ ಪ್ರಮಾಣಗಳಿಗೆ ಅನುಮಾನದಲ್ಲಿ ಅಂತರ್ಭಾವ ಸಮರ್ಥನೆಯು**

ಅನುಪ್ರಮಾಣಗಳಿಗೆ ತ್ರೈವಿಧ್ಯಸಮರ್ಥನ ಪ್ರಕರಣವು ಮುಗಿದುದು.

**೫) ಅಥ ಪ್ರಾಮಾಣ್ಯವಾದ ಪ್ರಕರಣವು**

೧]ಪ್ರಾಮಾಣ್ಯ ಅಪ್ರಾಮಾಣ್ಯಗಳ ಸ್ವತಸ್ತ್ವವಾದಿಗಳಾದ ಸಾಂಖ್ಯರ ಮತ ನಿರಾಕರಣೆಯು

अत्र साङ्ख्या एवं वदन्ति—ज्ञानतत्करणयोः प्रामाण्यमप्रामाण्यं च स्वत एवोत्पद्यते स्वत एव ज्ञायते च, किमिदं स्वतस्त्वमिति चेदित्थं सङ्गिरन्तेः—उत्पत्तौ स्वतस्त्वं नाम ज्ञानजतकातिरिक्तजनकाजन्यत्वं। प्रामाण्ये लक्षणसमन्वय :—ज्ञानं, 'अयं घट' इति ज्ञानं, ज्ञानजनकं इन्द्रियं, तदतिरिक्ताजन्यत्वं प्रामाण्ये । तथा च ज्ञानं येनोत्पद्यते तेनैव तत्प्रामाण्यमप्युत्पद्यत इति यावत् ।

प्रामाण्यस्य ज्ञप्तौ स्वतस्त्वं नाम - ज्ञानग्राहकातिरिक्ताग्राह्यत्वं, ज्ञानं 'अयं घट' इति ज्ञानं, ज्ञानग्राहकं ( अनुव्यवसायः ), तदतिरिक्तं लिङ्गादि, तदग्राह्यत्वं प्रामाण्ये । तथा च ज्ञानं येन गृह्यते तेनैव तत्प्रामाण्यमपि गृह्यते इति यावत् ।

---

ಈ ಪ್ರಮಿತಿಗಳಿಗೂ ಹಾಗೂ ಇವುಗಳ ಸಾಧನಗಳಿಗೂ, ಯಥಾರ್ಥತ್ವ ಯಥಾರ್ಥಜ್ಞಾನ ಸಾಧನತ್ವರೂಪ ಪ್ರಾಮಾಣ್ಯವು, ಮತ್ತು ಅಪ್ರಮಿತಿಗಳಿಗೂ, ಅವುಗಳ ಸಾಧನಗಳಿಗೂ, ಅಯಥಾರ್ಥತ್ವ, ತತ್ ಸಾಧನರೂಪ ಅಪ್ರಾಮಾಣ್ಯವು, ಯಾವುದರಿಂದ ಹುಟ್ಟುತ್ತದೆ, ಹಾಗೂ ಯಾವುದರಿಂದ ಗ್ರಹಿತವಾಗುತ್ತದೆ. ಎಂಬ ವಿಷಯದಲ್ಲಿ ಸಾಂಖ್ಯರು ಹೀಗೆ ಹೇಳುತ್ತಾರೆ:-ಜ್ಞಾನ ಹಾಗೂ ಅದರ ಕರಣ [ಸಾಧನ] ಇವುಗಳಿಗೆ ಪ್ರಾಮಾಣ್ಯ ಹಾಗೂ ಅಪ್ರಾಮಾಣ್ಯವು, ಸ್ವತಃ ಉತ್ಪತ್ತಿಯಾಗುತ್ತದೆ. ಸ್ವತಃವೇ ಜ್ಞಾತವಾಗುತ್ತದೆ. ಸ್ವತಃ ಅಂದರೆ [ಅದರ ಶಬ್ದಾರ್ಥ] ಹೀಗೆ ಹೇಳುತ್ತಾರೆ. ಪ್ರಾಮಾಣ್ಯದ ಉತ್ಪತ್ತಿಯಲ್ಲಿ ಸ್ವತಃ ಅಂದರೆ ಜ್ಞಾನಜನಕ ಯಾವದೋ ಅದರ ಅತಿರಿಕ್ತ ಜನಕದಿಂದ ಜನ್ಯವಾದುದಲ್ಲ [ಅಜನ್ಯವು] ಎಂಬುದೇ [ಉತ್ಪತ್ತಿಯಲ್ಲಿಯ ಸ್ವತಃಸ್ತ್ವವು] ಪ್ರಾಮಾಣ್ಯದಲ್ಲಿ ಲಕ್ಷಣ ಸಮನ್ವಯವು. ಜ್ಞಾನವೆಂದರೆ 'ಇದು ಘಟವೆಂಬ' ಜ್ಞಾನವು. ಈ ಜ್ಞಾನಕ್ಕೆ ಜನಕವು 'ಇಂದ್ರಿಯವು' ತದತಿರಿಕ್ತಜನಕವು ಅನುಮಾನಾದಿಗಳು. ಅದರಿಂದ ಅಜನ್ಯವು ಪ್ರಾಮಾಣ್ಯವು. ಪ್ರಾಮಾಣ್ಯದಲ್ಲಿ ಅಜನ್ಯತ್ವ ಬಂದಿತು. ತಥಾಚ-ಜ್ಞಾನವು ಯಾವುದರಿಂದ ಹುಟ್ಟುತ್ತದೆಯೋ ಅದರಿಂದಲೇ ಆ ಜ್ಞಾನದ ಪ್ರಾಮಾಣ್ಯವೂ ಹುಟ್ಟುತ್ತದೆ ಎಂಬ ಭಾವ. ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವೆಂದರೆ. ಜ್ಞಾನಗ್ರಾಹಕ ಯಾವುದೋ, ಅದರಿಂದ ಅತಿರಿಕ್ತವಾದುದರಿಂದ ಅಗ್ರಾಹ್ಯವು, ಎಂದು. ಜ್ಞಾನವು ಅಂದರೆ, ಇದು ಘಟವು ಎಂಬ ಜ್ಞಾನ, ಈ ಜ್ಞಾನ ಗ್ರಾಹಕ ಅಂದರೆ, [ಅನುವ್ಯವಸಾಯ ಸಾಕ್ಷಿಯು] ಇದರಿಂದ ಅತಿರಿಕ್ತವಾದವು. 'ಲಿಂಗಾದಿ' ಇವುಗಳಿಂದ ಅಗ್ರಾಹ್ಯವಾಗಿವೆ, ಪ್ರಾಮಾಣ್ಯವು. ಹೀಗೆ ಲಕ್ಷಣ ಸಮನ್ವಯವು.

अत्र दूषणं—भ्रांतवाक्यादिजन्यज्ञानाप्रामाण्यस्य स्वतस्त्वसंभवेऽपि न वेदादिजन्यविभ्रमाप्रामाण्यस्य स्वतस्त्वं संभवति, वेदानां अप्रामाण्यप्रसंगात्, किञ्च तयोर्ज्ञानग्राहकग्राह्यत्वे एकदैव ज्ञाने उभयग्रहापत्त्या न निःशंकव्यवहारादिकं स्यात् । अत एव तन्मतमयुक्तं ।

**इति प्रामाण्याप्रामाण्ययोः स्वतस्त्ववादिनां सांख्यानां मतनिराकरणम्**

---

(२) प्रामाण्यमप्रामाण्यं च परत एवेति नैयायिकादयः । तथाच—

१. उत्पत्तौ परतस्त्वं नाम-ज्ञानजनकातिरिक्तकारणजन्यत्वं ।

---

ತಥಾಚ- ಜ್ಞಾನವು ಯಾವದರಿಂದ ಗ್ರಾಹ್ಯವಾಗುತ್ತದೆಯೋ ಅದರಿಂದಲೇ ಆ ಜ್ಞಾನದ ಪ್ರಾಮಾಣ್ಯವೂ ಗ್ರಹಿತವಾಗುತ್ತದೆ ಎಂಬ ಭಾವವು. ಈ ಸಾಂಖ್ಯರ ಮತದೂಷಣವು:- ಭ್ರಾಂತನಾದವನ, ವಾಕ್ಯದಿಂದ ಹುಟ್ಟಿದ ಭ್ರಮಾತ್ಮಕ ಜ್ಞಾನದ ಅಪ್ರಾಮಾಣ್ಯಕ್ಕೆ, ಸ್ವತಸ್ತ್ವ ಸಂಭವಿಸಿದರೂ, ವೇದದಿಂದ ಹುಟ್ಟಿದ ಭ್ರಮಾತ್ಮಕಜ್ಞಾನದ ಅಪ್ರಾಮಾಣ್ಯಕ್ಕೆ ಸ್ವತಸ್ತ್ವ ಕೂಡಲಾರದು. ಯಾಕೆಂದರೆ, ವೇದಗಳೂ ಅಪ್ರಮಾಣವಾಗಬೇಕಾಗುವದು. [ವೇದಜನ್ಯಜ್ಞಾನವು ಅಪ್ರಮಾಣವಾದರೆ ವೇದಗಳೂ ಅಪ್ರಮಾಣವಾಗಬೇಕಾಗುವದು] ಹಾಗೂ ಜ್ಞಾನಗತ ಪ್ರಾಮಾಣ್ಯ, ಅಪ್ರಾಮಾಣ್ಯ ಎರಡೂ ಜ್ಞಾನಗ್ರಾಹಕದಿಂದ ಗ್ರಹೀತವಾದಲ್ಲಿ ಒಂದೇ ಜ್ಞಾನದಲ್ಲಿ ಪ್ರಾಮಾಣ್ಯ ಅಪ್ರಾಮಾಣ್ಯಗಳೆರಡೂ ಬರಬೇಕಾದೀತು? ಹಾಗಾದಲ್ಲಿ ಎಲ್ಲಿಯೂ ನಿಃಶಂಕ ಪ್ರವೃತ್ತಿ ವ್ಯವಹಾರಾದಿಗಳು ಕೂಡದೇ ಹೋಗಬೇಕಾಗುವದು. [ಅಂದರೆ ಜ್ಞಾನಗತ ಪ್ರಾಮಾಣ್ಯವು ಹಾಗೂ ಅಪ್ರಾಮಾಣ್ಯವು ಎರಡೂ ಜ್ಞಾನಗ್ರಾಹಕ ಯಾವದೋ ಅದರಿಂದಲೇ ಗ್ರಾಹ್ಯವಾಗುವದು ಅಂದಲ್ಲಿ ಅನುವ್ಯವಸಾಯದಲ್ಲಿ ವಿಶ್ವಾಸವಿಲ್ಲದೆ ನಿಃಶಂಕ ಪ್ರವೃತ್ತಿ ಹುಟ್ಟಲಾರದು. ಎಂಬ ಭಾವ] ಇವೆ ಮೊದಲಾದ ದೋಷಗಳು ಈ ಮತದಲ್ಲಿ ಬರುವದರಿಂದ ಈ ಮತವು ಅಯುಕ್ತವು.

ಇತಿ ಪ್ರಾಮಾಣ್ಯ ಹಾಗೂ ಅಪ್ರಾಮಾಣ್ಯಗಳ ಸ್ವತಸ್ತ್ವವಾದಿಗಳಾದ ಸಾಂಖ್ಯರ ಮತ ನಿರಾಕರಣೆಯು.

೨] ಪ್ರಾಮಾಣ್ಯವು, ಅಪ್ರಾಮಾಣ್ಯವು, [ಎರಡೂ] ಪರತಃ ಎಂದು ನೈಯಾಯಿಕರು ಹೇಳುತ್ತಾರೆ. ಅದು ಹೇಗೆಂದರೆ ೧] ಪ್ರಾಮಾಣ್ಯದ ಉತ್ಪತ್ತಿಯಲ್ಲಿ ಪರತಸ್ತ್ವವೆಂದರೆ-ಜ್ಞಾನಕ್ಕೆ ಜನಕ ಯಾವುದೋ ಅದರಿಂದ ಅತಿರಿಕ್ತವಾದ ಕಾರಣದಿಂದ ಜನ್ಯವು.

२. ज्ञप्तौ परतस्त्वं च ज्ञानग्राहकातिरिक्तकारणग्राह्यत्वम् ।

१. ज्ञानजनकं इंद्रियं, तदतिरिक्तजनकं इंद्रियगुणाः (इंद्रियसन्निकर्षः, यथार्थलिंगज्ञानं, उपमानं (यथार्थसादृश्यज्ञानं, यथार्थतात्पर्यज्ञानं च) तज्जन्यं प्रामाण्यं इति उत्पत्तौ प्रामाण्यस्य परतस्त्वम् ।

२. ज्ञानग्राहक (अनुव्यवसाय) तदरितिक्तकारण संवादादि लिंगं, तद्ग्राह्यं प्रामाण्यमिति प्रामाण्यस्य ज्ञप्तौ परतस्त्वं, एवमेवाप्रामाण्यं इद्रियादिदोषजन्यं, तथा ज्ञप्तौ विसंवादादिलिंगगम्यं इति वदंति ।

अत्र दूषणं–इंद्रियादीनां अप्रामाण्यजननशक्तेरिव प्रामाण्यजननशक्तेरपि स्वाभाविकत्वाभावप्रसंगादिंद्रियादिकं प्रमाणमेव, नाप्राणमिनि न स्यात्,

---

೨] ಪ್ರಾಮಾಣ್ಯಜ್ಞಪ್ತಿಯಲ್ಲಿ ಪರತಸ್ತ್ವವೆಂದರೆ–ಜ್ಞಾನಗ್ರಾಹಕ ಯಾವದೋ ಅದರಿಂದ ಅತಿರಿಕ್ತವಾದ್ದದರಿಂದ ಗ್ರಾಹ್ಯಖ್ಯವು.

೧] ಪ್ರಥಮ ಲಕ್ಷಣದ ಸಮನ್ವಯವು– ಜ್ಞಾನವೆಂದರೆ, ಇದು ಘಟವು ಎಂಬ ಜ್ಞಾನ. ಈ ಜ್ಞಾನಕ್ಕೆ ಜನಕವು ಇಂದ್ರಿಯವು. ತದತಿರಿಕ್ತ ಕಾರಣವು, ಇಂದ್ರಿಯ ಗುಣಗಳು ಅಂದರೆ ಇಂದ್ರಿಯ ಸನ್ನಿಕರ್ಷ ಯಥಾರ್ಥಲಿಂಗಜ್ಞಾನವು, ಉಪಮಾನ [ಯಥಾರ್ಥ ಸಾದೃಶ್ಯಜ್ಞಾನ, ಯಥಾರ್ಥತಾತ್ಪರ್ಯಜ್ಞಾನ, ಇವುಗಳು] ಇದರಿಂದ ಜನ್ಯವೆಂದರೆ ಪ್ರಾಮಾಣ್ಯವು, ತಜ್ಜನ್ಯತ್ವವು, ಪ್ರಾಮಾಣ್ಯದಲ್ಲಿ ಬಂದಿತು. [ಲಕ್ಷಣ ಸಮನ್ವಯ] ಹೀಗೆ ಉತ್ಪತ್ತಿಯಲ್ಲಿ ಪರತಸ್ತ್ವವು-

೨] ಜ್ಞಾನ ಗ್ರಾಹಕವು- [ಅನುವ್ಯವಸಾಯವು] ಇದರಿಂದ ಅತಿರಿಕ್ತ ಕಾರಣವು ಸಂವಾದಿ ಲಿಂಗವು, ಈ ಲಿಂಗದಿಂದ ಗ್ರಾಹ್ಯವು, ಪ್ರಾಮಾಣ್ಯವು, ತದ್ಗ್ರಾಹ್ಯತ್ವ, ಪ್ರಾಮಾಣ್ಯದಲ್ಲಿ ಬಂತು. ಹೀಗೆ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಪರತಸ್ತ್ವವು, ಇದೇ ಪ್ರಕಾರ ಅಪ್ರಾಮಾಣ್ಯವು, ಜ್ಞಾನಜನಕ, ಇಂದ್ರಿಯ, ತದತಿರಿಕ್ತ ಕಾರಣ, ಇಂದ್ರಿಯಾದಿ ದೋಷವು, ತಜ್ಜನ್ಯವು. ಅಪ್ರಾಮಾಣ್ಯವು, ಹಾಗೆ ಜ್ಞಾನಗ್ರಾಹಕ ಅನುವ್ಯವಸಾಯ ತದತಿರಿಕ್ತ ಕಾರಣ. ವಿಸಂವಾದಿ ಲಿಂಗಗಳು. ಅವುಗಳಿಂದ ಗ್ರಾಹ್ಯವು, ಅಪ್ರಾಮಾಣ್ಯವು. ಹೀಗೆ ಪ್ರಾಮಾಣ್ಯ, ಅಪ್ರಾಮಾಣ್ಯಗಳಿಗೆ ಪರತಸ್ತ್ವ ಹೇಳುತ್ತಾರೆ.

ಈ ನೈಯಾಯಿಕರ ಪ್ರಕಿಯಾ ದೂಷಣವು– ಇಂದ್ರಿಯಗಳಿಗೆ ಅಪ್ರಾಮಾಣ್ಯ

**नापि ज्ञप्तौ प्रामाण्यस्य परतस्त्वं, संवादादिरूपहेत्वभावेऽपि सुखादिज्ञानप्रामाण्यग्रहणात्, अतः तन्मतमयुक्तमिति ध्येयम् ।**

**इति प्रामाण्याप्रामाण्ययो. परतस्त्ववादिनां नैयायिकानां मतखंडनम् ॥**

(३) प्रामाण्यं परतः अप्रामाण्य स्वत इति बौद्धाः ।

अत्र दूषणं–तथा सति प्रत्यक्षानुमानयोरप्रामाण्यस्यैवोचितत्वेन तत्र प्रामाण्यांगीकारायोगात् बौद्धमतमयुक्तमिति द्रष्टव्यम् ।

**इति प्रामाण्यं परतः, अप्रामाण्यं स्वत इति वादिनां बौद्धानां मतखंडनम्**

(४)प्रमाण्यं स्वतः, अप्रामाण्यं परतः, इत्यंगीकुर्वाणा अपिभाट्टाः

---

ಜನನಶಕ್ತಿಯಂತೆ, ಪ್ರಾಮಾಣ್ಯ ಜನನಶಕ್ತಿಯು, ಸ್ವಾಭಾವಿಕವಾಗದೇ ಹೋಗುವ-ವರಿಂದ ಪ್ರಮಾಣಗಳು, ಇಂದ್ರಿಯಾದಿಗಳು, ಅಪ್ರಮಾಣಗಳು ಅಲ್ಲ. ಎಂಬ ವಿಭಾಗ ಇಲ್ಲದೆ ಹೋಗಬೇಕಾಗುವದು. [ಅಂದರೆ ಒಂದೇ ಇಂದ್ರಿಯಗಳು ತಮ್ಮಲ್ಲಿದ್ದ ಗುಣಗಳಿಂದ ಪ್ರಮಾಣ ಜನಕಗಳು. ದೋಷದಿಂದ ಅಪ್ರಾಮಾಣ್ಯ ಜನಕಗಳು ಆದ ಮೇಲೆ ಅವುಗಳಲ್ಲಿ ವಿಶ್ವಾ-ಸವಿಲ್ಲದೆ ಅವು ಪ್ರಮಾಣಗಳೇ ಎಂದು ಹೇಗಾದೀತು? ಎಂಬ ಭಾವ] ಇದರ ಹಾಗೆ ಜ್ಞಪ್ತಿಯಲ್ಲಿಯೂ ಪ್ರಾಮಾಣ್ಯಕ್ಕೆ ಪರತಸ್ತ್ವ ಕೂಡುವದಿಲ್ಲ. ಯಾಕೆಂದರೆ ಸಂವಾದಾದಿ ರೂಪ ಹೇತುಗಳು, ಇಲ್ಲದಿದ್ದರೂ ಸುಖಜ್ಞಾನಗತವಾದ ಪ್ರಾಮಾಣ್ಯವು ಗೃಹಿತವಾಗುತ್ತದೆ. [ಈ ಜ್ಞಾನವು ಪ್ರಮಾಣವೇಕೆ ಅಂದರೆ, ಇದರಿಂದ ಪ್ರವೃತ್ತಿಯು ಸಫಲವಾಗಿದೆ, ಹೀಗೆ ಸಫಲ ಪ್ರವೃತ್ತಿ ಲಿಂಗವು, ಪ್ರಾಮಾಣ್ಯ ಗ್ರಹಣ ಮಾಡುತ್ತದೆ, ಎನ್ನುತ್ತಾರೆ. ಆದರೆ ಸುಖದ ಜ್ಞಾನವಾಗುತ್ತದೆ. ಆದರಲ್ಲಿ ಪ್ರಾಮಾಣ್ಯವು ಸ್ವತಃ ಗೃಹಿತವಾಗುತ್ತದೆ. ಹೊರತು ಇನ್ನೊಂದು ಸಂವಾದ ಬೇಕಿಲ್ಲ. ಕಾರಣ ಪ್ರಾಮಾಣ್ಯವು ಸಂವಾದಲಿಂಗ ಗ್ರಾಹ್ಯವಲ್ಲ] ಈ ನೈಯಾಯಿಕರ ಪ್ರಕ್ರಿಯೆಯು ಅಯುಕ್ತವೆಂದು ತಿಳಿಯಬೇಕು.

**ಇತಿ ಪ್ರಾಮಾಣ್ಯ ಅಪ್ರಾಮಾಣ್ಯಗಳು ಪರತಸ್ತ್ವಗಳು ಎಂಬ ವಾದಿಗಳಾದ ನೈಯಾಯಿಕರ ಮತದ ಖಂಡನೆಯು.**

ಪ್ರಾಮಾಣ್ಯವು ಪರತಃ ಅಪ್ರಾಮಾಣ್ಯವು ಸ್ವತಃ ಎಂದು ಬೌದ್ಧರು.

ಇವರ ಅಭಿಪ್ರಾಯ ದೂಷಣವು :– ಹೀಗೆ–[ ಪ್ರಾಮಾಣ್ಯವು ಪರತಃ ಅಪ್ರಾಮಾಣ್ಯವು ಸ್ವತಃ ಎಂದು] ಒಪ್ಪಿದಲ್ಲಿ ಪ್ರತ್ಯಕ್ಷ ಹಾಗು ಅನುಮಾನಗಳಿಗೆ ಅಪ್ರಾಮಾಣ್ಯವೇ ಉಚಿತವಾಗಬೇಕಾಗುವದು. ಯಾಕೆಂದರೆ ಅಪ್ರಾಮಾಣ್ಯ ಸ್ವತಃ, ಅವುಗಳಲ್ಲಿ ಪ್ರಾಮಾಣ್ಯ ಅಂಗೀಕರಿಸುವದು ಸರಿಯಾಗುವದಿಲ್ಲ. ಹೀಗೆ ದೋಷಗಳು ಇರುವದರಿಂದ ಈ ಮತವು ಅಯುಕ್ತವೆಂದು ತಿಳಿಯಬೇಕು.

प्रामाण्यं तदाश्रयज्ञानं च ज्ञातताविशेषेण ( प्रामाण्यविशिष्टज्ञानजनितेन ) अनुमेयमिति ज्ञप्तौ स्वतस्त्वं, तथा च प्रामाण्यस्य ज्ञप्तौ स्वतस्त्वं च ज्ञानग्राहकातिरिक्तग्राह्यत्वं, ज्ञानग्राहकं ज्ञातताविशेषलिंगं, तदतिरिक्तं संवादादि, तेनाग्राह्यत्वं, तथा च ज्ञातताविशेषेणैव ग्राह्यत्वमिति यावत् ।

एवं ज्ञानाप्रामाण्यं विसंवाददुष्टकरणजन्यत्वरूपानुमानांरवेद्यं इति ध्येयम् ।

ननु ज्ञानतत्प्राण्ययोरपि ज्ञाततालिंगेनानुमेयत्वं, तथा ज्ञानाप्रामाण्यमपि विसंवादादिलिंगेनानुमेयमिति,

---

**ಇತಿ ಪ್ರಾಮಾಣ್ಯ ಪರತಃ ಅಪ್ರಾಮಾಣ್ಯ ಸ್ವತ ಎಂಬು: ವಾದಿಗಳಾದ ಬೌದ್ಧರ ಮತ ಖಂಡನೆಯು**

ಭಾಟ್ಟರು ಹೇಳುತ್ತಾರೆ :– ಪ್ರಾಮಾಣ್ಯವು ಸ್ವತಃ ಅಪ್ರಾಮಾಣ್ಯವು ಪರತಃ ಎಂದು ಅಂಗೀಕಾರ ಮಾಡಿ, ಪ್ರಾಮಾಣ್ಯವು ಅದಕ್ಕೆ ಆಶ್ರಯವಾದ ಜ್ಞಾನವು. ಜ್ಞಾತತಾ ವಿಶೇಷದಿಂದ ಅನುಮೇಯವು, ಎಂದು ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹೇಳುತ್ತಾರೆ. ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವೆಂದರೆ ಜ್ಞಾನಗ್ರಾಹಕ ಯಾವದೋ ಅದರಿಂದ ಅತಿರಿಕ್ತವಾಗುವದರಿಂದ ಅಗ್ರಾಹ್ಯವು ಹೇಗೆಂದರೆ " ಜ್ಞಾನ ಅಯಂ ಘಟ " ಎಂಬ ಜ್ಞಾನ, ಜ್ಞಾನ ಗ್ರಾಹಕವು. ಜ್ಞಾತತಾ ವಿಶೇಷ ಲಿಂಗವು, ತದತಿರಿಕ್ತವು, ಸಂವಾದಿಗಳು, ಇವುಗಳಿಂದ ಅಗ್ರಾಹ್ಯವು [ ಅಂದರೆ ಜ್ಞಾತತಾ ವಿಶೇಷ ಲಿಂಗದಿಂದಲೇ ಜ್ಞಾನವು. ಅದರ ಪ್ರಾಮಾಣ್ಯವು ಗ್ರಾಹ್ಯವು, " ಇದಂ ಜ್ಞಾನಂ ಪ್ರಮಾಣಂ ಜ್ಞಾತತಾ ಜನಕತ್ವಾತ್ ಎಂಬ ಅನುಮಾನದಿಂದ ಗ್ರಾಹ್ಯವು" ಜ್ಞಾನದಲ್ಲಿ ಜ್ಞಾತತಾ ಹುಟ್ಟಿದ ನಂತರವೇ ಆ ಜ್ಞಾನವು ಪ್ರಮಾಣವಾಗುವದು. ಹಾಗು ಗೃಹೀತವೂ ಆಗುವದು ಎಂಬ ಭಾವ ] .

ಇದೇ ರೀತಿಯಿಂದ ಜ್ಞಾನಗತ ಅಪ್ರಮಾಣ್ಯವು ವಿಸಂವಾದ ದುಷ್ಟ ಕರಣದಿಂದ ಜನ್ಯವಾದ್ದರಿಂದ ಅನುಮಾನಾಂತರದಿಂದ ವೇದ್ಯವು. ಅನುಮಾನಂತರವು ಇದಂ ಜ್ಞಾನಂ, ಅಪ್ರಮಾಣಂ, ವಿಸಂವಾದಿದುಷ್ಟಕರಣ ಜನ್ಯತ್ವಾತ್, ಎಂಬ ಪೂರ್ವ ಅನುಮಾನಕ್ಕಿಂತಲೂ ಬೇರೆ ಆದ ಅನುಮಾನ, ಇದರಿಂದ ವೇದ್ಯವು, ಎಂದು ಭಾವ ಅಭಿಪ್ರಾಯವು.

ಶಂಕಾ :– ಜ್ಞಾನವು, ಹಾಗೂ ಅದರ ಪ್ರಾಮಾಣ್ಯವು, ಜ್ಞಾತತಾಲಿಂಗದಿಂದ ಅನುಮೇಯವು. ಅದರಂತೆ ಜ್ಞಾನ, ಅಪ್ರಾಮಾಣ್ಯವೂ, ವಿಸಂವಾದಿ ಲಿಂಗದಿಂದ ಅನುಮೇಯವು ಎಂದು ಹೇಳಿದ್ದಾಯಿತು.

तयोरनुमेयत्वाविशेषात् कथं परतस्त्वं चेति चेन्न, तयोरनुमेयत्वाविशेषेऽप्यनुमानभेदात् स्वतस्त्वं परतस्त्वं च ज्ञेयं, तथा हि–: इदं ज्ञानं, प्रमाणं, ज्ञाततजनकत्वात् एकत्रानुमानं, अपरत्र च ममोत्पन्नजलज्ञानं, अप्रमाणं, विफलप्रवृत्तिजनकत्वात् ( विसंवादादिदुष्टकरणजन्यत्वादिति ) इति, एवं भेदमाश्रित्य परतस्त्वं च ज्ञेयम् ।

---

अत्रापि दूषणं–ज्ञानविषयत्वातिरिक्तज्ञातताया अप्रामाणिकत्वं, तथा प्रामाण्यसिद्धौ प्रमाश्रितज्ञाततासिद्धिः, तत्सिद्धौ च

---

ಇವೆರಡರಲ್ಲಿಯೂ ಅನುಮೇಯತ್ವವಿರುವದರಿಂದ ಅಂದರೆ ಜ್ಞಾನ ಪ್ರಾಮಾಣ್ಯ, ಜ್ಞಾನದ ಅಪ್ರಾಮಾಣ್ಯ ಇವೆರಡೂ ಅನುಮೇಯಗಳಾದಲ್ಲಿ ಒಂದು ಸ್ವತಃ [ ಜ್ಞಾನ ಪ್ರಾಮಾಣ್ಯ ] ಮತ್ತೊಂದು [ ಜ್ಞಾನದ ಅಪ್ರಾಮಾಣ್ಯವು] ಪರತಃ ಹೇಗೆ ಆಗುತ್ತದೆ ಎಂದು ಶಂಕಿಸಕೂಡದು. ಪ್ರಾಮಾಣ್ಯ, ಹಾಗು ಅಪ್ರಾಮಾಣ್ಯಗಳೆರಡೂ ಅನುಮೇಯಗಳಾದರೂ [ ಎರಡರಲ್ಲಿಯೂ ಅನುಮೇಯತ್ವವಿದ್ದರೂ ] ಅನುಮಾನ ಮಾಡುವ ರೀತಿ ಬೇರೆ ಆದುದರಿಂದ, ಪ್ರಾಮಾಣ್ಯ, ಅಪ್ರಾಮಾಣ್ಯಗಳಿಗೆ, ಸ್ವತಸ್ತ್ವವು ಹಾಗೂ ಪರತಸ್ತ್ವವೂ ಕೂಡುತ್ತದೆ. ಅನುಮಾನದ ರೀತಿಯಲ್ಲಿ ಭೇದ ಹೇಗೆ ಅವೆ ಎಂದಲ್ಲಿ ಈ ಜ್ಞಾನವು, ಪ್ರಮಾಣವು, ಜ್ಞಾತತಾಕ್ಕೆ ಜನಕವಾದುದರಿಂದ, ಎಂದು ಒಂದು ಕಡೆ ಅನುಮಾನವು. ಇನ್ನೊಂದು ಕಡೆ, ಈ ನನಗೆ ಹುಟ್ಟಿದ ‘‘ಜಲಜ್ಞಾನವು, ಅಪ್ರಮಾಣವು, ವಿಸಂವಾದಾದಿ ದುಷ್ಟಕರಣ ಜನ್ಯವಾದುದರಿಂದ,( ಅಂದರೆ ಜಲ ಜ್ಞಾನವಾದ ಮೇಲೆ ಅಲ್ಲಿ ಹೋಗಲು ಆ ಸ್ಥಳದಲ್ಲಿ ಜಲ ವಿದ್ದಿಲ್ಲ, ವಿಸಂವಾದ ಈ ಲಿಂಗದಿಂದ ನೋಡಲು ಬಂದ ಜಲ ಜ್ಞಾನವು ಅಪ್ರಮಾಣವು ಎಂದು ಸ್ಥಿರವಾಗುತ್ತದೆ)

ತಥಾಚ – ಒಂದು ಕಡೆ ಜಲ ಜ್ಞಾನವು ಪ್ರಮಾಣವು ಸಫಲ ಪ್ರವೃತ್ತಿ ಉಳ್ಳದ್ದಾದುದರಿಂದ, ಒಂದು ಕಡೆ ವಿಫಲ ಪ್ರವೃತ್ತಿ ಉಳ್ಳದ್ದಾದುದರಿಂದ ಅಪ್ರಮಾಣವು, ಹೀಗೆ ಅನುಮಾನದಲ್ಲಿ ಭೇದವನ್ನು ಆಶ್ರಯಿಸಿ, ಸ್ವತಸ್ತ್ವ ಪರತಸ್ತ್ವ ಹೇಳಲು ಬರುತ್ತದೆ, ಎಂದು ಅವರ ಅಭಿಪ್ರಾಯವು.

ಈ ಭಾಟ್ಟರ ಅಭಿಪ್ರಾಯ ದೂಷಣವು:– ಜ್ಞಾನ ವಿಷಯತ್ವದಿಂದ ಅತಿರಿಕ್ತವಾದ ಜ್ಞಾತತಾ ಅಪ್ರಮಾಣಿಕವೆಂದು [ಪೂರ್ವದಲ್ಲಿಯೇ ಹೇಳಿದೆ] ಹಾಗೂ ಪ್ರಾಮಾಣ್ಯ ಸಿದ್ಧಿಸಿದ ಮೇಲೆ ಪ್ರಾಮಾಣಿಕವಾದ ಜ್ಞಾತತಾ ಸಿದ್ಧವಾಗುತ್ತದೆ. ಪ್ರಾಮಾಣಿಕ ಜ್ಞಾತತಾ

प्रामाण्यसिद्धिरित्यन्योन्याश्रयत्वं, एवमादिबाधकसद्भावादेतन्मतप्ययुक्तमिति बोध्यम् ।

**इति प्रामाण्यस्वतस्त्व-अप्रमाण्यपरतस्त्ववादिनां भाट्टानां मतखंडनम्**

प्राभाकरास्तु–स्वप्रकाशज्ञानेनैव प्रामाण्यविशिष्टज्ञानं सिद्धयति तथा च व्यवसायरूपघटादिज्ञानं स्वप्रकाशं, तत् (ज्ञानं) स्वनिष्टप्रामाण्यं च सहैव गृण्हाति, इति ज्ञानग्राहकातिरिक्तानपेक्षत्वात् स्वतस्त्वमिति वदंति । तथा ज्ञानस्याप्रामाण्यं नास्त्येव, जायमानं सर्वं ज्ञानं प्रमाणमेव जायत इति, उत्पत्तावपि स्वतस्त्वं वर्णयन्ति ।

---

ಸಿದ್ಧವಾದ ಮೇಲೆ ಪ್ರಾಮಾಣ್ಯ ಸಿದ್ಧವಾಗುತ್ತದೆ.– ಹೀಗೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಹೀಗೆ ಇನ್ನೂ ಅನೇಕ ದೋಷಗಳು, ಇವರ ಮತದಲ್ಲಿ ಬರುವದರಿಂದ ಇವರ ಅಭಿಪ್ರಾಯವು ಯುಕ್ತವಲ್ಲವೆಂದು ತಿಳಿಯಬೇಕು

ಇತಿ **ಪ್ರಾಮಾಣ್ಯ ಸ್ವತಸ್ತ್ವ ಅಪ್ರಾಮಾಣ್ಯ ಪರತಸ್ತ್ವವಾದಿಗಳಾದ ಭಾಟ್ಟರ ಮತ ಖಂಡನೆಯು**

ಪ್ರಾಭಾಕರರು– ಜ್ಞಾನಗತ ಪ್ರಾಮಾಣ್ಯವು ಸ್ವತಃ, ಯಾಕೆಂದರೆ ಜ್ಞಾನವು ಸ್ವಪ್ರಕಾಶವು. ಈ ಸ್ವಪ್ರಕಾಶದಿಂದಲೇ ಪ್ರಾಮಾಣ್ಯ ವಿಶಿಷ್ಟ ಜ್ಞಾನವು ಸಿದ್ಧಿಸುತ್ತದೆ.

ತಥಾಚ– **ವ್ಯವಸಾಯರೂಪ** ಘಟಾದಿಜ್ಞಾನವು ಸ್ವಪ್ರಕಾಶವು. ಈ ಜ್ಞಾನವು ತನ್ನನ್ನು ತನ್ನಗತವಾದ ಪ್ರಾಮಾಣ್ಯವನ್ನು ಕೂಡಿಯೇ ಗ್ರಹಿಸುತ್ತದೆ. ಹೀಗೆ ಜ್ಞಾನ ಗ್ರಾಹಕದಿಂದ ಅತಿರಿಕ್ತವಾದದ್ದು ಯಾವದೋ ಅದನ್ನು ಅಪೇಕ್ಷಿಸದೆ ಇರುವದರಿಂದ ಜ್ಞಾನಗತ ಪ್ರಾಮಾಣ್ಯವು ಸ್ವತಃ ಎಂದು ಹೇಳುತ್ತಾರೆ. ಅದರಂತೆ ಜ್ಞಾನಕ್ಕೆ ಅಪ್ರಾಮಾಣ್ಯವು ಇಲ್ಲವೇ ಇಲ್ಲ. ಹುಟ್ಟತಕ್ಕ ಎಲ್ಲ ಜ್ಞಾನವು ಪ್ರಮಾಣವೆಂದೇ ಹುಟ್ಟುತ್ತದೆ ಹೀಗೆ ಜ್ಞಾನ ಪ್ರಾಮಾಣ್ಯದ ಉತ್ಪತ್ತಿಯಲ್ಲಿ ಸ್ವತಸ್ತ್ವವನ್ನು ಹೇಳುತ್ತಾರೆ.

ಈ ಪ್ರಾಭಾಕರರ ಮತದ ದೂಷಣವು:– ಅಪ್ರಮಾಣ್ಯವು ಪ್ರತಿಯೊಬ್ಬರ ಅನುಭವದಿಂದ ಸಿದ್ಧವಾಗಿದೆ, ಬಾಧಕ ಜ್ಞಾನದಿಂದಲೂ ಸಿದ್ಧವಾಗಿದೆ. ಇದನ್ನು [ ಅಪ್ರಾಮಾಣ್ಯವನ್ನು ] ಅಪಲಾಪ ಮಾಡಲು ಬರುವದಿಲ್ಲ. ಹಾಗೂ ಪ್ರಾಭಾಕರರ ಮತದಲ್ಲಿ ಸ್ಮೃತಿ ಜ್ಞಾನವು ಜಡವಾದ್ದರಿಂದ ಅದಕ್ಕೆ ಸ್ವಪ್ರಕಾಶತ್ವವೂ ಕೂಡುವದಿಲ್ಲ. [ ಕೂಡಿದರಲ್ಲವೆ ಜ್ಞಾನಗತ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವ ಹೇಳಬೇಕು. ಜ್ಞಾನಕ್ಕೆ ಸ್ವತಃ ಪ್ರಕಾಶತ್ವವೇ ಇಲ್ಲ ] ಕಾರಣ ಈ ಮತವು ಅಪ್ರಾಮಾಣಿಕವು ಅಯುಕ್ತವು

इति प्रामाण्यस्वतस्त्ववादिनां प्राभाकराणां मतखंडनम् ॥

(६) इदानीं स्वसिद्धांतोऽनूद्यते—

उत्पत्तौ ज्ञप्तौ च प्रामाण्यस्य स्वतस्त्वमेव, पूर्वोदितरीत्या, तथापि भाट्टमताद्वैलक्षण्यं वर्तते स्वमतस्य तदित्थं :—

१. इंद्रियादिज्ञानसामग्रीमात्रेणैव प्रामाण्यविशिष्टज्ञानमुत्पद्यते, तथा च ज्ञानजनकातिरिक्तकारणाजन्यत्वं, प्रामाण्यस्योत्पत्तौ स्वतस्त्वं, तथा च येनेंद्रियेण यत्ज्ञानमुत्पद्यते तत्प्रामाण्यमपि तेनैवोत्पद्यत इति यावत्।

प्रामाण्यग्रहणकाले सन्निहिता अपि संवादादिलिंगयथार्थज्ञानादयो गुणाः पटं प्रति रासभतंतुरूपवत् अकिंचित्कराः, (प्रामाण्येऽनुपकारिणः) यादृच्छिकसंवादादिस्थले गुणाभावेऽपि यथार्थदर्शनात्, तथा च तेषां प्रामाण्योत्पत्तावनुपकारित्वं द्रष्टव्यम् ।

---

ಇತಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವಾದಿಗಳಾದ ಪ್ರಾಭಾಕರರ ಮತ ಖಂಡನೆಯು

೬] ಈಗ ಸಿದ್ಧಾಂತವು ಅನುವಾದಿಸಲ್ಪಡುತ್ತದೆ :

ಉತ್ಪತ್ತಿಯಲ್ಲಿಯೂ ಜ್ಞಪ್ತಿಯಲ್ಲಿಯೂ ಪ್ರಾಮಾಣ್ಯಕ್ಕೆ ಸ್ವತಸ್ತ್ವವೇ ಉಂಟು ಪೂರ್ವೋಕ್ತದಂತೆ, ಆದರೂ ಭಾಟ್ಟಮತದಿಂದ ನಮ್ಮ ಮತಕ್ಕೆ ವೈಲಕ್ಷಣ್ಯ ಉಂಟು. ಅದು ಹೇಗೆಂದರೆ :–

೧] ಇಂದ್ರಿಯಾದಿಗಳು ಜ್ಞಾನಜನಕ ಸಾಮಗ್ರಿಗಳು : ಇವುಗಳಿಂದಲೇ ಪ್ರಾಮಾಣ್ಯ ವಿಶಿಷ್ಟಜ್ಞಾನವು ಹುಟ್ಟುತ್ತದೆ. ತಥಾಚ – ಜ್ಞಾನಜನಕ ಅತಿರಿಕ್ತ ಕಾರಣ ಅಜನ್ಯತ್ವವೇ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವು. ಅಂದರೆ ಯಾವ ಇಂದ್ರಿಯದಿಂದ ಯಾವ ಜ್ಞಾನವು ಹುಟ್ಟುತ್ತದೆಯೋ ಅದೇ ಇಂದ್ರಿಯದಿಂದಲೇ ಆ ಜ್ಞಾನಗತ ಪ್ರಾಮಾಣ್ಯವು ಉತ್ಪತ್ತಿಯಾಗುತ್ತದೆ. ಎಂದು ಅಭಿಪ್ರಾಯವು.

ಪ್ರಾಮಾಣ್ಯ ಗ್ರಹಣಕಾಲದಲ್ಲಿ ಸಂವಾದಾದಿ ಲಿಂಗ ಯಥಾರ್ಥಜ್ಞಾನಾದಿ ಗುಣಗಳು ಸನ್ನಿಹಿತವಾದರೂ ಅದನ್ನು ಕುರಿತು ರಾಸಭ ತಂತು ರೂಪಗಳಂತೆ ಅಕಿಂಚಿತ್ ಕರಗಳು [ ಏನೂ ಮಾಡಲಾರದವು ] ಅಂದರೆ ಪ್ರಾಮಾಣ್ಯ ವಿಷಯದಲ್ಲಿ ಅನುಪಕಾರಿಗಳು. ಯಾಕೆಂದರೆ ಯಾದೃಚ್ಛಿಕ ಸಂವಾದಿಸ್ಥಳಗಳಲ್ಲಿ ಸಂವಾದಿಲಿಂಗಗಳು ಇಲ್ಲದಿದ್ದರೂ ಯಥಾರ್ಥಜ್ಞಾನ ಹುಟ್ಟುವದು ಕಂಡಿದೆ. ಕಾರಣ ಆ ಸಂವಾದಾದಿ ಲಿಂಗಗಳಿಗೆ ಪ್ರಾಮಾಣ್ಯದ ಉತ್ಪತ್ತಿಯಲ್ಲಿ ಅನುಪಕಾರಿತ್ವವು ಸ್ಪಷ್ಟವಾಗಿ ಕಂಡಿದೆ.

२. तथा ज्ञानं तत्प्राण्यं च साक्षिणैव ज्ञायते, तथा च ज्ञानगतप्रामाण्यस्य ज्ञप्तौ स्वतस्त्वं, नाम ज्ञान-ग्राहकमात्रग्राह्यत्वं, तदित्थं, ज्ञानग्राहकः साक्षी, तन्मात्रग्राह्यत्वं प्रामाण्ये प्राप्तमिति प्रामाण्यस्य ज्ञप्तौ स्वतस्त्वं ध्येयम्

(३) तथा अप्रामाण्यं दोषसहकृतेंद्रियादिभिरुत्पद्यते । अ-प्रामाण्यस्योत्पत्तौ परतस्त्वं नामज्ञानजनकातिरिक्तकारणजन्यत्वं, लक्ष्येऽप्रामाण्ये समन्वयस्तु-ज्ञानजनकं इन्द्रियादि, तदतिरिक्तकारणं इन्द्रियादिनिष्टदोषादि, तज्जन्यत्वंप्रामाण्य इति

४. तथा अप्रामाण्यज्ञानस्वरूपमात्रं साक्षिवेद्यं, तदप्रामाण्यमनुमेयं, तथा अप्रामाण्यस्य ज्ञप्तौपरतस्त्वं नाम -

---

[ಆದ್ದರಿಂದ ಜ್ಞಾನಗತ ಪ್ರಾಮಾಣ್ಯದ ಉತ್ಪತ್ತಿಯು ಸ್ವತ: ಅಂದರೆ, ಪೂರ್ವದಂತೆ ತಿಳಿಯಬೇಕು, ವಿನಾ ಸಂವಾದಾದಿಗಳಿಂದ ಉತ್ಪತ್ತಿಯಾಯಿತು ಎಂದು ತಿಳಿಯಬಾರದು]

೨] ಹಾಗೆಯೇ ಜ್ಞಾನವು, ಅದರ ಪ್ರಾಮಾಣ್ಯವು, ಸಾಕ್ಷಿಯಿಂದಲೆ ಗ್ರಹಿಸುತ್ತದೆ. ತಥಾಚ – ಜ್ಞಾನಗತ ಪ್ರಾಮಾಣ್ಯವು ಜ್ಞಪ್ತಿಯಲ್ಲಿ ಸ್ವತಃ ಅಂದರೆ ಜ್ಞಾನವು ಯಾವುದರಿಂದ ಗ್ರಹಿತವೋ ಅದರಿಂದಲೇ ಆ ಜ್ಞಾನದ ಪ್ರಾಮಾಣ್ಯವು ಗ್ರಹಿ-ತವಾಗುತ್ತದೆ. ಅದು ಹೇಗೆಂದರೆ– ಜ್ಞಾನವು ಅಯಂ ಘಟಃ ಎಂಬ ಜ್ಞಾನ, ಈ ಜ್ಞಾನಗ್ರಾಹಕವು ಸಾಕ್ಷಿಯು. ಈ ಸಾಕ್ಷಿಯಿಂದ ಮಾತ್ರ ಗ್ರಾಹ್ಯವು ಪ್ರಾಮಾಣ್ಯವು. ಕಾರಣ ಪ್ರಾಮಾಣ್ಯದಲ್ಲಿ ಜ್ಞಾನ ಗ್ರಾಹಕ ಮಾತ್ರ. ಗ್ರಾಹ್ಯತ್ವ ಲಕ್ಷಣ ಬರುವದರಿಂದ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವು ಬಂದಿತು. ಎಂದು ತಿಳಿಯಬೇಕು.

೩] ಅಪ್ರಮಾಣ್ಯವು ದೋಷ ಸಹಕೃತ ಇಂದ್ರಿಯಾದಿಗಳಿಂದ ಹುಟ್ಟುತ್ತದೆ. ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಪರತಃ, ಅಂದರೆ ಜ್ಞಾನ ಜನಕ ಯಾವದೋ ಅದರಿಂದ ಅತಿರಿಕ್ತವಾದ ಕಾರಣದಿಂದ ಜನ್ಯವಾಗುವದು. ಸಮನ್ವಯ ಹೀಗೆ :– ಜ್ಞಾನ ಜನಕವು ಇಂದ್ರಿಯಾದಿಗಳು, ತದತಿರಿಕ್ತ ಕಾರಣವು, ಇಂದ್ರಿಯದಲ್ಲಿ ಇರತಕ್ಕ ದೋಷಗಳು, ಇದರಿಂದ ಜನ್ಯವೆಂದರೆ ಅಪ್ರಾಮಾಣ್ಯವು. ಜನ್ಯತ್ವವು ಅಪ್ರಾಮಾಣ್ಯದಲ್ಲಿ ಬರುವದರಿಂದ, ಲಕ್ಷಣ ಸಮನ್ವಯವಾಗುತ್ತದೆ.

೪] ಇದರಂತೆ ಅಪ್ರಮಾಣ್ಯ ಜ್ಞಾನವು, ಸಾಕ್ಷಿಯಿಂದ ವೇದ್ಯವು. ಆ ಜ್ಞಾನ ಸ್ವರೂಪಗತ ಅಪ್ರಾಮಾಣ್ಯವು, ಅನುಮೇಯವು. ಹಿಗೆ ಅಪ್ರಮಾಣ್ಯವು ಜ್ಞಪ್ತಿಯಲ್ಲಿ ಪರತಃ, ಅಂದರೆ

ज्ञानग्राहकातिरिक्तग्राह्यत्वं, समन्वयस्तु, इत्थं - ज्ञानग्राहकंसाक्षी, तदतिरिक्तं विसंवादादिलिंगं. तद्ग्राह्यत्वमप्रामाण्य इति ।

अप्रामाण्यमनुमेयमित्युक्तिस्तु क्काचित्कत्वाभिप्रायेण, वस्तुतस्तु अप्रामाण्यस्य विसंवादादिसापेक्षसाक्षिविषयत्वं (बाधादिसहकारिवशात् साक्षिणापि गृह्यत इति यावत्), न चैवमप्रामाण्यस्य साक्षिग्राह्यत्वे स्वतस्त्वापत्तिः साक्षिणा अप्रामाण्यग्रहणे नियमेन विसंवादापेक्षणात्, न तथा प्रामाण्यग्रहणे, अतस्तस्य परतस्त्वोपपत्तिरिति ज्ञातव्यम् ।

**इति स्वसिद्धांतानुसारेण प्रामाण्यस्योत्पत्तौ ज्ञप्तौ च स्वतस्त्वं, तथाऽप्रामाण्यस्य परतस्त्वं च समर्थितम् ।**

---

ಜ್ಞಾನಗ್ರಾಹಕ ಅತಿರಿಕ್ತ ಗ್ರಾಹ್ಯವು. ಜ್ಞಾನವು ಯಾವುದರಿಂದ ಗ್ರಾಹ್ಯವೋ ಅದರಿಂದ ಅತಿರಿಕ್ತವಾದುದರಿಂದ ಅದರ ಅಪ್ರಾಮಾಣ್ಯವೂ ಗ್ರಾಹ್ಯವು. ಸಮನ್ವಯ ಹೀಗೆ ಅದೆ:– ಜ್ಞಾನ ಗ್ರಾಹಕವು ಸಾಕ್ಷಿಯು' ಅದರಿಂದ ಅತಿರಿಕ್ತವಾದುದು. ವಿಸಂವಾದಾದಿಗಳ ಲಿಂಗವು, ಇದರಿಂದ ಗ್ರಾಹ್ಯವು ಆಗಿದೆ. ಅಪ್ರಾಮಾಣ್ಯವು, ಅಪ್ರಾಮಾಣ್ಯದಲ್ಲಿ ಅತಿರಿಕ್ತ ಗ್ರಾಹ್ಯತ್ವ ಬರುವದರಿಂದ. ಲಕ್ಷಣ ಸಮನ್ವಯವಾಗುತ್ತದೆ.

ಅಪ್ರಾಮಾಣ್ಯವು, ಅನುಮೇಯವೆಂಬ ಉಕ್ತಿಯು, ಕೆಲವರ ಅಭಿಪ್ರಾಯವು. ವಾಸ್ತವಿಕವಾಗಿ ಅಪ್ರಾಮಾಣ್ಯವು ವಿಸಂವಾದಾದಿ ಸಾಪೇಕ್ಷ ಸಾಕ್ಷಿ ವಿಷಯ ಆಗಿದೆ. [ ಬಾಧಾದಿ ಸಹಕಾರಿ ವಶದಿಂದ ಸಾಕ್ಷಿಯಿಂದಲೂ ಗ್ರಹಿತವಾಗುತ್ತದೆಂದು ಅಭಿಪ್ರಾಯವು ] ಅಪ್ರಾಮಾಣ್ಯವು ಸಾಕ್ಷಿಯಿಂದ ಗ್ರಹಿತವಾದಲ್ಲಿ, ಅಪ್ರಾಮಾಣ್ಯವು ಸ್ವತಃ ಆಗಲಿ, ಅಂದರೆ ಇದು ಸರಿಯಲ್ಲ. ಸಾಕ್ಷಿಯು, ಅಪ್ರಾಮಾಣ್ಯ ಗ್ರಹಣದಲ್ಲಿ ನಿಯಮದಿಂದ ವಿಸಂವಾದಾದಿಗಳನ್ನು ಅಪೇಕ್ಷಿಸುತ್ತದೆ. ಪ್ರಾಮಾಣ್ಯಗ್ರಹಣದಲ್ಲಿ ಹಾಗೆ ಸಂವಾದಿಗಳನ್ನು ಅಪೇಕ್ಷಿಸುವದಿಲ್ಲ. ಈ ಕಾರಣದಿಂದ ಅಪ್ರಾಮಾಣ್ಯಕ್ಕೆ ಪರತಸ್ತ್ವವು ಕೂಡುತ್ತದೆ. [ ಅಂದರೆ ಸಾಕ್ಷಿಯು ಪ್ರಾಮಾಣ್ಯಗ್ರಹಣ ಮಾಡುವ ಕಾಲದಲ್ಲಿ ಸಂವಾದಾದಿಗಳನ್ನು ಅಪೇಕ್ಷಿಸುವದಿಲ್ಲ. ಅಪ್ರಾಮಾಣ್ಯ ಗ್ರಹಣದಲ್ಲಿ ನಿಯಮದಿಂದ ವಿಸಂವಾದಾದಿಗಳನ್ನು ಅಪೇಕ್ಷಿಸುತ್ತದೆ, ಕಾರಣ ಅಪ್ರಾಮಾಣ್ಯವು ಪರತಃ, ಎಂದು ತಿಳಿಯಬೇಕು.

ಇತಿ ಸ್ವಸಿದ್ಧಾಂತಾನುಸಾರವಾಗಿ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಜ್ಞಪ್ತಿಯಲ್ಲಿಯೂ ಸ್ವತಸ್ತ್ವವೂ, ಅಪ್ರಾಮಾಣ್ಯಕ್ಕೆ ಪರತಸ್ತ್ವವು ಸಮರ್ಥನವಾಯಿತು.

२. तथा ज्ञानं तत्प्राण्यं च साक्षिणैव ज्ञायते, तथा च ज्ञानगतप्रामाण्यस्य ज्ञप्तौ स्वतस्त्वं, नाम ज्ञान-ग्राहकमात्रग्राह्यत्वं, तदित्थं, ज्ञानग्राहकः साक्षी, तन्मात्रग्राह्यत्वं प्रामाण्ये प्राप्तमिति प्रामाण्यस्य ज्ञप्तौ स्वतस्त्वं ध्येयम्

(३) तथा अप्रामाण्यं दोषसहकृतेंद्रियादिभिरुत्पद्यते। अप्रामाण्यस्योत्पत्तौ परतस्त्वं नामज्ञानजनकातिरिक्तकारणजन्यत्वं, लक्ष्येऽप्रामाण्ये समन्वयस्तु-ज्ञानजनकं इन्द्रियादि, तदतिरिक्तकारणं इन्द्रियादिनिष्टदोषादि, तज्जन्यत्वंप्रामाण्य इति

४. तथा अप्रामाण्यज्ञानस्वरूपमात्रं साक्षिवेद्यं, तदप्रामाण्यमनुमेयं, तथा अप्रामाण्यस्य ज्ञप्तौपरतस्त्वं नाम -

---

[ಅದ್ದರಿಂದ ಜ್ಞಾನಗತ ಪ್ರಾಮಾಣ್ಯದ ಉತ್ಪತ್ತಿಯು ಸ್ವತ: ಅಂದರೆ, ಪೂರ್ವದಂತೆ ತಿಳಿಯಬೇಕು, ವಿನಾ ಸಂವಾದಾದಿಗಳಿಂದ ಉತ್ಪತ್ತಿಯಾಯಿತು ಎಂದು ತಿಳಿಯಬಾರದು]

೨] ಹಾಗೆಯೇ ಜ್ಞಾನವು, ಅದರ ಪ್ರಾಮಾಣ್ಯವು, ಸಾಕ್ಷಿಯಿಂದಲೆ ಗ್ರಹಿಸುತ್ತದೆ. ತಥಾಚ – ಜ್ಞಾನಗತ ಪ್ರಾಮಾಣ್ಯವು ಜ್ಞಪ್ತಿಯಲ್ಲಿ ಸ್ವತಃ ಅಂದರೆ ಜ್ಞಾನವು ಯಾವುದರಿಂದ ಗ್ರಹಿತವೋ ಅದರಿಂದಲೇ ಆ ಜ್ಞಾನದ ಪ್ರಾಮಾಣ್ಯವು ಗ್ರಹಿತವಾಗುತ್ತದೆ. ಅದು ಹೇಗೆಂದರೆ– ಜ್ಞಾನವು ಅಯಂ ಘಟಃ ಎಂಬ ಜ್ಞಾನ, ಈ ಜ್ಞಾನಗ್ರಾಹಕವು ಸಾಕ್ಷಿಯು. ಈ ಸಾಕ್ಷಿಯಿಂದ ಮಾತ್ರ ಗ್ರಾಹ್ಯವು ಪ್ರಾಮಾಣ್ಯವು. ಕಾರಣ ಪ್ರಾಮಾಣ್ಯದಲ್ಲಿ ಜ್ಞಾನ ಗ್ರಾಹಕ ಮಾತ್ರ. ಗ್ರಾಹ್ಯತ್ವ ಲಕ್ಷಣ ಬರುವದರಿಂದ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವು ಬಂದಿತು. ಎಂದು ತಿಳಿಯಬೇಕು.

೩] ಅಪ್ರಮಾಣ್ಯವು ದೋಷ ಸಹಕೃತ ಇಂದ್ರಿಯಾದಿಗಳಿಂದ ಹುಟ್ಟುತ್ತದೆ. ಅಪ್ರಾಮಾಣ್ಯವು ಉತ್ಪತ್ತಿಯಲ್ಲಿ ಪರತಃ, ಅಂದರೆ ಜ್ಞಾನ ಜನಕ ಯಾವದೋ ಅದರಿಂದ ಅತಿರಿಕ್ತವಾದ ಕಾರಣದಿಂದ ಜನ್ಯವಾಗುವದು. ಸಮನ್ವಯ ಹೀಗೆ :– ಜ್ಞಾನ ಜನಕವು ಇಂದ್ರಿಯಾದಿಗಳು, ತದತಿರಿಕ್ತ ಕಾರಣವು, ಇಂದ್ರಿಯದಲ್ಲಿ ಇರತಕ್ಕ ದೋಷಗಳು. ಇದರಿಂದ ಜನ್ಯವೆಂದರೆ ಅಪ್ರಾಮಾಣ್ಯವು. ಜನ್ಯತ್ವವು ಅಪ್ರಾಮಾಣ್ಯದಲ್ಲಿ ಬರುವದರಿಂದ, ಲಕ್ಷಣ ಸಮನ್ವಯವಾಗುತ್ತದೆ.

೪] ಇದರಂತೆ ಅಪ್ರಾಮಾಣ್ಯ ಜ್ಞಾನವು, ಸಾಕ್ಷಿಯಿಂದ ವೇದ್ಯವು. ಆ ಜ್ಞಾನ ಸ್ವರೂಪಗತ ಅಪ್ರಾಮಾಣ್ಯವು, ಅನುಮೇಯವು. ಹಿಗೆ ಅಪ್ರಮಾಣ್ಯವು ಜ್ಞಪ್ತಿಯಲ್ಲಿ ಪರತಃ, ಅಂದರೆ

ज्ञानग्राहकातिरिक्तग्राह्यत्वं, समन्वयस्तु, इत्थं - ज्ञानग्राहकंसाक्षी, तदतिरिक्तं विसंवादादिलिंगं. तद्ग्राह्यत्वमप्रामाण्य इति ।

अप्रामाण्यमनुमेयमित्युक्तिस्तु क्काचित्कत्वाभिप्रायेण. वस्तुतस्तु अप्रामाण्यस्य विसंवादादिसापेक्षसाक्षिविषयत्वं ( बाधादिसहकारिवशात् साक्षिणापि गृह्यत इति यावत् ), न चैवमप्रामाण्यस्य साक्षिग्राह्यत्वे स्वतस्त्वापत्तिः साक्षिणा अप्रामाण्यग्रहणे नियमेन विसंवादापेक्षणात्, न तथा प्रामाण्यग्रहणे, अतस्तस्य परतस्त्वोपपत्तिरिति ज्ञातव्यम् ।

**इति स्वसिद्धांतानुसारेण प्रामाण्यस्योत्पत्तौ ज्ञप्तौ च स्वतस्त्वं, तथाऽप्रामाण्यस्य परतस्त्वं च समर्थितम् ।**

---

ಜ್ಞಾನಗ್ರಾಹಕ ಅತಿರಿಕ್ತ ಗ್ರಾಹ್ಯವು. ಜ್ಞಾನವು ಯಾವುದರಿಂದ ಗ್ರಾಹ್ಯವೋ ಅದರಿಂದ ಅತಿರಿಕ್ತವಾದುದರಿಂದ ಅದರ ಅಪ್ರಾಮಾಣ್ಯವೂ ಗ್ರಾಹ್ಯವು. ಸಮನ್ವಯ ಹೀಗೆ ಅದೆಃ– ಜ್ಞಾನ ಗ್ರಾಹಕವು ಸಾಕ್ಷಿಯು' ಅದರಿಂದ ಅತಿರಿಕ್ತವಾದುದು. ವಿಸಂವಾದಾದಿಗಳ ಲಿಂಗವು, ಇದರಿಂದ ಗ್ರಾಹ್ಯವು ಆಗಿದೆ. ಅಪ್ರಾಮಾಣ್ಯವು, ಅಪ್ರಾಮಾಣ್ಯದಲ್ಲಿ ಅತಿರಿಕ್ತ ಗ್ರಾಹ್ಯತ್ವ ಬರುವದರಿಂದ. ಲಕ್ಷಣ ಸಮನ್ವಯವಾಗುತ್ತದೆ.

ಅಪ್ರಾಮಾಣ್ಯವು, ಅನುಮೇಯವೆಂಬ ಉಕ್ತಿಯು, ಕೆಲವರ ಅಭಿಪ್ರಾಯವು. ವಾಸ್ತವಿಕವಾಗಿ ಅಪ್ರಾಮಾಣ್ಯವು ವಿಸಂವಾದಾದಿ ಸಾಪೇಕ್ಷ ಸಾಕ್ಷಿ ವಿಷಯ ಆಗಿದೆ. [ ಬಾಧಾದಿ ಸಹಕಾರಿ ವಶದಿಂದ ಸಾಕ್ಷಿಯಿಂದಲೂ ಗ್ರಹಿತವಾಗುತ್ತದೆಂದು ಅಭಿಪ್ರಾಯವು ] ಅಪ್ರಾಮಾಣ್ಯವು ಸಾಕ್ಷಿಯಿಂದ ಗ್ರಹಿತವಾದಲ್ಲಿ, ಅಪ್ರಾಮಾಣ್ಯವು ಸ್ವತಃ ಆಗಲಿ, ಅಂದರೆ ಇದು ಸರಿಯಲ್ಲ. ಸಾಕ್ಷಿಯು, ಅಪ್ರಾಮಾಣ್ಯ ಗ್ರಹಣದಲ್ಲಿ ನಿಯಮದಿಂದ ವಿಸಂವಾದಾದಿಗಳನ್ನು ಅಪೇಕ್ಷಿಸುತ್ತದೆ. ಪ್ರಾಮಾಣ್ಯಗ್ರಹಣದಲ್ಲ ಹಾಗೆ ಸಂವಾದಿಗಳನ್ನು ಅಪೇಕ್ಷಿಸುವದಿಲ್ಲ. ಈ ಕಾರಣದಿಂದ ಅಪ್ರಾಮಾಣ್ಯಕ್ಕೆ ಪರತಸ್ತ್ವವು ಕೂಡುತ್ತದೆ. [ ಅಂದರೆ ಸಾಕ್ಷಿಯು ಪ್ರಾಮಾಣ್ಯಗ್ರಹಣ ಮಾಡುವ ಕಾಲದಲ್ಲಿ ಸಂವಾದಾದಿಗಳನ್ನು ಅಪೇಕ್ಷಿಸುವದಿಲ್ಲ. ಅಪ್ರಾಮಾಣ್ಯ ಗ್ರಹಣದಲ್ಲಿ ನಿಯಮದಿಂದ ವಿಸಂವಾದಾದಿಗಳನ್ನು ಅಪೇಕ್ಷಿಸುತ್ತದೆ, ಕಾರಣ ಅಪ್ರಾಮಾಣ್ಯವು ಪರತಃ, ಎಂದು ತಿಳಿಯಬೇಕು.

ಇತಿ ಸ್ವಸಿದ್ಧಾಂತಾನುಸಾರವಾಗಿ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಜ್ಞಪ್ತಿಯಲ್ಲಿಯೂ ಸ್ವತಸ್ತ್ವವೂ, ಅಪ್ರಾಮಾಣ್ಯಕ್ಕೆ ಪರತಸ್ತ್ವವು ಸಮರ್ಥನವಾಯಿತು.

(७) करणप्रामाण्यस्योत्पत्तौ स्वतस्त्वं निरूप्यते—

करणानां तु ज्ञानजकत्वशक्तिरेव स्वकारणासादिता प्रामाण्यजनकत्वशक्तिः, तथा च ज्ञानजनकत्वशक्तिप्रामाण्यजनकत्वशक्तचोरेकत्वं, करणप्रामाण्यस्य उत्पत्तौ स्वतस्त्वं ( ज्ञानजननशक्तचभिन्नत्वमिति यावत् ) इति द्रष्टव्यम् ।

---

करणप्रामाण्यस्य ज्ञप्तौ परतस्त्वमेव ।

तथा च करणग्राहकातिरिक्तग्राह्यत्वमेव परतस्त्वं । करणं इन्द्रिय, लिंग, शब्दाः, तद्ग्राहकं अनुमानादि ( इन्द्रियाग्राहकं, अनुमानं, लिंगग्राहकं प्रत्यक्षं, आगमग्राहकं श्रोत्रं ) तदतिरिक्तं यत् संवादादि, तद्ग्राह्यत्वं यथार्थज्ञानसाधनत्वरूपप्रामाण्यस्येति ज्ञेयम् ।

इदं च प्रामाण्यस्य परतस्त्वकथनं करणग्राहकमात्रग्राह्यत्वरूपं स्वतस्त्वं नेत्यभिप्रेत्योक्तं,

---

७] ಕರಣಪ್ರಾಮಾಣ್ಯಕ್ಕೆ, ಉತ್ಪತ್ತಿಯಲ್ಲಿ ಸ್ವತಸ್ತ್ವವು ನಿರೂಪಿಸಲ್ಪಡುತ್ತದೆ:- ಕರಣಗಳಿಗೆ ಜ್ಞಾನ ಜನಕತ್ವ ಶಕ್ತಿಯೇ, [ ಸ್ವಕಾರಣದಿಂದ ಸಂಪಾದಿತ ] ಪ್ರಾಮಾಣ್ಯ ಜನನ ಶಕ್ತಿಯು [ ಅಂದರೆ ಇಂದ್ರಿಯಗಳಿಗೆ ಯಾವದು ಜ್ಞಾನಜನಕ ಶಕ್ತಿಯು ಅದೆ, ಆ ಶಕ್ತಿಯೇ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ ಎಂಬ ಭಾವ ]

ತಥಾಚ :- ಜ್ಞಾನ ಜನನ ಶಕ್ತಿ ಪ್ರಾಮಾಣ್ಯ ಜನನಶಕ್ತಿ ಇವೆರಡುಗಳ ಏಕತ್ವವೇ ಕರಣ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವು. ಕರಣ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಪರತಸ್ತ್ವವಿದೆ. [ ಕರಣಗಳಿಗೆ ಜ್ಞಪ್ತಿಯಲ್ಲಿ ಪರತಸ್ತ್ವ ] ಅಂದರೆ-ಕರಣದಿಂದ ಗ್ರಾಹಕ ಯಾವದೊ, ಅದರಿಂದ ಅತಿರಿಕ್ತವಾದುದರಿಂದ ಗ್ರಾಹ್ಯವು. ಹೇಗೆಂದರೆ- ಕರಣವು ಇಂದ್ರಿಯ ಲಿಂಗ ಶಬ್ದಗಳು, ಇವುಗಳಿಂದ ಗ್ರಾಹ್ಯವು' ಅಂದರೆ [ ಇಂದ್ರಿಯ ಗ್ರಾಹಕವು ಅನುಮಾನವು ] ಲಿಂಗ ಗ್ರಾಹಕವು ಪ್ರತ್ಯಕ್ಷ, ಆಗಮ ಗ್ರಾಹಕವು ಶ್ರೋತ್ರವು, ಇದರಿಂದ ಅತಿರಿಕ್ತವಾದದ್ದು. ಸಂವಾದಾದಿ [ ಲಿಂಗಗಳು ] ಅವುಗಳಿಂದ ಗ್ರಾಹ್ಯವಾಗಿದೆ, ಯಥಾರ್ಥ ಸಾಧನತ್ವ ಪ್ರಾಮಾಣ್ಯವು. ಗ್ರಾಹ್ಯತ್ವ ಪ್ರಾಮಾಣ್ಯದಲ್ಲಿ ಬಂದು ಲಕ್ಷಣ ಸಮನ್ವಯ ಆಗುವದೆಂದು ತಿಳಿಯಬೇಕು.

ಹೀಗೆ ಜ್ಞಪ್ತಿಯಲ್ಲಿ ಪ್ರಾಮಾಣ್ಯಕ್ಕೆ ಪರತಸ್ತ್ವ ಹೇಳಿದ್ದು,

"अथ वा ज्ञानजनकत्वं येन गृह्यते तत एव यथार्थज्ञानजनकत्वस्य तदीयस्य ग्राह्यत्वं ज्ञप्तौ स्वतस्त्वमिति पक्षांतरमभिहितं सुधायां । तथा च विवक्षाभेदेन प्रामाण्यस्य स्वतस्त्वमपि करणानां ज्ञप्तौ द्रष्टव्यम् ।

**॥ इति करणप्रामाण्यस्य, उत्पत्तौ ज्ञप्तौ च स्वतस्त्वसमर्थनम् ॥**

**इति प्रामाण्यवादप्रकरणम् ।**

---

**अथ उपसंहारप्रकरणम् ।**

(१) तत्त्वं द्विविधं प्रमाणं प्रमेयं चेति, प्रमाणरूपतत्त्वनिर्णयायेदं प्रकरणमारब्धं, प्रमेयात्मकतत्त्वनिर्णयस्तु तत्त्वसंख्यानादौ द्रष्टव्यः । तथा च

---

ಕರಣಗ್ರಾಹಕಮಾತ್ರ ಗ್ರಾಹ್ಯತ್ವರೂಪ ಸ್ವತಸ್ತ್ವವು ಪ್ರಾಮಾಣ್ಯಕ್ಕೆ ಇಲ್ಲವೆಂದುತಿಳಿಸಲು. ಅಥವಾ ಜ್ಞಾನ ಜನಕತ್ವವು ಯಾವದರಿಂದ ಗ್ರಹೀತವಾಗುತ್ತದೆಯೋ, ಅದರಿಂದಲೇ ಯಥಾರ್ಥಜ್ಞಾನ ಜನಕತ್ವರೂಪ ಅದರ ಪ್ರಾಮಾಣ್ಯವೂ, ಗ್ರಾಹ್ಯವಾಗುತ್ತದೆ, ಎಂಬುದು ಜ್ಞಪ್ತಿಯಲ್ಲಿ ಕರಣ ಪ್ರಮಾಣಕ್ಕೆ ಸ್ವತಸ್ತ್ವವೆಂದು ತಿಳಿಯಬೇಕು ಎಂದು ಪಕ್ಷಾಂತರವನ್ನು ಕೂಡಾ 'ಸುಧಾ' ದಲ್ಲಿ ಹೇಳಿದೆ. ತಥಾಚ :- ವಿವಕ್ಷಾ ಭೇದದಿಂದ [ ಅಂದರೆ ಕರಣ ಗ್ರಾಹಕ ಮಾತ್ರ ಗ್ರಾಹ್ಯತ್ವವು ಇಲ್ಲವಾದ ಕಾರಣ ಪರತಸ್ತ್ವವು. ಅಥವಾ 'ಜ್ಞಾನ-ಜನಕತ್ವವು ಯೇನ ಗೃಹ್ಯತೇ, ತತಏವ' ಯಥಾರ್ಥಜ್ಞಾನ ಜನಕತ್ವ ಗ್ರಾಹ್ಯತ್ವಂ ಎಂಬ ವಿವಕ್ಷಾದಿಂದ ] ಕರಣ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹೇಳಬೇಕು.

ಇತಿ ಕರಣ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಮತ್ತು ಜ್ಞಪ್ತಿಯಲ್ಲಿ ಸ್ವತಸ್ತ್ವ ಸಮರ್ಥನೆಯು.

ಇತಿ ಪ್ರಾಮಾಣ್ಯವಾದ ಪ್ರಕರಣವು

**ಅಥ ಉಪಸಂಹಾರ ಪ್ರಕರಣವು**

ತತ್ವವು ಎರಡು ಪ್ರಕಾರ :- ೧] ಪ್ರಮಾಣ. ೨] ಪ್ರಮೇಯ ಎಂದು ಇವೆರಡರಲ್ಲಿ ಪ್ರಮಾಣರೂಪ ತತ್ವ ನಿರ್ಣಯದ ಸಲುವಾಗಿ ಈ ಪ್ರಕರಣವು ಆರಂಭವಾಗಿದೆ. ಪ್ರಮೇಯರೂಪ ತತ್ವ ನಿರ್ಣಯವು ತತ್ವಸಂಖ್ಯಾನಾದಿಗಳಲ್ಲಿ [ ವಿಸ್ತೃತವಾಗಿದೆ ] ಎಂದು ತಿಳಿಯಬೇಕು. ತಥಾಚ –

द्विविधतत्त्वनिर्णयानन्तरं एवं भूतैस्सम्यक्परीक्षितैः प्रमाणैः (इति अभिनवामृते) नित्यानित्यत्वसारासारत्वादिकं निश्चित्य, अनित्यासारादिरूपविषयेषु विरक्तस्य शमदमादिसंपत्तिमतो वासुदेवैकशरणस्य भगवद्विषयाणि श्रवणमनननिदिध्यासनानि, आदरनैरन्तर्याभ्यां बहुकालमनुतिष्ठितवतो भगवत्साक्षात्कारे सति, उद्रिक्तया भक्त्या भगवत्प्रसादात् अशेषानिष्टनिवृत्तिविशिष्टानन्दादिस्वरूपाविर्भावलक्षणा मुक्तिर्भवतीति युक्तमत्र प्रमाणस्वरूपनिरुपणमित्यशेषमंगलम् ।

---

(२) जयतीर्थमुनेर्भावसंग्रहोऽयं प्रकाशितः ।
वादिराजेन तेनेशः प्रीयतां बादरायणः ॥ १ ॥

---

ಎರಡು ವಿಧ ತತ್ತ್ವ ನಿರ್ಣಯವಾದ ನಂತರ, ಸಮ್ಯಕ್ ಪರೀಕ್ಷಿತಪ್ರಮಾಣಗಳಿಂದ [ ಹೀಗೆ ಅಭಿನವಾಮೃತದಲ್ಲಿ ಹೇಳಿದೆ ] ನಿತ್ಯ, ಅನಿತ್ಯ, ಸಾರ, ಅಸಾರ, ಮೊದಲಾದಗವುಳನ್ನು [ ಪದಾರ್ಥದಲ್ಲಿ ] ನಿಶ್ಚಯಿಸಿ, ಇವೆರಡರಲ್ಲಿ ಅಸಾರ, ಅನಿತ್ಯ ಮೊದಲಾದ ಪದಾರ್ಥಗಳಲ್ಲಿ ವಿರಕ್ತನಾಗಿ ಶಮ, ದಮ, ಮೊದಲಾದ ಸಂಪತ್ತಿಉಳ್ಳವನಾಗಿ ವಾಸುದೇವನಲ್ಲಿಯೇ 'ಶರಣಾಗತಿ' ಹೊಂದಿ ಇರತಕ್ಕ, ಭಗವತ್‌ವಿಷಯಕ ಶ್ರವಣ ಮನನ, ನಿಧಿಧ್ಯಾಸನ, ಮೊದಲಾದವುಗಳನ್ನು ಆದರ ನಿರಂತರವಾಗಿ ಬಹುಕಾಲ ಅನುಷ್ಠಾನ' ಮಾಡತಕ್ಕ, ಸಜ್ಜನರಿಗೆ, ಭಗವತ್ ಸಾಕ್ಷಾತ್ಕಾರವು ಆಗುತ್ತಿರಲು, ಉದ್ರಿಕ್ತ ಭಕ್ತಿಯಿಂದ ಹುಟ್ಟಿದ ಭಗವತ್ ಪ್ರಸಾದದಿಂದ, ಅಶೇಷ ಅನಿಷ್ಟ ನಿವೃತ್ತಿಪೂರ್ವಕ್ ವಿಶಿಷ್ಟವಾದ ಆನಂದಾದಿ ಸ್ವರೂಪ ಆವಿರ್ಭಾವ ಲಕ್ಷಣವಾದ, ಮುಕ್ತಿಯು ಆಗುತ್ತದೆ. ಕಾರಣ ಈ ಗ್ರಂಥದಲ್ಲಿ ಪ್ರಮಾಣ ಸ್ವರೂಪ, ನಿರೂಪಣೆ ಮಾಡಿದ್ದು ಯುಕ್ತವೇ ಆಗುತ್ತದೆ.

ಇತಿ ಅಶೇಷ ಮಂಗಳವು

---

೨] ಜಯತೀರ್ಥ ಮುನಿಗಳಿಂದ ರಚಿತವಾದ ಪದ್ಧತಿಯ ಭಾವ ಸಂಗ್ರಹವು ಪ್ರಕಾಶಿಸಲ್ಪಟ್ಟಿತು ವಾದಿರಾಜನ ಈ ಕೃತಿಯಿಂದ ಈಶನಾದ ಬಾದರಾಯಣನು ಪ್ರೀತನಾಗಲಿ"೧॥

श्री:

# शुद्धाशुद्ध पत्रिका

| पत्र | पंक्ति | अशुद्ध | शुद्ध । |
|---|---|---|---|
| ६ | २ | गोर्लक्षणस्य | गोलक्षणस्य |
| १४ | ९ | शद्वावाच्य: | शद्ववाच्य: |
| २२ | २ | द्रियेणष्टें | ष्टेंद्रियेण |
| ३४ | १० | करणाप्रामाण्य | करणप्रामाण्य |
| ५८ | ८ | यथार्तज्ञानस्य | यथार्थज्ञानस्य |
| ७७ | ४ | ज्ञानसाधानमिति | ज्ञानसाधनमिति |
| ९७ | १० | बाहुल्यनायथार्थ | बाहुल्येनयथार्थ |
| १०१ | ३ | तग्दत | तद्गत |
| ११५ | १० | केचिद्ध्वभिचारिण: | केचित्व्यभिचारिण: |
| १२५ | ११ | व्याप्तिग्रह: प्रत्यक्षात् | प्रत्यक्षात्व्याप्तिग्रह: |
| १६३ | २ | सर्वविपक्षत्वं | सर्वविपक्षव्यावृत्तत्वं |
| १६८ | ११ | परोपदेशमपेक्ष्य | परोपदेशमनपेक्ष्य |
| १६९ | ७ | व्यापदिश्यंते | व्यपदिश्यंते |
| १८७ | १ | स्तद्विबज्य | स्तद्विभज्य |
| १८९ | ६ | व्यतिरिशक्तं | व्यतिरिक्तं |
| २८० | ९ | शुद्धमासाध्यव्यापक: | शुद्धसाध्यव्यापक: |
| २४८ | ७ | सहितत्य | सहितस्य |
| २५७ | ५ | व्यक्त | व्यक्तय |
| २७७ | ५ | पुर्वकतृकत्व | पूर्वकत्व |
| २८५ | ५ | विप्रति | विप्रतिपत्या |
| ,, | ६ | तताहि | तथाहि |

॥ ಶ್ರೀ ॥

# ಶುದ್ಧಾಶುದ್ಧ ಪತ್ರಿಕಾ

| ಪತ್ರ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೭ | ೫ | ಸಕೀರ್ತನಂ | ಸಂಕೀರ್ತನಂ |
| ೨೨ | ೭ | ಅನುಮಾನಲ್ಲ | ಅನುಮಾನದಲ್ಲಿ |
| ೨೫ | ೫ | ಬರುವವು | ಬರುವದು |
| ೪೦ | ೫ | ಇಂದ್ರಿಳಲ್ಲಿ | ಇಂದ್ರಿಯಗಳಲ್ಲಿ |
| ೪೦ | ೧೧ | ಇಲ್ಲಿವೋ | ಇಲ್ಲವೋ |
| ೬೩ | ೧೯ | ಹಾಗೂ | ಹಾಗೂ ಕರಣ |
| ೬೭ | ೧೭ | ಧರ್ಮಕಾಗಿ | ಧರ್ಮವಾಗಿ |
| ೭೩ | ೧೦ | ಅತಿತ್ವಿಕ | ಅತಾತ್ವಿಕ |
| ೭೮ | ೬ | ತೈಜಸಹಕಾರ | ತೈಜಸಾಂಕಾರ |
| ೮೭ | ೨ | [ಅಭಿವಾಮೃತ] | [ಅಭಿನವಾಮೃತ] |
| ೮೭ | ೧೨ | ಸಮ್ಯತ್ವ | ಸಮ್ಯಕ್ತ್ವ |
| ೧೦೯ | ೧೯ | [ಯಾವ ಹೇತುವಿನ] | [ಯಾವ ಹೇತುವಿನ ಪಕ್ಷವು ಸಾಧ್ಯಾಭಾವವುಳ್ಳದ್ದೋ ಆ ಹೇತುವು ಬಾಧಿತವು] |
| ೧೨೫ | ೧೩ | ಹುಟ್ಟುದದೆಂದು | ಹುಟ್ಟುವದೆಂದು |
| ೧೨೭ | ೧೩ | ಹೆಂದರೆ | ಹೇಗೆಂದರೆ |
| ೧೬೨ | ೧೧ | ಆತ್ಮರಹಿತ: | ಆತ್ಮಸಹಿತಃ |
| ೧೬೯ | ೯ | ಶಕ್ಯವ್ಯಾಪ್ತಿ | ಶಕ್ಯಪ್ರಾಪ್ತಿ |
| ೧೯೫ | ೨ | ದೃಷ್ಟಾಂತ | ಸಿದ್ಧಾಂತ |

श्रीमत्पद्धतिभावसंग्रहकृतिः वाक्बुद्धिशुद्ध्यै कृता
पूर्वाचार्यवचो विचार्य सरसं संगृह्य सारं ततः ।
बालिश्यात् बत शैशवं खलु मया प्रादर्शि तत्क्षम्यतां
वत्सानामिव मातुरौधसपयःपाने प्रसक्तं बुधैः ॥ २ ॥

---

श्री १००८ श्रीमत्सत्यध्यानतीर्थश्रीपादानामंतेवासिनां हुलगीत्युपाह्व पंडित हुच्चाचार्यणां शिष्यवादिराजेन विरचिते प्रमाणसंग्रहे तृतीयपरिच्छेदः समाप्तः ॥

श्रीकृष्णार्पणमस्तु – श्रीमध्वेशार्पणमस्तु

---

ಸಂಪದ್ಯುಕ್ತವಾದ ಪದ್ಧತಿಯ ಭಾವ ಸಂಗ್ರಹವಾದ ಕೃತಿಯು ವಾಕ್ ಮತ್ತು ಬುದ್ಧಿಯ ಶುದ್ಧ್ಯರ್ಥವಾಗಿ ಮಾಡಲ್ಪಟ್ಟಿತು. ಪೂರ್ವಿಕರಾದ ಆಚಾರ್ಯರ ವಚನವನ್ನು ವಿಚಾರಿಸಿ ಅದರಲ್ಲಿಯ ಸಾರವನ್ನು ಸಂಗ್ರಹಿಸಿ [ ಮಾಡಲ್ಪಟ್ಟಿದೆ ] ನನ್ನಿಂದ ಬಾಲಿಶ್ಯ ನಿಮಿತ್ತವಾಗಿ ಶಿಶುಭಾವವೇ ಪ್ರದರ್ಶಿತವಾಗಿದೆ. ಅದನ್ನು ಸಜ್ಜನರು ಕ್ಷಮಿಸಬೇಕು. ತಾಯಿಯ ಸ್ತನ ಪಾನ ಮಾಡುವ ಸಮಯದಲ್ಲಿ ಕರುವಿನ ಬಾಲಿಶ್ಯವು ಹೇಗೆ ಕ್ಷಮಿಸಲ್ಪಡುತ್ತದೆಯೋ ಅದರಂತೆ ಬುಧರಿಂದ ನನ್ನ ಬಾಲಿಶ್ಯವು ಕ್ಷಮಿಸಲ್ಪಡಲಿ. "ಪ್ರಮಾಣಸಂಗ್ರಹ"ದ ಕನ್ನಡ ಅನುವಾದ ಮೂರನೆಯ ಪರಿಚ್ಛೇದ ಸಮಾಪ್ತವು.

ಶ್ರೀ ಕೃಷ್ಣಾರ್ಪಣಮಸ್ತು

ಪ್ರಾಪ್ತಿಸ್ಥಾನ
ಶ್ರೀಯುತ ವಾದಿರಾಜಾಚಾರ್ಯ
ಅಗ್ನಿಹೋತ್ರಿ
"ವಿಜಯಪ್ರಸಾದ" ಬ್ರಹ್ಮಪುರ
ಗುಲಬರ್ಗಾ-೨ [ಕರ್ನಾಟಕ]

ಪ್ರಕಾಶಕರು
ಶ್ರೀ ರಾಯರ ಆರಾಧನಾ ಸಮಿತಿ

ಮುದ್ರಕರು
ಭಾರತಿ ಪ್ರೆಸ್ ಗುಲಬರ್ಗಾ